ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೪೧

# ಆದಿಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ.)



ಅನುವಾದಕ

ಆಸ್ಥಾನ ಮಹಾವಿದ್ವಾನ್,

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಏ.,

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೬

# ಮುನ್ನುಡಿ

ಶ್ರೀಗಣೇಶಶಾರದಾಗುರುಭ್ಯೋನಮಃ

**ಆದೌ ದೇವಕಿದೇವಿ ಗರ್ಭಜನನಂ ಗೋಪೀಗೃಹೇ ವರ್ಧನಂ**
**ಮಾಯಾಪೂತನಿ ಜೀವಿತಾಪಹರಣಂ ಗೋವರ್ಧನೋದ್ಧಾರಣಂ ।**
**ಕಂಸಚ್ಛೇದನ ಕೌರವಾದಿಹನನಂ ಕುಂತೀಸುತಾಪಾಲನಂ**
**ಗೀತಾಬೋಧನ ಧರ್ಮರಕ್ಷಣ ಮಿತಿ ಶ್ರೀಕೃಷ್ಣಲೀಲಾಽಮೃತಂ ॥**

ತ್ರಿಮೂರ್ತಿಗಳಲ್ಲಿ ಬ್ರಹ್ಮನು ಸೃಷ್ಟಿಕಾರ್ಯವನ್ನೂ, ಮಹೇಶ್ವರನು ಉಪಸಂಹಾರ ಕಾರ್ಯವನ್ನೂ ನೆರವೇರಿಸುವಂತೆಯೇ ಶ್ರೀಮನ್ಮಹಾವಿಷ್ಣುವು ಜಗದ್ರಕ್ಷಣಕಾರ್ಯವನ್ನೂ ನೆರವೇರಿಸುತ್ತಾನೆ. ದುಷ್ಟಜನರ ನಿಗ್ರಹ ಸಜ್ಜನರ ಅನುಗ್ರಹಗಳಿಂದ ಈ ಪ್ರಪಂಚದ ಸ್ಥಿತಿಗೆ ಮೂಲಾಧಾರವಾಗಿರುವ, ಪ್ರವೃತ್ತಿನಿವೃತ್ತಿರೂಪವಾಗಿರುವ, ಧರ್ಮದ ರಕ್ಷಣೆಯನ್ನು ವಿಶೇಷರೀತಿಯಲ್ಲಿ ಆಗಾಗ್ಗೆ ನಿರ್ವಹಿಸಬೇಕಾಗಿ ಬರುತ್ತದೆ. ಈ ಮಹಾಕಾರ್ಯಕ್ಕಾಗಿ ಆತನು ಅನೇಕ ಅವತಾರಗಳನ್ನು ಧರಿಸುವುದುಂಟು. ಅವುಗಳಲ್ಲಿ ಮುಖ್ಯವಾದುದು ಶ್ರೀಕೃಷ್ಣಾವತಾರವು. ಅದರಲ್ಲಿ ಶ್ರೀಕೃಷ್ಣನು ನೆರವೇರಿಸಿದ ಮುಖ್ಯ ಕಾರ್ಯಗಳಲ್ಲಿ ಕೆಲವನ್ನು ಈ ಪದ್ಯದಲ್ಲಿ ಸಂಗ್ರಹಿಸಲಾಗಿದೆ.

ಶ್ರೀಕೃಷ್ಣನು ಮೊದಲು ವಸುದೇವನ ಹೆಂಡತಿಯಾದ ದೇವಕೀದೇವಿಯ ಗರ್ಭದಿಂದ ಜನ್ಮವನ್ನು ಪಡೆದನು. ಆಮೇಲೆ ಕೂಡಲೆ ಯಶೋದಾ ನಂದರ ಗೋಕುಲದಲ್ಲಿ ಬೆಳೆದನು. ಶಿಶುವಾಗಿರುವಾಗಲೇ ಅವನನ್ನು ಕೊಲ್ಲಲು ಕಂಸನು ಕಳುಹಿಸಿದ್ದ ಪೂತನಿ ಎಂಬ ರಾಕ್ಷಸಿಯನ್ನು ಅವಳ ಸ್ತನ್ಯಪಾನಕಾರ್ಯದಿಂದಲೇ ಸಂಹರಿಸಿದನು. ಹುಡುಗನಾಗಿರುವಾಗಲೇ ಇಂದ್ರನ ಅಹಂಕಾರವನ್ನು ಖಂಡಿಸಿ ಅವನಿಗೂ ಬುದ್ಧಿಯನ್ನು ಕಲಿಸಲು ಗೋವರ್ಧನಪರ್ವತವನ್ನು ಎತ್ತಿ, ಬಿಚ್ಚಿದ ಛತ್ರಿಯಂತೆ ಹಿಡಿದು, ಅದರ ನೆರಳಿನಲ್ಲಿ ಗೋಪರು ಗೋಪಿಯರು ಗೋವುಗಳು ಇವುಗಳನ್ನು ಮಳೆಯಿಂದ ರಕ್ಷಿಸಿದನು. ಕಡೆಗೆ ಕಂಸನನ್ನೂ ಕೊಂದನು. ಆಮೇಲೆ ಶಿಶುಪಾಲನೂ ಧರ್ಮರಾಯನ ರಾಜಸೂಯಯಾಗದ ಸಭೆಯಲ್ಲಿ ಶ್ರೀಕೃಷ್ಣನ ಅಗ್ರಪೂಜೆಯನ್ನು ದೂಷಿಸಲು, ಅವನ ಒಂದುನೂರು ಅಪರಾಧಗಳನ್ನು ಮನ್ನಿಸಿದ ಅನಂತರದಲ್ಲಿ ಅವನನ್ನೂ ಸಂಹರಿಸಿದನು. ಪಾಂಡವಕೌರವರ ಯುದ್ಧವು ಅನಿವಾರ್ಯವಾಗಲು ಧಾರ್ಮಿಕರಾದ ಪಾಂಡವರಿಂದ ಅಧಾರ್ಮಿಕರಾಗಿದ್ದ ಕೌರವರನ್ನು ಸಂಹಾರಮಾಡಿಸಿದನು. ಆ ಸಮಯದಲ್ಲಿ ಯುದ್ಧಪ್ರಾರಂಭದಲ್ಲಿ ಬಂಧು

ಗುರು ಮಿತ್ರರ ಮರಣಚಿಂತನೆಯಿಂದ ಶೋಕಮೋಹಾವೃತನಾಗಿ ಸ್ವಧರ್ಮವನ್ನು ಬಿಡಲೂ ಪರಧರ್ಮವನ್ನು ಅವಲಂಬಿಸಲೂ ಸಿದ್ಧನಾದ ಅರ್ಜುನನಿಗೆ ಸರಿಯಾದ ತಿಳಿವಳಿಕೆಯನ್ನುಂಟುಮಾಡುವುದರಮೂಲಕ ಸ್ವಧರ್ಮಾಚರಣೆಯನ್ನು ನೆರವೇರಿಸುವಂತೆ ಮಾಡಲೂ, ಆ ಮೂಲಕವಾಗಿ ಈ ಜಗತ್ತಿನಲ್ಲಿ ಎಲ್ಲ ಜನರನ್ನೂ ಅನುಗ್ರಹಿಸಲೂ ಭಗವದ್ಗೀತೆ ಎಂಬ ಯೋಗಧರ್ಮಗಳ ಶಾಸ್ತ್ರವನ್ನೂ ಉಪದೇಶಿಸಿದನು.

ಹೀಗೆ ಶ್ರೀಕೃಷ್ಣನು ಧರ್ಮದ ಪುನರುಜ್ಜೀವನವನ್ನು ಮಾಡಿ ಜಗದ್ರಕ್ಷಣೆಯ ಮಹಾಕಾರ್ಯವನ್ನು ಅವ್ಯ ತಸದೃಶವಾದ ತನ್ನ ಲೀಲೆಯಿಂದ ಅನಾಯಾಸವಾಗಿಯೇ ನೆರವೇರಿಸಿದನು. ಈ ಪದ್ಯದ ನಾಲ್ಕನೆಯ ಪಾದದಲ್ಲಿ "ಶ್ರೀಮದ್ಭಾಗವತಂ ಪುರಾಣಕಥಿತಂ" ಎಂಬುವ ಭಾಗಕ್ಕೆ ಬದಲಾಗಿ "ಗೀತಾಬೋಧನ ಧರ್ಮರಕ್ಷಣಮಿತಿ" ಎಂದು ಸೇರಿಸಿರುತ್ತದೆ. ಇದರಿಂದ ಎಂದರೆ, ಶ್ರೀಕೃಷ್ಣನು ನೆರವೇರಿಸಿದ ಮುಖ್ಯತಮವಾದ, ಎಲ್ಲ ಪ್ರಪಂಚ ಕಲ್ಯಾಣಗಳಿಗೂ, ಅನರ್ಥನಿವೃತ್ತಿಗೂ ಮೂಲಾಧಾರವಾದ, ಆಗಾಗ್ಗೆ ಅವತರಿಸುತ್ತಾ ಧರ್ಮದ ಪುನರುಜ್ಜೀವನವನ್ನು ನಿರ್ವಹಿಸುತ್ತಿರುವೆನೆಂದು ತಾನೇ ಗೀತೆಯಲ್ಲಿ ಉದ್ಘೋಷಿಸಿ ಅಭಯವಚನವನ್ನು ಎಲ್ಲರಿಗೂ ಕೊಟ್ಟಿರುವಂತೆ ನೆರವೇರಿಸುತ್ತಿರುವ, ಧರ್ಮದ ರಕ್ಷಣೆಯನ್ನೂ, ತಿಳಿವಳಿಕೆಯಿಂದ ಕೂಡಿದ ಕರ್ಮ, ಭಕ್ತಿ, ಧ್ಯಾನ, ಜ್ಞಾನಯೋಗಗಳಿಂದ ಎಲ್ಲರಿಗೂ ಶ್ರೇಯಸ್ಸಾಧನಮಾರ್ಗದ ತಿಳಿವಳಿಕೆಯನ್ನುಂಟುಮಾಡಿ ಅನುಗ್ರಹಿಸುವ ಗೀತೋಪದೇಶವನ್ನೂ, ನೆರವೇರಿಸಿದ ಈ ಅಂಶವನ್ನೂ ಸೇರಿಸುವುದರಿಂದ, ಈ ಪದ್ಯವು ಪೂರ್ಣತರವಾಗುವುದೆಂದು ತಿಳಿದು ಹಾಗೆ ಮಾಡಲಾಗಿದೆ.

ಪುರಾಣಗಳ ವ್ಯಾಸಂಗದಿಂದ ಜನಸಾಮಾನ್ಯಕ್ಕೆ ಆಗಬೇಕಾದ ಪ್ರಯೋಜನಗಳಲ್ಲಿ ಮುಖ್ಯವಾದುವು—ಆಸ್ತಿಕತೆ, ಭಕ್ತಿ, ಧರ್ಮಾಚರಣೆಯಲ್ಲಿ ಆದರ ಇವೇ ಮುಂತಾದುವಾಗಿರುತ್ತವೆ ಎನ್ನಬೇಕು. ಆದರೆ ಹದಿನೆಂಟು ಮಹಾಪುರಾಣಗಳನ್ನೂ, ಉಪಪುರಾಣಗಳನ್ನೂ ರಚಿಸಿ ಪ್ರಚಾರಕ್ಕೆ ಬರುವಂತೆ ಉಪದೇಶಮಾಡಿದ ವ್ಯಾಸಮಹರ್ಷಿಗಳ ಈ ಕಾರ್ಯದಿಂದ ಮೇಲಿನ ಉದ್ದೇಶವು ನೆರವೇರುವುದಕ್ಕೆ ಅನುಕೂಲ್ಯಕ್ಕಿಂತಲೂ ಹೆಚ್ಚಾಗಿ ಅಡ್ಡಿಯೇ ಉಂಟಾಗಿರುವಂತೆ ತೋರುತ್ತದೆ. ಏಕೆಂದರೆ, ಈ ಪುರಾಣಗಳಲ್ಲಿ ಕೆಲವು ಶೈವಪುರಾಣಗಳು. ಮತ್ತೆ ಕೆಲವು ವೈಷ್ಣವಪುರಾಣಗಳು. ಇನ್ನು ಕೆಲವು ಶಾಕ್ತೇಯಪುರಾಣಗಳೂ ಇವೆ. ಶೈವಪುರಾಣದಲ್ಲಿ ಶಿವನನ್ನೇ ಸರ್ವೋತ್ಕೃಷ್ಟನೆಂದೂ, ವಿಷ್ಣು, ಬ್ರಹ್ಮಾ, ಮುಂತಾದವರೆಲ್ಲರೂ ಶಿವನಿಗೆ ಭಕ್ತರೂ ಸೇವಕರೂ ಆಗಿದ್ದಾರೆಂದೂ ವರ್ಣಿಸಿದೆ. ಅದರಂತೆಯೇ ವೈಷ್ಣವಪುರಾಣಗಳಲ್ಲಿ

ವಿಷ್ಣುವೇ ಸರ್ವೋತ್ಕೃಷ್ಟನೆಂದೂ ಇತರರೆಲ್ಲರೂ ಅವನಿಗೆ ಅಧೀನರೆಂದೂ ಹೇಳಿದೆ. ಹಾಗೆಯೇ ಶಾಕ್ತೇಯಪುರಾಣಗಳಲ್ಲಿ ಶಕ್ತಿತತ್ತ್ವವೇ ತ್ರಿಮೂರ್ತಿಗಳಿಗೂ ತಾಯಿಯಂತೆ ಮೂಲಭೂತವಾದ ಮೇಲಾದ ದೇವೀತತ್ತ್ವವೆಂದೂ, ವಿವರಿಸಿರುತ್ತದೆ. ಈ ಪುರಾಣ ಗಳನ್ನು ಓದಿದ ಆಯಾಯ ದೇವತಾಭಕ್ತರು ತಮ್ಮ ಇಷ್ಟದೇವತೆಯೇ ಶ್ರೇಷ್ಠ ವೆಂದು ಹೇಳುತ್ತಾ ಪರಸ್ಪರವಾಗಿ ತಮ್ಮ ತಮ್ಮಲ್ಲಿಯೂ ಹೋರಾಡುತ್ತಿದ್ದಾರೆ. ಈ ಹೋರಾಟಗಳಿಂದ ಅನೇಕ ಅನರ್ಥಗಳೂ ಸಂಭವಿಸಿವೆ. ಆದುದರಿಂದ ವ್ಯಾಸರು ಜನರಿಗೆ ಉಪಕಾರಮಾಡಿದುದಕ್ಕಿಂತಲೂ ಹೆಚ್ಚಾಗಿ ಅಪಕಾರವನ್ನೇ ಮಾಡಿದಂತಾ ಗಿದೆಯಲ್ಲವೇ ? ಎಂದು ಆಕ್ಷೇಪಿಸುವವರಿದಾರೆ. ಅಲ್ಲದೆ ವ್ಯಾಸರ ತಾತ್ಪರ್ಯವನ್ನು ತಿಳಿಯುವುದೇ ಕಷ್ಟವಾಗಿದೆ. ಎಲ್ಲಕ್ಕಿಂತಲೂ ಮೇಲಾಗಿ ಪರಾತ್ಪರತತ್ತ್ವವು, ಪರಬ್ರಹ್ಮ ಸ್ವರೂಪವು ಏನೆಂಬುದನ್ನು ಈ ಮಾರ್ಗವನ್ನು ಅನುಸರಿಸಿ ತಿಳಿಯುವುದಂತು ಇನ್ನೂ ಹೆಚ್ಚು ಕಷ್ಟಕರವಾಗಿರುತ್ತದೆ.

ಇದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದು. ಶ್ರೀವ್ಯಾಸಮಹರ್ಷಿಯು ತಿಳಿವಳಿಕೆ ಇಲ್ಲದ ದಡ್ಡನಲ್ಲವೆಂದೂ, ಜನರನ್ನು ವಂಚಿಸುವುದಕ್ಕಾಗಿ ಅನೇಕ ಪುರಾಣಗಳನ್ನು ರಚಿಸಲಿಲ್ಲವೆಂದೂ, ಪರತತ್ತ್ವವು ಒಂದೇ ಆಗಿದೆಯೇ ಹೊರತು ಅನೇಕ ಬಗೆಯಾಗಿ ಇರಲಾರದೆಂಬ ಸಾಮಾನ್ಯ ಮೂಲತತ್ತ್ವವನ್ನು ಮನಗಂಡಿದ್ದ ನೆಂದೂ, ನಂಬುವುದು ಅನುಚಿತವಾಗಲಾರದು. ಹಾಗಿದ್ದರೂ ಆಯಾ ಪುರಾಣಗಳಲ್ಲಿ ಆಯಾ ದೇವತೆಗಳನ್ನೇ ಸರ್ವೋತ್ಕೃಷ್ಟವೆಂದು ಹೇಳಿರುವುದು ತತ್ತ್ವದೃಷ್ಟಿಯಿಂದ ಹೇಗೆ ಸಂಗತವಾದೀತು ? ಎಂದರೆ, ಆಸ್ತಿಕರಾದ ಭಕ್ತಜನರಲ್ಲಿರುವ ಭಿನ್ನಭಿನ್ನವಾದ ರುಚಿ, ಸಂಸ್ಕೃತಿಗಳಿಗೆ ತಕ್ಕಂತೆ ಅವರವರಿಗೆ ಒಪ್ಪಿ ಬರುವ ಪುರಾಣಗಳನ್ನು ಅವರವರು ಹೆಚ್ಚು ಕಡಿಮೆಯಾಗಿ ಪ್ರಚಾರಕ್ಕೆ ತಂದುಕೊಂಡಿರುತ್ತಾರೆಂಬ ಅಂಶ ವನ್ನು ಮರೆಯಲಾಗದು. ಎರಡನೆಯದಾಗಿ ದೇವದೇವೋತ್ತಮನ ಅಥವಾ ಪರಬ್ರಹ್ಮತತ್ತ್ವದ ಪಾರಮಾರ್ಥಿಕಸ್ವರೂಪವನ್ನು ಸಾಮಾನ್ಯಜನರು ತಿಳಿಯಲಾರರು. ಏಕೆಂದರೆ ಅದು ಯಾವ ನಾಮರೂಪಗಳೂ ಇಲ್ಲದ, ಅವನ್ನು ಮೀರಿ ಸರ್ವಾಂತ ರ್ಯಾಮಿಯಾಗಿರುವ ಚೈತನ್ಯವಾಗಿದೆ. ಆಸ್ತಿಕರಾದ ಜನರು ದೇವರನ್ನು ಪೂಜಿಸಿ ಒಲಿಸಿಕೊಂಡು ಇಷ್ಟಾರ್ಥಗಳನ್ನು ಪಡೆಯಲು ಬಯಸುತ್ತಾರೆ. ಅವರ ಸಂಸ್ಕೃ ತಿಯು ಹೆಚ್ಚುಕಡಿಮೆಗಳುಳ್ಳ ಮಟ್ಟಗಳಲ್ಲಿರುತ್ತದೆ. ಅವರ ರುಚಿಗಳೂ ಭಿನ್ನಭಿನ್ನ ವಾಗಿರುತ್ತವೆ. ಈ ರುಚಿ, ಸಂಸ್ಕೃತಿಗಳನ್ನು ಅನುಸರಿಸಿ ಒಪ್ಪಿ ಬರುವ ನಾಮರೂಪ ಗಳಲ್ಲಿ ದೇವರನ್ನು ಆರಾಧಿಸಿ ಕೃತಾರ್ಥರಾದ ಮಹನೀಯರ ಉದಾಹರಣೆಗಳನ್ನು

ಪುರಾಣಗಳಲ್ಲಿ ಹೇರಳವಾಗಿ, ಬಗೆಬಗೆಯಾಗಿ ವರ್ಣಿಸಿದೆ. ಇದು ಆಪೇಕ್ಷಿಕ ಅಥವಾ ವ್ಯಾವಹಾರಿಕ (Relative view) ದೃಷ್ಟಿಯು. ಈ ಉಪಾಸನಾಮಾರ್ಗದಲ್ಲಿ ಮುಂದುವರೆದು ಚಿತ್ತದ ಶುದ್ಧಿಯನ್ನೂ ಏಕಾಗ್ರತೆಯನ್ನೂ ಪಡೆದ ಪ್ರೌಢಯೋಗಿಗಳಿಗೆ ಪಾರಮಾರ್ಥಿಕ (Absolute view) ದೃಷ್ಟಿಯಿಂದ ಪರತತ್ವದ ಸ್ವರೂಪವನ್ನು ಎಂದರೆ, ಎಲ್ಲ ನಾಮರೂಪಗಳನ್ನೂ ಮೀರಿದ, ಮಾತಿಗೂ ಮನಸ್ಸಿಗೂ ನಿಲುಕದ, ನಿರ್ವಿಕಾರಿಸಚ್ಚಿದಾನಂದಚೈತನ್ಯರೂಪವಾಗಿರುವ, ನಿಜಸ್ವರೂಪವನ್ನು ವೇದಾಂತವಾಕ್ಯಗಳ ಶ್ರವಣ, ಮನನ, ನಿದಿಧ್ಯಾಸನಗಳಿಂದ ಅಥವಾ ಧಾರಣಾ, ಧ್ಯಾನ, ಸಮಾಧಿಗಳ ಮೂಲಕವಾಗಿ ಸಾಕ್ಷಾತ್ಕರಿಸಿಕೊಳ್ಳೋಣ (Realisation) ದರಿಂದ, ಕ್ರಮವಾಗಿ ಎಲ್ಲರೂ ತಮಗೆ ಅಪರೋಕ್ಷಾನುಭವವಾಗಿ ಮಾಡಿಕೊಳ್ಳಬಹುದು. ಈ ವಿವರಣೆಯಿಂದ ವ್ಯಾಸರು ಪುರಾಣಗಳಲ್ಲಿ ಆಯಾ ದೇವತೆಗಳ ಪರಮೋತ್ಕರ್ಷವನ್ನು ವರ್ಣಿಸಿರುವುದರ ತಾತ್ಪರ್ಯವನ್ನು ಹೀಗೆ ಗೊತ್ತುಮಾಡಿಕೊಳ್ಳಬಹುದು. ಏನೆಂದರೆ, ಪುರಾಣಗಳಲ್ಲಿ ವರ್ಣಿಸಿರುವ ನಾಮರೂಪಗಳುಳ್ಳ ಶಿವ, ವಿಷ್ಣು, ಶಕ್ತಿ ಮುಂತಾದ ಆಯಾ ದೇವತೆಗಳೇ ಒಂದೊಂದೂ ಪ್ರತ್ಯೇಕವಾಗಿ ಪರತತ್ವವಲ್ಲವು. ಮತ್ತೇನೆಂದರೆ ಪರತತ್ವವೇ ಆ ಎಲ್ಲ ಬಗೆಯ ಭಕ್ತರನ್ನು ಮತ್ತು ಉಪಾಸಕರನ್ನು ಅನುಗ್ರಹಿಸುವುದಕ್ಕಾಗಿ ಆ ಎಲ್ಲ ದೇವತೆಗಳ ನಾಮರೂಪಗಳನ್ನು ಧರಿಸಿರುವಂತೆ ತೋರುತ್ತಾ, ಅವರ ಕೋರಿಕೆಗಳನ್ನು ನೆರವೇರಿಸಿಕೊಡುತ್ತಾ, ಅವರಿಗೆ ಕ್ರಮವಾಗಿ ಪರತತ್ವದ ಸಾಕ್ಷಾತ್ಕಾರ ಮತ್ತು ಅಪರೋಕ್ಷಾನುಭವವಾಗುವ ಮಾರ್ಗದಲ್ಲಿ ಆ ಭಕ್ತರೂ ಉಪಾಸಕರೂ ಮುಂದುವರಿಯುವುದರಿಂದ ಪರಮಪುರುಷಾರ್ಥವಾದ ಮೋಕ್ಷವನ್ನೂ ಕಡೆಗೆ ಪಡೆಯಲು ಸಹಾಯ ಮಾಡುತ್ತಿರುತ್ತದೆ. ಈ ಅಂಶವನ್ನೂ ಶ್ರೀ ವ್ಯಾಸರು ಆ ಎಲ್ಲ ಪುರಾಣಗಳಲ್ಲೂ ಸೂಕ್ಷ್ಮವಾಗಿ ಅಲ್ಲಲ್ಲಿ ಸೂಚಿಸಿರುವುದನ್ನು ಮನಗಾಣಬಹುದು. ಈ ವಿವರಣೆಯಿಂದ ಸರ್ವೋತ್ತಮವಾದ ಪರತತ್ವವು ಸಾಂಸಾರಿಕರಾದ ಜೀವರ ವ್ಯಾವಹಾರಿಕದೃಷ್ಟಿಯಿಂದ ಸಗುಣವೂ, ಸಾಕಾರವೂ ಆಗಿರುತ್ತಾ ಎಲ್ಲ ಬಗೆಯ ನಾಮರೂಪಗಳುಳ್ಳದ್ದಾಗಿಯೂ ಇರುತ್ತದೆ. ಅಲ್ಲದೆ ಪಾರಮಾರ್ಥಿಕದೃಷ್ಟಿಯಿಂದ ಅದು ತನ್ನ ವಾಸ್ತವವಾದ ಸ್ವರೂಪದಲ್ಲಿ ನಿತ್ಯವೂ, ನಿರ್ವಿಕಾರಿಯೂ, ನಿರ್ಗುಣವೂ, ನಿರಾಕಾರವೂ ಆಗಿರಬೇಕಾದ ಚೈತನ್ಯವಾಗಿರುತ್ತಾ, ಯಾವ ನಾಮರೂಪವಿಶೇಷಗಳೂ ಇಲ್ಲದ್ದಾಗಿ, ಮಾತಿಗೂ ಮನಸ್ಸಿಗೂ ನಿಲುಕದ, ಪರಮೋತ್ತಮ ತತ್ವವಾಗಿಯೂ ಇರುತ್ತದೆ. ಎಂದು ಹೇಳಿದರೆ ಮೇಲೆ ಹೇಳಿದ ಸಂಶಯ ಆಕ್ಷೇಪಗಳಿಗೆ ಸಮಾಧಾನವು ದೊರೆಯುತ್ತದೆ.

ಇದು ಸ್ವಾಭಾವಿಕವೂ ಸಂಗತವೂ ಆಗಿರುತ್ತದೆ. ಹೇಗೆಂದರೆ, ಮಾನವನ, ಂದಾಧಿಕಾರಿಯಾದ ಭಕ್ತನ, ಉಪಾಸಕನ, ಅಥವಾ ಜಿಜ್ಞಾಸುವಿನ ಮನಸ್ಸಿಗೆ ಾದಮೊದಲು ಸಗುಣವೂ ಸಾಕಾರವೂ ಆಗಿರುವ ನಾಮರೂಪಗಳುಳ್ಳ ಇಷ್ಟ ವತೆಯನ್ನು ಪೂಜಿಸಿ ಧ್ಯಾನಿಸುವುದು ಸಾಧ್ಯವಾಗಿರುತ್ತದೆ. ಆ ಭಕ್ತರು ಶಕಾಮನೆಯುಳ್ಳವರಾಗಿ ದೇವರನ್ನು ಆರಾಧಿಸಿದರೆ, ಆ ರೂಪದಿಂದಲೇ ಅವರಿಗೆ ರ್ಶನವನ್ನು ಕೊಟ್ಟು ಅವರ ಕೋರಿಕೆಗಳನ್ನು ನೆರವೇರಿಸಲಾಗುತ್ತದೆ. ಹಾಗಿಲ್ಲದೆ ವರು ಫಲಕಾಮನೆ ಇಲ್ಲದೆ ಕರ್ಮಯೋಗಿಗಳಾಗಿದ್ದರೆ, ಅದರಿಂದ ಅವರ ನಸ್ಸು ಶುದ್ಧವೂ ಏಕಾಗ್ರವೂ ಆಗುತ್ತಾ ಬರುತ್ತದೆ. ಆಮೇಲೆ ಆ ನಾಮರೂಪ ಗೆ ಹಿನ್ನೆಲೆಯಾಗಿರುವ ದೇವತತ್ತ್ವವನ್ನು, ಎಲ್ಲ ದೇವತೆಗಳಲ್ಲೂ ಸಮಾನವಾಗಿ ್ಯಾಪಿಸಿರುವ, ನಿರಾಕಾರವಾಗಿಯಾದರೂ ಸಗುಣವಾಗಿರುವ, ತತ್ತ್ವವನ್ನು ಧ್ಯಾನಿಸು ದು ಸಾಧ್ಯವಾಗುತ್ತದೆ. ಆಗ, ಉಪಾಸನೆಯ ಆ ಉಪ್ಪರಿಗೆಯನ್ನು ಹತ್ತಿದ ೀಲೆ, ಆ ಭಕ್ತರು ನಾಮರೂಪಗಳುಳ್ಳ ಆ ಪ್ರತೀಕದ ಆವಶ್ಯಕತೆಯನ್ನೂ ಮೀರಿ, ವನ್ನೂ ಉದಾಸೀನವಾಗಿ ಅಮುಖ್ಯವೆಂದು ಮನಗಂಡು ಕೈಬಿಟ್ಟು, ಕೇವಲ ುಣತತ್ತ್ವೋಪಾಸನೆಯಲ್ಲಿ ಯೋಗ್ಯತೆಯೂ ಶಕ್ತಿಯೂ ಉಳ್ಳವರಾಗಿರುತ್ತಾರೆ. ಮೇಲೆ ಆ ಉಪಾಸನೆಯಲ್ಲೂ ಸಿದ್ಧಿಹೊಂದಿ, ಕಡೆಗೆ ಆಕಾರದಂತೆ ಗುಣವಿಶೇಷ ನ್ನೂ ಅಮುಖ್ಯವೆಂದು ಮನಗಂಡು ಕೈಬಿಟ್ಟು, ಎಲ್ಲ ಮಾತುಗಳಿಗೂ ಮನಸ್ಸಿಗೂ ುಕದ, ನಿರಾಕಾರನಿರ್ಗುಣಪರತತ್ತ್ವದ ಉಪಾಸನೆಯ ಶಿಖರಕ್ಕೆ ಏರುತ್ತಾರೆ. ುದರಿಂದ ಪುರಾಣಗಳಿಗೆ ಪರಸ್ಪರವಾಗಿ ವಿರೋಧವಿಲ್ಲವೆಂಬುದನ್ನೂ, ಎಲ್ಲ ಯ ಭಕ್ತರಿಗೂ ಅವರವರ ಅಂತಸ್ತಿನಿಂದ ಮುಂದುವರೆಯಲು ಅನುಕೂಲವಾ ತ್ತದೆಂಬುದನ್ನೂ, ಎಲ್ಲರೂ ಹೀಗೆ ಮನಗಾಣಬಹುದು.

ಈ ವಿಷಯದಲ್ಲಿ ಲೌಕಿಕವಾಗಿರುವ ಒಂದು ದೃಷ್ಟಾಂತರವನ್ನೂ ತಿಳಿಸ ುದು. ಹೇಗೆಂದರೆ ಒಂದು ಮನೆಯಲ್ಲಿ ಅನುಕೂಲಸ್ಥರಾದ ತಂದೆತಾಯಿ ಗೆ ನಾಲ್ಕು ಮಕ್ಕಳಿವೆ. ಎಂದು ಇಟ್ಟುಕೊಳ್ಳೋಣ. ಅವರು ಆ ಮಕ್ಕಳ ರ್ಜಂತೀ ಉತ್ಸವಗಳನ್ನು ಪ್ರತಿ ವರ್ಷವೂ ವೈಭವದಿಂದ ನೆರವೇರಿಸುತ್ತಿರುತ್ತಾರೆ. ದಿವಸ ಒಂದು ಮಗುವು ಹುಟ್ಟಿದ ದಿನವಾಗಿರುತ್ತದೆ. ಈ ದಿವಸದಮಟ್ಟಿಗೆ ಈ ಗುವು ಉಪಾಸ್ಯದೇವತೆಯಂತೆ ಸರ್ವೋತ್ತಮವಾದ ಉಪಚಾರಗಳನ್ನು ಪಡೆ ುತ್ತದೆ. ಅದರಂತೆ ಮನೆಯ ಮಧ್ಯದಲ್ಲಿ ಕಲ್ಯಾಣಮಂಟಪದಲ್ಲಿ ಹಸೆಯ ಲಿಯ ಮೇಲೆ ಭದ್ರಾಸನದಲ್ಲಿ ಈ ಮಗುವನ್ನು ಕೂರಿಸಿ, ಇತರ ಮಕ್ಕಳ

ಮತ್ತು ತಾಯಿಯ ಆಭರಣಗಳನ್ನೂ, ಉಡಿಗೆ ತೊಡಿಗೆಗಳನ್ನೂ ಇಟ್ಟು ತೊಡಿಸಿ ಅಲಂಕರಿಸಿ ಆರತಿಯನ್ನು ಬೆಳಗುತ್ತಾ ಎಲ್ಲರೂ ಆನಂದಿಸುವ ವಾಡಿಕೆಯು ಇರುತ್ತದೆ. ಈ ಸಂದರ್ಭದಲ್ಲಿ ತಾಯಿಯಾಗಲಿ ಇತರ ಮಕ್ಕಳಾಗಲಿ ತಮ್ಮ ಉಡಿಗೆ ತೊಡಿಗೆಗಳನ್ನು ತಾತ್ಕಾಲಿಕವಾಗಿ ಆ ಮಗುವನ್ನು ಅಲಂಕರಿಸುವುದಕ್ಕೋಸ್ಕರ ಬಿಟ್ಟುಕೊಡಲು ಅಸಮಾಧಾನಪಡುವುದಿಲ್ಲ. ಆ ವೇಷಭೂಷಣಗಳಿಂದ ಆ ಮಗುವು ಅಲಂಕೃತವಾಗಿರುವುದನ್ನು ನೋಡಿ ಅಸೂಯೆಯನ್ನೂ ಪಡುವುದಿಲ್ಲ. ಅಲ್ಲದೆ ಇತರ ಮಕ್ಕಳೂ ಇದರಂತೆಯೇ ತಮ್ಮ ವರ್ಧಂತೀ ಉತ್ಸವವೂ ಬರುವುದೆಂದೂ, ಆಗ ಹೀಗೆಯೇ ಎಲ್ಲರ ಉಡಿಗೆತೊಡಿಗೆಗಳಿಂದ ತಾವೂ ಅಲಂಕಾರ ಉಪಚಾರಗಳನ್ನು ಪಡೆಯುವೆವೆಂದೂ, ತಿಳಿದಿರುತ್ತಾರೆ. ಯಾರಾದರೂ ಆ ತಂದೆತಾಯಿಯರಿಗೆ ಪಕ್ಷಪಾತ ವನ್ನಾಗಲೀ, ಆ ಮಗುವಿಗೆ ಸ್ವಾರ್ಥಪರತೆಯನ್ನಾಗಲೀ, ಹೇಳಿ ನಿಂದಿಸುವುದಿಲ್ಲ. ಹೀಗಿದ್ದರೂ ಆ ಎಲ್ಲರ ಉಡಿಗೆತೊಡಿಗೆಗಳು ಎಲ್ಲವೂ ತಂದೆಗೆ ಸೇರಿದುವೆಂಬುದನ್ನು ಎಲ್ಲರೂ ತಿಳಿದಿರುತ್ತಾರೆ. ಆ ವೇಷಭೂಷಣಗಳನ್ನು ಅವರೇ ಧರಿಸಿರಲಿ, ಅಥವಾ ಅವುಗಳನ್ನು ಒಳಗೆ ಪೆಟ್ಟಿಗೆಯಲ್ಲಿಟ್ಟು, ಬೀಗವನ್ನು ಹಾಕಿ, ಕೀಲಿಯನ್ನು ತಂದೆಯು ಇಟ್ಟುಕೊಂಡಿರಲಿ, ಹೇಗಿದ್ದರೂ ಅವುಗಳ ಸ್ವಾಮಿತ್ವವು ತಂದೆಯದೇ ಆಗಿರುತ್ತದೆ. ಆದರೂ ಆ ತಂದೆಯು ಅವನ್ನು ಯಾವಾಗಲೂ ತಾನು ಧರಿಸುವುದಿಲ್ಲ. ಅಲ್ಲದೆ ತಾನು ಧರಿಸಬಹುದಾದ ಉಂಗುರ ಮುಂತಾದುವನ್ನೂ ಅವರಿಗೇ ಕೊಡುತ್ತಾನೆ. ಆ ಕಾಲದಲ್ಲಿ ಅವರೇ ಸ್ವಾಮಿಯಾಗಿದ್ದರೆ ಹೇಗೋ ಹಾಗೆ ಅನುಭವಿಸುತ್ತಾರೆ. ಅದನ್ನು ನೋಡಿ ತಂದೆಯೂ ಆನಂದಿಸುತ್ತಾನೆ.

ಹೀಗೆಯೇ ಪರಬ್ರಹ್ಮತತ್ತ್ವವು ಆ ತಂದೆಯಂತಿದೆ. ಅದು ತಾನಾಗಿ ವಾಸ್ತವ ವಾಗಿ ಯಾವ ಗುಣಕರ್ಮಗಳನ್ನೂ, ನಾಮರೂಪಗಳನ್ನೂ ಹೊಂದಿರುವ ವ್ಯಕ್ತಿ ವಿಶೇಷವಾಗಿ, ಇರುವುದಿಲ್ಲ. ಆ ಗುಣಕರ್ಮಗಳೆಲ್ಲವೂ, ನಾಮರೂಪಗಳೆಲ್ಲವೂ, ತಾಯಿಯಂತಿರುವ ಮಾಯಾಶಕ್ತಿ ಅಥವಾ ದೇವಿಯಲ್ಲೂ, ಮಕ್ಕಳಂತಿರುವ ಬ್ರಹ್ಮ, ವಿಷ್ಣು, ರುದ್ರ, ವಾಣೀ, ಲಕ್ಷ್ಮೀ, ಉಮಾ ಎಂಬ ತ್ರಿಮೂರ್ತಿದಂಪತಿಗಳಲ್ಲೂ, ಪರಂಪರಾಕ್ರಮದಿಂದ ಈ ಎಲ್ಲ ಚರಾಚರಪ್ರಪಂಚದಲ್ಲೂ ಕಾಣುತ್ತಿರುತ್ತದೆ. ಒಂದೊಂದು ಪುರಾಣದಲ್ಲಿ, ಒಂದೊಂದು ಮಗುವಿನ ವರ್ಧಂತೀ ಉತ್ಸವದಂತೆ, ವಿಷ್ಣುವನ್ನೋ, ಶಿವನನ್ನೋ ದೇವಿಯನ್ನೋ ಸರ್ವೋತ್ಕೃಷ್ಟವಾಗಿ ವರ್ಣಿಸಿರು ತ್ತದೆ. ಇದು ಆಯಾ ಭಕ್ತವಿಶೇಷರ ರುಚಿ ಸಂಸ್ಕೃತಿಗಳಿಗೆ ತಕ್ಕಂತೆ ಇರುತ್ತಾ, ಅವರು ಮುಂದುವರಿದು ಕ್ರಮವಾಗಿ ಪ್ರೇಯಸ್ಸುಗಳನ್ನೂ, ಕಡೆಗೆ ಶ್ರೇಯಸ್ಸನ್ನೂ,

ಪಡೆಯಲು ಅನುಕೂಲವಾಗಿರುತ್ತದೆ. ಹೀಗೆ ಆಯಾ ಪುರಾಣದಲ್ಲಿ ಅವರ ಆ ಇಷ್ಟ ದೇವತೆಯನ್ನು ಸರ್ವೋತ್ತಮಗುಣಗಳಿಂದಲೂ ಇತರ ದೇವತೆಗಳ ಗುಣ ಮಹಿಮೆ ಗಳಿಂದಲೂ ಕೂಡಿರುವಂತೆ ವರ್ಣಿಸಿ, ಎಲ್ಲಕ್ಕೂ ಮಿಗಿಲೆಂದು ಗೌರವಿಸಿ, ಆರಾಧಿಸು ವುದರಲ್ಲಿ ಯಾವ ದೋಷವೂ ಇಲ್ಲವು. ಆಗ ಪರತತ್ವವೂ ಹಿನ್ನೆಲೆಯಲ್ಲಿರುತ್ತಾ, ತನ್ನ ಅಂಶವಾದ ಆ ಇಷ್ಟದೇವತೆಯು ತಾತ್ಕಾಲಿಕವಾಗಿ ಪರಮೋತ್ಕೃಷ್ಟವೆಂದು ಪೂಜೆಗೊಳ್ಳುತ್ತಿರುವುದನ್ನೂ ನೋಡಿ ಸಂತೋಷವನ್ನೇ ಪಡುತ್ತಿರುತ್ತದೆ. ಏಕೆಂದರೆ ಅದೇ ಆ ಭಕ್ತರ ಕಲ್ಯಾಣಸಾಧನೆಯ ಕ್ರಮವಾಗಿ, ಶ್ರೇಯಃಪ್ರಾಪ್ತಿಯ ಮಾರ್ಗ ವಾಗಿ ಇರುತ್ತದೆ. ಇದೇ ಉತ್ತಮವಾದ ಎಲ್ಲರಿಗೂ ಶ್ರೇಯಸ್ಕರವಾದ ಧಾರ್ಮಿಕ ಮಾರ್ಗವು.

ಹೀಗೆ ಈ ಪುರಾಣಗಳನ್ನು ಓದಿ, ಅವುಗಳಲ್ಲಿ ಹೇಳಿರುವ ಧರ್ಮಗಳನ್ನು ಆಚರಿಸುವುದರಿಂದ ಜನರ ಮನಸ್ಸು ವಿಶಾಲವಾಗಿ, ಹೃದಯವು ವಿಶ್ವದಷ್ಟು ವಿಸ್ತಾರ ವಾಗಿ, ತಮ್ಮ ಧರ್ಮದಲ್ಲಿ ಆದರವೂ, ಪರರ ಧರ್ಮದಲ್ಲಿ ಸಹನೆ ಸಹಾನುಭೂತಿ ಗಳೂ ಉಂಟಾಗಿ, ಸಹಕಾರ, ಸಮಭಾವನೆ, ಪ್ರೀತಿ, ವಿಶ್ವಾಸಗಳು ಎಲ್ಲರಲ್ಲೂ ಬೆಳೆದು, ವಿಶ್ವಧರ್ಮಾಚರಣೆಯಿಂದ ಜಗತ್ಕಲ್ಯಾಣಸಾಧನೆಗೆ ಅನುಕೂಲವಾಗುತ್ತದೆ. ಈ ಅಂಶವನ್ನು ದೇವೀಮಾಹಾತ್ಮ್ಯ, ದೇವೀಭಾಗವತ, ತ್ರಿಪುರಾರಹಸ್ಯವೆಂಬ ದೇವೀಶಕ್ತಿಪುರಾಣಗಳನ್ನೂ, ಕಲ್ಕಿಪುರಾಣ, ಆದಿಪುರಾಣವೆಂಬ ವೈಷ್ಣವಪುರಾಣ ಗಳನ್ನೂ, ಸೂತಸಂಹಿತಾ, ಲಿಂಗಮಹಾಪುರಾಣವೆಂಬ ಶೈವಪುರಾಣಗಳನ್ನೂ ಕನ್ನಡದಲ್ಲಿ ಪರಿವರ್ತಿಸುವಾಗ ಅಲ್ಲಲ್ಲಿ ಟಿಪ್ಪಣಿ, ವಿವರಣೆ, ಮುನ್ನುಡಿಗಳಲ್ಲಿ ಸಾಧ್ಯ ವಾದಷ್ಟುಮಟ್ಟಿಗೆ ವಿಶದಪಡಿಸಿರುತ್ತೇನೆ. ಇತರ ಪುರಾಣಗಳು ಹೇಗೋ ಹಾಗೆ ಈ ಆದಿಪುರಾಣವೂ ಮೇಲೆ ಹೇಳಿದ ಉತ್ತಮವಾದ ಉಪದೇಶವನ್ನು ಒಳ ಗೊಂಡಿದೆ. ಅಲ್ಲದೆ ಇದು ವಿಶೇಷವಾಗಿ ಶ್ರೀಮಹಾವಿಷ್ಣುವಿನ ಅವತಾರವಾದ ಶ್ರೀಕೃಷ್ಣನು ತನ್ನ ಬಾಲ್ಯದಲ್ಲಿ ನೆರವೇರಿಸಿದ ಲೀಲೆಗಳನ್ನು ಮೊದಲಿನಿಂದ ಯಮಳಾರ್ಜುನರ ಅನುಗ್ರಹದವರೆಗೆ, ವಿಷ್ಣುಭಾಗವತಾದಿಪುರಾಣಗಳಲ್ಲಿರುವಂತೆ, ಬಹಳ ಹೃದಯಂಗಮವಾಗಿ ತಿಳಿಸುತ್ತದೆ. ಮೇಲುಮೇಲೆ ನೋಡುವವರಿಗೆ ಶ್ರೀಕೃಷ್ಣನ ಲೀಲಾವಿನೋದಗಳು ಜಾರಚೋರನಾದ ತುಂಟನ ನಡೆವಳಿಕೆ ಎಂದು ತೋರಿದರೂ, ಒಳಹೊಕ್ಕು ನೋಡಿ ವಿಮರ್ಶಿಸುವವರಿಗೆ ಮೇಲಾದ, ಮಿಗಿಲಾದ, ಉಪದೇಶವನ್ನೂ ಸಾರುತ್ತವೆ. ಅಧ್ಯಾಯ ೧೫ ಶ್ಲೋಕ ೨೦-೩೧ ಗಳನ್ನೂ, ಅ. ೨೭ ಶ್ಲೋಕ ೧೯-೨೬ ಮತ್ತು ಅ. ೨೪ ಶ್ಲೋಕ ೬೪-೭೨ ಗಳನ್ನೂ, ನೋಡಬೇಕು.

ಯತ್ಕಿಂಚಿದ್ವಸ್ತುಮಾತ್ರಂ ಹಿ ಸರ್ವಂ ಮತ್ತೋ ನ ಚಾನ್ಯತಃ ।
ಯೋ ನಾರ್ಪಯಿತ್ವಾ ಭುಜ್ಞ್ತೇ ಸ ಸ್ತೇನ ಏವ ನ ಸಂಶಯಃ ॥

ಅತೋಽನ್ಯಾಸಾಂ ತು ಭವನೇ ನಾಶಿತಂ ಸಕಲಂ ಮಯಾ ।
ತಸ್ಯಾಸ್ತು ವರ್ಧಿತಂ ಯಾ ಮೇ ಪ್ರೀತ್ಯಾ ಸರ್ವಂ ಸಮರ್ಪಯತ್ ॥

ಇತ್ಯಹಂ ಶಿಕ್ಷಯನ್ ಘೋಷೇ ಅಟಾಮಿ ಪ್ರತಿವಾಸರಂ ।
ಗೋಪಾ ಗೋಪ್ಯ ಸ್ತಥಾ ಗಾವೋ ವೃಕ್ಷಾ ವೀರುತ್ತೃಣಾನಿ ಚ ।
ಏತತ್ಸರ್ವಂ ಚ ವಿಜ್ಞೇಯಂ ಮನ್ಮೈವಾನಂದವಿಗ್ರಹಂ ॥

ಸರ್ವಾನ್ ವ್ರಜಸ್ಥಾನ್ ಯೇ ಮತ್ತೋ ಭಿನ್ನಾನ್ ಪಶ್ಯಂತಿ ದುರ್ಧಿಯಾ ।
ತೇಷಾಂ ಹಿ ಮೂಢಬುದ್ಧೀನಾಂ ಗತಿರ್ನಾತ್ರ ಪರತ್ರ ಚ ॥

ಎಂದು ಮುಂತಾಗಿ ವರ್ಣಿಸಿ, ದೇವದೇವನ ವ್ಯಾವಹಾರಿಕವಾದ ವಿಶ್ವರೂಪವನ್ನೂ, ಪಾರಮಾರ್ಥಿಕವಾದ ಪರಬ್ರಹ್ಮತತ್ವಸ್ವರೂಪವನ್ನೂ ತಿಳಿಯಹೇಳಿದೆ. ಈ ರೀತಿಯಲ್ಲಿ ಮತಗಳಿಗೂ ಧರ್ಮಗಳಿಗೂ ಪರಸ್ಪರವಾಗಿ ವಿರೋಧವಿಲ್ಲವು. ಸಾಮರಸ್ಯವೇ ಇದೆ. ಎಂಬುದನ್ನು ಮನಗಾಣಬಹುದು.

ಇಂತಹ ಪುರಾಣಗಳನ್ನು ವ್ಯಾಸಂಗಮಾಡುವುದರಿಂದ ಜನರ ಮನಸ್ಸು ವಿಶಾಲವಾಗುತ್ತಾ, ಅವರ ಧರ್ಮಾಚರಣೆಯು ವಿಶ್ವಧರ್ಮಾಚರಣೆಯಲ್ಲಿ ಪರ್ಯವಸಾನಹೊಂದಲು, ಮುಖಂಡರಲ್ಲೂ ಈ ವಿಶ್ವಧರ್ಮಾದರವು ಪ್ರಾಮುಖ್ಯವನ್ನು ಪಡೆದು, ಜಗತ್ತಿನಲ್ಲಿ ಈಗಿನಂತೆ ಅಂತಃಕಲಹಗಳೂ, ಯುದ್ಧ, ಸಾವು, ನೋವು, ಸಂಕಟಗಳು ತಪ್ಪಿ, ಜನರಲ್ಲಿ ಶಾಂತಿ, ನೆಮ್ಮದಿ, ಸುಖಗಳು ನೆಲೆಸುವಂತಾಗುತ್ತದೆ. ಈ ಅಮೂಲ್ಯವಾದ ಪ್ರಯೋಜನವನ್ನು ಮನಗಂಡಿರುವ, ಧಾರ್ಮಿಕರೂ, ಪ್ರಜಾಹಿತೈಷಿಗಳೂ ಆಗಿ ನಮ್ಮನ್ನಾಳುತ್ತಾ ದಯಮಾಡಿಸಿರುವ, **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ., ಮಹಾಸ್ವಾಮಿಯವರ** ಅಪ್ಪಣೆಯನ್ನು ಅನುಸರಿಸಿ ಈ ಗ್ರಂಥವನ್ನೂ ಮುದ್ರಿಸಿ, ಕನ್ನಡಿಗರ ಉಪಯೋಗಕ್ಕಾಗಿ ಪ್ರಕಟಿಸಲಾಗಿದೆ. ಈ ಮಹಾಶಯರ ಘನವಾದ ಈ ಉದ್ದೇಶವು ಸರ್ವದಾ ನೆರವೇರುತ್ತಿರುವಂತಾಗಲೆಂದೂ, ಇಂತಹ ಮಹೋದಯರಿಗೆ ಜಗನ್ಮಾತೆಯು ಆಯುರಾರೋಗ್ಯ ಐಶ್ವರ್ಯ ಸತ್ಸಂತಾನ ಮುಂತಾದ ಸಕಲವಾದ ಸನ್ಮಂಗಳಗಳನ್ನೂ ಇತೋಽಪ್ಯತಿಶಯವಾಗಿ ಕರುಣಿಸುತ್ತಿರಲೆಂದೂ, ಆ ಮಹಾತಾಯಿಯಾದ ತ್ರಿಪುರಸುಂದರೀ ಚಾಮುಂಡೇಶ್ವರೀದೇವಿಯ ಅಡಿದಾವರೆಗಳಲ್ಲಿ ಭಕ್ತಿನಮ್ರನಾಗಿ ಸರ್ವದಾ ಪ್ರಾರ್ಥಿಸುತ್ತಿರುತ್ತೇನೆ.

ಶ್ರೀ ವ್ಯಯಸಂವತ್ಸರದ
ಮಾರ್ಗಶೀರ್ಷ ಕೃಷ್ಣ ಸಪ್ತಮೀ
ಭಾನುವಾರ, 15—12—1946

**ಎಡತೊರೆ ದೇವಯ್ಯದೀಕ್ಷಿತರ ಮಗ**
**ಚಂದ್ರಶೇಖರಶಾಸ್ತ್ರೀ**

# ಆದಿಪುರಾಣದಲ್ಲಿರುವ ವಿಷಯಗಳ ಸೂಚಿಕೆ


| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| ೧. | ನೈಮಿಶಾರಣ್ಯಕ್ಷೇತ್ರವು ತುಂಬ ಮಹಿಮೆಯುಳ್ಳದ್ದು ; ಅಲ್ಲಿ ಶೌನಕನೇ ಮೊದಲಾದ ಋಷಿಗಳು ಹನ್ನೆರಡು ವರ್ಷಗಳವರೆಗೆ ನೆರವೇರಿಸಬೇಕಾಗಿರುವ ಸತ್ರಯಾಗವನ್ನು ಆಚರಿಸಿದುದು; ಆ ಸಂದರ್ಭದಲ್ಲಿ ಸೂತಮಹರ್ಷಿಯು ಆಗಮನ ಆದಿಪುರಾಣದ ಪ್ರಸಂಗ ; .... | ೧-೯ |
| ೨. | ಸತ್ಸಂಗ, ಸತ್ಕಥಾಶ್ರವಣ, ಧಾರ್ಮಿಕವಿಚಾರಗಳು ಇವುಗಳಿಂದ ಆಗುವ ಪ್ರಯೋಜನ; ಸಂಧ್ಯಾವರ್ಣನವನ್ನೂ ಆಗ ಮಾಡಬೇಕಾದ ಕರ್ಮಗಳನ್ನೂ ತಿಳಿಯಹೇಳಿದುದು ; ಶೌನಕ ಸೂತರ ಸಮಾಗಮ. .... | ೧೦-೧೯ |
| ೩. | ಶೌನಕಮಹರ್ಷಿಯು ಕಲಿಯುಗದ ದೋಷಗಳನ್ನು ವಿವರಿಸಿ, ಅವುಗಳ ಪರಿಹಾರಕ್ಕಾಗಿ ಹರಿಲೀಲಾವಿಲಾಸವಿನೋದಗಳ ಕಥೆಯನ್ನು ಕೇಳುತ್ತಾ, ಸತ್ಕಾಲಕ್ಷೇಪವನ್ನು ಮಾಡಬೇಕೆಂದು ಹೇಳಿ, ಅದನ್ನು ವಿಸ್ತಾರವಾಗಿ ತಿಳಿಯಹೇಳಬೇಕೆಂದು ಸೂತಮಹರ್ಷಿಯನ್ನು ಕೇಳಿದುದು. .... | ೨೦-೨೯ |
| ೪. | ಆಗ ದಾಲ್ಭ್ಯ, ಗೃತ್ಸಮದ, ವಾತ್ಸ್ಯಾಯನ, ಶತತಪ, ಸ್ಥೂಲಶಿರ, ಗೌತಮ, ಜಾಬಾಲಿ, ಜಾತೂಕರ್ಣಿ, ಊರ್ಧ್ವಪಾದ ಮುಂತಾದ ಋಷಿಗಳು ಸತ್ಕಥಾ ಹರಿಭಕ್ತಿಗಳ ಸ್ವರೂಪಮಹಿಮೆಗಳನ್ನು ವರ್ಣಿಸಿದುದು ; ವ್ಯಾಸರಚಿತವಾದ ಆದಿಪುರಾಣದ ಪ್ರಸಂಗ, ಶ್ರವಣ ಪ್ರಶ್ನೆ. .... | ೩೦-೩೭ |
| ೫. | ಸನತ್ಕುಮಾರನು ವ್ಯಾಸಮಹರ್ಷಿಗೆ ಆದಿಪುರಾಣವನ್ನು ಹೇಳಿದ್ದುದು ; ಸಂಸಾರದುಃಖಕ್ಕೆ ಕಾರಣವಾದ ಮಾಯೆಯನ್ನು ಹೇಗೆ ದಾಟಬೇಕೆಂದು ಪ್ರಶ್ನಿಸಿದ ಋಷಿಗಳಿಗೆ ಸ್ತ್ರೀಪರಿಗ್ರ | |

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ಹವನ್ನು ಬಿಟ್ಟು, ಹರಿನಾಮಸ್ಮರಣೆಯಿಂದ ಮಾಯಾಜಯಲಾಭವೆಂದು ಹೇಳಿ, ಹರಿಕಥೆಯ ಮಹಿಮೆಯನ್ನೂ ಹರಿಭಕ್ತಿಯ ಫಲವನ್ನೂ ವಿವರಿಸಿದುದು ; ವಿಷ್ಣುವಿನ ಆರಾಧನೆ, ವಿರೋಧ ಇವೆರಡೂ ವಿಪರೀತ ಫಲಗಳನ್ನು ಕೊಡುತ್ತವೆಂಬ ವಿಚಾರ ; ಆದಿಪುರಾಣ ಕಥೆಯ ಪ್ರಾರಂಭ. .... | ೩೮ – ೪೬ |
| ೬. | ಉಗ್ರಸೇನನ ಮಗಳಾದ ದೇವಕಿಯನ್ನು ಯಾದವವಂಶದ ವಸುದೇವನು ಮದುವೆಮಾಡಿಕೊಂಡು ಊರಿಗೆ ಹೊರಡಲು, ಭಾವಮೈದುನನಾದ ಕಂಸನು,ಅಶರೀರವಾಣಿಯಿಂದ ದೇವಕಿಯ ಎಂಟನೆಯ ಮಗನಿಂದ ತನ್ನ ವಧೆಯಾಗುವುದೆಂಬುದನ್ನು ಕೇಳಿ, ಅವರಿಬ್ಬರನ್ನೂ ಸೆರೆಮನೆಯಲ್ಲಿಟ್ಟು, ಅವಳ ಮಕ್ಕಳನ್ನು ಹುಟ್ಟಿದ ಕೂಡಲೆ ಕೊಲ್ಲುತ್ತಾ ಬಂದನು ; ಏಳನೆಯ ಗರ್ಭದಲ್ಲಿದ್ದ ಸಂಕರ್ಷಣನೆಂಬ ಮಗುವನ್ನು ರೋಹಿಣೀಗರ್ಭದಲ್ಲಿ ಇಟ್ಟು ಉಳಿಸಿದ್ದಾಯಿತು ; ಎಂಟನೆಯ ಶಿಶುವಾದ ಕೃಷ್ಣನನ್ನು ಗೋಕುಲದಲ್ಲಿ ನಂದನಮನೆಯಲ್ಲಿಟ್ಟು, ಅಲ್ಲಿದ್ದ ಯಶೋದೆಯ ಹೆಣ್ಣು ಮಗುವನ್ನು ತಂದು ಕಂಸನಿಗೆ ಕೊಡಲು, ಅದು ಅವನ ಕೈಯಿಂದ ತಪ್ಪಿಸಿಕೊಂಡು ಹೋಗುತ್ತಾ, ಕಂಸಶತ್ರುವು ಗೋಕುಲದಲ್ಲಿರುವುದಾಗಿ ಹೇಳಿದುದು ; ಈ ಪುರಾಣಕಥಾಸಂಗ್ರಹ ವರ್ಣನೆ. .... | ೪೭ - ೫೩ |
| ೭. | ಮಾಯೆಯ ಪಾಶಕ್ಕೆ ಸಿಕ್ಕಿ ಜೀವನು ಗರ್ಭಗತನಾಗಿದ್ದು ಬೆಳೆದು ಜನಿಸುವ ಬಗೆ ; ಸ್ತ್ರೀಪುತ್ರಾದಿಗಳಲ್ಲಿ ಮಾಯಾಮೋಹ, ಈಶಸ್ಸರ್ವತ್ರರಕ್ಷಕಃ ಎಂಬ ತತ್ವದ ವಿವರಣೆ. | ೫೪–೭೦ |
| ೮. | ವಿಷ್ಣುಭಕ್ತರು ಮಾಯೆಯಿಂದ ಬಿಡುಗಡೆಯನ್ನು ಹೊಂದುತ್ತಾರೆ ; ವಿಷ್ಣುಭಕ್ತಿಯ ಲಕ್ಷಣಗಳ ವಿವರಣೆ ; ಕರ್ಮದ | |

| ಅಧ್ಯಾಯ | ವಿಷಯ | ಪುಟಸಂಖ್ಯಾ |
| --- | --- | --- |
| | ಮಹಿಮೆ ; ಭಕ್ತಿಯಿಂದಾಗುವ ಫಲದ ವರ್ಣನೆ ; ಶ್ರೀಕೃಷ್ಣನು ಮಹಾವಿಷ್ಣುವಿನ ಅವತಾರ. .... | ೭೧–೭೯ |
| ೯. | ಶ್ರೀಕೃಷ್ಣನ ಅವತಾರ, ಬಾಲಲೀಲೆಗಳನ್ನು ತಿಳಿಯಹೇಳಬೇಕೆಂದು ಋಷಿಗಳ ಪ್ರಶ್ನೆ ; ಮಧುರಾಮಂಡಲದ ವರ್ಣನೆ : ವೃಂದಾವನ ಮುಂತಾದ ದ್ವಾದಶವನೋಪವನಗಳ ವರ್ಣನೆ ; ನಾರದನು ಕೃಷ್ಣದರ್ಶನಕ್ಕೆ ಹೊರಟು, ಮಾನಸರೋವರದಲ್ಲಿ ಸ್ನಾನಮಾಡಿ ಕನ್ಯೆಯಾದುದು ; ಬೃಂದಾವನದ ಕನ್ಯೆಯೊಬ್ಬಳು ಬಂದು ನಾರದಕನ್ಯೆಯನ್ನು ಶ್ರೀಕೃಷ್ಣನ ದರ್ಶನಕ್ಕೆ ಕರೆದುಕೊಂಡು ಹೋದುದು ; ರಾಸಕ್ರೀಡೆಯ ವಿವರಣೆಗಾಗಿ ಪ್ರಶ್ನೆ. .... | ೮೦--೧೦೩ |
| ೧೦. | ನಾರದನು ಸತ್ಯಲೋಕಕ್ಕೆ ಹೋಗಿ ಬ್ರಹ್ಮನನ್ನು ಕುರಿತು ಪ್ರಶ್ನಿಸಲು ಬ್ರಹ್ಮನು ತನ್ನ ಉತ್ಪತ್ತಿಕ್ರಮವನ್ನು ಹೇಳಿದನು ; ಜಗತ್ಸಂಹಾರಾನಂತರದಲ್ಲಿ ವಿಷ್ಣುವಿನ ನಾಭಿಕಮಲದಿಂದ ಬ್ರಹ್ಮನ ಆವಿರ್ಭಾವ ; ಅಸಹಾಯನಾಗಿ ದುಃಖಗೊಂಡಿದ್ದ ಅವನನ್ನು ಕುರಿತು ವಿಷ್ಣುರೂಪಿಯಾದ ಭೃಂಗಾಧಿಪನು ವಿಷ್ಣುವಿಗೆ ಸೃಷ್ಟಿ, ವಿಹಾರಗಳ ಪ್ರವರ್ತಕವಾದ ಎರಡು ರೂಪಗಳುಂಟೆಂದು ಹೇಳಿದುದು ; ಈ ವಿಹಾರರೂಪವನ್ನು ಹಿಂದೆ ಮುನಿರೂಪನಾದ ಕೀರವರನಿಗೆ ಹೇಳಿದ್ದುದನ್ನು ತಿಳಿಯಹೇಳಿದುದು ; .... | ೧೦೪–೧೧೪ |
| ೧೧. | ಬೃಂದಾವನದಲ್ಲಿ ಶ್ರೀಕೃಷ್ಣನ (ವಿಹಾರಪ್ರವರ್ತಕವಾದ ಶ್ರೀವಿಷ್ಣುವಿನ) ರೂಪವನ್ನೂ, ಅವನ ಹೆಂಡಿತಿಯರ ಮತ್ತು ಸಖಿಯರ ನಾಮಗಳನ್ನೂ, ರಾಧಿಕೆಯ ಎಂಟುಜನ ಸಖಿಯರ ಹೆಸರು ಕಾರ್ಯಗಳನ್ನೂ ವಿವರಿಸಿದುದು ; | ೧೧೫–೧೨೪ |
| ೧೨. | ಶ್ರೀಕೃಷ್ಣ, ರಾಧಾ ಇವರ ತಂದೆ, ತಾಯಿ, ಸಖಿಯರು, ಪರಿವಾರ ಇವರೆಲ್ಲರ ನಾಮಾದಿಗಳನ್ನು ಭೃಂಗರಾಜನು | |

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ಕೀರವರನಿಗೆ ಹೇಳಿದ್ದುದನ್ನು ಬ್ರಹ್ಮನು ನಾರದನಿಗೆ ವಿವರಿಸಿದನು ; .... | ೧೨೫–೧೩೭ |
| ೧೩. | ಕನ್ಯಾರೂಪಿಯಾಗಿದ್ದ ನಾರದನು ಬೃಂದಾವನ ಕನ್ಯೆಯಿಂದ ಶ್ರೀಕೃಷ್ಣನ ದರ್ಶನವನ್ನು ಪಡೆದುದು ; ತನ್ನ ವಿಲಾಸ ಮಹಿಮೆಯನ್ನು ತೋರಿಸಲು ಶ್ರೀಕೃಷ್ಣನು ನಂದಿನೀ ಎಂಬ ದೂತಿಯಾದ ಸಖಿಯನ್ನು ನಾರದನ ಬಳಿಯಲ್ಲಿಟ್ಟು ಅಂತರ್ಧಾನವಾದುದು ; ದೂತೀಲಕ್ಷಣವಿವರಣೆ ; ರಾಧೆಯ ಪ್ರಣಯಕೋಪವರ್ಣನೆ ; ನಂದಿನಿಯು ರಾಧಾಮಾಧವರನ್ನು ಸೇರಿಸಲು ಯತ್ನಿಸಿದುದು ; .... | ೧೩೮ ೧೬೫ |
| ೧೪. | ರಾಧಾಮಾಧವರ ರೂಪಗುಣಗಳನ್ನು ವರ್ಣಿಸಿ ನಂದಿನಿಯು ಮುನಿಸನ್ನು ನಿವಾರಿಸಿದುದು ; ಶ್ರೀಕೃಷ್ಣದರ್ಶನವನ್ನು ಪಡೆದು ಅವನಿಂದ ತನ್ನ ಸ್ತ್ರೀರೂಪನಿವಾರಣೆಯಾಗಿ ನಾರದ ರೂಪವನ್ನು ಕೃಷ್ಣಾನದಿಯಲ್ಲಿ ಸ್ನಾನಮಾಡಿ ಪಡೆಯಬಹುದೆಂದು ತಿಳಿದು, ಹಾಗೆ ಮಾಡಿ ಬಂದು ಶ್ರೀಕೃಷ್ಣನನ್ನು ಸ್ತುತಿಸಿದುದು ; ಬಹುಮಾನಪ್ರಾಪ್ತಿ ; ಪರಮಾತ್ಮನಿಗೆ ಸಗುಣನಿರ್ಗುಣ ಎಂದು ರೂಪದ್ವಯ ; ಜಗದ್ವ್ಯವಹಾರಕ್ಕಾಗಿ ಸಗುಣರೂಪ, ವಾಸ್ತವರೂಪವು ನಿರ್ಗುಣವಾದುದು; ಶ್ರೀಕೃಷ್ಣನು ಆ ಪರಮಾತ್ಮನ ಸಗುಣರೂಪನು ; ಪ್ರಸಂಗದಿಂದ ಕಲಿಯುಗದ ದೋಷಪ್ರಭಾವವರ್ಣನೆ ; | ೧೬೬–೧೯೯ |
| ೧೫. | ಬ್ರಹ್ಮನು ಕ್ಷೀರಸಾಗರದ ಸಮೀಪದಲ್ಲಿ ತಪಸ್ಸುಮಾಡಿ ಸ್ತುತಿಸಲು, ವಿಷ್ಣುವು ಅದ್ವೈತಪರತತ್ವವನ್ನು ತಿಳಿಯಹೇಳಿದುದಲ್ಲದೆ, ಭೂಭಾರನಿವಾರಣೆಗಾಗಿ ದೇವಕೀ ವಸುದೇವರಿಂದ ಶ್ರೀಕೃಷ್ಣನಾಗಿ ಅವತರಿಸುವೆನೆಂದು ಹೇಳಿ ಸಮಾಧಾನಪಡಿಸಿದುದು ; ಶ್ರೀಕೃಷ್ಣನ ಜನ್ಮ ; ವಸುದೇವನ ಸ್ತೋತ್ರ ; ಅವನ ಅಪ್ಪಣೆಯಂತೆ ನಂದನ ಗೃಹದಲ್ಲಿ ಕೃಷ್ಣನನ್ನು ಇಟ್ಟು ಅಲ್ಲಿ ಹುಟ್ಟಿದ್ದ ಮಾಯಾಶಕ್ತಿಯನ್ನು ತಂದುದು ; .... | ೨೦೦–೨೧೩ |

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| ೧೬. | ನಂದನ ಮನೆಯಲ್ಲಿ ವೈಭವದಿಂದ ಪುತ್ರೋತ್ಸವವನ್ನು ನೆರವೇರಿಸಿದುದು ; ದಾನ, ಪೂಜೆ, ಭಜನೆ, ಜಾಗರಣೆ ; ಸ್ವಪ್ನದಲ್ಲಿ ವಸುದೇವನು ಭಗವಂತನಿಂದ ಸೂರ್ಯವಂಶವನ್ನೂ, ರಾಮನಾಗಿ ಹುಟ್ಟಿ ಭೂಭಾರನಿವಾರಣೆ ಮಾಡಿದುದನ್ನೂ ಕೇಳಿದುದು ; ರಾಮಕಥಾಸಂಗ್ರಹವರ್ಣನೆ ; | ೨೧೪-೨೩೨ |
| ೧೭. | ಇತ್ತಲಾಗಿ ಕಂಸನು ಸ್ವಪ್ನದಲ್ಲಿ ಯಮಬಾಲಕನನ್ನು ನೋಡಿ ಅವನಿಂದ ಗೋಕುಲದಲ್ಲಿರುವ ಬಾಲಕನ ಹನ್ನೊಂದನೆಯ ವಯಸ್ಸಿನಲ್ಲಿ ತನ್ನ ಮರಣವೆಂದು ಕೇಳಿ, ಅವನ ಸಂಹಾರಕ್ಕಾಗಿ ಪೂತನಿಯನ್ನು ಕಳುಹಿಸಿದುದು ; ಶ್ರೀಕೃಷ್ಣನು ಅವಳನ್ನು ಸಂಹರಿಸಿದುದು ; ಅವಳಿಗೆ ಸದ್ಗತಿ ಪ್ರಾಪ್ತಿಯಾದುದು ; ಅದು ಹೇಗೆಂದು ಕೇಳಲು ಹಿಂದಿನ ಕಥೆಯ ವಿವರಣೆ ; .... | ೨೩೩—೨೪೯ |
| ೧೮. | ಕಕ್ಷೀವಂತನೆಂಬ ಋಷಿಯು ಸಂತಾನಾರ್ಥವಾಗಿ ತಪಸ್ಸಿಗೆ ಹೋಗಿರಲು, ಅವನ ಹೆಂಡಿತಿ ಚಾರುಮತಿಯು ಶೂದ್ರಾಕ್ರಾಂತಳಾಗಿದ್ದುದನ್ನು ಹಿಂತಿರುಗಿ ಬಂದ ಗಂಡನು ತಿಳಿದು, ರಾಕ್ಷಸಿಯಾಗೆಂದು ಶಪಿಸಲು, ಅವಳು ಪೂತನಿಯಾದುದು; ಚ್ಯವನನ ತಪೋಭಂಗವನ್ನು ಮಾಡಿದ ರಾಕ್ಷಸರನ್ನು ಆ ಋಷಿಯ ಮೈಯಿಂದುಂಟಾದ ದೇವತೆಗಳು ಸಂಹರಿಸಿದುದು ; ಅವನ ಅಪ್ಪಣೆಯಂತೆ ಅವರು ರುದ್ರನಲ್ಲಿಗೆ ಹೋದಾಗ ಅವನು ಧ್ಯಾನಾಸಕ್ತನಾಗಿರಲು, ಪಾರ್ವತಿಯಿಂದ ಮೋಹಗೊಂಡು, ಪಶ್ಚಾತ್ತಪ್ತರಾಗಿ, ಬಹಿರ್ಮುಖನಾದ ಶಿವನ ಬುದ್ಧಿವಾದದಂತೆ ಕೃಶಾನುಪುತ್ರರಾಗಿ ಗೋಕುಲದಲ್ಲಿ ಜನಿಸಿ, ಪೂತನಾ ವಿಷಸ್ತನ್ಯವನ್ನು ಮೊದಲು ಪಾನಮಾಡಿ, ಕೃಷ್ಣನು ಪಾನಮಾಡಿದಮೇಲೆ ಶುದ್ಧರಾಗಿ ಮುಕ್ತರಾದುದು ; ಪೂತನಾಸಂಹಾರವಾದಾಗ ನಂದನು ಭೋಜರಾಜನಿಗೆ ಕಪ್ಪವನ್ನು ಕೊಡಲು ಆ ಪಟ್ಟಣಕ್ಕೆ | |

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ಹೋಗಿದ್ದುದು ; ನಂದ ವಸುದೇವರ ಮೈತ್ರೀ ಸಲ್ಲಾಪ ಸಮಾಧಾನಗಳು ; ಇತ್ತಲಾಗಿ ಪೂತನಿಯ ಸಹೋದರಿಯು ಕಂಸನನ್ನು ದೂಷಿಸಿದುದು ; ಕಂಸನು ತೃಣಾವರ್ತ, ಅಘಾಸುರ, ಬಕಾಸುರರನ್ನು ಕಳುಹಿಸಲು ನಿಶ್ಚಯಿಸಿದುದು ; ... | ೨೫೦–೨೮೩ |
| ೧೯. | ಭೂಭಾರವನ್ನು ನಿವಾರಿಸಲು ಕೃಷ್ಣಾವತಾರವಾಗಿರುವುದನ್ನು ತಿಳಿದು ಮಹಾದೇವನೂ, ಬ್ರಹ್ಮನೂ, ಬಂದುನೋಡಿ ಯಶೋದಾ, ನಂದ ಮುಂತಾದವರ ಭಾಗ್ಯವನ್ನು ಶ್ಲಾಘಿಸಿದುದು ; ಕಂಸನು ಕಳುಹಿಸಿದ್ದ ಶಕಟಾಸುರನು ಕೃಷ್ಣನ ಒದೆತದಿಂದ ಸತ್ತುದು ; ಈ ಕೃಷ್ಣನ ಬಾಲ್ಯಚರಿತ್ರವನ್ನು ಕೇಳಲು ಪ್ರಾರ್ಥಿಸಿದ ನಾರದನಿಗೆ ಶ್ರೀಕೃಷ್ಣನೇ ಹೇಳಿದುದು ; ಅತ್ತಲಾಗಿ ಕಂಸನ ಅಘಾಸುರ ಬಕಾಸುರ ತೃಣಾವರ್ತರೊಡನೆ ಸಮಾಲೋಚನೆ. .... | ೨೮೪--೩೦೨ |
| ೨೦. | ಪೂತನಿಯ ಗಂಡ ಘಟೋದರನನ್ನೂ, ಅವಳ ಚಿಕ್ಕಪ್ಪನ ಮಕ್ಕಳಾದ ಅಘಾಸುರ ಬಕಾಸುರರನ್ನೂ, ನಿರಪರಾಧಿ ಪ್ರಜಾನಾಶಭಯದಿಂದ ಹೆದರಿದ ಕಂಸನು ತಡೆದು, ಕೃಷ್ಣನನ್ನು ಮಾತ್ರ ಹಾರಿಸಿಕೊಂಡು ತರಲು ತೃಣಾವರ್ತನನ್ನು ಬಿರುಗಾಳಿಯ ರೂಪದಲ್ಲಿ ಕಳುಹಿಸಿದುದು ; ತೃಣಾವರ್ತನನ್ನು ಶ್ರೀಕೃಷ್ಣನು ಕತ್ತುಹಿಡಿದು ಹಿಸುಕಿ ಕೊಂದುದು ; ಗೋಪರು ನಂದನನ್ನು ಅಭಿನಂದಿಸಿದುದು ; ತೃಣಾವರ್ತನು ಶ್ರೀಕೃಷ್ಣ ಸ್ಪರ್ಶವನ್ನು ಪಡೆದುದರಿಂದ ಅವನ ಜ್ಯೋತಿಯು ಶ್ರೀಕೃಷ್ಣನಲ್ಲಿ ಸೇರಿದುದು ; ಅವನ ಪೂರ್ವಜನ್ಮ ಕಥೆ ; ದ್ರವಿಡದೇಶದಲ್ಲಿ ವಿಶ್ವರಥ ರಾಜನಾಗಿದ್ದುದು ; ತಿಳಿಯದೆ ಹರಿಭಕ್ತನಾದವನನ್ನು ಕಳ್ಳನೆಂದು ಸೆರೆಹಾಕಿದ್ದುದು ; ಆ ರಾಜನೇ ತೃಣಾವರ್ತನಾಗಿದ್ದು ಈಗ ಸದ್ಗತಿಯನ್ನು ಪಡೆದುದು ; ...... | ೩೦೩-೩೨೪ |

ಅಧ್ಯಾಯ ವಿಷಯ ಪುಟಸಂಖ್ಯೆ

೨೧. ಕಂಸನು ತೃಣಾವರ್ತನ ಸಂಹಾರದ ವಿವರವನ್ನು ದೂತರಿಂದ ಕೇಳಿ, ಪುರುಷಯತ್ನಕ್ಕಿಂತ ದೈವಪ್ರಾಬಲ್ಯವು ಮಿಗಿಲೆಂದು ತಿಳಿದು, ಚಿಂತಾಕ್ರಾಂತನಾಗಿರುವಾಗ ಸ್ವಪ್ನದಲ್ಲಿ ದೇವಕಿಯ ಎಂಟನೆಯ ಮಗುವನ್ನೂ ಕೊಲ್ಲಹೋದಾಗ ಆದಿಶಕ್ತಿ ಅಥವಾ ಮಹಾಮಾಯಾರೂಪಿಣಿಯಾದ ಆ ಶಿಶುವು ಹಾರಿ ತಪ್ಪಿಸಿಕೊಂಡು, ಕಂಸನ ಶತ್ರುವು ಗೋಕುಲದಲ್ಲಿ ಬೆಳೆಯುತ್ತಿರುವುದಾಗಿ ಹೇಳಿ ಹೋದಮೇಲೆ, ಪಶ್ಚಾತ್ತಪ್ತನಾದ ಕಂಸನು ವಸುದೇವ ದೇವಕಿಯರಲ್ಲಿ ಕ್ಷಮಾಪ್ರಾರ್ಥನೆಯನ್ನು ಮಾಡಲು, ಅವರು ಅವನನ್ನು ಸಮಾಧಾನಪಡಿಸಿದುದು, ಇದೆಲ್ಲವನ್ನೂ ಕಂಡನು. ಕಂಸನು ಹೀಗೆ ಆಗಾಗ್ಗೆ ಪುರುಷಕಾರಕ್ಕಿಂತ ದೈವಪ್ರಾಬಲ್ಯವು ಮಿಗಿಲಾದುದೆಂಬುದನ್ನು ಮನಗಂಡರೂ, ಪುನಃ ರಾಜ್ಯಲೋಭದಿಂದ ಶತ್ರುನಾಶಕ್ಕಾಗಿ ಅಘಾಸುರನನ್ನೂ ಬಕಾಸುರನನ್ನೂ ಕಳುಹಿಸಿದನು; ಇತ್ತಲಾಗಿ ನಂದನ ಮನೆಯಲ್ಲಿ ಶ್ರೀಕೃಷ್ಣನ ಬಾಲಲೀಲೆಯ ವರ್ಣನೆ; ಒಂದು ದಿನ ವಸುದೇವನು ಗರ್ಗಮಹರ್ಷಿಯನ್ನು ಕಂಡು ಶ್ರೀಕೃಷ್ಣ ಬಲರಾಮರಿಗೆ ನಾಮಕರಣವನ್ನು ಗುಟ್ಟಾಗಿ ಮಾಡಲು ಕಳುಹಿಸಿದನು; ಗರ್ಗನು ನಂದನಿಂದ ಗೌರವಿಸಲ್ಪಟ್ಟು, ಆ ಬಾಲಕರಿಗೆ ನಾಮಕರಣ ಸಂಸ್ಕಾರ ಮಹೋತ್ಸವವನ್ನು ಗುಟ್ಟಾಗಿ ನೆರವೇರಿಸಲು ಅವನನ್ನು ಒಪ್ಪಿಸಿದುದು; ...... ೩೨೫—೩೪೯

೨೨. ನಾಮಕರಣ ಸಂಸ್ಕಾರವನ್ನು ಹಾಗೆ ನೆರವೇರಿಸಿದ ಮೇಲೆ, ಗರ್ಗನು ರಾಮಕೃಷ್ಣರ ಭವಿಷ್ಯವನ್ನು ಅವರ ಜಾತಕಯೋಗದಿಂದ ತಿಳಿದು ಯಶೋದಾ ನಂದರಿಗೆ ವಿವರಿಸಿದುದು; ಶ್ರೀಕೃಷ್ಣನು ಮಹಾವಿಷ್ಣುವಿನ ಅವತಾರವೆಂಬುದನ್ನೂ ತಿಳಿಸಿ, ಧರ್ಮಾಚರಣೆಯ ಬುದ್ಧಿವಾದವನ್ನೂ

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ಹೇಳಿ ಹಿಂತಿರುಗಿದುದು ; ಮುಂದಿನ ಕೃಷ್ಣಲೀಲೆಯನ್ನೂ ಶ್ರೀಕೃಷ್ಣನೇ ನಾರದನಿಗೆ ವಿವರಿಸುವುದನ್ನು ಮುಂದುವರಿಯಿಸಿದುದು ; ಬಾಲಕೃಷ್ಣನು ಗೋಪಿಯರ ಮನೆಗಳಲ್ಲಿ ಹಾಲು ಮೊಸರು ತುಪ್ಪಗಳನ್ನು ಕುಡಿದು, ತಿಂದು, ಚಲ್ಲಿ, ಸ್ನೇಹಿತರಿಗೂ ಕಪಿಗಳಿಗೂ ಕೊಡುವುದು ; ಅವುಗಳ ಪಾತ್ರೆಗಳನ್ನು ಒಡೆಯುವುದು ; ಗೋಪಿಯರನ್ನು ನಯ ಭಯ ವಂಚನೆಗಳಿಂದ ಬೆರಗುಗೊಳಿಸುವುದು ; ಅವರು ಯಶೋದೆಯಲ್ಲಿ ಬಂದು ದೂರಿದರೆ, ಸಮಯಕ್ಕೆ ತಕ್ಕಂತೆ ಮಾತನ್ನಾಡಿ ಎಲ್ಲರನ್ನೂ ಮರುಳುಗೊಳಿಸುವುದು ; ಯಶೋದೆಯು ಅವರನ್ನು ಸಾಮವಾಕ್ಯಗಳಿಂದ ಸಮಾಧಾನಗೊಳಿಸುವುದು; ಗೋಪಿಯರೆಲ್ಲರಿಗೂ ಅಪರಾಧಕ್ಕಿಂತ ಹೆಚ್ಚಾಗಿ ಆನಂದವನ್ನುಂಟುಮಾಡುವುದು ; ..... | ೩೫೦-೩೭೦ |
| ೨೩. | ಗೋಪಿಯರು ದೂರುವುದನ್ನು ಕೇಳಿ ಯಶೋದೆಗೂ ಕಡೆಗೆ ಸಂಶಯವುಂಟಾಯಿತು ; ಗೋಪಿಯರು ಒಟ್ಟಾಗಿ ಕೃಷ್ಣನನ್ನು ಹಿಡಿಯಲು ಅವನು ತುಂಟತನದಿಂದ ತಪ್ಪಿಸಿಕೊಂಡುದು ; ಹಾಲು ಮೊಸರು ಬೆಣ್ಣೆಗಳನ್ನು ತಾವಾಗಿಯೇ ಕೊಟ್ಟು ಉಪಚರಿಸಿದ ಗೋಪಿಯರನ್ನು ಅನುಗ್ರಹಿಸಿದುದು ; ....... | ೩೭೧ ೩೯೦ |
| ೨೪. | ಗೋಪಸ್ತ್ರೀಯರು ಕೃಷ್ಣನನ್ನು ಹಿಡಿದು ಶಿಕ್ಷಿಸಲು ಪ್ರಯತ್ನಪಟ್ಟರೆ ಅವನು ಅವರನ್ನು ಹೊಸಹೊಸ ಯುಕ್ತಿ, ಚಮತ್ಕಾರ, ಅದ್ಭುತಗಳಿಂದ ಮೋಹಗೊಳಿಸುವುದು ; | ೩೯೧-೪೧೦ |
| ೨೫. | ಗೋಪಿಯರ ದೂರನ್ನು ಕೇಳಿ ಯಶೋದೆಯು ಕೃಷ್ಣನಿಗೆ ಬುದ್ಧಿವಾದವನ್ನು ಹೇಳಲು, ಅವನ ಸಮಾಧಾನೋಕ್ತಿಯು ; ಕೃಷ್ಣನೂ ಪ್ರತಿಯಾಗಿ ಗೋಪಿಯರನ್ನು ದೂರುವುದು ; ಯಶೋದೆಯು ಸಮಾಧಾನಪಡಿಸುವುದು ; | ೪೧೧-೪೨೬ |

| ಅಧ್ಯಾಯ | ವಿಷಯ | ಪುಟಸಂಖ್ಯಾ |
| --- | --- | --- |
| ೨೬. | ಯಶೋದೆಯೇ ಒಂದು ದಿನ ದೇವರ ಪೂಜೆಗೆಂದು ಸಿದ್ಧತೆಗಳನ್ನು ಮಾಡಿ ಗೋಪಿಯರನ್ನೂ ಕರೆಯಹೋದಾಗ, ಕೃಷ್ಣನು ಅವನ್ನೂ ತಿಂದು ಕುಡಿದು ಸ್ನೇಹಿತರಿಗೂ, ಕಪಿಗಳಿಗೂ ಕೊಟ್ಟು ತಪ್ಪಿಸಿಕೊಂಡುಹೋದುದು ; ಅನ್ಯದೇವತಾಭಕ್ತರಲ್ಲಿ ಕೃಷ್ಣನು ಮಾಡುತ್ತಿದ್ದ ತುಂಟತನದ ಗೂಢಾಭಿಪ್ರಾಯದ ವಿವರಣೆ ; ತಾಯಿಯನ್ನು ಕುರಿತು ಕೃಷ್ಣನು ಸಮಯಃಬಂದಾಗ ತನ್ನ ಐಶ್ವರ್ಯಮಹಿಮೆಗಳನ್ನು ತೋರಿಸುವೆನೆಂದುದು ; .... | ೪೨೭–೪೩೮ |
| ೨೭. | ಶ್ರೀಕೃಷ್ಣನೊಡನೆ ಬಲರಾಮನು ಮಲ್ಲಯುದ್ಧವನ್ನು ಮಾಡುತ್ತೇನೆಂದುದು ; ತಾಯಿಯಲ್ಲಿ ಕೃಷ್ಣನು ಮಣ್ಣನ್ನು ತಿಂದನೆಂದು ದೂರಿದುದು ; ಅವಳು ಅವನ ಮುಖದಲ್ಲಿ ಇಡಿ ಪ್ರಪಂಚವನ್ನೇ ನೋಡಿದುದು ; ಅವಳಿಗೆ ದಿವ್ಯಜ್ಞಾನದ ಬೆಳಕು ತೋರಿ ಮರೆಯಾದುದು ; ಅವಳ ಪುತ್ರಾನಂದ ವಿಶೇಷವು ; .... | ೪೩೯–೪೪೬ |
| ೨೮. | ಯಶೋದೆಯು ನಂಬಿಸುತ್ತಿದ್ದ ಕೃಷ್ಣನನ್ನು ಬಿಟ್ಟುಹೋಗಿ, ಉಕ್ಕುತ್ತಿದ್ದ ಹಾಲನ್ನು ಕಾಪಾಡಲು ಯತ್ನಿಸಿದುದು ; ಕೃಷ್ಣನು ಹಾಲು ಮೊಸರು ತುಪ್ಪಗಳನ್ನು ತಿಂದು ಭಾಂಡಗಳನ್ನು ಒಡೆದುಹೋದುದು ; ಕೃಷ್ಣನನ್ನು ಬಿಟ್ಟು ಅನ್ಯಭಜನದ ಫಲವು ; ಶ್ರೀಕೃಷ್ಣನನ್ನು ತಿರುವುವ ಕಲ್ಲಿಗೆ ಕಟ್ಟಲು ಹೋದಾಗ ಹಗ್ಗಗಳು ಸಾಲದೆಬರಲು, ದುಃಖಪಟ್ಟು, ಕಡೆಗೆ ಕಟ್ಟಿದುದು ; ನಾರದನು ಯಮಳಾರ್ಜುನರ ಪೂರ್ವಕಥೆಯನ್ನು ಕೇಳಲು ಕೃಷ್ಣನು ಭಕ್ತಿಯ ಫಲವನ್ನು ಹೇಳಿದುದು ; ವಿಷ್ಣುಭಕ್ತಿಗೆ ಎಲ್ಲರೂ ಅಧಿಕಾರಿಗಳು ; | ೪೪೮–೪೫೭ |
| ೨೯. | ಕುಬೇರನ ಅಪ್ಪಣೆಯಂತೆ ನಳ ಕೂಬರರು ವಿಷ್ಣುಪೂಜಾಸಕ್ತರಾಗಿದ್ದುದು ; ನಂದಿಕೇಶ್ವರನು ಬರಲು ಅವನಿಂದ | |

| ಅಧ್ಯಾಯ | ವಿಷಯ | ಪುಟಸಂಖ್ಯಾ |
| --- | --- | --- |
| | ಅವರು ಶಿವಭಕ್ತಿಯ ಫಲವನ್ನು ಕೇಳಿ, ವಿಷ್ಣುಭಕ್ತಿಯನ್ನು ಬಿಟ್ಟು ಶಿವಭಕ್ತರಾದುದು ; ಶ್ರೀಮದದಿಂದ ಅವರು ಸ್ವರ್ಗೀಯ ವಿಷಯ ಸ್ತ್ರೀ ಲಂಪಟರಾದುದು ; ನಾರದನ ಶಾಪದಿಂದ ಅವರು ಯಮಳಾರ್ಜುನರಾದುದು ; ಕರ್ಮ ಭೋಗಾಂತದಲ್ಲಿ ಭಗವಂತನ ದರ್ಶನ ; ತಿರುವುವ ಕಲ್ಲಿಗೆ ಶಿಕ್ಕಿದ ಆ ಜೋಡಿಮರಗಳು ಶ್ರೀಕೃಷ್ಣನು ಎಳೆಯಲು ಬಿದ್ದವು ; ಅದರಿಂದ ಯಕ್ಷಕುಮಾರರ ಶಾಪವು ಕಳೆಯಲು, ಪೂರ್ವರೂಪವನ್ನು ಹೊಂದಿ ವಿಷ್ಣುಭಕ್ತಿಗೆ ಹಿಂತಿರುಗಿ, ಶ್ರೀಕೃಷ್ಣನನ್ನು ಸ್ತುತಿಸಿ ಸ್ವರ್ಗಕ್ಕೆ ಹೋದುದು ; ನಂದನು ಕೃಷ್ಣನ ಕ್ಷೇಮಕ್ಕಾಗಿ ಶಾಂತಿ ಕರ್ಮ ದಾನಗಳನ್ನು ನೆರವೇರಿಸಿದುದು ; ಪುರಾಣ ಶ್ರವಣ ಫಲಶ್ರುತಿ ; ...... | ೪೫೮ ೪೭೧ |


**ಶ್ರೀ ಕೃಷ್ಣಾರ್ಪಣಮಸ್ತು**



|| ಶ್ರೀಗಣೇಶಶಾರದಾಗುರುಭ್ಯೋ ನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಪ್ರಥಮೋಽಧ್ಯಾಯಃ ||

### ಮೊದಲನೆಯ ಅಧ್ಯಾಯವು

**ರಜೋಜುಷೇ ಜನ್ಮನಿ ಸತ್ತ್ವವೃತ್ತಯೇ**
**ಸ್ಥಿತೌ ಪ್ರಜಾನಾಂ ಪ್ರಲಯೇ ತಮಸ್ಸ್ಪೃಶೇ ।**
**ರವೀಂದುನೇತ್ರಾಯ ಚ ಲೋಕಸಾಕ್ಷಿಣೇ**
**ಚಿನ್ಮಾತ್ರರೂಪಾಯ ಪರಾತ್ಮರೂಪಿಣೇ ||೧||**

---

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ಚೈವ (ವ್ಯಾಸಂ) ತತೋ ಜಯಮುದೀರಯೇತ್ ॥**

ಈ ಪುರಾಣವು ನಿರ್ವಿಘ್ನವಾಗಿ ನೆರವೇರಬೇಕೆಂಬ ಉದ್ದೇಶದಿಂದ ಆದಿಯಲ್ಲಿ ಮಂಗಳಶ್ಲೋಕವನ್ನು ರಚಿಸಿರುತ್ತಾರೆ. ಪುರುಷೋತ್ತಮನೂ, ನರರೂಪಧಾರಿಯೂ, ಆದ ಮಹಾವಿಷ್ಣುವನ್ನೂ ಮತ್ತು ದೇವಿಯಾದ ಸರಸ್ವತಿಯನ್ನೂ ಕಾರ್ಯದ ಆದಿಯಲ್ಲಿ ನಮಸ್ಕರಿಸಿ ಬಳಿಕ ಜಯ(ಭಾರತ)ವನ್ನು ಪಠಿಸಬೇಕು.

ಭೂತಭೌತಿಕಾದಿಪ್ರಪಂಚದ ಸೃಷ್ಟಿನಿರ್ವಾಹದ ಕಾಲದಲ್ಲಿ ರಜೋಗುಣಪ್ರಧಾನನಾಗಿಯೂ, ಸ್ಥಿತಿಯ ಎಂದರೆ ರಕ್ಷಣೆಯಕಾರ್ಯವನ್ನು ನೆರವೇರಿಸುತ್ತಿರುವ ಸಮಯದಲ್ಲಿ ಸತ್ತ್ವಗುಣಪ್ರಧಾನನಾಗಿಯೂ, ಲಯಕಾಲದಲ್ಲಿ, ಅದರ ಕಾರ್ಯವಾದ ಮೇಲೆ ಅದನ್ನು ಉಪಸಂಹರಿಸುವಾಗ, ತಮೋಗುಣಪ್ರಧಾನನಾಗಿಯೂ ಸೂರ್ಯ ಮತ್ತು ಚಂದ್ರ ಇವರಿಬ್ಬರನ್ನು ನೇತ್ರರೂಪದಿಂದ ಧರಿಸಿರುವವನೂ, ಉದಾಸೀನನಂತೆ ರಾಗದ್ವೇಷಗಳಿಲ್ಲದ ಪ್ರಾಣಿಗಳ ಪ್ರವೃತ್ತಿ ನಿವೃತ್ತಿಗಳನ್ನು ತಿಳಿದುಕೊಳ್ಳುವವನೂ ಕೇವಲ ಜ್ಞಾನಸ್ವರೂಪನೂ ನಿತ್ಯನೂ ಆದ ಪರಮಾತ್ಮನಿಗೆ ನಮಸ್ಕಾರವು. ||೧||

**ಬ್ರಹ್ಮೇತಿ ಯಸ್ಯ ನಿಗಮೈರ್ನಿರ್ವೃತಶ್ಚಿದಂಶೋ ।**
**ಮಾಯೇಶ್ವರಃ ಪುರುಷರೂಪಧರೋ ಯದಂಶಃ ।**
**ಪ್ರಾಣೋದಕೋ ಬಲಧಿಯಾಂ ಪರಮೋ ವಿಶುದ್ಧಃ ।**
**ಆನಂದಸತ್ಯವಪುಷೇ ಪ್ರಣಮಾಮಿ ತಸ್ಮೈ ॥೨॥**

**ಜೀವೋ ರಹಸ್ಯೇವ ವಿಧಾಯ ಪಾಪಂ**
**ನ ನಿಷ್ಕೃತಿಂ ಪ್ರೈತಿ ಹಿ ವಿಶ್ವಮೂರ್ತೇಃ ।**
**ಸದಾಽಽತ್ಮರೂಪೋಽಂತರತೋ ಹಿ ಶಶ್ವತ್**
**ಪಾಪಂ ಚ ಪಶ್ಯತ್ಯಥ ಪುಣ್ಯಕೃತ್ಯಂ ॥೩॥**

---

ಯಾವ ಪರಮೇಶ್ವರನ ನೈಜವಾದ ಜ್ಞಾನಸ್ವರೂಪವು ವೇದಗಳಿಂದ ಬ್ರಹ್ಮಸ್ವರೂಪವೆಂದು ವಿವರಿಸಲ್ಪಟ್ಟಿರುವುದೋ, ಯಾವ ಈಶ್ವರನ ಚಿದ್ರೂಪವಾದ ಅಂಶವು ಅನಾದಿಸಿದ್ಧವಾದ ಶಕ್ತಿಯೆಂಬ ಮಾಯೆಯ ದೆಸೆಯಿಂದ ಪುರುಷರೂಪವನ್ನು ಧರಿಸಿರುವುದೋ, ತಪಃಶಕ್ತಿ ಮತ್ತು ಜ್ಞಾನವನ್ನು ಪಡೆದ ಸಿದ್ಧಪುರುಷರನ್ನು ಪ್ರಾಣಶಕ್ತಿರೂಪದಿಂದ ಇದ್ದುಕೊಂಡು ಯಾವನು ಧರಿಸುವನೋ, ನಿತ್ಯನೂ ಪುಣ್ಯ ಪಾಪಗಳ ಸಂಪರ್ಕವಿಲ್ಲದಿರುವುದರಿಂದ ಶುದ್ಧನೂ, ಸತ್ಯ ಮತ್ತು ಆನಂದವೇ ವಾಸ್ತವ ರೂಪಹಾಗಿ ಉಳ್ಳವನೂ ಆದ ಆ ಪರಮಾತ್ಮನನ್ನು ನಮಸ್ಕರಿಸುತ್ತೇನೆ. ॥೨॥

ಜೀವಾತ್ಮನು ಪಾಪಕರ್ಮವನ್ನು ಗುಟ್ಟಾಗಿಯೇ ಮಾಡಿದರೂ ವಿಶ್ವಮೂರ್ತಿ ಯಾದ ದೇವರ ಗಮನಕ್ಕೆ ಅದು ಬರದೆ ತಪ್ಪುವುದಿಲ್ಲವು. ಬೆಕ್ಕು ಕಣ್ಣನ್ನು ಮುಚ್ಚಿಕೊಂಡು ಹಾಲನ್ನು ಕುಡಿದರೂ ಅದು ಇತರರಿಗೆ ಗೊತ್ತಾಗದೆ ಇರುವುದಿಲ್ಲ. ಹೀಗಿದ್ದರೂ ತತ್ವಸ್ವರೂಪದ ಅಜ್ಞಾನ ಮತ್ತು ವಿಷಯಾನುಭವದ ಆಕರ್ಷಣೆ ಇವುಗಳಿಂದ ಜೀವನು ಮಾಡಿದ ಧರ್ಮಾಧರ್ಮಗಳ ಫಲದಿಂದ ಅವನು ತಪ್ಪಿಸಿ ಕೊಳ್ಳುವಹಾಗಿಲ್ಲವು. ಏಕೆಂದರೆ ದೇವರು ಎಲ್ಲ ಜೀವರಿಗೂ ಆತ್ಮಸ್ವರೂಪವಾಗಿ ಎಲ್ಲರಲ್ಲೂ ಸರ್ವದಾ ಒಳಗೆಯೇ ಇರುವುದರಿಂದ, ಜೀವನು ಮಾಡಿರಬಹುದಾದ ಪಾಪಕರ್ಮವನ್ನೂ ಹಾಗೆಯೇ ಪುಣ್ಯಕರವಾದ ನಿಷ್ಕಾಮ ಅಥವಾ ಸಕಾಮವಾಗಿರುವ ಕರ್ಮವನ್ನೂ ನೋಡಿಯೇ ನೋಡುತ್ತಾನೆ. ಅವುಗಳ ಫಲಗಳಾದ ದುಃಖಸುಖ ಗಳನ್ನೂ ಜೀವರಿಗೆ ತಕ್ಕ ಕಾಲಗಳಲ್ಲಿ ಕೊಟ್ಟೇಕೊಡುತ್ತಾನೆ. ಆದುದರಿಂದ ಗುಟ್ಟಾಗಿ ಪಾಪವನ್ನು ಮಾಡಿ ಅದರ ಫಲವಾದ ದುಃಖಾನುಭವವನ್ನು ಯಾರೂ ಯಾವಾ

**ಪಾಪಾತ್ಮಭಿಸ್ತನ್ನಿಭೃತೇ ಕೃತೇಽಪಿ**
**ಪಾಪೇಽನುತಾಪಾನಲತಸ್ತ ಏವ ।**
**ದಗ್ಧಾ ಭವೇಯುಃ ಸತತಂ ನು ಯೇನ**
**ನಮಾಮಿ ತಂ ಸತ್ಪುರುಷಂ ಪರೇಶಂ ॥೪॥**

**ಅವಿದ್ಯಾಽಂಧಾ ಅರೇ ಜೀವಾಃ ಪ್ರಾಣವಾಯುಃ ಕದಾ ತು ವಃ ।**
**ನಿರ್ಗಮಿಷ್ಯತಿ ಸಹಸಾ ನಾಸ್ತಿ ತಸ್ಯ ವಿನಿಶ್ಚಯಃ ॥೫॥**

**ಆಯುರ್ಹರತಿ ವೈ ಪುಂಸಾಮುದ್ಯನ್ನಸ್ತಂ ಚ ಯನ್ರವಿಃ ।**
**ಅಸದಾಲಾಪತಾಪೈಶ್ಚ ಕ್ಷೀಣಂ ಕ್ಷೀಣಂ ಪ್ರತಿಕ್ಷಣಂ ॥೬॥**

---

ಗಲೂ ಎಲ್ಲಿಯೂ ತಪ್ಪಿಸಿಕೊಳ್ಳಲಾರರು. ಹಾಗೆ ತಪ್ಪಿಸಿಕೊಳ್ಳುವೆನೆಂದು ಯಾರಾದರೂ ತಿಳಿದುಕೊಂಡಿದ್ದರೆ ಅದು ಬರಿಯ ಆತ್ಮವಂಚನೆಯಾಗಿ ಪರಿಣಮಿಸುತ್ತದೆ. ॥೩॥

ಅಷ್ಟೇ ಅಲ್ಲದೆ ಪಾಪಿಗಳು ಕೆಟ್ಟಕೆಲಸವನ್ನು ಗುಟ್ಟಾಗಿಮಾಡಿ ಇತರ ಜನರಿಗೆ ಅದು ತಿಳಿಯದೆ ಹೋಗಿರಬಹುದಾದರೂ, ಆ ಕೆಟ್ಟ ನಡತೆಯಿಂದ ಕರ್ತೃವಿನಲ್ಲಿ ತಪ್ಪದೆ ಉಂಟಾಗುವ ಪಶ್ಚಾತ್ತಾಪವೂ, ಆತಂಕವೂ ಎಂದರೆ ನನ್ನ ಕರ್ಮಗಳನ್ನು ಯಾರು ಕಂಡಿರುತ್ತಾರೋ, ಅದರಿಂದ ಏನು ದುಷ್ಫಲವಾದೀತೋ ಎಂಬ ಆತಂಕವೂ, ಅಯ್ಯೋ ಇಂತಹ ಕೆಟ್ಟ ಕಲಸವನ್ನು ಮಾಡಬಾರದಾಗಿದ್ದರೂ ಮಾಡಿದೆನಲ್ಲಾ ! ಎಂಬ ಪಶ್ಚಾತ್ತಾಪವೂ ಅವನನ್ನು ಸರ್ವದಾ ಸುಡುತ್ತಿರುತ್ತದೆ. ಅದಂತೂ ತಪ್ಪುವುದೇ ಇಲ್ಲವು. ಹೀಗೆ ಎಲ್ಲರಲ್ಲಿಯೂ ಅಂತರ್ಯಾಮಿಯಾಗಿರುವ ಸತ್ಪುರುಷನೂ ಆದ ಪರಮಾತ್ಮನನ್ನು ನಮಸ್ಕರಿಸುತ್ತೇನೆ. ॥೪॥

ಅವಿದ್ಯೆಯೆಂಬ ತಮಸ್ಸಿನಿಂದ ಆವೃತರಾದ ಜೀವರೇ ಈ ಪ್ರಾಣವಾಯುವು ಆಕಸ್ಮಿಕವಾಗಿ ಯಾವಕಾಲದಲ್ಲಿ ಈ ಶರೀರವನ್ನು ತ್ಯಜಿಸುವುದೋ ಅದನ್ನು ನಿಶ್ಚಯಿಸಲು ಅಸಾಧ್ಯವಾಗಿರುವುದು. ॥೫॥

ಸೂರ್ಯನು ಉದಯಿಸುವವನೂ ಮತ್ತು ಅಸ್ತವನ್ನು ಹೊಂದುವವನೂ ಆಗಿ ಅಹೋರಾತ್ರಿಗಳನ್ನುಂಟುಮಾಡುವವನಾಗಿ ಪುರುಷರ ಆಯುಸ್ಸನ್ನು ಅಪಹರಿಸುತ್ತಾನೆ. ಎಂದರೆ ಅಹೋರಾತ್ರಿಗಳು ಸತತವಾಗಿ ಆಗುತ್ತಿರಲು ಪುರುಷನು ಕಾಲಕ್ರಮೇಣ ದೇಹವನ್ನು ತ್ಯಜಿಸುವನೆಂದರ್ಥವು. ಏಕೆಂದರೆ ಅನೃತಭಾಷಣದುರ್ವರ್ತನ ಮುಂತಾದುವುಗಳಿಂದ ಇವನ ಆಯುಸ್ಸು ಕ್ಷಣಕ್ಷಣದಲ್ಲಿಯೂ ಕ್ಷೀಣಿಸುತ್ತದೆ. ॥೬॥

ಅತೋ ಭಗವತೋ ವಿಷ್ಣೋಃ ಪುಣ್ಯಶ್ಲೋಕಸ್ಯ ಪಾವನಂ ।
ಸಾಫಲ್ಯ ಮಾಯುಷಃ ಕುರ್ಯಾತ್ಪೀತ್ವಾ ತು ಚರಿತಾಮೃತಂ ॥೭॥

ಅಜ್ಞಾನಾಂಧ ಜನಾನಾಂ ಯೋ ಮೋಹಾಂಧ ತಮಸಂ ಮುನಿಃ ।
ನಿರಾಚಿಕೀರ್ಷುರ್ವಾಸವ್ಯಾಂ ವ್ಯಾಸರೂಪೇಣ ಗರ್ಭತಃ ॥೮॥

ಪವಿತ್ರೇ ರತ್ನಗರ್ಭಾಯಾ ಅವತೀರ್ಯ ಯುಗೇ ಯುಗೇ ।
ವೇದಮಂತ್ರಪುರಾಣಾದಿ ಪೂರ್ಣೇಂದುಂ ಕಾಶಯುತ್ಯುತ ॥೯॥

ಕವೀಶ್ವರಂ ತಂ ಹಿ ವಂದೇ ಪ್ರವರಂ ವೈ ತಪಸ್ವಿನಾಂ ।
ತತ್ವಜ್ಞಾನವತಾಂ ಶ್ರೇಷ್ಠಂ ಕೃಷ್ಣದ್ವೈಪಾಯನಂ ಮುನಿಂ ॥೧೦॥

ವೇದವೃಕ್ಷಂ ಪ್ರವಿಭಜ್ಯ ಸ್ವ ಶಿಷ್ಯೈಭ್ಯಃ ಪ್ರದಾಯ ಚ ।
ಇತಿಹಾಸಂ ತದಂತಃಸ್ಥಂ ಸ ಮುದ್ಧೃತ್ಯ ಮನೀಷಯಾ ॥೧೧॥

ಪುರಾಣಸಂಹಿತಾಂ ಚಕ್ರೇ ಪುರಾಣಾರ್ಥವಿಶಾರದಃ ।
ತದರ್ಥಾನಾಂ ನಿರ್ಣಯಾಯ ಬ್ರಹ್ಮಸೂತ್ರಮಕಲ್ಪಯತ್ ॥೧೨॥

---

ಆದುದರಿಂದ ಮನುಷ್ಯನು ಪುಣ್ಯಚರಿತ್ರವುಳ್ಳ ವಿಷ್ಣುವಿನ ಚರಿತಾಮೃತವನ್ನು ಪಾನಮಾಡಿ ತನ್ನ ಆಯುಸ್ಸಿನ ಕಾಲವನ್ನು ಸಫಲಗೊಳಿಸಬೇಕು. ॥೭॥

ಯಾವ ವೇದವ್ಯಾಸಮುನಿಯು ಅಜ್ಞಾನಾಂಧಕಾರದಲ್ಲಿರುವ ಮತ್ತು ಈ ಸಂಸಾರದ ದೆಸೆಯಿಂದ ಬಿಡುಗಡೆಯನ್ನು ಹೊಂದುವ ಉಪಾಯವನ್ನು ತೋರದೆ ಸಂಸಾರಪಾಶದಲ್ಲಿ ಸಿಲಿಕಿರುವ ಜನಗಳ ಮೋಹವೆಂಬ ಕತ್ತಲೆಯನ್ನು ಹೋಗಲಾಡಿಸ ಲಿಚ್ಛೆಯುಳ್ಳವನಾಗಿ, ರತ್ನಗರ್ಭವೆಂದೆನಿಸಿಕೊಳ್ಳುವ ಈ ಭೂಮಿಯಲ್ಲಿ ಪ್ರತಿಯೊಂದು ಯುಗದಲ್ಲಿಯೂ, ವಾಸವಿ ಎಂಬ ಜನನಿಯಲ್ಲಿ ಜನ್ಮವನ್ನು ತಾಳಿ ಅವತರಿಸಿ ವೇದ, ಮಂತ್ರ, ಪುರಾಣ ಇವುಗಳಿಂದ ವೇದ್ಯನಾದ ಪರಮೇಶ್ವರನನ್ನು ಪ್ರಕಾಶಗೊಳಿಸುತ್ತಿರುವನು. ಕವೀಶ್ವರನಾದ ಮತ್ತು ತಪಸ್ವಿಗಳಲ್ಲಿ ಅಗ್ರಗಣ್ಯನೂ ತತ್ವಜ್ಞಾನವನ್ನು ತಿಳಿದುಕೊಂಡಿರುವವರಲ್ಲಿ ಅತ್ಯಂತ ಶ್ರೇಷ್ಠನೂ ಆದ ಆ ವೇದವ್ಯಾಸಮುನಿಯನ್ನು ನಮಸ್ಕರಿಸುವೆನು. ॥೮-೯-೧೧॥

ಪ್ರಾಚೀನಪ್ರಸಿದ್ಧವಾದ ವೃತ್ತಾಂತಗಳನ್ನು ತಿಳಿದುಕೊಳ್ಳುವುದರಲ್ಲಿ ಅಭಿಜ್ಞನಾದ ಆ ವ್ಯಾಸಮುನಿಯು ವೇದವೆಂಬ ವೃಕ್ಷವನ್ನು ವಿಭಾಗಮಾಡಿ ತನ್ನ ಶಿಷ್ಯರಿಗೆ

**ತದ್ಭಾಷ್ಯಭೂತಂ ಪುರಾಣಂ ಭಾಗವತಂ ವೈ ವಿದುರ್ಬುಧಾಃ ।**
**ತತ್ಸರ್ವಸಾರಭೂತಂ ಹಿ ಪುರಾಣಂತ್ವಾದಿ ಸಂಜ್ಞಿತಂ ।**
**ವಿದಧೇ ಪರಮೇಶಾಂಶಃ ವ್ಯಾಸರೂಪೀ ಸನಾತನಃ ॥೧೩॥**

**ಆಖ್ಯಾನಂಚಾತ್ರ ವಿವೃತಂ ಸರ್ವಂ ಹಿ ವೇದಸಂಮಿತಂ ।**
**ಉಭಲೌಕಿಕಶಾಂತ್ಯರ್ಥಂ ನೃಣಾಂ ಧರ್ಮಾದಿವರ್ಗಯುಕ್ ॥೧೪॥**

**ಯದಧೀತ್ಯ ಹಿ ಲೋಕಾನಾಂ ಜ್ಞಾನ(ಂ)ವಿಜ್ಞಾನ ಮೇವ ಚ ।**
**ವರ್ಧತೇ ಚೋಪಜಾಯೇತ ಸನ್ಮಾರ್ಗಾಯಣ ವೃತ್ತಿತಾ ॥೧೫॥**

---

ವಿಂಗಡಿಸಿಕೊಟ್ಟು, ಆ ವೇದದಲ್ಲಿ ಅಡಕವಾಗಿರುವ ಇತಿಹಾಸವನ್ನು ತನ್ನ ಪ್ರತಿಭಾ ವಿಶೇಷದಿಂದ ಸಂಗ್ರಹಿಸಿ ಪುರಾಣವನ್ನು ನಿರ್ಮಿಸಿದನು. ಬಳಿಕ ತಾನು ನಿರ್ಮಿಸಿದ ಪುರಾಣಗಳ ಅರ್ಥದ ನಿಶ್ಚಯಕ್ಕೋಸ್ಕರ ಅದಕ್ಕನುಕೂಲವಾದ ಬ್ರಹ್ಮಸೂತ್ರಗಳನ್ನು ರಚಿಸಿದನು. ||೧೧-೧೨||

ವೇದಪುರಾಣಾರ್ಥವನ್ನು ನಿಶ್ಚಯಿಸುವುದಕ್ಕೋಸ್ಕರ ರಚಿಸಲ್ಪಟ್ಟ ಬ್ರಹ್ಮಸೂತ್ರಗಳಿಗೆ ಭಾಷ್ಯಭೂತವಾದ ಪುರಾಣವನ್ನು ಭಗವಂತನಿಂದ ರಚಿಸಲ್ಪಟ್ಟದ್ದೆಂಬುದಾಗಿ ಜ್ಞಾನಿಗಳು ತಿಳಿದುಕೊಳ್ಳುತ್ತಾರೆ. ಪರಮೇಶ್ವರನ ಅಂಶಭೂತನೂ ಚಿರಂತನನೂ ಆದ ವ್ಯಾಸನು ಸಕಲ ಪುರಾಣಗಳ ಅರ್ಥಗಳಿಗೆ ಸಾರಭೂತವಾದ ಆದಿಪುರಾಣವೆಂದು ಸಂಜ್ಞೆಯುಳ್ಳ ಈ ಪುರಾಣವನ್ನು ನಿರ್ಮಿಸಿದನು. ||೧೩||

ಈ ಪುರಾಣದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಕಥಾಭಾಗವು ಸರ್ವವೂ ವೇದಕ್ಕೆ ಸಮ್ಮತವಾದುದಾಗಿದೆ. ಮತ್ತು ಈ ಪುರಾಣಪಠನಾದಿಗಳನ್ನು ಮಾಡಿದವರಿಗೆ ಇಹಪರ ಲೋಕಗಳಲ್ಲಿ ಸುಖವನ್ನೂ ಸದ್ಗತಿಯನ್ನೂ ಮತ್ತು ಧರ್ಮಾರ್ಥಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನೂ ಕೊಡತಕ್ಕುದಾಗಿರುತ್ತದೆ. ||೧೪||

ಈ ಪುರಾಣವನ್ನು ಪಠನಮಾಡುವುದರಿಂದ ಸ್ಮೃತಿರೂಪವಾದ ಜ್ಞಾನವೂ ಮತ್ತು ಅನುಭವಾತ್ಮಕವಾದ ಜ್ಞಾನವೂ ಇವೆರಡೂ ಅಭಿವೃದ್ಧಿಯನ್ನು ಹೊಂದುತ್ತವೆ. ಇದಲ್ಲದೆ ಇದನ್ನು ಪಠಿಸುವವರಿಗೆ ಸನ್ಮಾರ್ಗಪ್ರವೃತ್ತಿಯಲ್ಲಿಯೂ ಆಸಕ್ತಿ ಹುಟ್ಟುತ್ತದೆ. ||೧೫||

ಆಯಾಸೇನ ವಿನಾಽಂತೇಽಥ ಪುರುಷಾರ್ಥಾಗಮೋ ಭವೇತ್ ।
ಪಠನೇನ ಭವೇತ್ಸದ್ಯಃ ಕೋಽಪ್ಯಪೂರ್ವೋ ಹಿ ನಂದಥುಃ ॥೧೬॥

ತೀವ್ರೇಣ ಭಕ್ತಿಯೋಗೇನ ಪುರಾಣಂ ಪ್ರಪಠೇನ್ನರಃ ।
ಶ್ರದ್ಧಯಾಽಮರ್ಷರಹಿತಃ ವ್ಯಾಸಾದೇಶೇನ ಮುಕ್ತಿಭಾಕ್ ॥೧೭॥

ಧರ್ಮಾಣಾಂ ಚ ಯಥಾಽಹಿಂಸಾಽಭಯದಾನಂ ವರೇಣ್ಯಕಂ ।
ಸಮಸ್ತ ಪ್ರಿಯವಸ್ತೂನಾಂ ಶ್ರೇಷ್ಠ ಆತ್ಮಾ ಯಥಾ ಸ್ವಕಃ ॥೧೮॥

ಸುಖಸ್ಪರ್ಶೇಷು ದ್ರವ್ಯೇಷು ಗರೀಯಾಂಶ್ಚ ಯಥಾಽಽತ್ಮಜಃ ।
ಇಂದ್ರಿಯೇಷು ಮನೋ ವರ್ಯ್ಯಂ ಗುಣೇಷು ವಿನಯೋ ಯಥಾ ॥೧೯॥

ಸಾತ್ವಿಕೇಷು ಚ ಭಾವೇಷು ಯಥಾಶ್ರದ್ಧಾ ಗರೀಯಸಿ ।
ಭೂರಿಪಾವನ ತೀರ್ಥೇಷು ಕ್ಷೇತ್ರೇಷು ನೈಮಿಷಂ ತಥಾ ॥೨೦॥

---

ಮತ್ತು ಈ ಪುರಾಣದ ಪಠನವನ್ನು ಮಾಡುವುದರಿಂದ ಅಂತ್ಯಕಾಲದಲ್ಲಿ ಮೋಕ್ಷವನ್ನು ಹೊಂದುವನು. ಅಲ್ಲದೆ ಯಾವನು ಇದನ್ನು ಪಠಿಸುವನೋ ಅವನಿಗೆ ಸದ್ಯದಲ್ಲಿಯೇ ಅನಿರ್ವಚನೀಯವಾದ ಆನಂದವುಂಟಾಗುವುದು. ||೧೬||

ಶ್ರದ್ಧಾಯುತನಾಗಿ ಕ್ರೋಧಾದಿಗಳಿಂದ ರಹಿತನಾಗಿ ತೀವ್ರವಾದ ಭಕ್ತಿಯಿಂದ ಈ ಪುರಾಣವನ್ನು ಪಠಿಸಬೇಕು. ಯಾವ ಮನುಜನು ಈ ಪ್ರಕಾರವಾಗಿ ಆಚರಿಸುವನೋ ಅವನು ಮಹಾತ್ಮರಾದ ವ್ಯಾಸಮಹರ್ಷಿಗಳ ಅನುಗ್ರಹದಿಂದ ಕಡೆಗೆ ಮುಕ್ತಿಯನ್ನು ಹೊಂದುವವನಾಗುತ್ತಾನೆ. ||೧೭||

ಧರ್ಮಗಳಲ್ಲಿ ಅಹಿಂಸೆಯೂ ಮತ್ತು ಅಭಯದಾನವೂ ಹೇಗೆ ಶ್ರೇಷ್ಠವೋ, ಪ್ರಿಯವಾದ ಸಕಲ ವಸ್ತುಗಳಲ್ಲಿ 'ತಾನು' ಎಂಬುದು ಹೇಗೆ ಶ್ರೇಷ್ಠವಾಗಿರುವುದೋ, ಸುಖಸ್ಪರ್ಶವನ್ನುಂಟುಮಾಡುವ ಪದಾರ್ಥಗಳಲ್ಲಿ ಪುತ್ರನು ಹೇಗೆ ಶ್ರೇಷ್ಠನೋ, ಇಂದ್ರಿಯಗಳಲ್ಲಿ ಮನಸ್ಸೂ, ಗುಣಗಳಲ್ಲಿ ವಿನಯವೂ, ಸಾತ್ವಿಕಭಾವಗಳಲ್ಲಿ ಶ್ರದ್ಧೆಯೂ ಹೇಗೆ ಶ್ರೇಷ್ಠವೋ, ಆದರಂತೆ ಅನೇಕವಾದ ಪವಿತ್ರ ತೀರ್ಥಗಳಿಂದ ಯುಕ್ತವಾದ ಕ್ಷೇತ್ರಗಳಲ್ಲಿ ನೈಮಿಷಾರಣ್ಯವೆಂಬ ಕ್ಷೇತ್ರವು ಅತ್ಯಂತ ಶ್ರೇಷ್ಠವಾದುದಾಗಿರುತ್ತದೆ ||೧೮-೧೯-೨೦||

ಘೂರ್ಣನ್ ಮನೋಮಯಂ ಚಕ್ರಂ ಶೀರ್ಯ್ಯತೇಽಸ್ಮಿನ್ನರಣ್ಯಕೇ ।
ಅತಃ ಪೂತಂ ವಿಷ್ಣುವನಂ ನೈಮಿಷಂ ಚೇತಿ ವಿಶ್ರುತಂ ॥೨೧॥

ಪ್ರಶಸ್ತಂ ತಪಸಃ ಸ್ಥಾನಂ ಶೌನಕಾದ್ಯೈಃ ಸಮಾಶ್ರಿತಂ ।
ಕಲಿಮಾಗತಮಾಜ್ಞಾಯ ಯಜ್ಞಾಯ ಕೃತಮಾನಸೈಃ ॥೨೨॥

ಶಾಂತೇರುದಯತೋ ಯದ್ವದ್ಧೃದಯಂ ರಾಜತೇ ನೃಣಾಂ ।
ವಿನಯಸ್ಯೋದಯೇನೈವ ಶೋಭಂತೇ ಸದ್ಗುಣಾ ಯಥಾ ॥೨೩॥

ನೀತೇರುದಯತೋ ಯಾದೃಕ್ ಪ್ರವೃತ್ತೇರ್ಗೌರವಂ ಭವೇತ್ ।
ಸತ್ಯಸ್ಯೋದಯತೋ ಧರ್ಮೋ ಯಥಾಸ್ಯಾದ್ಗೌರವಾನ್ವಿತಃ ॥೨೪॥

ಏತೇಷಾಮೃಷಿಮುಖ್ಯಾನಾಂ ಪೂರ್ವೋಕ್ತಾನಾಂ ಸಮಾಗಮಾತ್ ।
ತಥೈವ ನೈಮಿಷಕ್ಷೇತ್ರಂ ಗತಂ ಶೋಭಾಸಮೃದ್ಧಿತಾಂ ॥೨೫॥

---

ಈ ನೈಮಿಷಾರಣ್ಯದಲ್ಲಿ ಚಂಚಲವಾದ ಮನಶ್ಚಕ್ರವು ಪರಮಾತ್ಮನಲ್ಲಿ ಲಯವನ್ನೈದುವುದು. ಎಂದರೆ ಚಂಚಲ ಸ್ವಭಾವವುಳ್ಳ ಮನಸ್ಸು ಧ್ಯೇಯವಸ್ತುವಿನಲ್ಲಿ ತತ್ಪರವಾಗಿ ಧ್ಯೇಯವಸ್ತುವಿನ ಸಾಕ್ಷಾತ್ಕಾರದಲ್ಲಿ ಲಯಭಾಗಿಯಾಗುವುದು ಎಂದರ್ಥವು. ಆದುದರಿಂದ ಪವಿತ್ರವಾದ ಈ ವನವು ವಿಷ್ಣುವನವೆಂದೂ, ನೈಮಿಷಾರಣ್ಯವೆಂದೂ ಖ್ಯಾತಿಯನ್ನು ಹೊಂದಿತು. ॥೨೧॥

ಭೂಲೋಕದಲ್ಲಿ ಕಲಿಯು ಪ್ರವೇಶಿಸಿರುವುದರಿಂದ ಧರ್ಮವು ಅಭಿಭೂತವಾಗಿ ಅಧರ್ಮವು ನೆಲಸಿರುವುದೆಂದು ತಿಳಿದು ಶೌನಕಾದಿ ಮಹರ್ಷಿಗಳು ಯಜ್ಞಯಾಗಾದಿ ಧರ್ಮಕಾರ್ಯಗಳ ಅನುಷ್ಠಾನಮಾಡುವುದಕ್ಕೋಸ್ಕರ ತಪಸ್ಸಿಗೆ ಯೋಗ್ಯವಾದ ಈ ನೈಮಿಷಾರಣ್ಯವನ್ನು ಪಡೆದವರಾದರು. ॥೨೨॥

ಶಾಂತಿಯನ್ನು ಪಡೆಯುವುದರಿಂದ ಮನುಷ್ಯರ ಮನಸ್ಸು ಯಾವರೀತಿಯಲ್ಲಿ ಪ್ರಸನ್ನವಾಗುವುದೋ, ವಿನಯವು ಉತ್ಪನ್ನವಾಗಲು ಸದ್ಗುಣಗಳು ಹೇಗೆ ಶೋಭಿಸುತ್ತವೆಯೋ, ನೀತಿಮಾರ್ಗವನ್ನನುಸರಿಸುವುದರಿಂದ ಯಾವರೀತಿಯಲ್ಲಿ ಆಯಾ ಕಾರ್ಯಗಳಲ್ಲಿ ಮನುಷ್ಯನಿಗೆ ಗೌರವ ಪೂರ್ವಕವಾದ ಪ್ರವೃತ್ತಿಯು ಉದಯಿಸುವುದೋ, ಸತ್ಯಸಂಧತೆಯು ಉತ್ಪನ್ನವಾಗಲು ಧರ್ಮವು ಹೇಗೆ ಗೌರವದಿಂದ ಕೂಡಿರುವುದಾಗಿರುತ್ತದೆಯೋ ಅದರಂತೆ ಹಿಂದೆ ಹೇಳಿದ ಶೌನಕಾದಿ ಋಷಿಗಳ

ಛಾಯಾಲೋಕಮಿವಾನ್ವೇತಿ ಸದ್ಗುಣೈಶ್ಚೈವ ಸದ್ಗುಣಃ ।
ನದ್ಯೋಽಬ್ಧಿಂ ಯಾಂತಿ ವೈ ಹಿತ್ವಾ ಶತಶೋಽನ್ಯ ಜಲಾಶಯಾನ್ ॥೨೬॥

ಜ್ಯೋತಿಷ್ಷ್ವನ್ಯೇಷು ಬಹುಷು ವರ್ತಮಾನೇಷು ಕೈರವಂ ।
ಕಥಂ ವಿಕಾಸಂ ನಾಪ್ನೋತಿ ನೈವ ದೃಷ್ಟ್ವಾ ಕಲಾನಿಧಿಂ ॥೨೭॥

ಇತ್ಯಾಕೃಷ್ಯತ ಏವೇಹ ಮನೋ ನೃಣಾಂ ಮಹಾತ್ಮಭಿಃ ।
ಸಾಮಾನ್ಯಾನಾಂ ಯಥಾ ಲೌಹಮಯಸ್ಕಾಂತೇ ನ ಸತ್ವರಂ ।
ಮಹಾತ್ಮಾನಃ ಪರೇಶಾಂಶಾ ಈಶಶಕ್ತಿಸಮನ್ವಿತಾಃ ॥೨೮॥

ತದೇಕಧಾ ಮಹಾಭಾಗಃ ಪ್ರಕೃತ್ಯಾಽಶೇಷಸದ್ಗುಣಃ ।
ಮಹರ್ಷಿಕಲ್ಪಃ ಸೂತಸ್ತು ವ್ಯಾಸಶಿಷ್ಯಃ ಸ್ವ ತೃಪ್ತಯೇ ॥೨೯॥

---

ಸಮಾಗಮದಿಂದ ನೈಮಿಷಾರಣ್ಯವು ಅತ್ಯಂತ ಶೋಭೆಯಿಂದ ಯುಕ್ತವಾದದ್ದಾಯಿತು. ॥೨೩-೨೪-೨೫॥

ಛಾಯೆಯು ತನಗೆ ಛಾಯಾ ರೂಪವನ್ನು ಕೊಟ್ಟ ಪ್ರಾಣಿಯನ್ನೇ ಅನುಕರಿಸುತ್ತದೆ. ಸದ್ಗುಣವುಳ್ಳವನು ಸದ್ಗುಣವುಳ್ಳವರೊಂದಿಗೇ ಸೇರುತ್ತಾನೆ. ನದಿಗಳು ಬೇರೆಯ ಅನೇಕ ಜಲಾಶಯಗಳಿದ್ದರೂ ಅವುಗಳನ್ನು ಬಿಟ್ಟು ಸಮುದ್ರವನ್ನೇ ಸೇರುತ್ತವೆ. ಇದರಂತೆಯೇ, ಚಂದ್ರ, ಅಗ್ನಿ ಮುಂತಾದ ಅನೇಕ ಜ್ಯೋತಿಸ್ಸುಗಳಿದ್ದರೂ ಕೈರವಪುಷ್ಪವು ಇತರ ಯಾವ ಜ್ಯೋತಿಸ್ಸುಗಳ ಸಂಬಂಧದಿಂದಲೂ ಅರಳುವುದಿಲ್ಲ. ಮತ್ತೇನೆಂದರೆ ಪ್ರಕೃತಿನಿಯಮದಿಂದ ಸೂರ್ಯನೆಂಬ ಜ್ಯೋತಿಸ್ಸಿನ ಸಂಬಂಧದಿಂದಲೇ ಅರಳುತ್ತದೆ. ಆದುದರಿಂದ ನೈಮಿಷಾರಣ್ಯದಲ್ಲಿ ವಾಸಮಾಡಿದ ಮಹಾತ್ಮರಾದ ಆ ಶೌನಕಾದಿ ಮುನಿಗಳಿಂದ, ಸೂಜಿಗಲ್ಲಿನಿಂದ ಅಯಸ್ಕಾಂತಮಣಿಯೋಪಾದಿಯಲ್ಲಿ, ಮನುಷ್ಯರ ಮನಸ್ಸು ಆ ನೈಮಿಷಾರಣ್ಯದ ಕಡೆಗೆ ಸೆಳೆಯಲ್ಪಟ್ಟಿತು. ಅದು ಯುಕ್ತವಾದುದೇ ಸರಿ. ಏಕೆಂದರೆ ಮಹಾತ್ಮರಾದ ಋಷಿಗಳು ಪರಮೇಶ್ವರನ ಶಕ್ತಿಯಿಂದ ಕೂಡಿದವರೂ ಮತ್ತು ಪರಮೇಶ್ವರನ ಅಂಶಭೂತರೂ ಆಗಿರುತ್ತಾರೆ. ॥೨೬-೨೭-೨೮॥

ಹೀಗಿರುತ್ತಿರಲು ಒಂದಾನೊಂದು ಕಾಲದಲ್ಲಿ ಪೂಜ್ಯನೂ, ಸ್ವಾಭಾವಿಕವಾಗಿಯೇ ದಯಾದಿಸದ್ಗುಣಗಳಿಂದಲಂಕೃತನೂ, ಮಹರ್ಷಿ ಸದೃಶನೂ, ಗುಣೈಕಪಕ್ಷಪಾತಿಯೂ ವ್ಯಾಸಮಹರ್ಷಿಯ ಶಿಷ್ಯನೂ ಆದ ಸೂತನು, ಅಲ್ಲಲ್ಲಿ ಸಂಚಾರ

ಪಕ್ಷಪಾತೀ ಗುಣಸ್ಯಾಟನ್ ಶೌನಕಸ್ಯ ಯದೃಚ್ಛಯಾ ।
ಅಗಾತ್ ಕುಲಪತೇಃ ಸದ್ಮ ದರ್ಶನಾಯ ಮುನೇಃ ಸುಧೀಃ ॥೩೦॥

ಸತ್ಪ್ರಸಂಗಾನುವೃತ್ತಿಭ್ಯಾಂ ಧರ್ಮಚರ್ಚಾ ಯತಃ ಸದಾ ।
ತತ್ರಾ ಲೌಕಿಕತಾ ಯಾದೃಕ್ ತಥೈವ ಶೌನಕಾಶ್ರಮೇ ॥೩೧॥

ಮಹರ್ಷಿರಥ ಯತ್ರಾಸೌ ದ್ವಾದಶಾಬ್ದಿಕ ಸತ್ರತಃ ।
ಋಷೀಣಾಂ ಸಮಿತಾವಾಸ್ತೇ ಸಾಕ್ಷಾಚ್ಛಾಂತಿಸ್ತಪೋಽಥವಾ ॥೩೨॥

ಸೂತಸ್ತತ್ರೋಪಸಂಗಮ್ಯ ಕೃತಾಂಜಲಿ ಪುಟಸ್ತದಾ ।
ಪಾದಯೋಃ ಪ್ರಣಿಪತ್ಯಾಥ ವವಂದೇ ಚ ಮಹಾಮುನಿಂ ॥೩೩॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯ್ಯಾಸಿಕೇ
ಅನುಕ್ರಮಣಿಕಾಭಿಧೇಯಃ ಪ್ರಥಮೋಽಧ್ಯಾಯಃ

---

ಮಾಡುವವನಾಗಿ ಅಕಸ್ಮಾತ್ತಾಗಿ ತನ್ನ ಮನಸ್ತೃಪ್ತಿಗೋಸ್ಕರ ಕುಲಪತಿಯಾದ ಶೌನಕಮಹರ್ಷಿಯ ದರ್ಶನಕ್ಕೋಸ್ಕರ ಅವನ ಆಶ್ರಮವನ್ನು ಪಡೆದನು. ॥೨೯-೩೦॥

ಸತ್ಕಥಾ ಕಾಲಕ್ಷೇಪ ಮತ್ತು ಅವುಗಳ ಅಭ್ಯಾಸ ಇವುಗಳಿಂದ ಧರ್ಮ ಮಾರ್ಗದ ಚರ್ಚೆಯು ಒದಗುವುದು ಸ್ವಾಭಾವಿಕವು. ಅದರಂತೆ ಶೌನಕಮಹರ್ಷಿಗಳ ಆಶ್ರಮದಲ್ಲಿಯೂ ಸಹ ಆ ವೇಳೆಯಲ್ಲಿ ಧರ್ಮವಿಷಯಕವಾದ ಚರ್ಚೆಗಳು ಜರುಗುತ್ತಿದ್ದುವು. ॥೩೧॥

ಆ ಸಮಯದಲ್ಲಿ ಶೌನಕಮಹರ್ಷಿಯು ಹನ್ನೆರಡು ವರ್ಷಗಳ ಪರ್ಯಂತ ಅನುಷ್ಠಾನಾರ್ಹವಾದ ಯಾಗವನ್ನು ಕೈಗೊಂಡವನಾಗಿ ಋಷಿಸಮುದಾಯದ ಮಧ್ಯದಲ್ಲಿ ಸಾಕ್ಷಾತ್ ಶಾಂತಿಸ್ವರೂಪನೋ ಅಥವಾ ಸಾಕ್ಷಾತ್ ತಪಃಸ್ವರೂಪನೋ, ಎಂಬಂತೆ ಕುಳಿತಿದ್ದನು. ॥೩೨॥

ಆಗ ಸೂತಮಹರ್ಷಿಯು ಋಷಿಗಳ ಸಮುದಾಯದ ಮಧ್ಯದಲ್ಲಿ ಕುಳಿತಿರುವ ಶೌನಕನ ಸಮೀಪವನ್ನು ಪಡೆದು ಅಂಜಲಿಬದ್ಧನಾಗಿ ಅವನ ಪಾದಗಳಲ್ಲಿ ಬಿದ್ದು ನಮಸ್ಕರಿಸಿದನು. ॥೩೩॥

ಇಲ್ಲಿಗೆ ಆದಿಪುರಾಣದಲ್ಲಿ " ಅನುಕ್ರಮಣಿಕಾ " ಎಂಬ ಸಂಜ್ಞೆಯುಳ್ಳ
ಪ್ರಥಮಾಧ್ಯಾಯವು ಮುಗಿದುದು.

*

॥ ಶ್ರೀಗಣೇಶಾಯನಮಃ ॥

॥ ಓಂ ನಮೋ ಭಗವತೇ ವಾಸುದೇವಾಯ ॥

# ಆದಿಪುರಾಣಂ

॥ ದ್ವಿತೀಯೋಽಧ್ಯಾಯಃ ॥

## ಎರಡನೆಯ ಅಧ್ಯಾಯವು

ಅಶೇಷಶೇಮುಷೀ ವಿದ್ಯಾ ವಿಶಿಷ್ಟೇ ಜ್ಞಾನವಿದ್ವರೇ ।
ವ್ಯಾಸಾಂತೇ ವಾಸಿನಿ ಸೂತೇ ಪರಿ(ರ)ವಿಜ್ಞಾನ ಶಾಲಿನಿ ॥೧॥

ಯಥಾವಿಧಿ ಪ್ರಣಮ್ಯೇತಿ ಸಾಕ್ಷಾದ್ವಿನಯಭಕ್ತಿವತ್ ।
ಸ್ಥಿತೇ ತಮವಲೋಕ್ಯಾಥ ಜಾತಾಹ್ಲಾದೋ ಮಹಾಮುನಿಃ ॥೨॥

ಶೌನಕೋ ಬಹ್ವೃಚಃ ಶಾಂತಃ ಸ್ವಸ್ವಭಾವಗುಣೇನ ಹಿ ।
ಪ್ರದದಾವಭಿವಾದ್ಯಾಸ್ಮೈ ಸೂತಾಯಾಸನ ಮಾಸಿತುಂ ॥೩॥

ಅನ್ಯೇ ಚ ಋಷಯಶ್ಚೈತದ್ದೃಷ್ಟ್ವಾ ತುಲ್ಯಸಮಾದರೈಃ ।
ಸೂತಸ್ಯ ಸತ್ಕೃತಿಂ ಚಕ್ರುರ್ಯಥೋಚಿತ ವಿಧಾನತಃ ॥೪॥

---

ಸಕಲ ಕಲಾವಿಶಾರದನೂ, ಜ್ಞಾನಿಯೂ, ವ್ಯಾಸನ ಶಿಷ್ಯನೂ ಆದ ಸೂತ ಮಹರ್ಷಿಯು, ವಿನಯ ಮತ್ತು ಭಕ್ತಿಯಿಂದ ಕೂಡಿದವನಾಗಿ ಶೌನಕನನ್ನು ನಮಸ್ಕರಿಸಿ ನಿಲ್ಲಲು, ಇವನನ್ನು ನೋಡಿ ಹರ್ಷಗೊಂಡ, ಅನೇಕ ವೇದಶಾಖೆಗಳನ್ನು ತಿಳಿದಿರುವ ಮತ್ತು ಶಾಂತನಾದ ಶೌನಕಮುನಿಯು ತನ್ನ ಸ್ವಭಾವಕ್ಕನುಗುಣವಾಗಿ ಸೂತನನ್ನು ಅಭಿವಂದಿಸಿ ಕುಳಿತುಕೊಳ್ಳಲು ಆಸನವನ್ನು ಕಲ್ಪಿಸಿಕೊಟ್ಟನು.॥೧-೨-೩॥

ಇತರ ಋಷಿಗಳೂ ಸಹ ಶೌನಕನು ಸೂತನಿಗೆ ಮಾಡಿದ ಸತ್ಕಾರವನ್ನು ನೋಡಿ ತಾವೂ ಶೌನಕಂತೆಯೇ ಸೂತನಲ್ಲಿ ಆದರ ಭಾವನೆಯುಳ್ಳವರಾಗಿ ಯೋಗ್ಯವಾದ ವಿಧಾನದಿಂದ ಸೂತನನ್ನು ಸತ್ಕರಿಸಿದರು. ॥೪॥

ಸೂತೋಽಪಿ ಪ್ರತಿ ಜಗ್ರಾಹ ವಿನಯೇನಾಭಿವಾದ್ಯ ಚ ।
ಪ್ರೀತ್ಯಾ ಭಕ್ತ್ಯಾ ಸಮಾನಂದ್ಯ ತಸ್ಮಿನ್ನುಪವಿವೇಶ ವೈ ॥೫॥

ಶಾಂತೇರುದಯತೋ ಯದ್ವತ್ಸಂತಾಪೋಽಪಸರೇತ್ಖಲು ।
ವಿನಯೋಪಚಯಾದ್ಯಾದ್ವದೌದ್ಧತ್ಯಂ ಯಾತಿ ಸಂಕ್ಷಯಂ ॥೬॥

ಸದ್ಬುದ್ಧೇರುದಯೇನ ಸ್ಯಾದ್ದುಷ್ಪ್ರವೃತ್ತಿರ್ಯಥಾ ಹತಾ ।
ತಿರೋಭವೇದ್ಯಥಾ ಮೋಹ ತಮಃ ಸಂಜ್ಞಾನ ಸಂಭವಾತ್ ॥೭॥

ಭಕ್ತಿಪ್ರೇಮೋ ದಯಾದಂತರ್ಮಲಂ ಚೋಪರಮೇದ್ಯಥಾ ।
ದೂರಮುಸ್ಯೇದ್ದುರದೃಷ್ಟಂ ಸದಾಚಾರಚಿತಿರ್ಯಥಾ ॥೮॥

ಆತ್ಮಶುದ್ಧ್ಯುದಯಾದ್ಯಾದ್ವತ್ಪಾಪಂ ಯಾತಿ ಪರಾಭವಂ ।
ವಿಜ್ಞಾನೋದಯತೋ ಯದ್ವದ ಸಂತೋಷೋಽವಧೂಯತೇ ॥೯॥

ಅಂತರ್ಧ್ಯಾದ್ಯಥಾಽಜ್ಞಾನಂ ವಿದ್ಯಾಯಾ ಉದಯೇನ ಚ ।
ಋಷಿದೇವಮಿಷ್ಟದೇವಂ ವಿಕ್ಷ್ಯೈವ ಶೌನಕಂ ತಥಾ ॥೧೦॥

---

ಸೂತನೂ ಕೂಡ ಅವರೆಲ್ಲರನ್ನೂ ವಿನಯದಿಂದ ಅಭಿವಾದನಮಾಡಿ, ಪ್ರೀತಿಯಿಂದಲೂ ಮತ್ತು ಭಕ್ತಿಯಿಂದಲೂ ಅವರನ್ನು ಆನಂದಗೊಳಿಸಿ ಪೀಠದಲ್ಲಿ ಕುಳಿತುಕೊಂಡನು. ॥೫॥

ಮನಸ್ಸಿಗೆ ನೆಮ್ಮದಿಯುಂಟಾಗಲು ಸಂತಾಪವು ಹೇಗೆ ದೂರವಾಗುವುದೋ, ವಿನಯವು ಹೆಚ್ಚುವುದರಿಂದ ಔದ್ಧತ್ಯವು ಹೇಗೆ ಕ್ಷೀಣವಾಗುವುದೋ, ಸದ್ಬುದ್ಧಿಯ ಉದಯದಿಂದ ದುರ್ಬುದ್ಧಿಯು ಹೇಗೆ ನಾಶವನ್ನೈದುವುದೋ ವಿವೇಕಜ್ಞಾನವುಂಟಾಗಲು ಮೋಹವೆಂಬ ಅಂಧಕಾರವು ಹೇಗೆ ಹೊರಟುಹೋಗುವುದೋ, ಭಕ್ತಿ ಮತ್ತು ಪ್ರೇಮಗಳು ಉದ್ಭವಿಸುವುದರಿಂದ ಅಂತಃಕರಣದ ಕಲ್ಮಷವು ಹೇಗೆ ನಿವೃತ್ತಿಯಾಗುವುದೋ ಸದಾಚಾರಪ್ರವೃತ್ತಿಯುಂಟಾಗಲು ದುರದೃಷ್ಟವು ಹೇಗೆ ನಶಿಸುವುದೋ ಆತ್ಮಶುದ್ಧಿಯಿಂದ ಬಲವತ್ತರವಾದ ಪಾಪವು ಹೇಗೆ ಕ್ಷಯಿಸುವುದೋ ವಿಜ್ಞಾನೋದಯವಾಗಲು ಅಸಂತೋಷವು ಹೇಗೆ ದೂರವಾಗುವುದೋ ಮತ್ತು ಆತ್ಮಜ್ಞಾನವುಂಟಾಗಲು ಅಜ್ಞಾನವು ಹೇಗೆ ನಷ್ಟವಾಗುವುದೋ ಅದರಂತೆ ಋಷಿಶ್ರೇಷ್ಠನಾದ

ಸೂತಸ್ಯ ಧೀಮತಃ ಸದ್ಯಃ ಗ್ಲಾನಿಶ್ಚೈವ ಶ್ರಮಃ ಕ್ಲಮಃ ।
ಸರ್ವಂ ದೂರಮಗಾದ್ದುಃಖಂ ಶಾಂತಿಂ ಸ ಪರಮಾಗತಃ ॥೧೧॥

ಅಥ ತದ್ಗತಚಿತ್ತೋಽಸೌ ಯಥೈವ ತನ್ನಿದೇಶಕೃತ್ ।
ಶೌನಕಾಭಿಮುಖದೃಷ್ಟಿಃ ಕೃತಾಂಜಲಿರವಸ್ಥಿತಃ ॥೧೨॥

ತಂ ತಥಾ ವಿಧಮಾಲಕ್ಷ್ಯ ಶೌನಕೋಽಥಮಹಾಮುನಿಃ ।
ಸಂಮಾನಯನ್ವ್ಯಾಸಶಿಷ್ಯಂ ಗಿರಾಸೂನೃತಯಾಬ್ರುವನ್ ॥೧೩॥

ಸೂತ ಸೂತ ಮಹಾಭಾಗ ತತ್ತ್ವಜ್ಞಾನೈಕಭಾಜನ ।
ಯಥಾಶ್ರಮಫಲಂ ಲೋಕೇ ಸುಖಮೇವ ಸದಾತನಂ ॥೧೪॥

ಲೋಕಾನುರಾಗ ಸಂಪ್ರಾಪ್ತಿರ್ವಿನಯಸ್ಯ ಫಲಂ ಯಥಾ ।
ಸಾರಲ್ಯಸ್ಯ ಫಲಂ ಯದ್ವದ್ವಿಶ್ರಂಭೋ ವಿಶ್ವತಂತ್ರಕಃ ॥೧೫॥

ನಿರಹಂಕಾರರೂಪಸ್ಯ ಮೈತ್ರ್ಯಲಾಭಃ ಫಲಂ ಯಥಾ ।
ಆತ್ಮೋಽಸ್ಮಿತಿಜ್ಞಾನಫಲಂ ಚೇಷ್ಟಾ ಸಿದ್ಧಿಫಲಾ ಯಥಾ ॥೧೬॥

---

ಶೌನಕನನ್ನು ಅವಲೋಕಿಸಿದ ಮಾತ್ರದಿಂದಲೇ ಸೂತನ ಬಳಲಿಕೆ, ಶ್ರಮ ಮುಂತಾದುವುಗಳು ಮತ್ತು ಸಕಲ ದುಃಖಜಾತವೂ ದೂರವಾಗಿ ಅವನಿಗೆ ಉತ್ಕೃಷ್ಟವಾದ ಶಾಂತಿಯು ಲಭಿಸಿತು. ||೬-೭-೮-೯-೧೦-೧೧||

ಬಳಿಕ ಶೌನಕನ ಆಜ್ಞೆಯನ್ನು ನೆರವೇರಿಸುವನೋ ಎಂದು ತೋರುವಂತೆ ಅವನಲ್ಲಿಯೇ ನೆಟ್ಟಮನಸ್ಸುಳ್ಳ ಸೂತಮಹರ್ಷಿಯು ಅವನೆದುರಿನಲ್ಲಿ ದೃಷ್ಟಿಯನ್ನಿಟ್ಟು ಅಂಜಲಿಬದ್ಧನಾಗಿ ನಿಂತನು. ||೧೨||

ಬಳಿಕ ಶೌನಕಮಹಾಮುನಿಯು ಹೀಗೆ ಮುಂಭಾಗದಲ್ಲಿ ನಿಂತಿರುವ ವ್ಯಾಸಶಿಷ್ಯನಾದ ಸೂತನನ್ನು ನೋಡಿ ಸನ್ಮಾನಿಸತಕ್ಕವನಾಗಿ ಪ್ರಿಯವಾದ ಮಾತುಗಳಿಂದ ಹೀಗೆಂದು ಹೇಳಿದನು. ||೧೩||

ಓ ತತ್ವಜ್ಞಾನಿಯಾದ ಸೂತಮಹರ್ಷಿಯೇ, ಲೋಕದಲ್ಲಿ ಶ್ರಮಕ್ಕೆ ಶಾಶ್ವತವಾದ ಸುಖವು ಹೇಗೆ ಫಲವಾಗಿರುತ್ತದೆಯೋ, ವಿನಯಕ್ಕೆ ಜನಾನುರಾಗವು ಹೇಗೆ ಫಲವಾಗಿರುವುದೋ, ಸರಲವರ್ತನೆಗೆ ನಿರತಿಶಯವಾದ ಪ್ರೀತಿಯು ಹೇಗೆ ಫಲವಾ

ಪ್ರತಿಪತ್ತಿಃ ಫಲಂ ಸಾಧ್ವೀ ಶಿಷ್ಟಾಚಾರಸ್ಯ ಸರ್ವತಃ ।
ಸಂಸಾರೇ ಚ ಯಶೋಽವಾಪ್ತಿಃ ಸತ್ಕಾರ್ಯಸ್ಯ ಫಲಂ ಯಥಾ ॥೧೭॥

ಯಥಾ ಮೋಕ್ಷಫಲಾ ಶಾಂತಿಸ್ತಪಸ್ಯಾಯಾಃ ಫಲಂ ಯಥಾ ।
ಭವಾದೃಶಸ್ಯ ಸಂಸರ್ಗಃ ಸಾಕ್ಷಾತ್ಕಾರಶ್ಚ ಪುಣ್ಯದಃ ॥೧೮॥

ಪ್ರಾಣಿನಾಂ ದ್ವಿಪದಃ ಶ್ರೇಷ್ಠೋ ಜೀವೇಷು ಬ್ರಾಹ್ಮಣಸ್ತಥಾ ।
ವಿಪ್ರಾಣಾಂ ಜ್ಞಾನಿನಃ ಶ್ರೇಷ್ಠಾ ವಿಜ್ಞಾನೀ ಚ ತತಃ ಪರಃ ॥೧೯॥

ಭಗವದ್ಭಕ್ತಿರಸಿಕಂ ಭವಂತಂ ಪ್ರವಿಲೋಕ್ಯ ವೈ ।
ಚಿರಾರ್ಜಿತ ತಪಃಪುಣ್ಯ ಫಲಮದ್ಯ ಮುಮಾಗತಂ ॥೨೦॥

ನರಾಣಾಂ ಸಂತಿ ಸರ್ವೇಷಾಂ ನೇತ್ರಾದೀನೀಂದ್ರಿಯಾಣಿ ಹಿ ।
ತಾನಿ ಯೇಷಾಂ ನ ಸಾರ್ಥಾನಿ ನರಾಸ್ತೇ ವೃಣ್ಮಯಾಃ ಪರಂ ॥೨೧॥

---

ಗಿರುವುದೋ, ನಿರಹಂಕಾರವರ್ತನೆಗೆ ಗೆಳೆತನವು ಹೇಗೆ ಫಲವಾಗಿರುವುದೋ, ಜ್ಞಾನಕ್ಕೆ ಆತ್ಮೋನ್ನತಿಯು ಹೇಗೆ ಫಲವೋ, ಸಿದ್ಧಿಗೆ ಚೇಷ್ಟೆಯು ಹೇಗೆ ಫಲವಾಗಿರುವುದೋ, ಸದಾಚಾರಕ್ಕೆ ಒಳ್ಳೆಯ ಜ್ಞಾನವು ಹೇಗೆ ಫಲವೋ, ಸತ್ಕಾರ್ಯಾಚರಣೆಗೆ ಈ ಸಂಸಾರದಲ್ಲಿ ಕೀರ್ತಿಯನ್ನು ಪಡೆಯುವಿಕೆಯು ಹೇಗೆ ಫಲವಾಗಿರುವುದೋ ಮತ್ತು ತಪಶ್ಚರಣೆಗೆ ಶಾಂತಿರೂಪಮೋಕ್ಷವು ಹೇಗೆ ಫಲವಾಗಿರುವುದೋ ಅದರಂತೆ ನಿನ್ನಂತಹ ಮಹಾತ್ಮರ ಸಂಬಂಧವೂ ಮತ್ತು ಸಾಕ್ಷಾತ್ಕಾರವೂ (ದರ್ಶನವೂ) ಪುಣ್ಯವನ್ನುಂಟುಮಾಡುವುದಾಗಿರುತ್ತದೆ. ನಿನ್ನ ಸಂದರ್ಶನಕ್ಕೆ ಪುಣ್ಯಾಸಂಪಾಪನೆಯೇ ಫಲವಾಗಿರುತ್ತದೆ. ॥೧೪-೧೫-೧೬-೧೭-೧೮॥

ಪ್ರಾಣಿಗಳಲ್ಲಿ ಮನುಷ್ಯನು ಶ್ರೇಷ್ಠನಾಗಿರುವನು. ಮನುಷ್ಯರಲ್ಲಿ ಬ್ರಾಹ್ಮಣನೂ, ಬ್ರಾಹ್ಮಣರಲ್ಲಿ ವಿವೇಕಬುದ್ಧಿಯುಳ್ಳವರೂ ಶ್ರೇಷ್ಠರಾಗಿರುತ್ತಾರೆ. ಇವರೆಲ್ಲರಿಗಿಂತಲೂ ಆತ್ಮಜ್ಞಾನವುಳ್ಳವನು ಅತ್ಯಂತ ಶ್ರೇಷ್ಠನಾಗಿರುತ್ತಾನೆ. ॥೧೯॥

ಓ ಸೂತಮಹರ್ಷಿಯೇ, ಭಗವದ್ಭಕ್ತಶ್ರೇಷ್ಠನಾದ ನಿನ್ನನ್ನು ನೋಡಿದುದರಿಂದಲೇ ಅನೇಕ ಕಾಲಗಳಿಂದ ಆಚರಿಸಲ್ಪಟ್ಟ ತಪಸ್ಸುಗಳ ಪುಣ್ಯಫಲವು ನನಗೆ ಇದೀಗ ಬಂದಿರುತ್ತದೆ. ॥೨೦॥

ಮನುಷ್ಯರಿಗೆ ಚಕ್ಷುರಿಂದ್ರಿಯವೇ ಮೊದಲಾದ ಜ್ಞಾನೇಂದ್ರಿಯಗಳೂ ಮತ್ತು

ವಿದ್ಯಾ ಚ ವಿದ್ಯತೇ ಯೇಷಾಂ ಜ್ಞಾನಂ ನೋ ವಿದ್ಯತೇ ಪುನಃ ।
ಧನಾನಿ ದಾನ ಹೀನಾನಿ ಶಕ್ತಿಶ್ಚ ಕಾರ್ಯತೋ ವಿನಾ ॥೨೨॥

ತೇಷಾಂ ವಿಡಂಬನಾರ್ಥಾಯ ಸರ್ವಾಣಿ ವಿಫಲಾನಿ ವೈ ।
ಭವಾದೃಶಸ್ತು ವಿದ್ಯಾದೇರ್ಲೇಭಿರೇ ಸಫಲತಾಂ ಶುಭಾಂ ॥೨೩॥

ಭಗವತ್ಕರುಣಾಭಾಜಾಂ ಭವತಾಂ ದರ್ಶನಾದಿಕಂ ।
ಕರೋತಿ ಜನ್ಮ ಸಫಲಂ ಜೀವಿತಂ ಚ ಪುನಾತಿ ಹಿ ॥೨೪॥

ಇದಾನೀಮಾಗತಾ ಸಂಧ್ಯಾ ಕಾರ್ಯಂ ಚೋಪಾಸನಾದಿಕಂ ।
ಗಮಿಷ್ಯಾಮೋ ವಹ್ನಿಗೃಹಂ ಪಶ್ಯ ಕಾಲಗತಿಂ ಪುನಃ ॥೨೫॥

---

ಕರ್ಮೇಂದ್ರಿಯಗಳೂ ಇರುತ್ತವೆ. ಹೀಗಿರುತ್ತಿರಲು ಯಾರು ಆ ಇಂದ್ರಿಯಗಳಿಂದ ತಕ್ಕ ಪ್ರಯೋಜನಗಳನ್ನು ಹೊಂದುವುದಿಲ್ಲವೋ ಅವರ ಕೇವಲ ಮಣ್ಣಿನ ಪ್ರತಿಮೆಗೆ ಸಮಾನರಾದವರು. ॥೨೧॥

ಯಾರಿಗೆ ಶಾಸ್ತ್ರಪಾಂಡಿತ್ಯವಿದ್ದು ಆತ್ಮಜ್ಞಾನವು ಇರುವುದಿಲ್ಲವೋ ಧನವಿದ್ದರೂ ಯಾರು ದಾನವನ್ನು ಮಾಡುವುದಿಲ್ಲವೋ ಮತ್ತು ಯಾರಿಗೆ ಶಕ್ತಿಯಿದ್ದರೂ ಆ ಶಕ್ತಿಯು ಕಾರ್ಯಸಾಧಕವಾಗುವುದಿಲ್ಲವೋ ಅಂಥವರಿಗೆ ಪೂರ್ವೋಕ್ತವಾದ ವಿದ್ಯಾ ಧನಾದಿಗಳಿದ್ದರೂ ಅವುಗಳು ನಿಷ್ಫಲವಾದುವುಗಳಾಗಿ ಅಪಹಾಸ್ಯಕ್ಕೋಸ್ಕರವೇ ಆಗಿರುವುವು. ॥೨೨॥

ಪೂಜ್ಯರಾದ ನಿಮ್ಮಂತಹವರಾದರೋ, ವಿದ್ಯೆಗೆ ಯೋಗ್ಯವಾದ ಆತ್ಮಜ್ಞಾನ ರೂಪವಾದ ಫಲವನ್ನು ಹೊಂದಿರುವವರಾಗಿರುತ್ತೀರಿ. ॥೨೩॥

ಭಗವಂತನ ಪ್ರೀತಿಗೆ ಪಾತ್ರರಾದ ತಮ್ಮ ದರ್ಶನಾದಿಗಳು ಜನ್ಮವನ್ನು ಸಫಲಗೊಳಿಸುತ್ತವೆ ಮತ್ತು ಈ ಜೀವಿಕೆಯನ್ನು ಪವಿತ್ರಗೊಳಿಸುವುವಾಗಿರುತ್ತವೆ. ॥೨೪॥

ಈಗ ಸಂಧ್ಯಾಕಾಲವು ಪ್ರಾಪ್ತವಾಗಿರುವುದರಿಂದ ಔಪಾಸನಾದಿಗಳನ್ನು ಅನುಷ್ಠಾನಮಾಡಬೇಕಾಗಿದೆ. ಆದುದರಿಂದ ಅಗ್ನಿಶಾಲೆಯನ್ನು ಕುರಿತು ಹೋಗುವವರಾಗೋಣ. ಕಾಲಚಕ್ರದ ಗಮನವನ್ನು ನಿರೀಕ್ಷಿಸುವವರಾಗೋಣ. ॥೨೫॥

ಅಸ್ತಂ ಗಚ್ಛತಿ ವೈ ಕಾಲೇ ಪರಾನ್ ಸಂತಾಪಯನ್ರವಿಃ ।
ನಲಿನೀಕೋಮಲಮತಿರ್ವಿಷಣ್ಣಾಽಸ್ತೇ ಸರೋವರೇ ॥೨೬॥

ಮಹಾತ್ಮಾನೋ ನ ತ್ಯಜಂತಿ ಸ್ವಭಾವಂ ಪತನೇಽಪಿ ಹಿ ।
ಇತಿ ದರ್ಶಯಿತುಂ ಪಶ್ಯ ಭಾಸ್ಕರೋ ಭಾಸ್ಕರಚ್ಛವಿಃ ॥೨೭॥

ಮಹತೋಽಸ್ತಮನಂ ಸಾಕ್ಷಾದ್ವಿಶ್ವಸ್ಯಾ ಮಂಗಲಂ ಪರಂ ।
ಅಂಧಕಾರ ಸಮಾಚ್ಛನ್ನಾ ಧರಿತ್ರೀ ರವಿಣಾ ವಿನಾ ॥೨೮॥

ಕೃತಜ್ಞಾ ಮೃಗಪತಗಾಃ ಸ್ವೋಽಪಕಾರಾಂಶ್ಚ ಚಿಂತಯನ್ ।
ಪ್ರಕಾಶಯಂತಿ ದುಃಖಾನಿ ರಾವೈರಸ್ತಮನೇ ಹರೇಃ ॥೨೯॥

---

ಪದ್ಮಲತೆಯ ವಿಷಯದಲ್ಲಿ ಕೋಮಲಸ್ವಭಾವವುಳ್ಳ ಸೂರ್ಯೋದಯವಾಗಲು ಪದ್ಮವು ಅರಳುತ್ತದೆ. ರಾತ್ರಿಯಾಗಲು ಮೊಗ್ಗೇ ಆಗುತ್ತದೆ. ಇದು ಪದ್ಮಿನಿಯ ಸ್ವಭಾವ. ಹೀಗಿರುತ್ತಿರಲು ಸೂರ್ಯನು ತನ್ನ ಪ್ರಖರವಾದ ಕಿರಣಗಳಿಂದ ಇತರ ಪ್ರಾಣಿಗಳನ್ನು ಸಂತಾಪಗೊಳಿಸುವವನಾದರೂ, ಪದ್ಮಿನಿಗೆ ಮಾತ್ರ ಸೂರ್ಯನ ಕಿರಣಗಳು ಬಹಳ ಅಪ್ಯಾಯಮಾನವಾಗಿರುತ್ತವೆ. ಆದುದರಿಂದ ಪದ್ಮಿನಿಯ ವಿಷಯದಲ್ಲಿ ಮಾತ್ರ ಸೂರ್ಯನು ಮಾರ್ದವಸ್ವಭಾವವುಳ್ಳವನು. ಇನ್ನಿತರರನ್ನು ಸಂತಾಪಗೊಳಿಸುವನು ಎಂದರ್ಥವು.) ತನ್ನ ತೀಕ್ಷ್ಣವಾದ ಕಿರಣಗಳಿಂದ ಇತರ ಪ್ರಾಣಿಗಳನ್ನು ಸಂತಾಪಗೊಳಿಸುವವನಾಗಿ ಸೂರ್ಯನು ಸಂಧ್ಯಾಕಾಲವು ಪ್ರಾಪ್ತವಾಗಿರುವುದರಿಂದ ಅಸ್ತವನ್ನೈದುತ್ತಿರುವನು. ಇದನ್ನು ನಿರೀಕ್ಷಿಸಿದರೆ ಮಹಾತ್ಮರು ಎಂತಹ ಅಧೋಗತಿಯನ್ನು ಹೊಂದಿದವರಾದರೂ, ತಮ್ಮ ಸ್ವತಃಸಿದ್ಧವಾದ ನಿಶ್ಚಲತ್ವಾದಿಗುಣಗಳನ್ನು ತೊರೆಯುವುದಿಲ್ಲ ಎಂಬ ಅಂಶವನ್ನು ಸೂರ್ಯನು ಲೋಕಕ್ಕೆ ತಿಳಿಸುವನೋ ಎಂಬಂತೆ ಅಸ್ತಮಾನನಾಗುತ್ತಿರುವನು ಎಂದು ತೋರುತ್ತದೆ. ॥೨೬-೨೭॥

ಮಹಾತ್ಮರು ಅಸ್ತವಾಗುವುದರಿಂದ ಲೋಕಕ್ಕೆ ಮಹತ್ತರವಾದ ಅಶುಭವು ಸಂಭವಿಸುವುದು. ಅದರಂತೆ ಸೂರ್ಯನು ಅಸ್ತಮಾನನಾಗಲು ಭೂಮಿಯು ಅಂಧಕಾರದಿಂದ ಆವರಿಸಲ್ಪಡುತ್ತದೆ. ॥೨೮॥

ಆಹಾರ ಸಂಗ್ರಹಾದಿ ವ್ಯವಹಾರಗಳಿಗೆ ಸಹಕಾರಿಯಾದ ಹಗಲನ್ನು ಉಂಟುಮಾಡಿರುವ ಸೂರ್ಯನು ಅಸ್ತಮಾನನಾಗಲು ಅವನ ಆ ಉಪಕಾರವನ್ನು ಮರೆ

**ಪತನಾತ್ಪರಮುತ್ಥಾನಮುತ್ಥಾನಾತ್ಪತನಂ ತಥಾ ।**
**ಇತ್ಥಂ ಸಂಸಾರಚಕ್ರಸ್ಯ ಭ್ರಮಣಸ್ಯ ವಿಧಿರ್ಭವೇತ್ ॥೩೦॥**

**ನಾವಸೀದೇದಥೋ ಲೋಕೋ ನಾಧೀರೋ ವಾ ಭವೇದತಃ ।**
**ಅನ್ಯಸ್ಯಾವನತಿಂ ದೃಷ್ಟ್ವಾ ಪತನಂ ಚ ತಥೈವ ಹಿ ।**
**ಉಪದೇಷ್ಟುಮಿವೇತ್ಯೇವ ಸಂಧ್ಯಾ ಧೀರಂ ಸಮಾಗತಾ ॥೩೧॥**

**ಯಥಾ ಪಾಪಾತ್ಮನಾಂ ಸ್ವಾಂತಮಜ್ಞಾನ ತಮಸಾಽಽವೃತಮ್ ।**
**ಲೀಯಂತೇಽಹಾನಿ ಸರ್ವಾಣಿ ತಮಸಿ ಕ್ರಮಶಸ್ತಥಾ ॥೩೨॥**

---

ಯದೇ ಇರುವ ಮೃಗಪಕ್ಷಿಗಳು ಅವನಲ್ಲಿ ಕೃತಜ್ಞರಾಗಿ ಸಂಧ್ಯಾಕಾಲದ ತಮ್ಮ ಕೂಗುಗಳಿಂದ ಸೂರ್ಯನು ಅಸ್ತಮಾನನಾದನೆಂದು ದುಃಖವನ್ನು ಪ್ರಕಾಶಿಸುತ್ತವೆಯೋ ಎಂಬಂತೆ ಇರುತ್ತವೆ. ॥೨೯॥

ಪತನ, ಪುನಃ ಉತ್ಥಾನ, ಪುನಃ ಪತನ, ಪುನಃ ಉತ್ಥಾನ, ಎಂದರೆ ಮರಣವನ್ನು ಅಥವಾ ಅಧೋಗತಿಯನ್ನು ಹೊಂದುವುದು, ಪುನಃ ಜನ್ಮಿಸುವುದು ಅಥವಾ ಉನ್ನತಿಯನ್ನೈದುವುದು—ಹೀಗೆ ಅವನತಿ ಮತ್ತು ಉನ್ನತಿಗಳಿಂದ ಸಂಸಾರ ಚಕ್ರವು ಕೂಡಿರುವುದಾಗಿರುತ್ತದೆ. ಸಂಸಾರಚಕ್ರದ ಭ್ರಮಣವು ಒಂದು ಕ್ರಮವುಳ್ಳದ್ದಾಗಿರುತ್ತದೆ. ॥೩೦॥

ಸೂರ್ಯನ ಅಸ್ತವಾಗುವಿಕೆಯೂ ಇದರಂತೆಯೇ ಇರುತ್ತದೆ. ಆದುದರಿಂದ ಲೋಕದಲ್ಲಿ ಯಾರೂ ಸಹ ಇನ್ನೊಬ್ಬನ ಅವನತಿಯನ್ನು ನೋಡಿ ವ್ಯಥಿಸುವವನೇ ಆಗಲಿ ಅಥವಾ ಅಧೈರ್ಯಗೊಳ್ಳುವವನೇ ಆಗಲಿ ಆಗಬಾರದು, ಎಂಬ ಅಂಶವನ್ನು ಉಪದೇಶಿಸುವುದಕ್ಕೋಸ್ಕರವೋ ಎಂಬಂತೆ ಸಂಧ್ಯಾಕಾಲವು ನಿಧಾನವಾಗಿ ತಡೆ, ಚಾಂಚಲ್ಯಗಳಿಲ್ಲದೆ ಪ್ರಾಪ್ತವಾಯಿತು. ॥೩೧॥

ಪಾಪಕರ್ಮಾಚರಣೆಯಲ್ಲಿ ಆಸಕ್ತರಾದವರ ಅಂತಃಕರಣವು ಅಜ್ಞಾನವೆಂಬ ಕತ್ತಲೆಯಿಂದ ಹೇಗೆ ಆವರಿಸಲ್ಪಟ್ಟಿರುತ್ತದೆಯೋ ಅದರಂತೆ ಸಂಧ್ಯಾಕಾಲವು ಪ್ರಾಪ್ತವಾಗಲು ಕ್ರಮವಾಗಿ ಹಗಲು ಕತ್ತಲೆಯಲ್ಲಿ ಲೀನವಾಗುತ್ತದೆ. ॥೩೨॥

**ತಪಸ್ಯಾನಂತರಂ ಶಾಂತೇ ರುದಯೇನ ಸುಸಂಗವತ್ ।**
**ಸಂಧ್ಯಾಗಮೇ ಸಮೀರಶ್ಚ ವಾತಿ ಶೀತಂ ಸುಖಂಕರಃ ॥೩೩॥**

**ತಪಸೋಽಂತೇ ಸಿದ್ಧಿಲಾಭೇ ಮುಖಕಾಂತಿರ್ಯಥಾ ಸತಃ ।**
**ಕುಮುದಿನ್ಯಸ್ತಥಾ ಫುಲ್ಲಾಃ ಸುಧಾಕರ ಸಮಾಗಮೇ ॥೩೪॥**

**ದುಃಖಸ್ಯಾಸಹ್ಯತಾಂ ವೃಕ್ಷಾಃ ಪ್ರದರ್ಶಯಿತುಮೇವ ವಾ ।**
**ಪ್ರತೀಕ್ಷಂತೇ ಸ್ಪಂದಹೀನಾ ಅಂಧಕಾರಂ ಸುದಾರುಣಮ್ ॥೩೫॥**

**ನಿಯತಂ ಪ್ರಭುಸೇವಾಯಾಂ ಯಾಪಯಂತಃ ಸ್ವಜೀವನಾನ್ ।**
**ಪ್ರಾಣಿನಃ ಶಂಕಿತೋದ್ವಿಗ್ನಾ ಆಶ್ರಯಂತೇ ಗೃಹಾನ್ಸುಖಮ್ ॥೩೬॥**

**ಸೂರ್ಯಸ್ಯಾಸ್ತಮನೇ ಲೋಕಾಃ ಖಿನ್ನಾಃ ಕೇಚಿತ್ಸುವರ್ಧಿತಾಃ ।**
**ಪ್ರಫುಲ್ಲಾ ವಿರಸಾಃ ಕೇಚಿತ್ ಸ್ತಂಭಿತಾಃ ಶಬ್ದಿತಾಃ ಪರೇ ॥೩೭॥**

---

ತಪಸ್ಸನ್ನು ಆಚರಿಸುವವರಿಗೆ ಅದರ ಸಿದ್ಧಿಯುಂಟಾದಮೇಲೆ ಜ್ಞಾನೋದಯ ವಾದೊಡನೆ ಶಾಂತಿರೂಪವಾದ ಮೋಕ್ಷದಿಂದ ನಿರತಿಶಯವಾದ ಸುಖದ ಅನುಭವ ವಾಗುವಂತೆ, ಸಂಧ್ಯಾಕಾಲವು ಪ್ರಾಪ್ತವಾಗಲು ಶೀತಲವಾದ ವಾಯುವು ಸುಖ ವನ್ನುಂಟುಮಾಡುತ್ತದೆ. ॥೩೩॥

ತಪಸ್ಸನ್ನು ಅನುಷ್ಠಾನಮಾಡಿ ಅದರಿಂದ ಕಡೆಗೆ ಸಿದ್ಧಿಯು ಪ್ರಾಪ್ತವಾಗಲು ಯೋಗಿಯ ಮುಖವು ಕಾಂತಿಯುಕ್ತವಾಗಿರುವಂತೆ, ಚಂದ್ರೋದಯವಾಗಲು ಕನ್ನೈ ದಿಲೆಗಳು ಅರಳುತ್ತವೆ. ॥೩೪॥

ದಶದಿಕ್ಕುಗಳಲ್ಲಿಯೂ ಅಂಧಕಾರವು ವ್ಯಾಪಿಸಲು ಅದನ್ನು ನೋಡಿ ವೃಕ್ಷಗಳು ಸಹಿಸಲಸಾಧ್ಯವಾದ ದುಃಖವನ್ನು ಪರರಿಗೆ ತಿಳಿಸಿಕೊಡುವುವೋ ಎಂಬಂತೆ ನಿಶ್ಚಲ ವಾಗಿರುವುವು. ॥೩೫॥

ಸದಾಕಾಲವೂ ಯಜಮಾನನ ಸೇವೆಯಲ್ಲಿಯೇ ತಮ್ಮ ಜೀವನವನ್ನು ನೀಗು ತ್ತಿರುವ ಭೃತ್ಯಾದಿಗಳು ಸಂಧ್ಯಾಕಾಲವು ಪ್ರಾಪ್ತವಾಗಲು ಆತಂಕದಿಂದ ಸುಖಕ್ಕಾಗಿ ಆಯಾಸಗೊಂಡವರಾಗಿ ತಮ್ಮ ತಮ್ಮ ವಾಸಸ್ಥಳಗಳನ್ನು ಆಶ್ರಯಿಸುತ್ತಾರೆ. ॥೩೬॥

ಸೂರ್ಯನು ಅಸ್ತಮಿಸಲು ಕೆಲವರು ವ್ಯಥೆಗೊಳ್ಳುವರು. ಮತ್ತೆಕೆಲವರು ವೃದ್ಧಿಹೊಂದುವರು. ಕೆಲವರು ಪ್ರಸನ್ನರೂ, ಕೆಲವರು ಉತ್ಸಾಹಹೀನರೂ, ಕೆಲವರು

ದಿವಾಚರಾ ನಿಶಾಕಾಲೇ ಸುವಿಷಣ್ಣಾ ಭವಂತಿ ಹಿ ।
ನಿಶಾಚರಾ ನಿಶಾಲೋಕೇ ಜಾತಾಹ್ಲಾದಾ ವಿಧೇರ್ಗತಿಃ ॥೩೮॥

ಸೂತ ಲೋಕಾಲಯಾನ್ ಪಶ್ಯ ರುಚಿಭಿನ್ನ ಕ್ರಿಯಾಪರಾನ್ ।
ನಿಶಾಃಗಮೇ ನರಾ ನಾರ್ಯಃ ಸ್ವಸ್ವಕಾರ್ಯೇ ವ್ರತೇ ರತಾಃ ॥೩೯॥

ಸುಖಾನುಧ್ಯಾನನಿರತಾ ಜೀವಾ(ಸ್ಸರ್ವೇ)ವಿಮೋಹಿತಾಃ ।
ಯಥಾರ್ಥಸುಖಹೇತುಂ ನ ಧ್ಯಾಯಂತಿ ಜಗದೀಶ್ವರಂ ॥೪೦॥

ಇತ್ಯುಕ್ತ್ವಾ ಶೌನಕಃ ಸೂತಂ ವಿಶ್ರಾಮಾಯ ನಿಯೋಜಯತ್ ।
ಪ್ರವಿವೇಶಾಗ್ನಿಶರಣಂ ಸಾಯಂಕೃತ್ಯಂ ಸಮಾಹಿತುಂ ॥೪೧॥

---

ಸ್ತಂಭಿತರೂ ಎಂದರೆ ಏನುಮಾಡಬೇಕೆಂದು ತಿಳಿಯದೆ ಮೂಢರಾಗಿರುವರು. ಇನ್ನು ಕೆಲವು ಕೆಲವು ಪಕ್ಷ್ಯಾದಿಗಳು ಧ್ವನಿಯನ್ನು ಮಾಡುವುವು. ಹಗಲಿನಲ್ಲಿ ಸಂಚಾರ ಮಾಡುವ ಸ್ವಭಾವವುಳ್ಳ ಪ್ರಾಣಿವರ್ಗವು ರಾತ್ರಿಯು ಪ್ರಾಪ್ತವಾಗಲು ವ್ಯಥೆಯನ್ನು ಹೊಂದುತ್ತವೆ. ರಾತ್ರಿಯಲ್ಲಿ ಸಂಚಾರಮಾಡುವ ಸ್ವಭಾವವುಳ್ಳ ಪ್ರಾಣಿಗಳು ರಾತ್ರಿಯು ಪ್ರಾಪ್ತವಾಗಲು ಪರಮ ಸಂತೋಷವನ್ನೈದುವುವು. ಇದಲ್ಲವೆ ಪ್ರಕೃತಿಯ ಲೀಲೆಯು ವಿಧಿವಿಲಾಸವು! ॥೩೭-೩೮॥

ಓ ಸೂತಮಹರ್ಷಿಯೇ, ಈ ಮನುಷ್ಯವರ್ಗವನ್ನು ನೋಡುವವನಾಗು. ಮನುಷ್ಯರು ತಮ್ಮ ಇಷ್ಟಕ್ಕೆ ಅನುಸಾರವಾದ ಕಾರ್ಯಗಳಲ್ಲಿ ಪ್ರವೃತ್ತರಾಗುವರು. ರಾತ್ರಿಯು ಪ್ರಾಪ್ತವಾಗಲು ಸ್ತ್ರೀಪುರುಷರು ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗುತ್ತಾರೆ. ಜೀವರಾಶಿಗಳು ವಿಷಯಸುಖದಲ್ಲಿಯೇ ಆಸಕ್ತರಾಗಿ ಅಜ್ಞಾನದಿಂದ ಮೋಹಿತರಾಗಿರುವರು. ॥೩೯॥

ಹೀಗೆ ವಿಷಯಸುಖಾಸಕ್ತರಾದ ಜೀವರು ಅನಿತ್ಯಸುಖಗಳಲ್ಲಿ ಆಸಕ್ತಿಯುಳ್ಳವರಾಗಿ ಶಾಶ್ವತವಾದ ಸುಖಕ್ಕೆ ಕಾರಣಭೂತನಾದ ಪರಮೇಶನನ್ನು ಧ್ಯಾನಮಾಡುವುದಿಲ್ಲ. ॥೪೦॥

ಶೌನಕಮಹರ್ಷಿಯು ಸೂತನನ್ನು ಕುರಿತು ಹೀಗೆಂದು ಹೇಳಿ ವಿಶ್ರಾಂತಿ ತೆಗೆದುಕೊಳ್ಳುವಂತೆ ಹೇಳಿ, ಸಾಯಂಕಾಲದ ಅಗ್ನಿಹೋತ್ರವನ್ನು ನೆರವೇರಿಸಲು ಅಗ್ನಿಶಾಲೆಯನ್ನು ಪ್ರವೇಶಿಸಿದನು. ॥೪೧॥

ಅನ್ಯೇ ಚ ಮುನಯಃ ಸರ್ವೇ ಸಂಧ್ಯೋಪಾಸನತತ್ಪರಾಃ ।
ವೇದಮಂತ್ರೈಸ್ತದಾಽರಣ್ಯಂ ದೇವಕ್ಷೇತ್ರಮಕಲ್ಪಯನ್ ॥೪೨॥

ತದ್ದರ್ಶನಾಹ್ಲಾದಪರಿಪ್ಲುತಾಂತರಃ
ಸೂತೋ ಹಿ ಸಂಕೀರ್ತನರಾಗಸಂಗತಾನ್ ।
ಚರಾಚರಾಂಸ್ತಾರಕ ನಾಮಗಾನಕೈಃ
ತುತೋಷ ವೈ ತಾಪಸವೃಂದವರ್ಧಿತೈಃ ॥೪೩॥

ಇತಿ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ
ಶೌನಕಸೂತಸಂಗಮೋ ನಾಮ ದ್ವಿತೀಯೋಽಧ್ಯಾಯಃ

---

ಇತರ ಋಷಿಗಳೂ ಸಹ ಸಂಧ್ಯಾಕಾಲದ ಔಪಾಸನೆಯಲ್ಲಿ ಆಸಕ್ತರಾಗಿ ವೇದ ಮಂತ್ರಗಳ ಉದ್ಘೋಷದಿಂದ ಆ ಅರಣ್ಯವನ್ನು ದೇವಕ್ಷೇತ್ರ (ಪುಣ್ಯಕ್ಷೇತ್ರ) ವನ್ನಾಗಿ ಮಾಡಿದರು. ॥೪೨॥

ಋಷಿಗಳ ದರ್ಶನದಿಂದ ಸಂತುಷ್ಟವಾದ ಮನಸ್ಸುಳ್ಳ ಸೂತಮುನಿಯು, ಸಂಸಾರ ತಾರಕವಾದ ದೇವರ ನಾಮಗಳ ಗಾನವಿಶೇಷದಿಂದ ಅಲ್ಲಿದ್ದ ಸಕಲ ಚರಾಚರಪ್ರಾಣಿಗಳನ್ನೂ ಸಂತೋಷಗೊಳಿಸಿದನು. ॥೪೩॥

ಇಲ್ಲಿಗೆ ಸಕಲ ಪುರಾಣಗಳ ಸಾರಭೂತವಾದ ಆದಿಪುರಾಣದಲ್ಲಿ ಶೌನಕಸೂತ
ಸಂಗಮವೆಂಬ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಗಣೇಶಾಯನಮಃ ॥

॥ ಓಂ ನಮೋ ಭಗವತೇ ವಾಸುದೇವಾಯ ॥

# ಆದಿ ಪುರಾಣಂ

## ॥ ತೃತೀಯೋಽಧ್ಯಾಯಃ ॥

### ಮೂರನೆಯ ಅಧ್ಯಾಯವು

ಸೂತೇ ನಿವೃತ್ತೇ ಋಷಿಭಿಃ ಸಾತ್ತ್ವಿಕವೃತ್ತಿಭಿಃ ಸಹ ।
ಭಗವತ್ತತ್ತ್ವರಸಿಕೇ ಪ್ರೋವಾಚ ಶೌನಕಸ್ತದಾ ॥೧॥

ಸನ್ಯಾಸಿನೋ ವಯಂ ತಾತ ಯಜ್ಞೇಽಸ್ಮಿಂಸ್ತು ಸುದುಷ್ಕರೇ ।
ಬಹ್ವಾಯಾಸೇನ ಕಷ್ಟೇನ ಲೋಕಾನಾಂ ಶರ್ಮಕಾಮ್ಯಯಾ ॥೨॥

ಲೋಕೇಽಸ್ಮಿನ್ನಾತ್ಮನಿ ಯಥಾ ಈಶ್ವರೇ ಚ ತಥಾ ಪರೇ ।
ತ್ರಿವಿಧಂ ಸಾಧನಂ ದೃಷ್ಟಂ ಸಾಧೂನಾಮಮಲಾತ್ಮನಾಂ ॥೩॥

---

ಸಾತ್ವಿಕರಾದ ಋಷಿಗಳೆಲ್ಲರೂ ತಮ್ಮ ತಮ್ಮ ಕಾರ್ಯಗಳನ್ನು ಮುಗಿಸಲು, ಭಗವಂತನ ತತ್ತ್ವಸವಿಯನ್ನು ತಿಳಿದ ಸೂತಮಹರ್ಷಿಯೂ ಸಹ ತನ್ನ ಗಾನವನ್ನು ಮುಗಿಸಲು, ಶೌನಕನು ಸೂತನನ್ನು ಕುರಿತು ಹೀಗೆಂದು ಹೇಳಿದನು. ॥೧॥

ಓ ಪೂಜ್ಯನಾದ ಸೂತಮಹರ್ಷಿಯೇ, ಸಂನ್ಯಾಸಿಗಳಾದ ನಾವು ಲೋಕ ಕಲ್ಯಾಣಕ್ಕೋಸ್ಕರ ಅತ್ಯಂತ ಆಯಾಸ ಮತ್ತು ಕಷ್ಟದಿಂದ ಸಾಧ್ಯವಾದ ಈ ಯಜ್ಞದಲ್ಲಿ ತೊಡಗಿರುತ್ತೇವೆ. ॥೨॥

ಈ ಲೋಕದಲ್ಲಿ ಆತ್ಮಜ್ಞಾನದ ವಿಷಯದಲ್ಲೂ ಈಶ್ವರಾರಾಧನೆಯ ವಿಷಯದಲ್ಲೂ ಮೂರು ಬಗೆಯ ಸಾಧನೆಗಳಿವೆ. ಕಾಮ್ಯವಾದ ಯಜ್ಞ, ದಾನ, ತಪಸ್ಸುಗಳೂ, ಕಾಯಿಕ, ವಾಚಿಕ, ಮಾನಸಿಕವಾದ ಧರ್ಮಾಚರಣೆಯೂ ಪ್ರಸಿದ್ಧವಾಗಿವೆ. ನಿರ್ಮಲವಾದ ಎಂದರೆ ರಾಗದ್ವೇಷರೂಪವಾದ ದೋಷವಿಲ್ಲದ ಮನಸ್ಸುಳ್ಳ ಸಾಧುಗಳು

ಅಯಂ ಹಿ ಶಾಸ್ತ್ರಸಿದ್ಧಾಂತೋ ಮುನೀನಾಂ ಚಾನುಮೋದಿತಃ ।
ಆತ್ಮಾರ್ಥಂ ಪರಿಪಾಲಾನಾಂ ಸ್ವಾರ್ಥಸಿದ್ಧೇರಧೋಗತಿಃ ॥೪॥

ವಿಶೇಷತಃ ಸಮಾಯಾತೋ ಘೋರಃ ಕಲಿಯುಗೋಽಪ್ಯಯಂ ।
ಅಧರ್ಮಃ ಪ್ರಬಲೋ ಯತ್ರ ಜನಾನಾಂ ಕಲಿವರ್ಧಕೇ ॥೫॥

ಅಧುನೈವ ಕಲಿಬಲಂ ದೃಶ್ಯತೇ ಲೋಕಮೋಹನಂ ।
ತಥಾಽಽದರೋ ನ ಧರ್ಮಸ್ಯ ನಾನುರಾಗೋಽಸ್ತಿ ದೇಹಿನಃ ॥೬॥

ಶಾಲಗ್ರಾಮೋ ಮಾನಪಿಂಡಃ ಸರ್ವೇ ನಾಸ್ತಿಕವೃತ್ತಯಃ ।
ಪಿತೃಭಕ್ತಿರ್ಮಾತೃಭಕ್ತಿರ್ಗತಾ ದೂರತರಂ ಕಲೌ ॥೭॥

---

ನಿಷ್ಕಾಮವಾದ ಯಜ್ಞಾದಿಗಳಲ್ಲಿ ಆಸಕ್ತರಾಗಿರುತ್ತಾ ಈಶ್ವರನನ್ನು ಸಂತೋಷಪಡಿಸುತ್ತಾ ಪರಮಪುರುಷಾರ್ಥವನ್ನು ಪಡೆಯುತ್ತಾರೆ. ಈ ವಿಷಯವು ಶಾಸ್ತ್ರಗಳಿಗೂ ಮುನಿಗಳಿಗೂ ಸಮ್ಮತವಾಗಿರುವ ಸಿದ್ಧಾಂತವಾಗಿದೆ. ಆದರೆ ಸ್ವಾರ್ಥದೃಷ್ಟಿಯಿಂದ ಕಾಮ್ಯಕರ್ಮಗಳಲ್ಲಿ ಆಸಕ್ತರಾದವರು ಸ್ವಪ್ರಯೋಜನವನ್ನು ಪಡೆಯುತ್ತಿದ್ದರೂ ಪರಮ ಪುರುಷಾರ್ಥವು ದೊರೆಯದೆ ಅದಕ್ಕಿಂತಲೂ ಕಡಿಮೆಯಾಗಿರುವುದರಿಂದ ಕೀಳಾದ ಗತಿಯನ್ನೇ ಪಡೆಯುತ್ತಿರುತ್ತಾರೆ. ||೩-೪||

ಯಾವ ಕಾಲವಿಶೇಷದಲ್ಲಿ ಜನಗಳ ಅಧರ್ಮಾಚರಣೆಯು ಪ್ರಬಲವಾಗಿರುವುದೋ, ಅಂತಹ ಭಯಂಕರವಾದ ಕಲಿಯುಗವು ಪ್ರಾಪ್ತವಾಯಿತು. ||೫||

ಜನಗಳನ್ನು ಅಜ್ಞಾನಾಂಧಕಾರದಲ್ಲಿ ಕೆಡವತಕ್ಕ ಕಲಿಯ ಪ್ರಾಬಲ್ಯವು ಈಗಲೇ ಕಾಣಿಸುತ್ತಿದೆ. ಮನುಷ್ಯನಿಗೆ ಧರ್ಮದಲ್ಲಿ ಆದರಾನುರಾಗಗಳಿಲ್ಲದಿರುವುದೇ ಇದಕ್ಕೆ ಚಿಹ್ನೆಯಾಗಿರುತ್ತದೆ. ||೬||

ಕಲಿಯುಗದಲ್ಲಿ ಶಾಲಗ್ರಾಮಶಿಲೆಯು ಮಾನಪಿಂಡ ಎಂದರೆ ತೂಕದ ಕಲ್ಲಾಗಿರುತ್ತದೆ. (ಜನಗಳು ಶಾಲಗ್ರಾಮದ ಶಿಲೆಯನ್ನು ತೂಕದ ಕಲ್ಲನ್ನಾಗಿ ಉಪಯೋಗಿಸುತ್ತಾರೆ ಎಂದರ್ಥವು.) ಮತ್ತು ಸಕಲ ಜನರೂ ನಾಸ್ತಿಕರಾಗುತ್ತಾರೆ. ಇದಲ್ಲದೆ ಕಲಿಯುಗದಲ್ಲಿ ಮಾತಾಪಿತೃಭಕ್ತಿಯು ಇರುವುದಿಲ್ಲ. ||೭||

ಪಾಂಡಿತ್ಯಮಾನಿನೋ ಮೂಢಾ ಸ್ತಥಾ ಧಾರ್ಮಿಕಮಾನಿನಃ ।
ಕುಕರ್ಮಣಿ ಸಮಾಸಕ್ತಾಃ ಸದಾಽಧರ್ಮಪರಾಯಣಾಃ ॥೮॥

ವರಂ ದ್ವಿಜೇಭ್ಯ ಶ್ಚಾಂಡಾಲೋ ಯತ್ರ ಧರ್ಮಃ ಪ್ರದೃಶ್ಯತೇ ।
ಬ್ರಾಹ್ಮಣಾ ಬ್ರಾಹ್ಮಣ್ಯಹೀನಾ ಲೋಭೋಪಹತಚೇತಸಃ ॥೯॥

ನರಾಃ ಶಿಶ್ನೋದರಪರಾ ಯೋನ್ಯಾಹಾರ ವಿಧಿಚ್ಯುತಾಃ ।
ಇಂದ್ರಿಯಾಣಾಂ ವಶೀಭೂತಾಃ ಸ್ತ್ರೀಣಾಂ ಕ್ರೀಡಾಮೃಗಾ ಇವ ॥೧೦॥

ದೇವವಿತ್ತೇನ ಕುರ್ವಂತಿ ವಿಲಾಸಂ ಮಂದಿರಂ ಸುಖಂ ।
ಬಾಲಕಾ ವೃದ್ಧ ಸದೃಶಾ ಯುವಕಾ ಗುರುನಿಂದಕಾಃ ॥೧೧॥

---

ಕಲಿಯುಗದಲ್ಲಿ ಜನರು ಅಜ್ಞರಾಗಿ ತಮ್ಮನ್ನು ಪಂಡಿತರೆಂದೂ ಧಾರ್ಮಿಕರೆಂದೂ ತಿಳಿದಿರುವವರೂ ಮತ್ತು ದುಷ್ಕೃತ್ಯಗಳನ್ನು ಮಾಡುವವರೂ ಆಗಿ ಯಾವಾಗಲೂ ಅಧರ್ಮಾಸಕ್ತರಾಗಿರುತ್ತಾರೆ. ॥೮॥

ಚಂಡಾಲರು ತಮ್ಮ ನಿಯಮಿತಕರ್ಮಾನುಷ್ಠಾನದಲ್ಲಿ ಆಸಕ್ತರಾಗಿರುವುದಾದರೆ ಇಂತಹ ಬ್ರಾಹ್ಮಣರಿಗಿಂತಲೂ ಉತ್ತಮರೆನಿಸುತ್ತಾರೆ. ಬ್ರಾಹ್ಮಣರಾದರೋ ಬ್ರಾಹ್ಮಣತ್ವಸೂಚಕವಾದ ವರ್ಣಾಶ್ರಮಧರ್ಮಗಳನ್ನು ತೊರೆದು ಕಾರ್ಪಣ್ಯದಿಂದ ಯುಕ್ತವಾದ ಮನಸ್ಸುಳ್ಳವರಾಗಿ ಬ್ರಾಹ್ಮಣ್ಯವನ್ನೇ ಕಳೆದುಕೊಳ್ಳುವವರಾಗುತ್ತಾರೆ. ಆದುದರಿಂದ ಕಲಿಯುಗದಲ್ಲಿ ಧರ್ಮತ್ಯಾಗಿಗಳಾದ ಬ್ರಾಹ್ಮಣರಿಗಿಂತಲೂ ಧರ್ಮಾಸಕ್ತರಾದ ಚಂಡಾಲರೇ ಶ್ರೇಷ್ಠರಾಗಿರುತ್ತಾರೆ. ॥೯॥

ಈ ಕಲಿಯುಗದಲ್ಲಿ ಮನುಷ್ಯರು ಉದರಪೂರಣದಲ್ಲಿಯೂ ಮತ್ತು ಮೈಥುನದಲ್ಲಿಯೂ ಆಸಕ್ತರಾಗಿ ಧರ್ಮಮಾರ್ಗವನ್ನು ಬಿಟ್ಟು ನಿಷಿದ್ಧವಾದ ಆಹಾರವನ್ನು ಭಕ್ಷಿಸಿದವರಾಗಿ ಧರ್ಮಚ್ಯುತರಾಗಿಯೂ, ಇಂದ್ರಿಯಗಳಿಗೆ ಅಧೀನರಾಗಿ ಸ್ತ್ರೀಯರಿಗೆ ಆಟದ ಬೊಂಬೆಗಳಾಗಿರುತ್ತಾರೆ. ದೈವವಿತ್ತದಿಂದ, ದೇವರ ಸ್ವತ್ತುಗಳ ಆದಾಯದಿಂದ, ಸುಖವಾದ ವಿಲಾಸಮಂದಿರವನ್ನು ನಿರ್ಮಿಸುವರು. ಚಿಕ್ಕಮಕ್ಕಳು ಮುದುಕರಿಗೆ ಸದೃಶರಾಗಿಯೂ, ಯುವಕರು ಗುರುಗಳನ್ನು ನಿಂದಿಸುವವರೂ ಆಗಿರುತ್ತಾರೆ. ವಿದ್ಯೆಗೆ ಧನಾರ್ಜನೆಯೇ ಫಲವಾಗಿರುತ್ತದೆ. ಆತ್ಮಜ್ಞಾನವು ದೂರೀಕರಿಸಲ್ಪಡುತ್ತದೆ.

ವಿದ್ಯಾ ಚಾರ್ಥಕರೀ ಜಾತಾ ಜ್ಞಾನಂ ದೂರತರಂ ಗತಂ ।
ಪುಸ್ತಕಸ್ಥಾ ಭವೇದ್ವಿದ್ಯಾ ಲಕ್ಷ್ಮೀಶ್ಚಾದೃಶ್ಯತಾಂ ಗತಾ ॥೧೨॥

ಸರಸ್ವತೀ ನಾಶಗತಾ ಧರ್ಮೋಽಧರ್ಮಗತಿಂ ಗತಃ ।
ಸತ್ಯಂ ನಿರಾಶ್ರಯಂ ಧರ್ಮ ಶ್ಚಾನಾಥ ಇವ ದೃಶ್ಯತೇ ॥೧೩॥

ದಯಾ ಚ ವಿಧವಾರೂಪಾ ಶಾಂತಿಃ ಪತಿಸುತೈರ್ವಿನಾ ।
ಸ್ಥಾನಭ್ರಷ್ಟೋ ಭವೇನ್ನ್ಯಾಯಃ ಸಾರಲ್ಯಂ ಮೃತ್ಯುನಿಶ್ಚಯಮ್॥೧೪॥

ರೋಗಶೋಕಪರೀತಾಪ ಬಂಧನವ್ಯಸನಾನಿ ಚ ।
ಪ್ರಬಲಾನಿ ಭವಂತ್ಯತ್ರ ನೃಣಾಂ ಶಕ್ತಿರ್ವಿನಶ್ಯತಿ ॥೧೫॥

ವಸುಂಧರಾ ಪಾಪಪೂರ್ಣಾ ಪ್ರಯಾತೀವ ರಸಾತಲಂ ।
ಸರ್ವೇ ಪಾಪರತಾಶ್ಚೇಷ್ಟಾ ದೂರಂ ಸಿದ್ಧಿಕರೀ ಗತಾ ॥೧೬॥

---

ವಿದ್ಯೆಯು ಪುಸ್ತಕಗತವಾಗಿರುತ್ತದೆ. ಧನಲಕ್ಷ್ಮಿಯು ಅದೃಶ್ಯಳಾಗುತ್ತಾಳೆ. ವಿದ್ಯಾಭಿಮಾನಿನಿಯಾದ ಸರಸ್ವತಿಯು ಸ್ವರ್ಗವನ್ನು ಸೇರುತ್ತಾಳೆ. (ಎಂದರೆ ಈ ಭೂಲೋಕದಲ್ಲಿ ಇರುವುದಿಲ್ಲವೆಂದರ್ಥವು) ಧರ್ಮವು ಅಧರ್ಮವಾಗಿ ಪರಿಣಮಿಸುತ್ತದೆ. ಹೀಗೆ ಧರ್ಮಕ್ಕೆ ಆಶ್ರಯವೇ ಸಿಕ್ಕದೆ ಅದು ಅನಾಥವಾಗಿ (ರಕ್ಷಕರಿಲ್ಲದೆ) ಇರುತ್ತದೆ. ||೧೦-೧೧-೧೨-೧೩||

ದಯೆಯು ಆಶ್ರಯವು ಸಿಕ್ಕದೆ ವಿಧವಾಸ್ತ್ರೀಯಂತೆಯೂ, ಶಾಂತಿಯು ಪತಿಸುತರಿಂದ ವಿಹೀನಳಾದ ಸ್ತ್ರೀಯಂತೆಯೂ, ಇರುತ್ತದೆ. ನ್ಯಾಯಕ್ಕೆ ಸ್ಥಾನವೇ ಇರುವುದಿಲ್ಲ. ಸರಳಸ್ವಭಾವವೇ ಮರಣಕ್ಕೆ ಕಾರಣವಾಗುತ್ತದೆ. ವ್ಯಾಧಿ, ಶೋಕ, ಸಂತಾಪ, ಬಂಧನ ಮತ್ತು ವ್ಯಸನಗಳು ಈ ಕಲಿಯುಗದಲ್ಲಿ ಪ್ರಬಲವಾಗುತ್ತವೆ. ಭೂಮಿಯು ಪಾಪಿಷ್ಠರಿಂದ ಯುಕ್ತವಾಗಿ ರಸಾತಲವನ್ನೈದುವುದೋ ಎಂಬಂತೆ ಹೀನಸ್ಥಿತಿಯನ್ನು ಪಡೆದು ಇರುತ್ತದೆ. ಸಕಲರೂ, ಪಾಪಕರ್ಮಗಳಲ್ಲಿ ಆಸಕ್ತರಾಗಿರುತ್ತಾರೆ. ಸಿದ್ಧಿಯನ್ನುಂಟುಮಾಡುವ ಯಾವ ಧರ್ಮಕಾರ್ಯವೂ ಸಾಮಾನ್ಯವಾಗಿ ಕಲಿಯುಗದಲ್ಲಿ ಆಚರಿಸಲ್ಪಡುವುದಿಲ್ಲ. ||೧೪-೧೫-೧೬||

ಅತೋ ಮೂಢಾ ನಾಸ್ತಿಕಾಶ್ಚ ಅದೃಷ್ಟವಾದಿನೋ ಜನಾಃ ।
ದಿನೇದಿನೇ ಗತಾ ವೃದ್ಧಿಂ ಪೌರುಷಂ ಪ್ರಲಯಂ ಗತಂ ॥೧೭॥

ಆಲಸ್ಯಂ ದುಃಖದಂ ನೄಣಾಂ ಸಮಾಯಾತಿ ಭಯಂಕರಂ ।
ಅಜ್ಞಾನಾವೃತಮೋಹಾಂಧಾ ಜನಾ ವೃದ್ಧಿಂ ಗತಾಃ ಕಲೌ ॥೧೮॥

ಉಪದೇಶೇ ಸ್ತ್ರಿಯಃ ಶಕ್ತಾಃ ಶ್ಯಾಲಿಕಾ ಗುರುರೂಪಿಣಃ ।
ಸ್ತ್ರೀಬಾಂಧವಾ ಗೃಹೇ ದೇವಾಃ ಪ್ರಭವೋ ಭೃತ್ಯದುಃಖದಾಃ ॥೧೯॥

ಭೃತ್ಯಾಶ್ಚ ಪ್ರಭುಸಮ್ಮಾನಂ ನ ಕುರ್ವಂತಿ ಕಲೌ ಸದಾ ।
ವೃಕ್ಷಾ ಯಥಾ ಗುರುಫಲಾಃ ಪುತ್ರಾಶ್ಚ ಗುರುತರ್ಜಕಾಃ ॥೨೦॥

ಗೃಹಾಃ ಸುಖವಿಹೀನಾ ಹಿ ಸ್ತ್ರಿಯಶ್ಚ ಕಲಹಪ್ರಿಯಾಃ ।
ಸ್ತ್ರೀಣಾಂ ಸಮಾದರೋ ನಾಸ್ತಿ ನೈವ ಶಿಕ್ಷಾ ತಥಾ ಸ್ಥಿತಿಃ ॥೨೧॥

---

ಆದುದರಿಂದ ಅಜ್ಞರಾದ ಜನರು ಈಶ್ವರನೇ ಇಲ್ಲವೆಂದು ತಿಳಿದವರಾಗಿ, ಅದೃಷ್ಟವಾದ ಸ್ವರ್ಗಲೋಕ ಪಿತೃಲೋಕಾದಿಗಳಲ್ಲಿ ಶ್ರದ್ಧೆಯನ್ನಿಡದೆ ಅವುಗಳು ಇವೆ ಎಂಬ ವಿಷಯದಲ್ಲಿ ಸಂದಿಗ್ಧರಾಗಿ ವಾದವನ್ನು ಮಾಡುವವರಾಗುತ್ತಾರೆ. ಈ ರೀತಿಯ ಪ್ರವೃತ್ತಿಯುಳ್ಳ ಜನರೇ ಕಲಿಯುಗದಲ್ಲಿ ದಿನೇದಿನೇ ಅಭಿವೃದ್ಧಿಸ್ಥಿತಿಯನ್ನು ಹೊಂದುತ್ತಾರೆ. ಪೌರುಷವು ನಷ್ಟವಾಗುತ್ತದೆ. ದುಃಖಕಾರಕ ಆಲಸ್ಯವು ಜನಗಳಲ್ಲಿ ಭಯಂಕರ ರೂಪದಿಂದ ಉದ್ಭವಿಸುತ್ತದೆ. ಅಜ್ಞಾನದಿಂದ ಆವರಿಸಲ್ಪಟ್ಟು, ಮೋಹಾಂಧರಾದ ಜನರು ಕಲಿಯುಗದಲ್ಲಿ ವೃದ್ಧಿಯನ್ನು ಹೊಂದುತ್ತಾರೆ. ಸ್ತ್ರೀಯರು ಉಪದೇಶ ಮಾಡುವುದರಲ್ಲಿ ಸಮರ್ಥರಾಗುತ್ತಾರೆ. ಮತ್ತು ಶ್ಯಾಲಕಾಃ ಎಂದರೆ,ಭಾವಮೈದಂದಿರು ಗುರುಗಳಾಗುತ್ತಾರೆ. ಸ್ತ್ರೀಯರಿಗೆ ಇಷ್ಟಮಿತ್ರರಾದವರೇ ಮನೆಯಲ್ಲಿ ದೇವತೆಗಳಾಗಿರುತ್ತಾರೆ. ಯಜಮಾನನು ಭೃತ್ಯನಿಗೆ ಕಷ್ಟಗಳನ್ನುಂಟುಮಾಡುತ್ತಾನೆ. ಭೃತ್ಯರೂ ಸಹ ಪ್ರಭುಗಳನ್ನು ಸಮ್ಮಾನಮಾಡುವುದಿಲ್ಲ. ಮತ್ತು ಅವನಲ್ಲಿ ಅವಿನೀತರಾಗುತ್ತಾರೆ. ವೃಕ್ಷಗಳು ನಿಃಸ್ಸಾರವಾದ ಫಲಗಳನ್ನು ಕೊಡತಕ್ಕವುಗಳಾಗುತ್ತವೆ. ಪುತ್ರರು ಗುರುಗಳನ್ನು ನಿಂದಿಸುವವರಾಗುತ್ತಾರೆ. ॥೧೭-೧೮-೧೯-೨೦॥

ಮನೆಗಳಲ್ಲಿ ಸುಖವು ನೆಲೆಸಿರುವುದಿಲ್ಲ. ಸ್ತ್ರೀಯರು ಕಲಹದಲ್ಲಿ ಪ್ರೀತಿಯುಳ್ಳವರಾಗಿರುತ್ತಾರೆ. ಕಲಿಯುಗದಲ್ಲಿ ಸ್ತ್ರೀಯರಿಗೆ ಪೂಜ್ಯತೆಯೂ ಮತ್ತು ಗೃಹ

**ಪುರುಷಾಃ ಕುಕರ್ಮನಿರತಾಃ ಶಾಸ್ತ್ರಾಚಾರವಿವರ್ಜಿತಾಃ ।**
**ಕಾಪಟ್ಯಂ ಪ್ರಣಯೇ ಸತ್ಯೇಽನಾದರಂ ಹಿ ಸಸಂಶಯಂ ॥೨೨॥**

**ವ್ಯಾಘಾತೋ ಲೋಕಯಾತ್ರಾಯಾಃ ಸರ್ವತ್ರೈವ ವಿಶೃಂಖಲಾ ।**
**ನ ಕಿಂಚಿದಪಿ ಪುಣ್ಯಾಯ ನ ಧರ್ಮಾಯ ಯಥಾಯಥಂ ॥೨೩॥**

**ವೃತ್ತಿರ್ಲೋಕಾನಾಂ ಯಶಸ ಆಚಾರ್ಯಾ ಜ್ಞಾನವರ್ಜಿತಾಃ ।**
**ಅರ್ಥೋ ವಾ ಪರಮಾರ್ಥೋ ವಾ ಪುರುಷಾರ್ಥೋ ನ ದೃಶ್ಯತೇ ॥೨೪॥**

**ಉಪದೇಶೇ ಚ ಯಸ್ಮಿಂಸ್ತು ನೋಪದೇಶಃ ಸ ವೈ ಭವೇತ್ ।**
**ಅಸ್ವರ್ಗಫಲಕಾನಿ ಕಿಂ ಅನುಷ್ಠಾನಾನಿ ಕರ್ಹಿಚಿತ್ ॥೨೫॥**

---

ಕೃತ್ಯಾದಿ ಶಿಕ್ಷಣವೂ ಇರುವುದಿಲ್ಲ. ಪುರುಷರು ಪರದಾರಗಮನಾದಿ ದುರ್ಮಾರ್ಗ ಪ್ರವರ್ತಕರಾಗಿ ಶಾಸ್ತ್ರೀಯವಾದ ಆಚಾರದಿಂದ ಬಾಹಿರರಾಗುತ್ತಾರೆ. ಪ್ರೀತಿ ಮತ್ತು ಸತ್ಯದಲ್ಲಿ ಕಪಟಭಾವನೆಯೂ ಧರ್ಮಾಚರಣೆಯಲ್ಲಿ ಸಂದೇಹಪೂರ್ವಕವಾದ ಅನಾದರ ಭಾವನೆಯೂ ಇರುತ್ತದೆ. ಅತಿಥಿಸತ್ಕಾರವೇ ಮೊದಲಾದ ವೈದಿಕವ್ಯವಹಾರಗಳೂ ನಷ್ಟವಾಗುತ್ತವೆ. ಐಹಿಕವಾದ ಅಭ್ಯುದಯ ಮುಂತಾದ ಫಲಕ್ಕಾಗಿ ಯಾವ ಧರ್ಮ ಕಾರ್ಯವನ್ನು ಮಾಡಲು ತೊಡಗಿದರೂ ಅದಕ್ಕೂ ಅದರ ನಾಲ್ಕೂಕಡೆಗಳಿಂದ ವಿಘ್ನ ಗಳು ಉಂಟಾಗುತ್ತವೆ. ಉತ್ತಮಪುರುಷಾರ್ಥಕ್ಕೆ ಬೇಕಾದ ಪುಣ್ಯಸಂಪಾದನೆ ಗೋಸ್ಕರ ಯಾವ ಧರ್ಮಕೆಲಸವೂ ಆಚರಿಸಲ್ಪಡುವುದಿಲ್ಲ. ಕಲಿಯುಗದಲ್ಲಿ ಜನಗಳ ವೃತ್ತಿಗಳು ಯಶಃಸಂಪಾದನೆಗೋಸ್ಕರ ಅವಲಂಬಿಸಲ್ಪಡುತ್ತವೆ. ಉಪದೇಶಕರು ಪರತತ್ವದ ವಿಚಾರದಲ್ಲಿ ಜ್ಞಾನಹೀನರಾಗಿರುತ್ತಾರೆ. ಮೇಲಾದ ಯಾವ ಪುರುಷಾರ್ಥ ಗಳಲ್ಲಿ ಆದರವೂ ಇರುವುದಿಲ್ಲ. ಯಾವ ವಿಷಯದಲ್ಲಿ ಉಪದೇಶವನ್ನು ಮಾಡಲಾಗು ವುದೋ ಅದು ಉತ್ತಮವಾದ ಪರಮಪುರುಷಾರ್ಥಕ್ಕೆ ಸಾಧನವಾಗಬಲ್ಲ ಉಪದೇಶ ದಂತಿರುವುದಿಲ್ಲ. ॥೨೧-೨೨-೨೩-೨೪॥

ಭೂಲೋಕದಲ್ಲಿ ವೇದಬೋಧಿತವಾದ ಯಜ್ಞಾದಿಕರ್ಮಗಳ ಅನುಷ್ಠಾನ ದಿಂದ ಸ್ವರ್ಗಲೋಕವು ಲಭಿಸುವುದಿಲ್ಲವೆ ? (ಲಭಿಸಿಯೇ ಲಭಿಸುವುದು ಎಂದರ್ಥವು) ಮತ್ತು ಭೂಲೋಕದಲ್ಲಿ ಶಾಸ್ತ್ರಾಧ್ಯಯನವು ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧವಾದ ಪುರುಷಾರ್ಥಗಳನ್ನು ಉಂಟುಮಾಡುವುದಿಲ್ಲವೆ ? (ಉಂಟು ಮಾಡಿಯೇ ಮಾಡುತ್ತವೆ) ಆದರೆ ಕಲಿಯುಗದಲ್ಲಿಯಾದರೋ ಪುರುಷಾರ್ಥ

ಯಚ್ಛಾಸ್ತ್ರಂ ಹಿ ಭವೇನ್ನೈವ ಚತುರ್ವರ್ಗಪ್ರದಂ ಭುವಿ ।
ನ ತಚ್ಛಾಸ್ತ್ರಂ ಕಲೌ ಕಿಂತು ತತ್ತಚ್ಛಾಸ್ತ್ರತ್ವಮಾಗತಂ ॥೨೬॥

ಸುವರ್ಣಾದಿ ಪರಿತ್ಯಜ್ಯ ಪಾಂಸೂನಾಮಾದರಃ ಕೃತಃ ।
ಅಮೃತಂ ಹಿ ಪರಿತ್ಯಜ್ಯ ಕೃತಂ ವಿಷನಿಷೇವಣಂ ॥೨೭॥

ರತ್ನಬುದ್ಧ್ಯಾ ಭಸ್ಮಮುಷ್ಟ್ಯಾಂ ಕರೋತಿ ಸಂಚಯಂ ಜನಃ ।
ತೀರ್ಥಸ್ನಾನಂ ಪರಿತ್ಯಜ್ಯ ಕದರ್ಯಸ್ಥಾನಸೇವನಂ ॥೨೮॥

ಈಶಪೂಜಾಂ ಪರಿತ್ಯಜ್ಯ ಮಾನವಾನಾಮುಪಾಸನಮ್ ।
ನಾಸ್ತಿ ಯಜ್ಞೋ ನ ವಾ ದಾನಂ ನ ಮನೋ ದೇವತಾರ್ಚನಮ್॥೨೯॥

ಸುಖಲಿಪ್ಸಾ ಯಶೋಲಿಪ್ಸಾ ಧನಲಿಪ್ಸಾ ಪದೇ ಪದೇ ।
ಕಲೇರಸ್ಯ ಸಮಾರಂಭ ಈದೃಶಶ್ಚೇದ್ವಿಪರ್ಯಯಃ ॥೩೦॥

---

ಪ್ರದವಾದ ಶಾಸ್ತ್ರಗಳು ನಾಮ ಮಾತ್ರದಿಂದಿರುವುವೇ ಹೊರತು ಅವುಗಳನ್ನು ಅಧ್ಯಯನ ಮಾಡುವವನು ಇರುವುದಿಲ್ಲ. ಸುವರ್ಣವನ್ನು ಪರಿತ್ಯಜಿಸಿ ಧೂಳಿಯು ಸ್ವೀಕರಿಸಲ್ಪಡುತ್ತದೆ. ಅಮೃತವನ್ನು ಬಿಟ್ಟು ವಿಷಪ್ರಾಶನವು ಮಾಡಲ್ಪಟ್ಟಂತಾಗುತ್ತದೆ. ಕಲಿಯುಗದಲ್ಲಿ ಬೂದಿಯನ್ನು ರತ್ನವೆಂಬ ಬುದ್ಧಿಯಿಂದ ಸಂಗ್ರಹಿಸುತ್ತಾರೆ. ತೀರ್ಥ ಸ್ಥಳಗಳನ್ನು ತ್ಯಜಿಸಿ ಕೆಡಕಾದ ಸ್ಥಳಗಳನ್ನು ಸೇವಿಸುತ್ತಾರೆ. ಈಶ್ವರನ ಅರ್ಚನೆಯನ್ನು ತ್ಯಜಿಸಿ ಮಾನವನನ್ನೇ ಪೂಜಿಸುತ್ತಾರೆ. ಈ ಕಲಿಯುಗದಲ್ಲಿ ಯಜ್ಞವಾಗಲೀ ಯಾಗವಾಗಲೀ ದಾನವಾಗಲೀ ದೇವತಾರ್ಚನೆಯಾಗಲೀ ಯಾವುದೂ ಸರಿಯಾಗಿ ಇರುವುದಿಲ್ಲ. ॥೨೫-೨೬-೨೭-೨೮-೨೯॥

ಕಲಿಯುಗದಲ್ಲಿ ಹೆಜ್ಜೆ ಹೆಜ್ಜೆಗೂ ಸುಖ ಯಶಸ್ಸು ಮುಂತಾದವುಗಳಲ್ಲಿ ಆಶೆಯು ಉಂಟಾಗುತ್ತದೆ. ಇದು ಕಲಿಯುಗದ ಪ್ರಭಾವವಾಗಿರುತ್ತದೆ. ಹೀಗೆ ಯುಗಧರ್ಮಗಳು ಕಲಿಯುಗದಲ್ಲಿ ವಿಪರೀತವಾಗಿ ಪರಿಣಮಿಸಿದರೆ ಅವುಗಳನ್ನು ಆಚರಿಸಿದ ಮನುಷ್ಯರ ಗತಿಯು ಹೇಗೆ ಪರಿಣಮಿಸುವುದೆಂಬುದರ ತತ್ವವನ್ನು ಆ ಭಗವಂತನೊಬ್ಬನೇ ತಿಳಿದುಕೊಂಡಿರುವನು. ॥೩೦॥

ಕಾಲೇ ಕಿಂ ವಾ ಭವಿಷ್ಯಂತಿ ಹರಿರ್ಜಾನಾತಿ ತತ್ವತಃ ।
ಶ್ರುತಂ ಗುರುಮುಖಾತ್ಸೂತ ಭವಿಷ್ಯಂತಿ ಕಲಾವಿಹ ॥೩೧॥

ಇಂದ್ರಿಯಾದಿ ಸಮಾಸಕ್ತಾ ಮಾನವಾಃ ಪಶುಭಿಃ ಸಮಾಃ ।
ತೇಜಸ್ವಿನ ಸ್ತೇಜಃ ಶೂನ್ಯಾ ನರೋ ಲುಪ್ತಾಃ ಪ್ರಭ(ವ)ಂಜನಾ(ಕಾ)ಃ ॥೩೨॥

ಭಕ್ಷ್ಯಂತಿ ಲೋಕಾನಾದಿತ್ಯಾಃ ಪ್ರಾಣಿಹೀನಾ ವಸುಂಧರಾ ।
ಮಹಾಮಾರೀ ಧರಣ್ಯಾಂ ಹಿ ಭವಿಷ್ಯತಿ ಕ್ಷಯಂಕರೀ ॥೩೩॥

ದೃಷ್ಟ್ವಾ ಶ್ರುತ್ವಾ ಜಾಯತೇ ಚ ಮನಸಿ ವಿಷಮಾ ವ್ಯಥಾ ।
ಮೋಕ್ಷಕರ್ತ್ರೀಂ ಪರಪ್ರೀತಿಂ ಕುತ್ರಾಪಿ ತು ನ ಲಕ್ಷಯೇ ॥೩೪॥

ಕಥಂ ವಾಽಸ್ಯ ನೃಲೋಕಸ್ಯ ಭವಿಷ್ಯತಿ ಶುಭಂ ಪರಮ್ ।
ತದುಪಾಯಂ ಕಲೌ ಚಾಸ್ಮಿನ್ಬ್ರೂಹಿ ತತ್ವವಿದಾಂ ವರ ॥೩೫॥

ಸೂತ ಜಾನಾತಿ ಭದ್ರಂ ತೇ ತ್ವಂ ಹಿ ದ್ವೈಪಾಯನಪ್ರಿಯಃ ।
ವದಂತಿ ಪಂಡಿತಾಃ ಸರ್ವೇ ಧರ್ಮತತ್ವಂ ಸುಗೋಪಿತಂ ॥೩೬॥

---

ಓ ಸೂತಮಹರ್ಷಿಯೇ, ಈ ಕಲಿಯುಗದಲ್ಲಿ ಮನುಷ್ಯರು ಇಂದ್ರಿಯ ಸುಖಗಳಲ್ಲಿ ಲೋಲುಪರಾಗಿ ಪಶುಗಳಿಗೆ ಸದೃಶರಾಗುವರೆಂದು ಪೂರ್ವೀಕರಾದ ಗುರುಗಳಿಂದ ಕೇಳಿರುವೆನು. ॥೩೧॥

ಈ ಕಲಿಯುಗದಲ್ಲಿ ತೇಜಸ್ವಿಗಳಾದವರು ನಿಸ್ತೇಜಸ್ಕರಾಗಿಯೂ, ವಂಚಕರಾಗಿಯೂ ಆಗುವರು. ದ್ವಾದಶಾದಿತ್ಯರು ಲೋಕಗಳನ್ನು ಭಕ್ಷಿಸುವರು. ಇದರಿಂದ ಭೂಮಿಯು ಪ್ರಾಣಿಗಳಿಂದ ರಹಿತವಾಗುವುದು. ಲೋಕಕ್ಷಯವನ್ನುಂಟುಮಾಡುವ ಮಹಾಮಾರಿ ಎಂಬ ದೈವೀಶಕ್ತಿಯು ಭೂಮಿಯಲ್ಲಿ ಆವಿರ್ಭವಿಸುತ್ತದೆ. ॥೩೨-೩೩॥

ಇದನ್ನು ನೋಡಿ ಮತ್ತು ಕೇಳಿ ಮನಸ್ಸಿನಲ್ಲಿ ಅಸಹ್ಯವಾದ ವ್ಯಥೆಯು ಉಂಟಾಗುತ್ತದೆ. ಈ ಕಲಿಯುಗದಲ್ಲಿ ಯಾರಲ್ಲಿಯೂ ಮೋಕ್ಷಸಾಧನವಾದ ಭಗವದ್ಭಕ್ತಿಯು ಇರುವುದಿಲ್ಲ. ಓ ತತ್ವಜ್ಞಾನಿಗಳಲ್ಲಿ ಶ್ರೇಷ್ಠನಾದ ಸೂತಮಹರ್ಷಿಯೇ, ಈ ಕಲಿಯುಗದ ಕಲ್ಯಾಣವು ಹೇಗೆ ಆಗುವುದು ? ಎಂಬ ಉಪಾಯವನ್ನು ನೀನು ನನಗೆ ಹೇಳುವವನಾಗು. ॥೩೪-೩೫॥

ಓ ಸೂತಮಹರ್ಷಿಯೇ, ನೀನು ಲೋಕಕಲ್ಯಾಣಕಾರಕವಾದ ಉಪಾಯ

ವ್ಯಾಸಾದವಗತಂ ಸಮ್ಯಕ್ತ್ವಂ ಹಿ ಧರ್ಮವಿದಾಂ ವರಃ ।
ತ್ವಯಾ ಖಲು ಪುರಾಣಾನಿ ಸೇತಿಹಾಸಾನಿ ಚಾನಘ ॥೩೭॥

ಆಖ್ಯಾತಾನ್ಯಪ್ಯಧೀತಾನಿ ಧರ್ಮಶಾಸ್ತ್ರಾಣಿ ಯಾನ್ಯುತ ।
ಯಾನಿ ವೇದವಿದಾಂ ಶ್ರೇಷ್ಠೋ ಭಗವಾನ್ ಬಾದರಾಯಣಃ ॥೩೮॥

ಅನ್ಯೇ ಚ ಮುನಯಃ ಸೂತ ಪರಾವರ ವಿದೋ ವಿದುಃ ।
ತೇಭ್ಯಃ ಸಾರಂ ಸಮುದ್ಧೃತ್ಯ ಗೋಪೀಕಾಂತ ಕಥಾಶ್ರಯಮ್ ॥೩೯॥

ಬ್ರೂಹಿ ಭದ್ರಾಯ ಭೂತಾನಾಂ ಯೇ ನಾತ್ಮಾ ಸುಪ್ರಸೀದತಿ ।
ಕಥಾಸು ತತ್ಕಥಾ ಶ್ರೇಷ್ಠಾ ಯಚ್ಛ್ರುತ್ವಾ ನ ಹ್ಯಲಂ ಮತಿಃ ।
ಯಚ್ಛೃಣ್ವತಾಂ ರಸಜ್ಞಾನಂ ಭಕ್ತಿರ್ಮುಕ್ತಿಃ ಕರಸ್ಥಿತಾ ॥೪೦॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ
ಕಥಾರಂಭೋ ನಾಮ ತೃತೀಯೋಽಧ್ಯಾಯಃ.

---

ವನ್ನು ತಿಳಿದುಕೊಂಡಿರುವವನಾಗಿರುತ್ತೀಯೆ. ನಿನಗೆ ಮಂಗಳವಾಗಲಿ. ನೀನು ವ್ಯಾಸಮಹರ್ಷಿಯ ಪ್ರೀತಿಗೆ ಪಾತ್ರನಾಗಿರುವೆ. ಆದುದರಿಂದಲೇ ನೀನು ಆ ವ್ಯಾಸ ಮಹರ್ಷಿಯ ದೆಸೆಯಿಂದ ರಹಸ್ಯವಾದ ಧರ್ಮತತ್ವವನ್ನು ತಿಳಿದುಕೊಂಡಿರುವೆ ಯೆಂದು ಜ್ಞಾನಿಗಳು ಹೇಳುತ್ತಾರೆ. ॥೩೬॥

ಓ ವಿಶುದ್ಧಾಂತಃಕರಣನಾದ ಸೂತನೇ, ವೇದವಿತ್ತುಗಳಲ್ಲಿ ಶ್ರೇಷ್ಠನಾದ ವ್ಯಾಸಮುನಿಯು ಯಾವ ಇತಿಹಾಸಗಳನ್ನೂ, ಪುರಾಣಗಳನ್ನೂ ಮತ್ತು ಧರ್ಮ ಶಾಸ್ತ್ರಗಳನ್ನೂ ತಿಳಿದುಕೊಂಡಿರುವನೋ ಅವುಗಳನ್ನು ನೀನು ಅನೇಕಬಾರಿ ಅಧ್ಯಯನ ಮಾಡಿರುವೆ ಮತ್ತು ಪ್ರವಚನವನ್ನೂ ಸಹ ಮಾಡಿಸಿರುವೆಯೆಂದು ಇತರ ತತ್ವಜ್ಞಾನ ವುಳ್ಳ ಅನೇಕ ಋಷಿಗಳು ಹೇಳುತ್ತಾರೆ. ನೀನು ಅಧ್ಯಯನ ಮಾಡಿರುವ ಆ ಪುರಾಣ ಗಳಿಂದ ಸಾರಭೂತವಾದ, ಗೋಪೀವಲ್ಲಭನಾದ ಶ್ರೀಕೃಷ್ಣನ ಕಥೆಯನ್ನು ಸಂಗ್ರಹಿಸಿ ಲೋಕಕಲ್ಯಾಣಕ್ಕೋಸ್ಕರ ಹೇಳುವವನಾಗು. ಅದರಿಂದ ಆತ್ಮನು ಪ್ರಸನ್ನನಾಗು ನಾಗುವನು. ॥೩೭-೩೮-೩೯॥

ಏಕೆಂದರೆ, ಯಾವ ಕಥೆಯನ್ನು ಶ್ರವಣಮಾಡುವುದರಿಂದ ಅದರ ರಸವನ್ನು ಆಸ್ವಾದಿಸಿದ ಶ್ರೋತೃಗಳಿಗೆ ಭಕ್ತಿಯೂ ಮತ್ತು ಮುಕ್ತಿಯೂ ಕರಗತವಾಗುವುದೋ

ಮತ್ತು ಯಾವ ಕಥೆಯನ್ನು ಶ್ರವಣಮಾಡುವುದರಿಂದ ಉತ್ಸಾಹವು ಕ್ಷೀಣವಾಗುವುದಿಲ್ಲವೋ ಅಂತಹ ಕಥೆಯೇ ಶ್ರೇಷ್ಠವಾಗಿರುವುದು. ಆದುದರಿಂದ ಆ ಕಥೆಯನ್ನು ನೀನು ನಮಗೆ ಹೇಳುವವನಾಗು. ॥೪೦॥

ಇಲ್ಲಿಗೆ ಸಕಲಪುರಾಣಗಳ ಸಾರಭೂತವಾದ ಆದಿಪುರಾಣದಲ್ಲಿ ಕಥಾರಂಭವೆಂಬ ಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಚತುರ್ಥೋಽಧ್ಯಾಯಃ ||

## ನಾಲ್ಕನೆಯ ಅಧ್ಯಾಯವು

**ನಿವೃತ್ತೇ ಶೌನಕೇ ಇತ್ಥಂ ದಾಲಭ್ಯೋ ಮುನಿಸತ್ತಮಃ ।**
**ಪ್ರತಿಪೂಜ್ಯ ವಚಸ್ತಸ್ಯ ಪ್ರವಕ್ತು ಮುಪಚಕ್ರಮೇ ॥೧॥**

|| ದಾಲಭ್ಯ ಉವಾಚ ||

**ಸೂತ ಸೂತ ಮಹಾಭಾಗ ಪರಿತುಷ್ಯತಿ ಯಯಾ ಮನಃ ।**
**ಉನ್ನತಿಂ ಚ ಭಜೇತ್ಸಮ್ಯಗಾತ್ಮಾ ಬುದ್ಧಿಸ್ತಥೈವ ಚ ॥೨॥**

**ಸತ್ಕಥಾ ಚೋಚ್ಯತೇ ಸೈವ ತಯಾ ಶೋಕೋ ವಿನಶ್ಯತಿ ।**
**ಔತ್ಸುಕ್ಯಂ ಜಾಯತೇ ತಸ್ಮಾದುಕ್ತ್ವಾ ತನ್ಮೇ ನಿವಾರಯ ॥೩॥**

---

ಶೌನಕಮಹರ್ಷಿಯು ಪೂರ್ವೋಕ್ತಪ್ರಕಾರವಾಗಿ ಹೇಳಿ ವಿರತನಾಗಲು, ದಾಲಭ್ಯನೆಂಬ ಮುನಿಶ್ರೇಷ್ಠನು ಶೌನಕನ ವಚನವನ್ನು ಅನುಮೋದಿಸಿ, ಮುಂದೆ ಹೇಳುವಂತೆ ಹೇಳಲು ಉಪಕ್ರಮಿಸಿದನು. ||೧||

ದಾಲಭ್ಯನು ಹೇಳಿದನು—ಓ ಪೂಜ್ಯನಾದ ಸೂತಮಹರ್ಷಿಯೇ, ಯಾವ ಸತ್ಕಥೆಯಿಂದ ಮನಸ್ಸು ಸಂತುಷ್ಟವಾಗುವುದೋ, ಆತ್ಮೋನ್ನತಿಯೂ ಮತ್ತು ಜ್ಞಾನೋನ್ನತಿಯೂ ಆಗುವುದೋ, ಅಂತಹ ಸತ್ಕಥೆಯನ್ನು ಹೇಳುವುದರಿಂದಲೇ ಶೋಕವು ನಿವಾರಿಸಲ್ಪಡುತ್ತದೆ. ಆ ಕಥೆಯನ್ನು ಶ್ರವಣಮಾಡುವುದರಲ್ಲಿ ನನಗೆ ಉತ್ಸಾಹವು ಉಂಟಾಗಿರುತ್ತದೆ. ಆದುದರಿಂದ ನೀನು ನಮಗೆ ಆ ಕಥೆಯನ್ನು ಹೇಳುವವನಾಗು. ||೨-೩||

|| ಗೃತ್ಸಪಾ(ಮ)ದ ಉವಾಚ ||

ದಾನೇನೋಪಾಸನೇನೈವ ಶಾಸ್ತ್ರಸ್ಯಾಧ್ಯಯನೇನ ಚ ।
ನರಾಣಾಂ ಸಫಲಂ ದಿನಂ ಶೇಷಂ ಚ ದ್ವಿವಿಧಂ ಭವೇತ್ ॥೪॥

ಗುರೋಃ ಸಮ್ಯಗಧ್ಯಯನಂ ತಥಾ ಸಾಧುಜನಾಚ್ಛ್ರುತಂ ।
ಅತೋ ಭವನ್ಮುಖಾಚ್ಛ್ರೋತು ಮೌತ್ಸುಕ್ಯಂ ಹೃದಿ ಜಾಯತೇ ॥೫॥

|| ವಾತ್ಸ್ಯಾಯನ ಉವಾಚ ||

ಉಪದೇಶಪ್ರದಾನೇನ ಉಪಕುರ್ವಂತಿ ಯೇ ಜನಾಃ ।
ಭವಾದೃಶಾಃ ಸಾಧವಸ್ತೇ ಸತ್ಕಥಾಶ್ರವಣಂ ವರಂ ॥೬॥

ಪತಿಭಕ್ತಿರಬಲಾನಾಂ ಗೃಹಸ್ಯ ಭೂಷಣಂ ಧನಂ ।
ವಿನಯೋ ಹಿ ಯೌವನಸ್ಯ ತ್ಯಾಗೋ ವೃದ್ಧಸ್ಯ ಭೂಷಣಂ ।
ವಿದ್ಯಾ ಚ ನರಲೋಕಸ್ಯ ತಥಾ ಸಾಧುವಚಃ ಪರಂ ॥೭॥

---

ಗೃತ್ಸಪಾ(ಮ)ದನೆಂಬ ಮುನಿಯು ಹೇಳಿದನು.— ದಾನ, ಉಪಾಸನ ಮತ್ತು ಶಾಸ್ತ್ರಾಧ್ಯಯನ ಈ ಮೂರರಿಂದ ಮನುಷ್ಯರಿಗೆ ಕಾಲವು ಸಫಲವಾಗುತ್ತದೆ. ಇದಲ್ಲದೆ ಗುರುವಿನ ಮುಖದಿಂದ ಅಧ್ಯಯನವನ್ನು ಮಾಡುವುದೂ ಮತ್ತು ಸತ್ಪುರುಷರಿಂದ ಸತ್ಕಥೆಗಳನ್ನು ಶ್ರವಣಮಾಡುವುದೂ ಇವೆರಡೂ ಮನುಷ್ಯನ ಜೀವಿಕೆಯಲ್ಲಿ ಪ್ರಯೋಜನರೂಪವಾಗಿ ಇರುತ್ತವೆ. ಆದುದರಿಂದ ಪೂಜ್ಯನಾದ ನಿನ್ನ ಮುಖದಿಂದ ಸತ್ಕಥೆಯನ್ನು ಶ್ರವಣಮಾಡಲು ನಮಗೆ ಉತ್ಸಾಹ ಉಂಟಾಗುತ್ತಲಿದೆ. ||೪-೫||

ವಾತ್ಸ್ಯಾಯನ ಋಷಿಯು ಹೇಳಿದನು.—ಓ ಸೂತಮಹರ್ಷಿಯೇ, ಯಾವ ನಿಮ್ಮಂತಹ ಜನರು, ಉಪದೇಶದಿಂದ ಸತ್ಕಥಾಶ್ರವಣವನ್ನು ಮಾಡಿಸುತ್ತಾರೋ ಅಂಥವರೇ ಸತ್ಪುರುಷರಾಗಿರುತ್ತಾರೆ. ಸ್ತ್ರೀಯರಿಗೆ ಪತಿಭಕ್ತಿಯೂ, ಮನೆಗೆ ಧನವೂ, ಯೌವನಕ್ಕೆ ವಿನಯವೂ, ವೃದ್ಧನಿಗೆ ತ್ಯಾಗಬುದ್ಧಿಯೂ, ಮನುಷ್ಯಲೋಕಕ್ಕೆ ವಿದ್ಯೆಯೂ, ಸತ್ಪುರುಷರಿಗೆ ಉಪದೇಶರೂಪ ವಾದ ವಚನವೂ ಭೂಷಣವಾಗಿರುತ್ತದೆ. ||೬-೭||

|| ಶತತಪಾ ಉವಾಚ ||

**ಸತ್ಕಥಾ ಪುಷ್ಪಮಾಲೇವ ನೃಣಾಂ ಮಾನಸ ಹಾರಿಣೀ ।**
**ಸತ್ಪ್ರವೃತ್ತಿಸಮಾ ಸಾಽಪಿ ಆತ್ಮನಃ ಶುಭದಾಯಿನೀ ॥೮॥**

|| ಸ್ಥೂಲಶಿರಾ ಉವಾಚ ||

**ಯತ್ರ ಯತ್ರ ಹರಿಕಥಾ ಸಾ ಸಾ ತೀರ್ಥಸಮಾ ಮತಾ ।**
**ಸಾಧುವಾದರತಾನಾಂ ಹಿ ಹರಿರ್ದೇಹಂ ಸಮಾಶ್ರಯೇತ್ ॥೯॥**

**ತ್ವಂ ಮಹಾಭಾಗ್ಯ ಸಂಪನ್ನೋ ಹರಿಲೀಲಾಪ್ರಚಾರಕಃ ।**
**ತ್ವನ್ಮುಖಾಂಭೋಜಗಲಿತಂ ಪಿಬಾಮಿ ಚ ಕಥಾಽಮೃತಂ ॥೧೦॥**

|| ಗೌತಮ ಉವಾಚ ||

**ಅಹಂಕಾರೋಽಭಿಮಾನಶ್ಚ ವಿಮೋಹಯತಿ ಮಾನಸಂ ।**
**ಪರಮಾರ್ಥೋ ನ ದೃಶ್ಯೇತ ತನ್ನಿರಾಕರಣಾದೃತೇ ॥೧೧॥**

**ಸತ್ಕಥಾಽಽಲೋಚನೇ ನೈವಶ್ರೀಹರೇರನುಕಂಪಯಾ ।**
**ವಿನಾಶೋ ಮೋಹತಮಸೋ ಭಗವತ್ಪ್ರೀತಿಶರ್ಮದಃ ॥೧೨॥**

---

ಶತತಪಾ ಋಷಿಯು ಹೇಳಿದನು.—ಸತ್ಕಥೆಯು ಹೂವಿನ ಮಾಲಿಕೆಯೋಪಾದಿಯಲ್ಲಿ ಮನೋಹರವಾಗಿರುತ್ತದೆ. ಸತ್ಕಾರ್ಯಪ್ರವೃತ್ತಿಯಲ್ಲಿರುವ ಆಸಕ್ತಿಯೂ ಕಲ್ಯಾಣವನ್ನುಂಟುಮಾಡುತ್ತದೆ. ||೮||

ಸ್ಥೂಲಶಿರನು ಹೇಳಿದನು. – ಯಾವ ಯಾವ ಪ್ರದೇಶದಲ್ಲಿ ಹರಿಕಥೆಯು ಉಪದೇಶಿಸಲ್ಪಡುವುದೋ ಆಯಾ ದೇಶವು ತೀರ್ಥಕ್ಷೇತ್ರದಂತೆ ಪರಿಗಣಿಸಲ್ಪಡುವುದು. ಸತ್ಕಥಾಕಾಲಕ್ಷೇಪವನ್ನು ಮಾಡುವವರ ದೇಹವನ್ನು ಹರಿಯು ಆಶ್ರಯಿಸುತ್ತಾನೆ. ಓ ಸೂತಮಹರ್ಷಿಯೇ, ಮಹಾಭಾಗ್ಯಶಾಲಿಯಾದ ನೀನು ಹರಿಯ ಲೀಲೆಗಳನ್ನು ಪ್ರಚಾರಮಾಡುವವನಾಗಿರುತ್ತೀಯೆ. ಆದುದರಿಂದ ನಿನ್ನ ಮುಖದಿಂದ ಹೊರಡುವ ಹರಿಕಥಾಮೃತವನ್ನು ಪಾನಮಾಡುತ್ತೇವೆ. ||೯-೧೦||

ಗೌತಮನು ಹೇಳಿದನು. - ಅಹಂಕಾರವೂ, ಅಭಿಮಾನವೂ ಇವೆರಡೂ ಮನಸ್ಸನ್ನು ಮೋಹಗೊಳಿಸುತ್ತವೆ. ಆ ಮೋಹವನ್ನು ಹೋಗಲಾಡಿಸದಿದ್ದರೆ ಪರಮಾರ್ಥವಾದ ಮೋಕ್ಷವೆಂಬ ಪುರುಷಾರ್ಥವು ಲಭಿಸುವುದಿಲ್ಲ. ಸತ್ಕಥೆಯ

|| ಜಾಬಾಲಿರುವಾಚ ||

ಮಾನವಶ್ಚೇತ್ಸತ್ಕಥಾಯಾಂ ಬಾಲ್ಯಾವಧಿ ಸಮುತ್ಸುಕಃ ।
ಸಫಲಂ ಜೀವನಂ ತಸ್ಯ ಅಂತೇ ಚ ಸುಖಭಾಜನಮ್ ॥೧೩॥

ತ್ರಿತಾಪಂ ನಾಶಯತ್ಯೇವ ಹರಿಲೀಲಾಽಮೃತಂ ವಚಃ ।
ಸಂಸಾರಜ್ವರಸಂತಪ್ತ ಸರ್ವವ್ಯಾಧಿವಿನಾಶನಮ್ ॥೧೪॥

|| ಜಾತೂಕರ್ಣಿರುವಾಚ ||

ತಸ್ಯ ಜಿಹ್ವಾ ಭವೇತ್ಸಾಧ್ವೀ ಸತ್ಕಥಾಽಮೃತ ನಿರ್ವೃತಾ ।
ವಿಷಯಾಸ್ವಾದಸಂಕ್ಲಿಷ್ಟಾ ಕೇವಲಾ ರಸನಾ ಪರಾ ॥೧೫॥

|| ಉಷ್ಮಪ ಉವಾಚ ||

ಯಾ ಚ ಜ್ಞಾನಂ ನ ದದತೇ ಸಾ ನ ವಿದ್ಯಾ ವೃಥಾ ಹಿ ಸಾ ।
ವಿಷಯೇಷು ಚ ಸಕ್ತಾನಿ ವಿಕಲಾನೀಂದ್ರಿಯಾಣಿ ನೃ ॥೧೬॥

---

ಆಲೋಚನಮಾತ್ರದಿಂದಲೇ ಶ್ರೀಹರಿಯು ಅನುಗ್ರಹದಿಂದ ಅಜ್ಞಾನಾಂಧಕಾರವು ನಾಶವನ್ನೈದುವುದು. ಅದರಿಂದ ಭಗವಂತನಲ್ಲಿ ಪ್ರೀತಿಯೂ ಮನಶ್ಶಾಂತಿಯೂ ಲಭಿಸುತ್ತದೆ. ||೧೧-೧೨||

ಜಾಬಾಲಿಮಹರ್ಷಿಯು ಹೇಳಿದನು.—ಮನುಷ್ಯನು ಬಾಲ್ಯದಿಂದ ಮೊದಲುಗೊಂಡು ಹರಿಕಥಾಶ್ರವಣದಲ್ಲಿ ಆಸಕ್ತನಾಗಿದ್ದರೆ, ಅವನ ಜೀವನವು ಸಫಲವಾಗುತ್ತದೆ. ಮತ್ತು ಅಂತ್ಯಕಾಲದಲ್ಲಿ ಸುಖವೂ ಲಭಿಸುತ್ತದೆ. ಹರಿಲೀಲಾಮೃತವು ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ತಾಪತ್ರಯವನ್ನು ನಾಶಮಾಡುತ್ತದೆ. ಮತ್ತು ಈ ಸಂಸಾರವೆಂಬ ಜ್ವರದಿಂದ ಸಂಕಟಪಡುವ ಪ್ರಾಣಿಗಳ ವ್ಯಾಧಿಗಳನ್ನೂ ನಾಶಮಾಡುತ್ತದೆ. ||೧೩-೧೪||

ಜಾತೂಕರ್ಣಿಯು ಹೇಳಿದನು.—ಯಾವನು ಸತ್ಕಥಾಮೃತವನ್ನು ಪಠನ ಪಾನ ಮಾಡುವನೋ, ಅವನ ನಾಲಿಗೆಯು ಸಫಲವಾಗುತ್ತದೆ. ವಿಷಯಾಸ್ವಾದನೆಯಲ್ಲಿ ಆಸಕ್ತವಾಗಿದ್ದರೆ ಅವನ ನಾಲಿಗೆಯು ಹೀನವಾಗುತ್ತದೆ. ||೧೫||

ಉಷ್ಮಪನು ಹೇಳಿದನು.—ಯಾವ ವಿದ್ಯೆಯು ವಿವೇಕಜ್ಞಾನವನ್ನುಂಟು ಮಾಡುವುದಿಲ್ಲವೋ ಅದು ವಸ್ತುತಃ ವಿದ್ಯೆಯಾಗಿರದೆ ವ್ಯರ್ಥವಾದುದಾಗಿರುವುದು.

ತೇ ನರಾ ಯಂತ್ರಸದೃಶಾಃ ಸದಾಲಾಪ ವಿವರ್ಜಿತಾಃ ।
ಹರಿಭಕ್ತಿವಿಹೀನಾ ಯೇ ಕೇವಲಂ ವ್ಯಸನಾನ್ವಿತಾಃ ॥೧೭॥

ಸ್ವಸ್ವಧರ್ಮಾನ್ಪರಿತ್ಯಜ್ಯ ಪರಧರ್ಮೇ ರತಾಶ್ಚಯೇ ।
ತೇ ಸರ್ವೇ ವಿಫಲಾಯಾಸಾಃ ಕೇವಲಂ ಕ್ಲೇಶಭಾಗಿನಃ ॥೧೮॥

ಅತಃ ಸೂತ ಮಹಾಭಾಗ ಬ್ರೂಹಿ ಯೋಗೇಶ್ವರೇ ಹರೌ ।
ಕಥಂ ಭಕ್ತಿರ್ಭವೇತ್ನೃಣಾಂ ಜನ್ಮಕರ್ಮವಿನಾಶಿನೀ ॥೧೯॥

ಇತ್ಥಂ ತ್ವೃಷಿವಚಃ ಶ್ರುತ್ವಾ ಸೂತೋ ಹರಿ ಪರಾಯಣಃ ।
ಪ್ರತಿಪೂಜ್ಯ ವಚಸ್ತೇಷಾಂ ಪ್ರವಕ್ತುಮುಪಚಕ್ರಮೇ ॥೨೦॥

ಋಷಯಃ ಸಾಧು ಪೃಷ್ಟೋಽಹಂ ಭವದ್ಭಿರ್ಲೋಕಮಂಗಲಂ ।
ಯತ್ಕೃತಃ ಕೃಷ್ಣಸಂಪ್ರಶ್ನೋ ಭವನಿಸ್ತರಣಃ ಪರಃ ॥೨೧॥

---

ಯಾವ ಮನುಷ್ಯರ ಇಂದ್ರಿಯಗಳು ಕೇವಲ ವಿಷಯಸುಖಗಳಲ್ಲಿ ಮಗ್ನವಾಗಿರುತ್ತವೆಯೋ ಮತ್ತು ಯಾವ ಮನುಜರು ಸತ್ಕಥಾಲಾಪವನ್ನು ಮಾಡುವುದಿಲ್ಲವೋ, ಅವರು ಕೇವಲ ಯಂತ್ರಸದೃಶರಾಗಿರುವರು. ಯಾರು ಹರಿಯಲ್ಲಿ ಭಕ್ತಿಯನ್ನಿಡದೆ ದುರ್ವ್ಯಸನಗಳಲ್ಲಿ ಆಸಕ್ತರಾಗಿರುತ್ತಾರೋ ಮತ್ತು ಯಾರು ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ತೊರೆದು ಅನ್ಯವರ್ಣದ ಧರ್ಮಾಚರಣೆಯಲ್ಲಿ ನಿರತರಾಗಿರುತ್ತಾರೋ ಅವರ ಶ್ರಮವು ವಿಫಲವಾಗಿ, ಕಷ್ಟಪರಂಪರೆಗಳನ್ನನುಭವಿಸುವವರಾಗುತ್ತಾರೆ. ಆದುದರಿಂದ ಓ ಸೂತಮಹರ್ಷಿಯೇ, ಮನುಷ್ಯರಿಗೆ ಯೋಗೇಶ್ವರನಾದ ಹರಿಯಲ್ಲಿ ಜನ್ಮಾದಿಗಳನ್ನೂ ಮತ್ತು ಕರ್ಮಫಲಾಶೆಗಳನ್ನೂ ನಾಶಮಾಡುವ ಪವಿತ್ರವಾದ ಭಕ್ತಿಯು ಹೇಗೆ ಉಂಟಾಗುವುದು? ಎಂಬ ಅಂಶವನ್ನು ನೀನು ಹೇಳುವವನಾಗು. ॥೧೬-೧೭-೧೮-೧೯॥

ಋಷಿಗಳ ಈ ಪ್ರಕಾರವಾದ ವಚನಗಳನ್ನು ಕೇಳಿ ಹರಿಭಕ್ತನಾದ ಸೂತಮಹರ್ಷಿಯು, ಆ ಋಷಿಗಳ ಮಾತನ್ನು ಆದರಿಸಿ ಮುಂದೆ ಹೇಳುವಂತೆ ಹೇಳಲುಪಕ್ರಮಿಸಿದನು. ॥೨೦॥

ಎಲೈ ಋಷಿಗಳೇ, ನೀವು ನನ್ನನ್ನು ಕುರಿತು ಲೋಕಕಲ್ಯಾಣೋಪಾಯವನ್ನು ಒಳ್ಳೆಯ ರೀತಿಯಿಂದ ಕೇಳಿರುವಿರಿ. ನೀವು ಕೇಳಿದ ಸಂಸಾರತಾರಕನಾದ

**ಮಧುರಮಧುರ ಮೇ ತನ್ಮಂಗಲಂ ಮಂಗಲಾನಾಂ ।**
**ಸಕಲನಿಗಮವಲ್ಲೀ ಸತ್ಫಲಂ ಚಿತ್ಸ್ವರೂಪಂ ।**
**ಸಕೃದಪಿ ಪರಿಗೀತಂ ಶ್ರದ್ಧಯಾ ಹೇಲಯಾ ವಾ ।**
**ಮುನಿವರ ನರಮಾತ್ರಂ ತಾರಯೇತ್ಕೃಷ್ಣನಾಮ ॥೨೨॥**

**ನಮಾಮಿ ನಾರಾಯಣವೇದ ವಿಗ್ರಹಂ ।**
**ಸತ್ಯಂ ಚಿದಾನಂದ ಮಯಂ ತ್ರಿಮೂರ್ತಿಕಂ ।**
**ಭಕ್ತ್ಯಾಸದಾ ಮೋಚಯಿತುಂ ಯದಾಗಮೋ**
**ನಮಾಮಿ ತಂ ದೇವಮನಂತಮಾದ್ಯಂ ॥೨೩॥**

**ಭಗವಂತಮಹಂ ವಂದೇ ವ್ಯಾಸರೂಪಂ ಸನಾತನಂ ।**
**ಯತ್ಕೃಪಾಲೇಶತೋ ಲೋಕಃ ಶಾಸ್ತ್ರಜ್ಞಾನಯುತೋ ಭವೇತ್ ॥೨೪॥**

---

ಶ್ರೀಕೃಷ್ಣನ ಕಥಾವಿಷಯಕವಾದ ಪ್ರಶ್ನವು ಬಹಳ ಕ್ಷೇಮಕರವಾದದ್ದಾಗಿರುತ್ತದೆ. ಅತ್ಯಂತ ಮಧುರವೂ, ಮಂಗಲಗಳಿಗೆ ಮಂಗಲವೂ, ಸಕಲವೇದಾಂತಗಳ ಫಲಸ್ವರೂಪವೂ ಮತ್ತು ಚಿನ್ಮಾತ್ರರೂಪವೂ ಆದ ಆ ಕೃಷ್ಣನಾಮವು ಶ್ರದ್ಧೆಯಿಂದಲಾಗಲೀ, ವಿಲಾಸಕ್ಕೋಸ್ಕರವಾಗಿಯಾಗಲೀ ಒಂದೇ ಒಂದು ಬಾರಿ ಗಾನಮಾಡಲ್ಪಟ್ಟರೂ, ಮನುಷ್ಯಸಾಮಾನ್ಯನನ್ನೂ ಸಂಸಾರಸಾಗರದಿಂದ ಪಾರುಗಾಣಿಸುತ್ತದೆ. ॥೨೧-೨೨॥

(ಮುಂದೆ ಕಥಾಪ್ರಾರಂಭವನ್ನು ಮಾಡುವವನಾಗಿ ನಿರ್ವಿಘ್ನ ಪರಿಸಮಾಪ್ತಿ ಗೋಸ್ಕರ ಶ್ರೀಕೃಷ್ಣನ ನಮಸ್ಕಾರರೂಪವಾದ ಮಂಗಳವನ್ನು ರಚಿಸುತ್ತಾನೆ) ಚಿದಾನಂದಸ್ವರೂಪನೂ, ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಔಪಾಧಿಕವಾದ ಮೂರು ನಾಮರೂಪಗಳನ್ನು ಹೊಂದಿದವನೂ ಆಗಿ, ಯಾವನು ತನ್ನ ಭಕ್ತರನ್ನು ಸಂಸಾರದಿಂದ ಬಿಡುಗಡೆಯನ್ನು ಮಾಡಲು, ಕೃಷ್ಣರೂಪದಿಂದ ಭೂಲೋಕದಲ್ಲಿ ಅವತರಿಸಿರುವನೋ ಅಂತಹ ನಾರಾಯಣಮೂರ್ತಿಯನ್ನು ನಮಸ್ಕರಿಸುತ್ತೇನೆ. ॥೨೩॥

ಯಾವನ ಕೃಪಾಲೇಶಮಾತ್ರದಿಂದಲೇ ಜನರು ಶಾಸ್ತ್ರಜ್ಞಾನದಿಂದ ಯುಕ್ತರಾಗುವರೋ ಪ್ರಾಚೀನನೂ ಮತ್ತು ವ್ಯಾಸಮಹರ್ಷಿಯ ರೂಪನೂ ಆದ ನಾರಾಯಣನನ್ನು ನಮಸ್ಕರಿಸುತ್ತೇನೆ. ॥೨೪॥

ಸ್ವಸುಖನಿಭೃತಚೇತಾಸ್ತದ್ವ್ಯುದಸ್ತಾನ್ಯಭಾವೋಽ
ಪ್ಯಜಿತರುಚಿರಲೀಲಾ ಕೃಷ್ಟಸಾರಸ್ತದೀಯಂ ।
ವ್ಯತನುತ ಕೃಪಯಾ ಯಸ್ತತ್ವದೀಪಂ ಪುರಾಣಂ
ತಮಖಿಲವೃಜಿನಘ್ನಂ ವ್ಯಾಸಸೂನುಂ ನತೋಽಸ್ಮಿ ॥೨೫॥

ಸಮಾಹಿತಾತ್ಮನೋ ಬ್ರಹ್ಮನ್ ಬ್ರಹ್ಮಣಃ ಪರಮೇಷ್ಠಿನಃ ।
ಹೃದ್ಯಾಕಾಶಾದಭೂದ್ವೇದೋ ಪ್ರಣವಾತ್ಮಾ ಸನಾತನಃ ॥೨೬॥

ಸೇತಿಹಾಸ ಪುರಾಣೋ ಹಿ ಭಗವಚ್ಛಕ್ತಿನೋದನಾತ್ ।
ಕಾಲೇ ತಸ್ಯಾಗ್ರಹಂ ದೃಷ್ಟ್ವಾ ವ್ಯಾಸಭೂತಃ ಪರಃ ಪ್ರಭುಃ ॥೨೭॥

ದ್ವಾಪರೇ ಅವತೀರ್ಣೋಽಭೂತ್ತದ್ವಿಭಾಗಂ ಚಕಾರ ಹ ।
ಸರ್ವಶಾಸ್ತ್ರಸಾರಭೂತೋ ಹ್ಯಯಮಾದಿಪುರಾಣಕಃ ॥೨೮॥

---

ತನ್ನ ಆತ್ಮಸ್ವರೂಪವಾದ ಸಚ್ಚಿದಾನಂದ ಸ್ವಭಾವವನ್ನು ಅನುಭವಿಸುತ್ತಿರುವುದರಲ್ಲಿಯೇ ಆಸಕ್ತಿಯುಳ್ಳ ಮನೋವೃತ್ತಿಯಿಂದ ಕೂಡಿದವನಾದ, ಅದು ಹೊರತು ಇತರ ವಿಷಯಗಳಲ್ಲಿ ಆದರವಿಲ್ಲದ ಮನಸ್ಸುಳ್ಳವನಾದರೂ, ಮನೋಹರವಾದ ಶ್ರೀಕೃಷ್ಣನ ಲೀಲಾವಿನೋದಗಳ ವರ್ಣನೆಯು ಆಕರ್ಷಣೆಯೆಂಬ ಹುಲ್ಲಿಕರುವನ್ನು ಇನ್ನೂ ಜಯಿಸದೆ ಇರುವವನಾದ, ವ್ಯಾಸಪುತ್ರನಾದ ಶುಕನು ಆ ಶ್ರೀಕೃಷ್ಣ ಪರಮಾತ್ಮನ ಅನುಗ್ರಹದಿಂದ ತತ್ವಗಳ ತಿಳಿವಳಿಕೆಗೆ ದೀಪದಂತಿರುವ ಈ ಪುರಾಣವನ್ನು ರಚಿಸಿ ಪ್ರಚಾರಮಾಡಿದನು. ಈ ಪುರಾಣವು ಕತ್ತಲೆಯಲ್ಲಿರುವ ಪದಾರ್ಥಗಳನ್ನು ನೋಡಲಾರದೆ ಇರುವವರಿಗೆ ಕತ್ತಲೆಯನ್ನು ಹೋಗಲಾಡಿಸಿ ಅವನ್ನು ತಿಳಿಯಲು ಸಹಾಯಮಾಡುವ ಬೆಳಕಿನಂತೆ, ಉಪನಿಷತ್ತುಗಳ ವೇದಾಂತತತ್ವಗಳನ್ನು ತಿಳಿಯುವುದಕ್ಕೋಸ್ಕರ ಮನಸ್ಸಿನಲ್ಲಿರುವ ಪಾಪಗಳನ್ನು ನಿವಾರಿಸಿ ಶುದ್ಧಿಯನ್ನುಂಟು ಮಾಡುತ್ತದೆ. ಇಂತಹ ಉಪಕಾರವನ್ನು ಮಾಡಿದ ಶುಕಾಚಾರ್ಯನಿಗೆ ವಿನಯ ಕೃತಜ್ಞತೆಗಳಿಂದ ನಮಸ್ಕರಿಸುತ್ತೇನೆ. ॥೨೫॥

ಎಲೈ ಬ್ರಾಹ್ಮಣರೇ, ಪೂರ್ವದಲ್ಲಿ ಸಮಾಹಿತಚಿತ್ತನಾದ ಪರಮೇಷ್ಠಿಯಾದ ಬ್ರಹ್ಮನ ಹೃದಯಾಕಾಶದ ದೆಸೆಯಿಂದ ಪ್ರಣವರೂಪವಾದ ವೇದವು ಪುರಾಣಗಳ ಸಹಿತವಾಗಿ ಆವಿರ್ಭವಿಸಿತು. ಕಾಲಾನಂತರದಲ್ಲಿ ವೇದಶಾಖೆಗಳು ನಷ್ಟವಾಗಲು

**ಶ್ರುತೋ ಮಯಾ ಗುರುಮುಖಾತ್ಪೂರ್ವಕಲ್ಪಕಥಾಮಯಃ ।**
**ಅಧುನಾ ಶ್ರಾವಯಿಷ್ಯಾಮಿ ಶೃಣುಷ್ವಾವಹಿತಸ್ತತಃ ॥೨೯॥**

**ಇದಂ ವೇದರಹಸ್ಯಂ ವೈ ಸರ್ವಲೋಕ ಶುಭಪ್ರದಮ್ ।**
**ವ್ಯಾಸದೇವೇನ ರಚಿತಂ ಹರಿಲೀಲಾಕಥಾಮಯಂ ॥೩೦॥**

**ಇತಿ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ**
**ಪುರಾಣೋತ್ಪತ್ತಿರ್ನಾಮ ಚತುರ್ಥೋಽಧ್ಯಾಯಃ**

ಮತ್ತು ಜನರು ಸುಲಭವಾಗಿ ವೇದಾರ್ಥಗಳನ್ನು ತಿಳಿಯಲು ಅಸಮರ್ಥರಾಗಲು, ಇದನ್ನು ನೋಡಿ ಪ್ರಭುವಾದ ವಿಷ್ಣುವು ದ್ವಾಪರಯುಗದಲ್ಲಿ ವ್ಯಾಸರೂಪದಿಂದ ಅವತಾರಮಾಡಿ ವೇದವನ್ನು ವಿಭಾಗಮಾಡಿದನು. ಸರ್ವಶಾಸ್ತ್ರಗಳ ಸಾರಾರ್ಥವನ್ನು ತಿಳಿಸುವ ಮತ್ತು ಪೂರ್ವಕಲ್ಪದಲ್ಲಿ ನಡೆದ ಕಥೆಗಳನ್ನು ತಿಳಿಸುವ ಈ ಆದಿಪುರಾಣವನ್ನು ನಾನು ಗುರುಮುಖದಿಂದ ಕೇಳಿ ತಿಳಿದಿರುವೆನು. ಆ ಶ್ರೇಷ್ಠವಾದ ಪುರಾಣವನ್ನು ಈಗ ನಿಮಗೆ ಹೇಳುವೆನು ಸಾವಧಾನದಿಂದ ಕೇಳುವವರಾಗಿರಿ. ॥೨೬-೨೭-೨೮-೨೯॥

ಶ್ರೀಕೃಷ್ಣನ ಲೀಲೆಗಳನ್ನು ಒಳಗೊಂಡಿರುವ ಕಥಾರೂಪವಾಗಿರುವ, ವೇದಗಳ ಗೋಪ್ಯಾರ್ಥವನ್ನು ವ್ಯಕ್ತಪಡಿಸತಕ್ಕುದೂ ಮತ್ತು ಸಕಲ ಲೋಕಗಳಿಗೂ ಮಂಗಳಪ್ರದವಾದದ್ದೂ ಆದ ಈ ಆದಿಪುರಾಣವು ಮಹಾತ್ಮನಾದ ವ್ಯಾಸಮಹರ್ಷಿಯಿಂದ ರಚಿಸಲ್ಪಟ್ಟಿರುವುದು ॥೩೦॥

ಇಲ್ಲಿಗೆ ಸಕಲಪುರಾಣಗಳ ಸಾರಭೂತವಾದ ಆದಿಪುರಾಣದಲ್ಲಿ ಪುರಾಣೋತ್ಪತ್ತಿಯ ರೀತಿಯನ್ನು ತಿಳಿಸುವ ನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಪಂಚಮೋಽಧ್ಯಾಯಃ ||

## ಐದನೆಯ ಅಧ್ಯಾಯವು

**ಜಯತಿ ಯಶೋದಾ ಸೂನು ರ್ಯೋಽ ಹಿ ಸಮಸ್ತಾತ್ರ್ರಯಃ ಸಾಕ್ಷೀ ।**
**ಭವಭಯನಿರ್ಭಯ ನಿರ್ವೃತೌ ಶರಣಾಗತಾನಾಂ ಶರ್ಮದಶ್ಚೇತಿ ॥೧॥**

|| ವ್ಯಾಸ ಉವಾಚ ||

**ಸನತ್ಕುಮಾರೋಕ್ತಮಿದಂ ಪುರಾಣಂ**
**ಯತೋ ನ ಕಿಂಚಿತ್ಪರಮಸ್ತಿ ಪೂರ್ವಮ್ ।**
**ಮಯಾ ಶ್ರುತಂ ನಾರದತೋ ಬದರ್ಯಾಂ**
**ಶ್ರದ್ಧಾಲುನಾ ಚಾದಿಪುರಾಣಸಂಜ್ಞಂ ॥೨॥**

**ಏಕದಾ ನಾರದೋ ಲೋಕಾನ್ಪರ್ಯಟಂಶ್ಚ ಯದೃಚ್ಛಯಾ ।**
**ಸರಸ್ವತೀ ತಟಿಸ್ಥಂ ತು ಮದೀಯಾಶ್ರಮಮಾಗಮತ್ ॥೩॥**

---

ಸಮಸ್ತಜನರ ಹೃದಯಗಳಲ್ಲಿ ನೆಲಸಿರುವವನೂ ಕಾರ್ಯಕಾರಣಸಂಘಾತ ರೂಪವಾದ ಶರೀರಕ್ಕೆ ಸಾಕ್ಷೀಭೂತನೂ, ಶರಣಾಗತರಿಗೆ ಅನಂತ ಸುಖವನ್ನು ದಯಪಾಲಿಸುವವನೂ ಮತ್ತು ಲೋಕಾನುಗ್ರಹಕ್ಕೋಸ್ಕರ ಯಶೋದಾಪುತ್ರನಾಗಿ ಅವತರಿಸಿದವನೂ ಆದ ಶ್ರೀಕೃಷ್ಣಪರಮಾತ್ಮನು ಶ್ರೇಷ್ಠನಾಗಿದಾನೆ. ||೧||

ವ್ಯಾಸನು ಹೇಳಿದನು - ಸನತ್ಕುಮಾರನಿಂದ ಹೇಳಲ್ಪಟ್ಟ ಮತ್ತು ಇದ ಕ್ಕಿಂತಲೂ ಪೂರ್ವದಲ್ಲಿ ಯಾವ ಪುರಾಣವೂ ಇರಲಿಲ್ಲವೋ ಅಂಥಾ ಆದಿಪುರಾಣವೆಂದು ಹೆಸರುಳ್ಳ ಈ ಪುರಾಣವು ಶ್ರದ್ಧಾಳುವಾದ ನಾರದನಿಂದ ನನಗೆ ಬದರೀಕ್ಷೇತ್ರದಲ್ಲಿ ಹೇಳಲ್ಪಟ್ಟಿತು. ||೨||

ಹಿಂದೆ ಒಂದಾನೊಂದು ಕಾಲದಲ್ಲಿ ತ್ರಿಲೋಕಸಂಚಾರಿಯಾದ ನಾರದನು

ದೃಷ್ಟ್ವಾ ತಮಾಗತಂ ದೂರಾನ್ಮಚ್ಛಿಷ್ಯಾ ದೀರ್ಘಸತ್ರಿಣಃ ।
ಪ್ರತ್ಯುತ್ಥಾಯಾಸನಾರ್ಘ್ಯಾದ್ಯೈಸ್ತಂ ಪೂಜಯಾಮಾಸುರಾದರಾತ್ ॥೪॥

ಸಮರ್ಚಯಿತ್ವಾ ತೇ ಪ್ರೋಚುರ್ಮುನೇ ಭಾಗ್ಯೋದಯೋ ಮಹಾನ್ ।
ತವ ಸಂದರ್ಶನಂ ಲಬ್ಧಂ ನಷ್ಟಂ ನೋ ಹೃದ್ಗತಂ ತಮಃ ॥೫॥

ಅದ್ಯ ನೋ ಜನ್ಮಸಾಫಲ್ಯಂ ತಪಸಶ್ಚ ಪರಂ ಫಲಂ ।
ಜಾತಂ ತದ್ದರ್ಶನಂ ತೇಽದ್ಯ ದುರ್ಲಭಂ ಪ್ರಾಣಿನಾಮಿಹ ॥೬॥

ವಿಷ್ಣೋರ್ಮಾಯಾ ಭಗವತೀ ಯಥಾ ಸಂಮೋಹ್ಯತೇ ಜಗತ್ ।
ಯಥಾ ತಸ್ಯಾ ಸ್ತಿರಸ್ಕಾರೋ ಭವೇದ್ವದ ಮಹಾಮುನೇ ॥೭॥

ಲೋಕಗಳನ್ನು ಸಂಚರಿಸುವವನಾಗಿ ಅಕಸ್ಮಾತ್ತಾಗಿ ಸರಸ್ವತೀ ನದಿಯ ದಡದಲ್ಲಿದ್ದ ನನ್ನ ಆಶ್ರಮಕ್ಕೆ ಬಂದನು. ॥೩॥

ದೀರ್ಘಕಾಲ ಸಾಧ್ಯವಾದ ಯಾಗವನ್ನು ಮಾಡುತ್ತಿದ್ದ ನನ್ನ ಶಿಷ್ಯರು ದೂರದಲ್ಲಿ ಬರುತ್ತಿದ್ದ ನಾರದಮಹರ್ಷಿಗಳನ್ನು ಕಂಡು ಸ್ವಾಗತಿಸಿ ಆಸನಾದಿಗಳನ್ನು ಕೊಟ್ಟು ಆದರಪೂರ್ವಕವಾಗಿ ಪೂಜಿಸಿದರು. ॥೪॥

ಮಹಾತ್ಮರಾದ ನಾರದ ಮಹರ್ಷಿಗಳನ್ನು ಆದರಪೂರ್ವಕವಾಗಿ ಉಪಚರಿಸಿದ ನಂತರ ಶಿಷ್ಯರು ಅವರನ್ನು ಕುರಿತು, ಓ ಮುನಿಯೇ, ನಮ್ಮ ಮಹತ್ತಾದ ಭಾಗ್ಯೋದಯದಿಂದ ತಮ್ಮ ಸಂದರ್ಶನವು ಲಭಿಸಿತು. ಇದರಿಂದ ನಮ್ಮ ಹೃದಯದ ಅಜ್ಞಾನಾಂಧಕಾರವು ನಷ್ಟವಾಯಿತು. ಎಂದು ಹೇಳಿ ಹೀಗೆ ಪ್ರಶ್ನೆ ಮಾಡಿದರು. ॥೫॥

ಪ್ರಾಣಿಗಳಿಗೆ ಅತಿ ದುರ್ಲಭವಾದ ತಮ್ಮ ದರ್ಶನವು ಲಭಿಸಿದ್ದರಿಂದ ನಮ್ಮ ತಪಸ್ಸಿಗೆ ಫಲವು ಲಭಿಸಿತಲ್ಲದೆ, ಜನ್ಮ ಸಾಫಲ್ಯವಾಯಿತು. ಓ ಮಹಾಮುನಿ ಶ್ರೇಷ್ಠನೇ, ವಿಷ್ಣುವಿನ ಮಾಯೆಯಾದ ಭಗವತಿಯು ಜಗತ್ತನ್ನು ಹೇಗೆ ಮೋಹಗೊಳಿಸುವಳು? ಮತ್ತು ಅದರಿಂದ ಬಿಡುಗಡೆಯನ್ನು ಹೊಂದುವ ಬಗೆ ಹೇಗೆ? ಎಂಬುದನ್ನು ತಿಳಿಯಹೇಳುವವನಾಗು. ॥೬-೭॥

ಅನಯಾ ನಿಯತಂ ಬದ್ಧಾ ಮುನಯಃ ಕೋಟಿಶೋ ಮುನೇ ।
ಯೋಗಿನೋ ಮೋಹಿತಾಶ್ಚಾನ್ಯೇ ವಂಚಿತಾಃ ಸಂತಿ ಸಂಸ್ಸೃತೌ ॥೮॥

ಆಸಕ್ತಾ ದೇಹಗೇಹಾದೌ ಬಂಧಮಾಯಾಂತಿ ಚೇತಸಃ ।
ಕೇಚಿದ್ಯೋಗರತಾ ಮೂಢಾ ದಯಾದಾನ ಪರಾಯಣಾಃ ॥೯॥

ಅಜ್ಞಾಃ ಕರ್ಮಪರಾಃ ಕೇಚಿತ್ಸಂಸಾರವಿನಿಷೇವಕಾಃ
ನ ವಿದಂತಿ ನಿಜಂ ಶ್ರೇಯೋ ಭಜನಂ ವಿಶದಂ ಹರೇಃ ।
ಕಥಂ ಸಂಸಾರಸಂತಾರಸ್ತೇಷಾಂ ಬ್ರೂಹಿ ತಪೋಧನ ॥೧೦॥

ವಿಷ್ಣೋರ್ಮಾಯಾಸ್ವರೂಪಂ ತು ದುರ್ಜ್ಞೇಯಂ ಬ್ರಹ್ಮವಾದಿಭಿಃ ।
ತತ್ತ್ವತಃ ಕಥಿತುಂ ಕೋ ಹಿ ಕ್ಷಮಃ ಸ್ಯಾನ್ಮುನಿಸತ್ತಮಾಃ ॥೧೧॥

---

ಈ ಮಾಯೆಯಿಂದ ಕೋಟಿ ಸಂಖ್ಯಾತರಾದ ಮುನಿಗಳು ಸಂಸಾರ ಬಂಧನದಲ್ಲಿ ಸಿಲುಕಿರುತ್ತಾರೆ. ಯೋಗಿಗಳೂ ಮೋಹಪಾಶದಲ್ಲಿ ಸಿಕ್ಕಿಬಿದ್ದಿರುತ್ತಾರೆ. ಇನ್ನಿತರ ಪ್ರಾಣಿಗಳೂ ಸಹ, ಸನ್ಮಾರ್ಗ ಪ್ರವೃತ್ತಿಯಿಂದ ವಂಚಿಸಲ್ಪಟ್ಟಿರುತ್ತಾರೆ. ॥೮॥

ಓ ತಪೋಧನನಾದ ನಾರದ ಮಹರ್ಷಿಯೇ, ಪ್ರಾಣಿಗಳು ದೇಹ, ಗೃಹ, ಪುತ್ರ ಮಿತ್ರ, ಕಳತ್ರಾದಿಗಳಲ್ಲಿ ನಾನು ನನ್ನದು ಎಂಬ ಭಾವನೆಯನ್ನಿಟ್ಟು ಸಂಸಾರ ಪಾಶದಿಂದ ಬದ್ಧರಾಗಿರುತ್ತಾರೆ. ಕೆಲವರು ಮೂಢರು ಕೇವಲ ಯೋಗಾಭ್ಯಾಸ ನಿರತರಾಗಿಯೂ, ದಯಾ ಮತ್ತು ದಾನಗಳಲ್ಲಿ ಆಸಕ್ತರಾಗಿಯೂ, ಮತ್ತೆ ಕೆಲವರು ಅಜ್ಞರು ಯಜ್ಞಯಾಗಾದಿ ಕರ್ಮಗಳಲ್ಲೇ ಆಸಕ್ತರಾಗಿ ಸಂಸಾರಸುಖವನ್ನು ಅನುಭವಿಸುತ್ತಾ ಪಾರಮಾರ್ಥಿಕವಾದ ಶ್ರೇಯಸ್ಸನ್ನು ಕೊಡುವ ಹರಿಕೀರ್ತನೆಯನ್ನು ತಿಳಿಯದವರಾಗಿರುತ್ತಾರೆ. ಇವರೆಲ್ಲರೂ ಸಂಸಾರ ಸಾಗರದಿಂದ ಹೇಗೆ ಪಾರಾಗುತ್ತಾರೆ? ಎಂಬ ವಿಷಯವನ್ನು ಹೇಳುವವನಾಗು ಎಂದು ಕೇಳಿದರು. ॥೯-೧೦॥

ನಾರದನು ಹೇಳಿದನು. ಎಲೈ ಮುನಿಶ್ರೇಷ್ಠರೇ, ವಿಷ್ಣುವಿನ ಸಂಬಂಧವಾದ ಮಾಯೆಯ ಸ್ವರೂಪವನ್ನು ಸಂಪೂರ್ಣವಾಗಿ ನಿರೂಪಿಸಲು ಬ್ರಹ್ಮಜ್ಞಾನಿಗಳಿಗೂ ಸಾಧ್ಯವಿಲ್ಲವು. ಹೀಗಿರುವಲ್ಲಿ, ಯಾರುತಾನೇ ಮಾಯೆಯ ತಾತ್ವಿಕವಾದ ಸ್ವರೂಪವನ್ನು ಹೇಳಲು ಶಕ್ತರು? ॥೧೧॥

ವಿಮೋಹಾಯ ಸ್ವರೂಪಾಣಿ ಭೂತಾನಾಂ ನಿಜಮಾಯಯಾ ।
ಚರಿತಾನ್ಯವತಾರಾಣಾಮಪಿ ಕೋ ವಕ್ತುಮರ್ಹತಿ ||೧೨||

ತಥಾಽಪಿ ಕಿಂಚಿದ್ವಕ್ಷ್ಯಾಮಿ ಮುನಯಃ ಶ್ರೋತುಮರ್ಹಥ ।
ಸಂಸಾರೋತ್ತಾರಣಾಯೈವ ಕುಮಾರಾಚ್ಚ ಯಥಾಶ್ರುತಮ್ ||೧೩||

ತದ್ಬ್ರಹ್ಮ ಸೂಕ್ಷ್ಮಂ ಕೋ ವೇದ ಕಥಂ ಭಕ್ತಿರ್ಭವೇತ್ತಥಾ ।
ಶೃಣ್ವನ್ಸ್ಮರನ್ಗುಣಾನ್ ವಿಷ್ಣೋರವತಾರಕಥಾಃ ಶುಭಾಃ ||೧೪||

ಪುನತ್ಯಾತ್ಮಾನ ಮನ್ಯಂ ಚ ಕಿಂಪುನರ್ಯೋಽರ್ಚಯೇದ್ಧರಿಮ್ ।
ಅಂತರಾಯೋ ಭವತ್ಯೇವ ಲೋಕೇ ವಿಷ್ಣುಪದಾಪ್ತಯೇ ||೧೫||

ದೇವತಾಂತರಸೇವಾ ಚ ಬಂಧೂನಾಂ ಚ ಸಮಾಗಮಃ ।
ಧನಾಕಾಂಕ್ಷಾಭಿಮಾನಂ ಚ ಯೋಷಿತ್ಸ್ವಾಸಕ್ತಿರೇವ ಚ ||೧೬||

---

ಪ್ರಾಣಿಗಳನ್ನು ಮೋಹಗೊಳಿಸುವ ತನ್ನ ಮಾಯೆಯಿಂದ ಸ್ವೀಕರಿಸುವ ವಿಷ್ಣುವಿನ ಅವತಾರಗಳ ಸ್ವರೂಪವನ್ನು ಚರಿತ್ರೆಗಳನ್ನೂ ಸಹ ಯಾರು ತಾನೇ ಸಮಗ್ರವಾಗಿ ಹೇಳಲು ಶಕ್ತರಾಗುತ್ತಾರೆ? ||೧೨||

ಆದರೂ ಸಂಸಾರ ತರಣಕ್ಕೋಸ್ಕರ ಕುಮಾರಸ್ವಾಮಿಯಿಂದ ನಾನು ಕೇಳಿರುವದನ್ನು ಕೇಳಲು ಆಸಕ್ತಿಯುಳ್ಳ ನಿಮಗೆ ಸ್ವಲ್ಪಮಟ್ಟಿಗೆ ತಿಳಿಸುವೆನು. ||೧೩||

ಸೂಕ್ಷ್ಮವಾದ ಆ ಬ್ರಹ್ಮಸ್ವರೂಪವನ್ನು ಯಾವನು ತಿಳಿದಿರುವನು? ಮತ್ತು ಅದರಲ್ಲಿ ಭಕ್ತಿಯು ಹೇಗೆ ಉಂಟಾಗುತ್ತದೆ? ಎಂಬ ವಿಷಯವನ್ನೂ ಸಹ ನಿಮಗೆ ತಿಳಿಯಿಸುವೆನು. ||೧೩||

ಯಾವನು ಶ್ರೀಹರಿಯ ಮಂಗಳಕರವಾದ ಅವತಾರ ಕಥೆಗಳನ್ನು ಕೇಳುತ್ತಾನೋ ಮತ್ತು ಅವನ ಗುಣಗಳನ್ನು ಸ್ಮರಿಸುತ್ತಾನೋ, ಅಂಥವನು ತನ್ನನ್ನೂ ಮತ್ತು ಅನ್ಯರನ್ನೂ ಪವಿತ್ರಗೊಳಿಸುತ್ತಾನೆ. ಹೀಗಿರುವಲ್ಲಿ ಶ್ರೀಹರಿಯ ಪೂಜೆಯನ್ನು ಮಾಡುವವರಿಗೆ ಅದರ ಮಹಿಮೆಯನ್ನು ಹೇಳತಕ್ಕದ್ದೇನು? ||೧೪||

ವಿಷ್ಣುವನ್ನು ಹೊರತು ಇತರ ದೇವತೋಪಾಸನೆಯೂ, ಬಂಧು ಬಾಂಧವರೊಡನೆ ಸಮಾಗಮವೂ, ಸ್ತ್ರೀಲೋಲುಪತೆಯೂ, ಇವೆಲ್ಲವೂ ಹರಿಭಕ್ತಿ ಪೂಜಾದಿಗಳಿಗೆ ವಿಘ್ನಗಳು. ||೧೫-೧೬||

ನ ಜಾನಂತಿ ನರಾ ಮೂಢಾಃ ಕಿಂ ದೇವೈಃ ಸೇವಿತಂ ಸುಖಂ ।
ಶ್ವಲಾಂಗೂಲಂ ಸಮಾಶ್ರಿತ್ಯ ಕೋ ಹಿ ತೀರ್ಣೋಽಂಬುಧೇರ್ಜಲಂ ॥೧೭॥

ಯೇಽಧಮಾಃ ಪಾಪಕರ್ಮಾಣೋ ದೇವತಾಂತರಸೇವಕಾಃ ।
ಕಾಮಿನೋ ವಿಷ್ಣುವಿಮುಖಾ ಸ್ತೇ ಯಾಂತಿ ನರಕೇ ಧ್ರುವಮ್ ॥೧೮॥

ಪತಿಂ ತ್ಯಕ್ತ್ವಾ ಯಥಾ ನಾರ್ಯೋ ಜಾರಂ ಸೌಖ್ಯಾಗಮೇಚ್ಛಯಾ ।
ಅಚ್ಯುತಂ ನಿಂದಯನ್ ಲೋಕೇ ಜೀವೋ ಯಾತ್ಯಧಮಾಂ ಗತಿಂ ॥೧೯॥

ದೇವಾಶ್ಚ ಕರ್ಮಸಚಿವಾಃ ಕೇವಲಂ ಸ್ವಹಿತೇ ರತಾಃ ।
ಅಪರಾಧಕೃತೇಽಲ್ಪೇಽಪಿ ದೇಹದ್ರವಿಣನಾಶಕಾಃ ॥೨೦॥

---

ಸ್ವರ್ಗಾದಿ ಸುಖಪ್ರಾಪ್ತಿಗೋಸ್ಕರ ವಿಷ್ಣುವಲ್ಲದ ಇತರ ದೇವತೋಪಾಸನೆಯಲ್ಲಿ ನಿರತರಾದ ಜನರು ಮೂಢರಾಗಿರುವರು. ಏಕೆಂದರೆ, ಅವರು ಆ ದೇವತೆಗಳಿಂದ ಯಾವ ಬಗೆಯ ಸುಖವನ್ನನುಭವಿಸುವರು? ಅವರು ಅನುಭವಿಸುವ ಸುಖವು ಶಾಶ್ವತವಾಗಿರದೆ ಕ್ಷಣಿಕವಾಗಿರುತ್ತದೆ. ಆ ದೇವತೆಗಳು ಆ ಭಕ್ತರಿಗೆ ಕೊಡುವ ಸುಖವು ಕ್ಷಣಿಕವು. ಶಾಶ್ವತವಾದ ಸುಖವನ್ನು ಕೊಡುವ ಶ್ರೀಹರಿಯು ಉಪಾಸನೆಯೋಗ್ಯ ಶ್ರೇಷ್ಠವೆಂದು ಭಾವವು. ನಾಯಿಯ ಬಾಲವನ್ನು ಆಧಾರವಾಗಿಟ್ಟುಕೊಂಡು ಯಾವನು ತಾನೇ ಇದುವರೆಗೆ ಸಮುದ್ರಜಲವನ್ನು ದಾಟಿರುವನು? ॥೧೭॥

ನೀಚರೂ, ಪಾಪಾಚರಣೆಯಲ್ಲಿ ಆಸಕ್ತರಾದವರೂ, ಆದ ಯಾವ ಮನುಷ್ಯರು ಅನ್ಯರಾದ ಕ್ಷುದ್ರ ದೇವತೆಗಳನ್ನು ಸೇವಿಸುವರೋ, ಕಾಮಿಗಳೂ, ವಿಷ್ಣುಭಕ್ತಿಯಿಂದ ವಿಮುಖರೂ ಆದ ಅಂಥಾ ಜನರು ಖಂಡಿತವಾಗಿಯೂ ನರಕವನ್ನು ಹೊಂದುವರು. ॥೧೮॥

ಸುಖವನ್ನು ಪಡೆಯುವ ಉದ್ದೇಶದಿಂದ ಪತಿಯನ್ನು ತೊರೆದು ಜಾರನೊಂದಿಗೆ ರಮಿಸುವ ಸ್ತ್ರೀಯು ಭ್ರಷ್ಟಳಾಗುವಂತೆ, ಅಚ್ಯುತನಾದ ಶ್ರೀಹರಿಯನ್ನು ನಿಂದಿಸುವ ಮನುಷ್ಯರು ಅಧೋಗತಿಯನ್ನು ಹೊಂದುವರು. ॥೧೯॥

ಭೂಲೋಕದಲ್ಲಿ ಮನುಷ್ಯರು ಆಚರಿಸಿದ ಯಜ್ಞಯಾಗಾದಿಗಳಲ್ಲಿ ಕೊಡಲ್ಪಟ್ಟ ಹವಿರ್ಭಾಗವನ್ನು ಸೇವನೆ ಮಾಡುವ ದೇವತಾಜನಗಳು ಕೇವಲ ಸ್ವಹಿತವನ್ನೇ ಬಯಸುವವರಾಗಿರುತ್ತಾರೆ. ಮನುಷ್ಯನು ಅಲ್ಪವಾದ ಅಪರಾಧವನ್ನೆಸಗಿದರೂ ಸಹ, ಅವನ ದೇಹವನ್ನೂ ಮತ್ತು ಧನವನ್ನೂ ನಾಶಮಾಡುವವರಾಗುತ್ತಾರೆ. ॥೨೦॥

ಯೈರ್ಯೈಃ ಸಂಸೇವಿತಾ ದೇವಾಃ ನೈವ ತೇಷಾಂ ಸುಖಂ ಧ್ರುವಮ್ ।
ಸದೈವ ಸೂರ್ಯಂ ಸಂಸೇವ್ಯ ಪಂಗುರೇವಾರುಣೋಽಭವತ್ ॥೨೧॥

ಶಿವಸೇವಾಂ ಸಮಾಸಾದ್ಯ ಕ್ಷಯಂ ಪ್ರಾಪ ವೃಕೋದರಃ ।
ಬಾಣೋ ಬಾಹುಸಹಸ್ರಸ್ಯ ನಾಶಂ ಕೃಷ್ಣಾದವಾಪ ಹ ॥೨೨॥

ವಿಶ್ವರೂಪಃ ಸುರಪತಿಂ ಸಂತೋಷ್ಯ ನಿಧನಂ ಗತಃ ।
ಆರಾಧನಾವಿರೋಧಾಭ್ಯಾಂ ದೇವೈರ್ನಾಶೋ ಹಿ ದೃಶ್ಯತೇ ॥೨೩॥

ವಿಪರೀತಮಿದಂ ವಿಷ್ಣೋ ರುಭಾಭ್ಯಾಂ ಮುಕ್ತಿಭಾಗ್ಭವೇತ್ ।
ಆರಾಧ್ಯ ಮುನಯೋ ಗೋಪ್ಯಃ ಕುಬ್ಜಾ ಚೈದ್ಯೋ ದ್ವಿಷನ್ಹರಿಮ್ ॥೨೪॥

ಹನೂಮಾನ್ ಜಾಂಬವಾನ್ ಭೀಷ್ಮೋಽನ್ಯೇಽಪಿ ತತ್ಪ್ರಿಯತಾಂ ಗತಾಃ ।
ಯಸ್ಯ ತಸ್ಯ ಸಮುದ್ಧಾರಃ ಸಂಸೃತೇಃ ಸ್ಯಾನ್ನ ಸಂಶಯಃ ॥೨೫॥

---

ಯಾವ ಯಾವ ಮನುಜರು ಅನ್ಯದೇವತೆಗಳನ್ನು ಉಪಾಸಿಸುವರೋ ಅವರಿಗೆ ಶಾಶ್ವತವಾದ ಸುಖವು ಲಭಿಸುವುದೇ ಇಲ್ಲ. ಅರುಣನು ಸರ್ವಕಾಲದಲ್ಲಿಯೂ ಸೂರ್ಯನ ಸಾರಥಿಯಾಗಿ ಅವನನ್ನು ಸೇವಿಸುತ್ತಿದ್ದರೂ ಪಂಗುವೇ ಆಗಿದಾನೆ. ಎಂದರೆ ಕಾಲಿಲ್ಲದವನೇ ಆಗಿರುವನು. ವೃಕೋದರನು ಶಿವನನ್ನು ಸೇವಿಸಿ ನಾಶವನ್ನೈದಿದನು. ಶಿವಸೇವಕನಾದ ಬಾಣಾಸುರನು ಶ್ರೀ ಕೃಷ್ಣನ ದೆಸೆಯಿಂದ ತನ್ನ ಸಹಸ್ರ ಬಾಹುಗಳನ್ನು ಕಳೆದುಕೊಂಡನು. ವಿಶ್ವರೂಪನೆಂಬುವನು ಇಂದ್ರನನ್ನು ಸಂತೋಷಪಡಿಸಿ ಅವನಿಂದ ನಾಶವನ್ನು ಹೊಂದಿದನು. ಹೀಗೆ ಅನ್ಯ ದೇವತೆಗಳನ್ನು ಉಪಾಸನೆ ಮಾಡುವುದರಿಂದಲೂ ಮತ್ತು ಅವರೊಂದಿಗೆ ವಿರೋಧ ಭಾವವನ್ನು ಬೆಳೆಸುವುದರಿಂದಲೂ ನಾಶವು ಸಿದ್ಧವಾಗಿರುವುದು. ॥೨೧-೨೨-೨೩॥

ವಿಷ್ಣುವಿನ ವಿಷಯದಲ್ಲಿ ಮಾತ್ರ ಆರಾಧನ ಮತ್ತು ವಿರೋಧ ಇವೆರಡೂ ವಿಪರೀತಫಲಗಳಾಗಿರುತ್ತವೆ. ಎಂದರೆ ವಿಷ್ಣುವನ್ನು ಆರಾಧಿಸುವವನೂ ಮುಕ್ತಿಯನ್ನು ಹೊಂದುತ್ತಾನೆ. ದ್ವೇಷಿಸುವವನೂ ಸಹ ಮುಕ್ತಿಯನ್ನೈದುವನು. ಮುನಿಗಳೂ, ಗೋಪಿಕಾಸ್ತ್ರೀಯರೂ ಮತ್ತು ಕುಬ್ಜೆಯೆಂಬ ಸ್ತ್ರೀ ಇವರೆಲ್ಲರೂ ಸಹ ವಿಷ್ಣುವನ್ನು ಆರಾಧಿಸಿ, ಅವನ ಪ್ರೀತಿಗೆ ಪಾತ್ರರಾಗಿ, ಸದ್ಗತಿಯನ್ನು ಪಡೆದರು. ಚೇದಿದೇಶದ ರಾಜನಾದ ಶಿಶುಪಾಲನು ವಿಷ್ಣುವನ್ನು ದ್ವೇಷಿಸಿದರೂ ಅಂತ್ಯದಲ್ಲಿ ವಿಷ್ಣು ಸಾಯುಜ್ಯ

**ಅಥ ಸ್ತ್ರೀ ಸಂಗಮೇ ದೋಷಾನ್ ಕಥಯಾಮಿ ಮುನೀಶ್ವರಾಃ ।**
**ಶ್ರುತಿಸ್ಮೃತಿಪುರಾಣೇಷು ಸಂಗಃ ಸ್ತ್ರೀಣಾಂ ನಿವಾರಿತಃ ॥೨೬॥**

**ಯತ್ಸಂಗಾತ್ಸಂಕ್ಷಯಂ ಯಾತಿ ಪುಮಾನಗ್ನಿಗತೋ ಯಥಾ ।**
**ರಚಿತಾ ದೇವಮಾಯೇಯಂ ವಿಮೋಹಾಯ ನೃಣಾಮಿಹ ॥೨೭॥**

**ಸ್ತ್ರೀಸಂಗಾಜ್ಜಾಯತೇ ಪುಂಸಾಂ ಸುತಾಗಾರಾದಿಸಂಗಮಃ ।**
**ಯಥಾ ಬೀಜಾಂಕುರಾದ್ವೃಕ್ಷೋ ಜಾಯತೇ ಫಲಪತ್ರವಾನ್ ॥೨೮॥**

---

ವನ್ನೇ ಹೊಂದಿದನು. ಇನ್ನೂ ಇತರರಾದ ಹನುಮಂತ, ಜಾಂಬುವಂತ, ವಿಭೀಷಣ ಮುಂತಾದ ಭಕ್ತರು ವಿಷ್ಣುವನ್ನು ಆರಾಧಿಸಿ ಅವನ ಪ್ರೀತಿಗೆ ಪಾತ್ರರಾಗಿ ಕೃತಾರ್ಥ ರಾದರು. ಯಾವನಿಗೆ ವಿಷ್ಣುವಿನಲ್ಲಿ ಸಂಪೂರ್ಣವಾದ ಭಕ್ತಿ ಇರುವುದೋ ಅವನಿಗೆ ನಿಜವಾಗಿಯೂ ಜನ್ಮ ಮರಣ ಸುಖದುಃಖಾನುಭವಗಳಲ್ಲಿ ಸಿಕ್ಕಿ ಸುತ್ತುತ್ತಿರುವಿಕೆ ಎಂಬ ಸಂಸಾರದಿಂದ ಬಿಡುಗಡೆಯಾಗುವುದು. ಎಂದರೆ ಅವನು ಪುನರ್ಜನ್ಮ ರಹಿತ ವಾದ ಶಾಶ್ವತ ಮುಕ್ತಿಯನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ. ॥೨೪-೨೫॥

ಎಲೈ ಮುನಿವರ್ಯರೇ, ಇನ್ನು ಮುಂದೆ ಸ್ತ್ರೀಯೊಂದಿಗೆ ಸಂಗಮವನ್ನು ಮಾಡು ವುದರಿಂದ ಉಂಟಾಗುವ ದೋಷಗಳನ್ನು ಹೇಳುವೆನು. ವೇದ, ಸ್ಮೃತಿ ಮತ್ತು ಪುರಾಣ ಗಳಲ್ಲಿ ಸ್ತ್ರೀಸಂಗಮವು ನಿಷೇಧಿಸಲ್ಪಟ್ಟಿದೆ. ಏಕೆಂದರೆ, ॥೨೬॥

ಅಗ್ನಿಯನ್ನು ಪ್ರವೇಶಿಸಿದವನು ಹೇಗೆ ನಾಶಹೊಂದುವನೋ, ಅದರಂತೆ ಸ್ತ್ರೀ ಸಂಗಮದಿಂದ ಮನುಷ್ಯನು ನಾಶವನ್ನೈದುವನು. "ಸ್ತ್ರೀ" ಎಂಬುದು, ಮನುಷ್ಯರನ್ನು ಮೋಹಗೊಳಿಸುವುದಕ್ಕೋಸ್ಕರ ಈಶ್ವರ ನಿಂದ ನಿರ್ಮಿಸಲ್ಪಟ್ಟ ಮಾಯೆಯಾಗಿರುತ್ತದೆ. ॥೨೭॥

ವೃಕ್ಷವು ತನಗೆ ಕಾರಣಭೂತವಾದ ಬೀಜ ಮತ್ತು ಅಂಕುರಗಳಿಂದ ಹೇಗೆ ಕ್ರಮವಾಗಿ ಪತ್ರ, ಫಲ ಮುಂತಾದುವುಗಳಿಂದ ಯುಕ್ತವಾಗುವುದೋ, ಅದರಂತೆ ಮನುಷ್ಯರಿಗೂ ಸಹ ಸ್ತ್ರೀಸಂಗಮದಿಂದ ಕ್ರಮವಾಗಿ ಪುತ್ರ, ಗೃಹ ಮುಂತಾದುವು ಗಳೊಂದಿಗೆ ಅಭಿಮಾನದುಃಖಗಳ ಸಂಗಮವುಂಟಾಗುತ್ತದೆ. ॥೨೮॥

ಏಕಯಾ ಯೋಷಿತಾ ಲೋಕಾ ಅಂಧೇ ತಮಸಿ ಪಾತಿತಾಃ ।
ಯಥಾ ಗಜೋ ಮದೋನ್ಮತ್ತಃ ಕರಿಣ್ಯಾ ಪಂಕಪಾತಿತಃ ॥೨೯॥

ಅಹೋ ಜನಾನಾಂ ಮೋಹೋಽಯಂ ಸ್ವವಿನಾಶಂ ನ ಪಶ್ಯತಾಮ್ ।
ಸಂಗೋ ಭವತಿ ಯೋಷಿತ್ಸು ಪತಂಗಾನಾ ಮಿವಾಗ್ನಿಷು ॥೩೦॥

ಅಹೋ ಆಭಿಃ ಕಿಂ ನ ಕೃತಮನಿಷ್ಟಂ ಪುರುಷೇಷ್ವಿಹ ।
ಯಾಭಿರ್ವಶಂ ಸಮಾನೀತಾಃ ಖರಾ ಇವ ನರಾಧಮಾಃ ॥೩೧॥

ಏವಂ ಧನಾದಿವಿಷಯೇ ಷ್ವಾಸಕ್ತಾಶ್ಚ ಜನಾ ಇಹ ।
ಸತ್ಯಂ ಧರ್ಮಂ ದಯಾಂ ಮೈತ್ರೀಂ ತ್ಯಕ್ತ್ವಾ ಯಾಂತಿ ಭವಾರ್ಣವೇ ॥೩೨॥

ಅತೋ ನೃಲೋಕೇ ಸತ್ಸಂಗಾತ್ತ್ಯಕ್ತದುಃಸಂಗ ಆತ್ಮವಾನ್ ।
ಭಕ್ತ್ಯಾ ಹರಿಂ ಭಜನ್ನಿತ್ಯಂ ನಿಷ್ಕಾಮಃ ಶ್ರೇಯ ಆಪ್ನುಯಾತ್ ॥೩೩॥

---

ಮದೋನ್ಮತ್ತವಾದ ಆನೆಯು ಕರಿಣಿಯಲ್ಲಿ (ಹೆಣ್ಣು ಆನೆಯಲ್ಲಿ) ಆಸಕ್ತವಾಗಿ ಹೇಗೆ ಕೆಸರಿನಲ್ಲಿ ಬೀಳಿಸಲ್ಪಡುತ್ತದೆಯೋ, ಅದರಂತೆ ಒಂದೇ ಒಂದು ಸ್ತ್ರೀ ವ್ಯಕ್ತಿಯಿಂದ ಮನುಷ್ಯರು ಅಜ್ಞಾನಾಂಧಕಾರದಲ್ಲಿ ಬೀಳಿಸಲ್ಪಡುತ್ತಾರೆ. ॥೨೯॥

ತಮ್ಮ ವಿನಾಶವನ್ನೇ ಅರಿಯದಿರುವ ಜನಗಳ ಈ ಮೂಢ ಭಾವನೆಯನ್ನು ಏನೆಂದು ಹೇಳಲಿ! ಇದು ಅತ್ಯಾಶ್ಚರ್ಯಕರವಾದದ್ದಾಗಿರುತ್ತದೆ. ದೀಪದ ಹುಳುಗಳು ರೂಪಕ್ಕೆ ಮೋಹಿಸಿ ಹೇಗೆ ಬೆಂಕಿಯಲ್ಲಿ ಬಿದ್ದು ನಾಶವನ್ನೈದುವುವೋ, ಅದರಂತೆ ಮನುಷ್ಯರೂ ಸಹ ಸ್ತ್ರೀಯರಲ್ಲಿ ಆಸಕ್ತರಾಗುವುದರಿಂದ ದುರ್ಗತಿಯನ್ನು ಪಡೆಯುತ್ತಾರೆ. ॥೩೦॥

ಯಾವ ಸ್ತ್ರೀಯರು ಮನುಷ್ಯರನ್ನು ಕತ್ತೆಗಳನ್ನೋಪಾದಿಯಲ್ಲಿ ತಮ್ಮ ಅಧೀನದಲ್ಲಿಟ್ಟುಕೊಳ್ಳುತ್ತಿರುವರೋ ಅಂಥಾ ಸ್ತ್ರೀಯರಿಂದ ಮನುಷ್ಯರಲ್ಲಿ ಯಾವ ರೀತಿಯ ಅನಿಷ್ಟವು ತಾನೇ ಮಾಡಲ್ಪಡುವುದಿಲ್ಲ? ॥೩೧॥

ಈ ರೀತಿಯಲ್ಲಿ ಲೋಕದ ಜನರು ಧನಾದಿ ವಿಷಯಗಳಲ್ಲಿ ಆಸಕ್ತರಾಗಿ ಸತ್ಯ, ಧರ್ಮ, ದಯಾ, ಮೈತ್ರೀ ಇವುಗಳನ್ನು ಮರೆತು ಸಂಸಾರ ಸಾಗರದಲ್ಲಿ ಮುಳುಗಿರುವರು. ॥೩೨॥

ಸ ವೇದ ಧಾತುಃ ಪದವೀಂ ಪರಸ್ಯ
ದುರಂತವೀರ್ಯಸ್ಯ ರಥಾಂಗಪಾಣೇಃ ।
ಯೋ ಮಾಯಯಾ ಸಂತತಯಾಽನುವೃತ್ತ್ಯಾ
ಭಜೇತ ತತ್ಪಾದಸರೋಜಗಂಧಮ್ ॥೩೪॥

ಅಥೇಹ ಧನ್ಯಾ ಭಗವಂತ ಇತ್ಥಂ
ಯದ್ವಾಸುದೇವೇಽಖಿಲಲೋಕನಾಥೇ ।
ಕುರ್ವಂತಿ ಸರ್ವಾತ್ಮಕಮಾತ್ಮಭಾವಂ
ನ ಯತ್ರ ಭೂಯಃ ಪರಿವರ್ತ್ತ ಉಗ್ರಃ ॥೩೫॥

ಇತಿ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ
ಸೂತ ಶೌನಕ ಸಂವಾದೇ ಪಂಚಮೋಽಧ್ಯಾಯಃ

ಆದುದರಿಂದ ಈ ಭೂಲೋಕದಲ್ಲಿ ಯಾವನು ದುಷ್ಟರ ಸಹವಾಸವನ್ನು ತೊರೆದು ಸತ್ಸಂಗವನ್ನು ಮಾಡುವನೋ ಅವನೇ ಜ್ಞಾನಿಯು, ಅವನೇ ಚೇತನ ನೆನಿಸಿಕೊಳ್ಳುವನು. ಅನವರತವೂ ಫಲಾಪೇಕ್ಷೆಯಿಲ್ಲದೆ ಭಕ್ತಿಯಿಂದ ಶ್ರೀಹರಿಯನ್ನು ಭಜಿಸಿ ಶ್ರೇಯಸ್ಸನ್ನು ಪಡೆಯಬೇಕು. ॥೩೩॥

ಯಾವನು ನಿರಂತರವಾಗಿ ಅನುವರ್ತಿಸುವ ಮಾಯೆಯ ಪಾಶಕ್ಕೆ ಸಿಲುಕದ ವನಾಗಿ, ಅನಂತವೀರ್ಯನೂ, ಚಕ್ರಧಾರಿಯೂ ಆದ ಶ್ರೀಹರಿಯ ಪಾದಪದ್ಮಗಳ ಗಂಧವನ್ನಾಘ್ರಾಣಿಸುವನೋ ಅವನೇ ಶ್ರೀಕೃಷ್ಣನ ಪದವಿಯನ್ನು ತಿಳಿದುಕೊಳ್ಳಲು ಸಮರ್ಥನಾಗುತ್ತಾನೆ. ॥೩೪॥

ಈರೀತಿಯಲ್ಲಿ ಯಾವ ಮನುಷ್ಯನು ಘೋರವಾದ ಈ ಸಂಸಾರ ಸಾಗರದಲ್ಲಿ ಮಗ್ನನಾಗದೆ, ಷಡ್ಗುಣೈಶ್ವರ್ಯಸಂಪನ್ನನೂ, ಸಕಲ ಲೋಕಗಳ ಒಡೆಯನೂ, ಆದ ವಾಸುದೇವನಲ್ಲಿ ಆತ್ಮಭಾವನೆಯನ್ನಿಟ್ಟು ಸೇವಿಸುವನೋ, ಅವನೇ ಧನ್ಯನು. ಅವನಿಗೆ ಜರಾಮರಣವರ್ಜಿತವಾದ ಮುಕ್ತಿಯು ಲಭಿಸುವುದೆಂದು ಭಾವವು) ॥೩೫॥

ಇಲ್ಲಿಗೆ ಶ್ರೀ ಸಕಲ ಪುರಾಣ ಸಾರಭೂತವಾದ, ಸೂತಶೌನಕಸಂವಾದರೂಪದಲ್ಲಿರುವ, ಆದಿಪುರಾಣದಲ್ಲಿ ಐದನೆಯ ಅಧ್ಯಾಯವು ಸಮಾಪ್ತವಾಯಿತು.

*

॥ ಶ್ರೀಗಣೇಶಾಯನಮಃ ॥

॥ ಓಂ ನಮೋ ಭಗವತೇ ವಾಸುದೇವಾಯ ॥

# ಆದಿಪುರಾಣಂ

॥ ಅಥ ಷಷ್ಠೋಽಧ್ಯಾಯಃ ॥

## ಆರನೆಯ ಅಧ್ಯಾಯವು

**ಏಕದಾ ಯಾದವಃ ಕಶ್ಚಿದ್ವಸುದೇವೋ ಮಹಾಮನಾಃ ।**
**ಪಾಣಿಂ ಗೃಹೀತ್ವಾ ದೇವಕ್ಯಾಃ ಪ್ರಯಾಣೇ ರಥಮಾರುಹತ್ ॥೧॥**

**ಉಗ್ರಸೇನಸುತಃ ಕಂಸೋ ಭೋಜಾನಾಂ ಕುಲಪಾಂಸನಃ ।**
**ಪ್ರತ್ಯುಜ್ಜಗಾಮ ಭಗಿನೀಂ ರೌಕ್ಮೈಃ ರಥಶತೈರ್ವೃತಃ ॥೨॥**

**ತದಾಽಭೂದ್ದೈವವಾಣೀಯಂ ಸರ್ವೇಷಾಂ ಶೃಣ್ವತಾಂ ಪಥಿ ।**
**ಅಸ್ಯಾಸ್ತ್ವಾಮಷ್ಟಮೋ ಗರ್ಭೋ ಹಂತಾ ಯಾಂ ವಹಸೇಽಬುಧ ॥೩॥**

ಒಂದಾನೊಂದು ಕಾಲದಲ್ಲಿ, ಯದುವಂಶ ಸಂಭೂತನಾದ ಮತ್ತು ಮಹಾಮನಸ್ವಿಯಾದ ವಸುದೇವನೆಂಬುವನು, ದೇವಕಿಯೊಂದಿಗೆ ಪಾಣಿಗ್ರಹಣವನ್ನು ಮಾಡಿಕೊಂಡು ಸ್ವರಾಜ್ಯವನ್ನು ಕುರಿತು ಪ್ರಯಾಣವನ್ನು ಬೆಳೆಸತಕ್ಕವನಾಗಿ ರಥವನ್ನು ಏರಿದನು. ॥೧॥

ಉಗ್ರಸೇನನ ಮಗನೂ, ಭೋಜವಂಶಸಂಭೂತರಾದ ಜನರ ಕುಲಕ್ಕೆ ಕಂಟಕಪ್ರಾಯನೂ, ಆದ ಕಂಸನು ಸುವರ್ಣಮಯವಾದ ನೂರುರಥಗಳಿಂದ ಪರಿವೃತನಾಗಿ ತಂಗಿಯಾದ ದೇವಕಿಯನ್ನು ಬೀಳ್ಕೊಡಲು ಹೊರಟನು. ॥೨॥

ಆಗ ಮಾರ್ಗದಲ್ಲಿ ತಿರುಗಾಡುವ ಸಕಲ ಜನರಿಗೂ ಕೇಳಿಸುವಂತೆ ದೈವವಾಣಿ (ಅಶರೀರವಾಣಿ)ಯಾಯಿತು. “ಅಜ್ಞನಾದ ಕಂಸನೇ, ನೀನು ಯಾರನ್ನು ಅನುಸರಿಸುತ್ತಿರುವೆಯೋ, ಆ ನಿನ್ನ ತಂಗಿಯಾದ ದೇವಕಿಯ ಎಂಟನೆಯ ಗರ್ಭವು ನಿನ್ನ ನಾಶಕ್ಕೆ ಕಾರಣವಾಗುತ್ತದೆ. ॥೩॥

ತಚ್ಛೃುತ್ವಾ ಸ ಖಲಃ ಕಂಸೋ ದೇವಕೀಂ ಹಂತುಮುದ್ಯತಃ ।
ವಸುದೇವಸ್ಯ ವಾಕ್ಯೇನ ವಾರಿತೋ ಗೃಹಮಾಗಮತ್ ॥೪॥

ತತಸ್ತೌ ನಿಗಡೈರ್ಬದ್ಧ್ವಾ ಚೋಗ್ರಸೇನಂ ಸಹಾನುಜಂ ।
ಬುಭುಜೇ ವಿಷಯಾಸ್ಸರ್ವಾನ್ ಸ್ವಯಂ ದುರ್ಮಂತ್ರಿಭಿಃ ಸಹ ॥೫॥

ಅವಧೀಚ್ಚ ಸ್ವಸುಃ ಪುತ್ರಾನ್ ಕೀರ್ತಿಮಂತಾದಿಕಾನ್ ಷಟ್ ।
ಸಂಕರ್ಷಣಂ ಸಪ್ತಮೇ ತು ಈಶಾನ್ಯಾ ಯೋಗಮಾಯಯಾ ॥೬॥

ನಿಹಂತುಂ ನಾಶಕತ್ಪಾಪೋ ರೋಹಿಣ್ಯಾಂ ಸನ್ನಿವೇಶಿತಂ ।
ಅಷ್ಟಮೇ ಭಗವಾನ್ ವಿಷ್ಣುಃ ಸಚ್ಚಿದಾನಂದವಿಗ್ರಹಃ ॥೭॥

ಮನಃಸ್ಥೋ ವಸುದೇವಸ್ಯ ದೇವಕೀಗರ್ಭ ಆವಿಶತ್ ।

---

ಹೀಗೆ ಭಯಂಕರವಾದ ಆ ಅಶರೀರವಾಣಿಯನ್ನು ಕೇಳಿ, ದುಷ್ಟನಾದ ಕಂಸನು ಕೋಪಗೊಂಡು ದೇವಕಿಯನ್ನು ಕೊಲ್ಲಲು ಉದ್ಯುಕ್ತನಾದನು. ಆದರೆ ವಸುದೇವನು ಹೇಳಿದ ಸಮಾಧಾನ ವಾಕ್ಯಗಳಿಂದ ಶಾಂತನಾಗಿ ತನ್ನ ಮನೆಯನ್ನು ಕುರಿತು ತೆರಳಿದನು. ॥೪॥

ಬಳಿಕ, ಅವರಿಬ್ಬರನ್ನೂ ಎಂದರೆ ವಸುದೇವದೇವಕಿಯರನ್ನೂ ಮತ್ತು ಅನುಜ ಸಹಿತನಾದ ಉಗ್ರಸೇನನನ್ನೂ ಸಹ ಕಾರಾಗೃಹದಲ್ಲಿ ಬಂಧಿಸಿ, ದುಷ್ಟನಾದ ಕಂಸನು ಸ್ವತಃ ರಾಜ್ಯವನ್ನಾಳುತ್ತಿರುವವನಾಗಿ, ದುಷ್ಟರಾದ ಮಂತ್ರಿಗಳೊಂದಿಗೆ ವಿಷಯ ಸುಖಗಳನ್ನು ಅನುಭವಿಸುವವನಾದನು. ॥೫॥

ಪಾಪಿಯಾದ ಕಂಸನು ದೇವಕಿಯ ಉದರದಲ್ಲಿ ಜನಿಸಿದ ಕೀರ್ತಿಮಂತನೇ ಮೊದಲಾದ ಆರುಜನ ಮಕ್ಕಳನ್ನು ನಾಶಮಾಡಿದನು. ಆದರೆ ಏಳನೆಯ ಗರ್ಭದಲ್ಲಿ ಜನಿಸಿದ ಸಂಕರ್ಷಣನೆಂಬ ಶಿಶುವು ಈಶ್ವರನ ಯೋಗಮಾಯೆಯಿಂದ ರೋಹಿಣಿಯ ಗರ್ಭವಶದಲ್ಲಿ ಇಡಲ್ಪಟ್ಟಿತ್ತಾದ್ದರಿಂದ ಅದನ್ನು ಕೊಲ್ಲಲು ಕಂಸನು ಸಮರ್ಥನಾಗಲಿಲ್ಲ. ॥೬॥

ತನ್ನ ಉದರದಲ್ಲಿ ಜನಿಸಿದ ಶಿಶುಗಳೆಲ್ಲವೂ ನಾಶಹೊಂದಿದುದನ್ನು ನೋಡಿ ಮಹಾವ್ಯಸನಕ್ಕೊಳಗಾದ ವಸುದೇವನು ಭಕ್ತಿಯಿಂದ ಪರಮಾತ್ಮನನ್ನು ಪ್ರಾರ್ಥಿಸುತ್ತಿರಲು, ವಸುದೇವನ ಹೃದಯದಲ್ಲಿ ನೆಲೆಸಿದ್ದ ಸಚ್ಚಿನಾನಂದ ವಿಗ್ರಹನೂ

ತಜ್ಜನ್ಮಕಾಲೇ ದೇವಾಶ್ಚ ಬ್ರಹ್ಮೇಶಾನಪುರಃಸರಾಃ ॥೮॥

ಭೂಭಾರಹರಣಾರ್ಥಂ ವೈ ದೇವವೃಂದೈಶ್ಚ ಯಾಚಿತಃ ।
ಗೋಕುಲೇ ಪ್ರಕಟಾರ್ಥಂ ಚ ಸತ್ತ್ವಮೂರ್ತೇಸ್ತು ಮಂತ್ರವತ್ ॥೯॥

ಕಾರಾಗೃಹಂ ಸಮಾಸಾದ್ಯ ಅಭಿಷ್ಟೂಯ ದಿವಂ ಯಯುಃ ।
ತತಶ್ಚ ನಿಜರೂಪೇಣ ಸಂಭೂತಶ್ಚ ಹರಿಃ ಸ್ವಯಂ ॥೧೦॥

ಪಿತೃಭ್ಯಾಂ ಸಂಸ್ತುತೋ ನೀತಃ ಪಿತ್ರಾ ಭೀತೇನ ಗೋಕುಲಂ ।
ಕಂಸಶ್ಚ ಚಂಡಿಕಾ ವಾಕ್ಯಮಾಕರ್ಣ್ಯಾತಿಭಯಾಕುಲಃ ॥೧೧॥
ದುರ್ಮಂತ್ರಿಭಿರ್ಹತಂ ಮೇನೇ ಪಾಪೋ ಬಾಲಾದಿಹಿಂಸನಮ್ ।

ಷಡ್ಗುಣೈಶ್ವರ್ಯಸಂಪನ್ನನೂ ಆದ ಮಹಾವಿಷ್ಣುವು ದೇವಕಿಯ ಎಂಟನೆಯ ಗರ್ಭದಲ್ಲಿ ಪ್ರವೇಶಿಸಿದನು. ॥೭॥

ವಿಷ್ಣುವು ದೇವಕೀಗರ್ಭದಿಂದ ಜನಿಸಲು ಆಕಾಲದಲ್ಲಿ ಬ್ರಹ್ಮ, ಈಶ್ವರ ಮೊದಲಾದ ದೇವತೆಗಳು, ಕಾರಾಗೃಹವನ್ನು ಪ್ರವೇಶಿಸಿ ವಿಷ್ಣುವನ್ನು ಕುರಿತು ಭೂಭಾರವನ್ನು ಕಡಿಮೆ ಮಾಡುವಂತೆಯೂ, ಮತ್ತು ಗೋಕುಲದಲ್ಲಿ ಶ್ರೀಕೃಷ್ಣರೂಪದಿಂದ ಪ್ರಕಟನಾಗಿ ಅಲ್ಲಿ ಮೂರ್ತಿಮತ್ತಾಗಿ ನೆಲೆಸುವಂತೆಯೂ ಪ್ರಾರ್ಥಿಸಿದರು. ಮತ್ತು ಪುನಃ ವಿಷ್ಣುವನ್ನು ಸ್ತೋತ್ರಮಾಡಿ ಸ್ವರ್ಗವನ್ನು ಕುರಿತು ತೆರಳಿದರು. ॥೮-೯॥

ಆನಂತರದಲ್ಲಿ ನಿಜರೂಪವನ್ನು ತಾಳಿದ ವಿಷ್ಣುವು ತಂದೆತಾಯಿಗಳಿಂದ ಸ್ತುತಿಸಲ್ಪಟ್ಟನು. ಕಂಸನು ಎಲ್ಲಿ ಈ ಶಿಶುವನ್ನೂ ಕೊಲ್ಲುವನೋ ಎಂಬ ಹೆದರಿಕೆಯಿಂದ ತಂದೆಯಾದ ವಸುದೇವನು ಆ ಶಿಶುವನ್ನು ಗೋಕುಲಕ್ಕೆ ಕರೆದೊಯ್ದನು. ॥೧೦॥

(ದೇವಕಿಯ ಎಂಟನೆಯ ಗರ್ಭದಲ್ಲಿ ಶಿಶುವು ಜನಿಸಿತು. ಎಂಬ ವಿಷಯವನ್ನು ಕೇಳಿದ ಕಂಸನು, ಅದನ್ನು ಕೊಲ್ಲಲು ಕಾರಾಗೃಹಕ್ಕೆ ಬಂದನು. ಮತ್ತು ಆ ಶಿಶುವನ್ನು ನಿರ್ದಯನಾಗಿ ಕೊಲ್ಲಲು ಕೈಗೆ ತೆಗೆದುಕೊಳ್ಳಲು, ಶಿಶುರೂಪದಿಂದಿದ್ದ ಯೋಗಮಾಯೆಯು ಕಂಸನ ಹಸ್ತಗಳಿಂದ ತಪ್ಪಿಸಿಕೊಂಡು ಅತರಿಕ್ಷಕ್ಕೆ ನೆಗೆದು, ಅವನ ಶತ್ರುವಾದ ಶ್ರೀಕೃಷ್ಣನು ಸ್ಥಳಾಂತರದಲ್ಲಿ ಬೆಳೆಯುತ್ತಿರುವನೆಂದು ಹೇಳಿ ಮಾಯವಾದಳು. ಹೀಗೆ ಹೇಳಿದ ದುರ್ಗಿಯ ಮಾತುಗಳನ್ನು ಕೇಳಿ ಕಂಸನು, ದುಷ್ಟರಾದ ತನ್ನ ಮಂತ್ರಿಗಳ ಸಲಹೆಯಂತೆ, ಕಂಡ ಕಂಡ ಬಾಲಕರ ವಧೆಯನ್ನು ಮಾಡು

ನಂದಸ್ತ್ವಾತ್ಮಜ ಉತ್ಪನ್ನೇ ಜಾತಾಹ್ಲಾದೋ ಮಹಾಮನಾಃ ॥೧೨॥

ಚಕ್ರೇ ಮಹೋತ್ಸವಂ ಪಶ್ಚಾದ್ವಸುದೇವಸಮಾಗಮಃ ।
ತತಶ್ಚ ಪೂತನಾಂ ಕೃಷ್ಣಃ ಕಂಸೇನ ಪ್ರೇಷಿತಾಂ ಸ್ತ್ರಿಯಮ್ ॥೧೩॥

ಪೀತ್ವಾ ಸ್ತನಂ ಗೋಕುಲೇ ತು ಪ್ರದದೌ ಜನನೀಗತಿಂ ।
ಕಂಸೇನ ಪ್ರೇರಿತಾನ್ಪಶ್ಚಾತ್ ಸರ್ವಾನೇವ ಮಹಾಸುರಾನ್ ॥೧೪॥

ಹೇಲಯಾ ಹತವಾನ್ ಕೃಷ್ಣಃ ಶನಕೈರ್ನರಲೀಲಯಾ ।
ಉತ್ಕ್ಷಿಪನ್ ಶಕಟಂ ವ್ಯೋಮ್ನಿ ತೃಣಾವರ್ತ ಮಧಃ ಕ್ಷಿಪನ್ ॥೧೫॥

---

ವುದನ್ನು ಹಿತವನ್ನಾಗಿ ತಿಳಿದು ಬಾಲಕರೆಲ್ಲರನ್ನೂ ನಾಶಮಾಡಲು ತನ್ನ ಸೇವಕರಿಗೆ ಆಜ್ಞೆಮಾಡಿದನು.) ॥೧೧॥

ಇತ್ತ ಗೋಕುಲದಲ್ಲಿ ನಂದನು ಪುತ್ರಜನನವಾಗಲು ಸಂತೋಷಗೊಂಡವನಾಗಿ ಮಹತ್ತಾದ ಉತ್ಸವವನ್ನು ಮಾಡಿದನು. ಬಳಿಕ ವಸುದೇವನು ಗೋಕುಲದಿಂದ ಕಾರಾಗೃಹಕ್ಕೆ ಹಿಂದಿರುಗಿದನು. ॥೧೨॥

ಆಮೇಲೆ ಕಂಸನಿಂದ ಕಳುಹಿಸಲ್ಪಟ್ಟ ಪೂತನಿಯೆಂಬ ಸ್ತ್ರೀಯು ಕೃಷ್ಣನನ್ನು ಸಂಹರಿಸಲು ಗೋಕುಲಕ್ಕೆ ಬರಲು, ಶ್ರೀಕೃಷ್ಣನು ಅವಳ ಸ್ತನ್ಯವನ್ನು ಪಾನಮಾಡಿ ಅವಳನ್ನು ಸಂಹರಿಸಿದನು. ॥೧೩॥

ತರುವಾಯ ಕಂಸನಿಂದ ಕಳುಹಿಸಲ್ಪಟ್ಟ ಬಲಿಷ್ಠರಾದ ಸಕಲರಾದ ರಾಕ್ಷಸರನ್ನೂ ಮನುಷ್ಯಸ್ವಭಾವಕ್ಕೆ ಯೋಗ್ಯವಾದ ಕೃತಿಯಿಂದಲೇ ಲೀಲಾಜಾಲವಾಗಿ ಸಂಹರಿಸಿದನು. ಹೇಗೆಂದರೆ, ॥೧೪॥

ಶಕಟಾಸುರನನ್ನು ಅಂತರಿಕ್ಷದಲ್ಲಿ ಹಾರಿಸಿಯೂ, ಮತ್ತು ತೃಣಾವರ್ತವನ್ನು ನೆಲಕ್ಕೆ ಅಪ್ಪಳಿಸಿಯೂ, ವತ್ಸಪಾಲಕನಾದ ಎಂದರೆ ಗೋವಿನ ಕರುಗಳನ್ನು ಕಾಪಾಡುವ ಶ್ರೀಕೃಷ್ಣನು ವತ್ಸ ಮತ್ತು ಬಕಾಸುರ ಎಂಬ ಇಬ್ಬರು ರಾಕ್ಷಸರನ್ನೂ ವಧಿಸಿದನು. ॥೧೫॥

**ವತ್ಸಾನ್ ಪಾಲಯತಾ ತೇನ ಹತೌ ವತ್ಸಬಕಾಸುರೌ ।**
**ಅಘಾಸುರವಧಃ ಪಶ್ಚಾತ್ತತೋ ಬ್ರಹ್ಮವಿಮೋಹನಂ ॥೧೬॥**

**ಧೇನುಕಸ್ಯ ವಧಃ ಪಶ್ಚಾತ್ಕಾಲೀಯಸ್ಯ ಚ ಶಾಸನಮ್ ।**
**ದಾವಾಗ್ನೇಃ ನಿರೀಕ್ಷಣಂ ಪಶ್ಚಾತ್ ಪ್ರಲಂಬಸ್ಯ ವಿಘಾತನಂ ॥೧೭॥**

**ದರ್ಶಯನ್ವಿಶ್ವಮಾಸ್ಯೇ ಚ ಬಾಲ್ಯಲೀಲಾಂ ಸಮಾದಧೇ ।**
**ಮೃದ್ಭಕ್ಷಣಾಭಿಯೋಗೇ ಹಿ ವಿಶ್ವರೂಪ ಪ್ರದರ್ಶನಂ ॥೧೮॥**

**ನಾಮಕೃದ್ಗರ್ಗವಾಕ್ಯೇನ ನಿಜತತ್ವಮಸೂಚಯತ್ ।**
**ದಧ್ಯಾದಿಸ್ತೇಯಂ ಪಶ್ಚಾಚ್ಚ ತತೋ ದಾಮ್ನಾ ಚ ಬಂಧನಂ ॥೧೯॥**

---

ಅನಂತರದಲ್ಲಿ ಶ್ರೀಕೃಷ್ಣನಿಂದ ಅಘಾಸುರನೂ ವಧಿಸಲ್ಪಟ್ಟನು. ಸೃಷ್ಟಿಕರ್ತನಾದ ಬ್ರಹ್ಮನು ಅಜ್ಞಾನಾಭಿಮಾನಗಳಿಂದ ಬಿಡಿಸಲ್ಪಟ್ಟನು. ಬಳಿಕ ಧೇನುಕಾಸುರನೂ, ಕಾಲೀಯಸರ್ಪನೂ ನಿಗ್ರಹಿಸಲ್ಪಟ್ಟರು. ತರುವಾಯ ಶ್ರೀಕೃಷ್ಣನು ಕಾಡುಕಿಚ್ಚಿನ ದೆಸೆಯಿಂದ ಗೋಗೋಪರನ್ನು ಪಾರಾಗುವಂತೆ ಮಾಡಿದ್ದಲ್ಲದೆ, ಪ್ರಲಂಬನೆಂಬ ಅಸುರನನ್ನು ವಧಿಸಿದನು. ತನ್ನ ತಾಯಿಗೆ ಬಾಯಿಯಲ್ಲಿ ವಿಶ್ವ (ಪ್ರಪಂಚ) ವನ್ನು ತೋರಿಸಿ, ಹೀಗೆ ಅದ್ಭುತವಾದ ತನ್ನ ಬಾಲಲೀಲೆಯನ್ನು ವ್ಯಕ್ತಪಡಿಸಿದನು. ||೧೬-೧೭||

ಬಾಲ್ಯದಲ್ಲಿ ಶಿಶುಸ್ವಭಾವಕ್ಕನುಗುಣವಾಗಿ ಮಣ್ಣನ್ನು ಭಕ್ಷಿಸಲು ಅದನ್ನು ಕೇಳಿದ ಜನನಿಯು ಪರೀಕ್ಷಿಸಲು ಅವನ ಬಾಯಿಯನ್ನು ತೆರೆಯಿಸಲಾಗಿ ಶ್ರೀಕೃಷ್ಣನು ವಿಶ್ವರೂಪವನ್ನು ಪ್ರದರ್ಶಿಸಿದನು. ||೧೮||

ನಾಮಕರಣಸಂಸ್ಕಾರವನ್ನು ನೆರವೇರಿಸುವಾಗ ಗರ್ಗಮಹಾಮುನಿಯು ವಿವರಿಸಿದ್ದಂತೆ ಶ್ರೀ ಕೃಷ್ಣನೂ ತನ್ನ ಮಹಿಮೆಯನ್ನು ಸೂಕ್ಷ್ಮವಾಗಿ ಪ್ರಕಟಪಡಿಸಿದನು. ಎಂದರೆ ಅದನ್ನು ತಿಳಿಯಬಲ್ಲಷ್ಟು ಸಂಸ್ಕೃತವಾದ ಮನಸ್ಸುಳ್ಳವರಿಗೆ ತಿಳಿಯುವಂತೆ ಮಾಡಿದನು. ಆಮೇಲೆ ಈ ಜಗದ್ವ್ಯವಹಾರವನ್ನೂ ಎಲ್ಲರಂತೆ ನೆರವೇರಿಸಿದನು. ಎಂದರೆ ಮೊಸರು ಬೆಣ್ಣೆಗಳ ಕಳವು, ಹಾಗೆಯೇ ತಾಯಿಯಿಂದ ಗುಂಡುಕಲ್ಲಿಗೆ ಕಟ್ಟಿಸಿಕೊಂಡಿರುವಿಕೆ, ಇವೇ ಮುಂತಾದ ಕಾರ್ಯವನ್ನೂ ಅನುಸರಿಸುತ್ತಿದ್ದನು. ||೧೯||

ಯಮುಲಾರ್ಜುನಯೋರ್ಭಂಗಸ್ತೇಷಾಂ ಮೋಕ್ಷಶ್ಚ ಕೀರ್ತಿತಃ ।
ವೃಂದಾವನಂ ಸಮಾಗತ್ಯ ಬಾಲ್ಯಲೀಲಾ ವಯಸ್ಯಕೈಃ ॥೨೦॥

ಪ್ರಾವೃಟ್‌ಕ್ರೀಡಾ ಗಿರಿಧೃತಿಃ ಶರತ್ಕ್ರೀಡಾ ತತಃ ಪರಮ್ ।
ಅಷ್ಟಮೇ ವಸ್ತ್ರಹರಣಂ ನವಮೇ ರಾಸಚೇಷ್ಟಿತಮ್ ॥೨೧॥

ವಾತ್ಸಲ್ಯಾದಿಪ್ರಕಾಶಾಯ ವೃಂದಾವನ ಪತೇರ್ಹರೇಃ ।
ತತಶ್ಚ ಮಧುರಾಲೀಲಾ ದ್ವಾರ್ವತ್ಯಾಂ ಚ ತತಃ ಪರಮ್ ॥೨೨॥

ಐಶ್ವರ್ಯಮಿಶ್ರಿತಾ ಚೈವಂ ನರಲೀಲಾ ಪ್ರಕೀರ್ತಿತಾ ॥೨೩॥

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।
ಧರ್ಮಸಂರಕ್ಷಣಾರ್ಥಾಯ ಯಸ್ಯ ಲೀಲಾ ಭವೇದಿಹ ॥೨೪॥

ದ್ವಾಪರೇ ಯುಗಪರ್ಯಂತೇ ಯಥಾಕಾಲೇ ಹರಿಃ ಸ್ವಯಮ್ ।
ಆವಿರಾಸೀತ್ಪೃಥಿವ್ಯಾಂ ವೈ ನೈವ ಮಿಥ್ಯಾ ಕದಾಚನ ॥೨೫॥

ಕೃಷ್ಣನಿಂದ ಯಮುಲಾರ್ಜುನರು ಭಂಗಿಸಲ್ಪಟ್ಟು, ಮೋಕ್ಷವು ಅನುಗ್ರಹಿಸಲ್ಪಟ್ಟಿತು. ವೃಂದಾವನದಲ್ಲಿ ಸಮಾನ ವಯಸ್ಕರಾದ ಸ್ನೇಹಿತರೊಂದಿಗೆ ಬಾಲ್ಯಲೀಲೆಯು ಆಡಲ್ಪಟ್ಟಿತು. ಇದಲ್ಲದೆ ವರ್ಷಾಕಾಲದ ಕ್ರೀಡೆಯನ್ನೂ ಗೋವರ್ಧನ ಪರ್ವತೋದ್ಧಾರವನ್ನೂ, ಬಳಿಕ ಶರತ್ಕಾಲದ ಕ್ರೀಡೆಯನ್ನೂ ಸಹ ಪ್ರದರ್ಶಿಸಿದನು. ಎಂಟನೆಯ ವರ್ಷವಲ್ಲಿ ಗೋಪಿಕಾಸ್ತ್ರೀಯರ ವಸ್ತ್ರಾಪಹರಣವನ್ನೂ, ಒಂಬತ್ತನೆಯ ವರ್ಷದಲ್ಲಿ ರಾಸಕ್ರೀಡೆಯನ್ನೂ ಗೋಪಿಕಾಸ್ತ್ರೀಯರ ಮೇಲಿರುವ ಭಕ್ತಿವಾತ್ಸಲ್ಯವನ್ನು ತೋರಿಸುವುದಕ್ಕೋಸ್ಕರ ಇವೆಲ್ಲವನ್ನೂ ಪ್ರಕಟಿಸಿದನು. ತರುವಾಯ ಮಧುರೆಯಲ್ಲಿಯೂ ಬಳಿಕ ದ್ವಾರಕಾಪಟ್ಟಣದಲ್ಲಿಯೂ ತನ್ನ ಬಾಲಲೀಲೆಗಳನ್ನು ತೋರಿಸಿದನು. ಹೀಗೆ ಮಾನುಷಾವತಾರವನ್ನು ಮಾಡಿದರೂ ಸಹ ಯಾವ ಪರಮಾತ್ಮನು ಈ ಮನುಷ್ಯ ಲೋಕದಲ್ಲಿ ದುಷ್ಟಶಿಕ್ಷಣೆಗೂ, ಶಿಷ್ಟರಕ್ಷಣೆಗೂ ಅಧರ್ಮತಿರಸ್ಕೃತವಾದ ವರ್ಣಾಶ್ರಮಧರ್ಮಗಳ ಪುನರುದ್ಧಾರಕ್ಕೋಸ್ಕರವೂ ಜನ್ಮವನ್ನು ತಾಳಿರುವನೋ ಆ ಪರಮಾತ್ಮನ ಲೀಲೆಗಳು ಮನುಷ್ಯಸ್ವಭಾವಕ್ಕೆ ಅನುಗುಣವಾಗಿಯೂ ಮೀರಿಯೂ ಇದ್ದರೂ ಈಶ್ವರೀಶಕ್ತಿಯಿಂದ ಕೂಡಿಕೊಂಡಿರುತ್ತದೆ. ॥೨೦-೨೧-೨೨-೨೩-೨೪॥

ದ್ವಾಪರಯುಗದ ಅಂತ್ಯದವರೆಗೂ ಯೋಗ್ಯವಾದ ಕಾಲದಲ್ಲಿ ವಿಷ್ಣುವು ಸ್ವತಃ ಪೃಥಿವಿಯಲ್ಲಿ ಆವಿರ್ಭವಿಸಿದ್ದನು. ಇದು ಎಂದಿಗೂ ಸುಳ್ಳಾಗಲಾರದು. ॥೨೫॥

**ಅವತಾರಾ ಹ್ಯಸಂಖ್ಯೇಯಾಃ ಹರೇರ್ವಿಶ್ವಪತೇರ್ಭುವಿ ।**
**ಚತುರ್ಯುಗಾವತಾರಾಶ್ಚ ಪ್ರಧಾನಾಃ ಕಥಿತಾ ಬುಧೈಃ ॥೨೬॥**

**ಅಪ್ರಾಕೃತಗುಣೈಃ ಪೂರ್ಣೋ ನಿತ್ಯಾಸ್ತ್ರಪಾರ್ಷದೈರ್ಯುತಃ ।**
**ಪ್ರೇಯಸೀಭಿರ್ವಯಸ್ಯೈಶ್ಚ ತಥಾ ನಿತ್ಯಪುರೇ ಸ್ಥಿತಃ ॥೨೭॥**

**ಉಪಕಾರಾಯ ಜೀವಾನಾಂ ಭಾವಾನುಕರಣೇನ ಹಿ ।**
**ಭಗವದ್ಭಕ್ತಿಸಾಫಲ್ಯಂ ಲೀಲಾಯಾಂ ಪ್ರಕಟೀಕೃತಂ ॥೨೮॥**

**ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ಸೂತಶೌನಕ ಸಂವಾದೇ ವಿಷಯಸೂಚನಂ ನಾಮ ಷಷ್ಠೋಽಧ್ಯಾಯಃ.**

---

ಪ್ರಪಂಚಕ್ಕೆ ಪ್ರಭುವಾದ ವಿಷ್ಣುವಿನ ಅವತಾರಗಳು ಈ ಭೂಲೋಕದಲ್ಲಿ ಅಸಂಖ್ಯಾತವಾಗಿರುತ್ತವೆ. ಆದರೆ ಕೃತ, ತ್ರೇತ, ದ್ವಾಪರ ಮತ್ತು ಕಲಿ ಎಂಬ ನಾಲ್ಕುಯುಗಗಳಲ್ಲಿ ಕೆಲವು ಪ್ರಧಾನವಾದ ಅವತಾರಗಳನ್ನು ಮಾತ್ರ ಜ್ಞಾನಿಗಳು ಹೇಳಿರುತ್ತಾರೆ. ॥೨೬॥

ಅಕೃತಕವಾದ ಗುಣಗಳಿಂದ ವಿಶಿಷ್ಟನೂ, ಸದಾ ಅಸ್ತ್ರಧಾರಿಗಳಾದ ಸೇವಕರಿಂದ ಪರಿವೃತನೂ, ಪ್ರೇಯಸಿಯರಿಂದಲೂ ಮತ್ತು ಸ್ನೇಹಿತರಿಂದಲೂ ಕೂಡಿದವನೂ ಆದ ಆ ವಿಷ್ಣುವು ಶಾಶ್ವತವಾಗಿ ವೈಕುಂಠದಲ್ಲಿ ವಾಸಿಸುತ್ತಾನೆ. ॥೨೭॥

ಸಂಸಾರದಿಂದ ಯುಕ್ತವಾದ ಈ ಪ್ರಪಂಚದಲ್ಲಿ ಅವತಾರ ಮಾಡೋಣದರಿಂದ ಜೀವರಿಗೆ ಉಪಕಾರವನ್ನೆಸಗುವುದಕ್ಕೋಸ್ಕರ. ಭಗವದ್ಭಕ್ತಿಯ ಸಫಲತೆಯನ್ನು ತನ್ನ ಲೀಲೆಯಿಂದ ವ್ಯಕ್ತಮಾಡಿದನು. ॥೨೮॥

ಇಲ್ಲಿಗೆ ಸಕಲಪುರಾಣಗಳ ಸಾರಭೂತವಾದ ಆದಿಪುರಾಣದಲ್ಲಿ ಸೂತಶೌನಕ ಸಂವಾದದಲ್ಲಿ ವಿಷಯಸೂಚನೆ ಎಂಬ ಆರನೆಯ ಅಧ್ಯಾಯವು ಮುಗಿದುದು.



|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

|| ಅಥ ಸಪ್ತಮೋಽಧ್ಯಾಯಃ ||

## ಏಳನೆಯ ಅಧ್ಯಾಯವು

|| ಸೂತ ಉವಾಚ ||

**ಸ್ತ್ರಿಯೂ ಮೋಹಿಕಯಾ ಕೇ ನ ನಿಹತಾ ಭುವನತ್ರಯೇ ।**
**ಕಚ್ಛೋ ಯಥಾ ಜ್ವಲದ್ವಹ್ನಿಂ ದೃಷ್ಟ್ವೋಲ್ಲಸಿತೋ ಭವೇತ್ ॥೧॥**

**ದಾಹದುಃಖಂ ನ ಜಾನಾತಿ ಸ್ತ್ರಿಯಂ ದೃಷ್ಟ್ವಾ ತಥಾ ಪುಮಾನ್ ।**
**ದೇಹಂ ಮೂತ್ರಪುರೀಷೈಶ್ಚ ಪೂರಿತಂ ಮನ್ಯತೇ ವರಂ ॥೨॥**
**ಮೇದೋಽಸ್ಥಿರಕ್ತಮಜ್ಜಾಢ್ಯಂ ರಮತೇ ತತ್ರ ಮೋಹಿತಃ ।**

---

ಸೂತಮಹರ್ಷಿಯು ಹೇಳಿದನು.— ಪರರನ್ನು ಮೋಹಗೊಳಿಸುವ ಸ್ವಭಾವವುಳ್ಳ ಸ್ತ್ರೀಯಿಂದ ಲೋಕತ್ರಯದಲ್ಲಿ ಯಾರುತಾನೆ ವಂಚಿಸಲ್ಪಡಲಿಲ್ಲ. ಕೂರ್ಮವು ಉರಿಯುತ್ತಿರುವ ಅಗ್ನಿಯನ್ನು ನೋಡಿದ ಮಾತ್ರದಿಂದಲೇ ಹೇಗೆ ಅಗ್ನಿಯ ದಾಹದಿಂದುಂಟಾಗುವ ದುಃಖವನ್ನು ತಿಳಿಯದೆ ಸಂತೋಷಪಡುವುದೋ, ಅದರಂತೆ ಪುರುಷನೂ ಸಹ ಸ್ತ್ರೀಯು ದುಃಖವನ್ನುಂಟುಮಾಡುವವಳೆಂದು ತಿಳಿಯದೆ ಅವಳನ್ನು ನೋಡಿ ಸಂತೋಷಪಡುವನು. ||೧||

ಶರೀರವು ಮಲಮೂತ್ರಗಳಿಂದ ತುಂಬಿರುವುದೆಂದೂ, ಮತ್ತು ಮೇದಸ್ಸು, ಮೂಳೆ, ರಕ್ತ, ಮಜ್ಜ ಮುಂತಾದುವುಗಳಿಂದ ಯುಕ್ತವಾದುದೆಂದೂ, ಇಬ್ಬರೂ ಚೆನ್ನಾಗಿ ಬಲ್ಲರು. ಅದರೂ ಆ ದೇಹವನ್ನು ಮೋಹಿಸಿ ಅದರೊಂದಿಗೆ ರತಿ ಸೌಖ್ಯವನ್ನನುಭವಿಸುತ್ತಾ ಅದನ್ನೇ ಪರಮಸುಖವೆಂದು ಸ್ತ್ರೀಪುರುಷರಿಬ್ಬರೂ ಭ್ರಮಿಸುತ್ತಾರೆ. ||೨||

ಯಥಾ ವಿಷ್ಠಾ ಸಮುದ್ಭೂತಃ ಕೀಟಸ್ತತ್ರೈವ ಮೋದತೇ ॥೩॥

ತಥಾಽಪವಿತ್ರೇ ಸ್ತ್ರೀದೇಹೇ ಮೋದತೇ ಮೋಹಿತೋ ಭೃಶಂ ।
ತದರ್ಥಂ ದುಃಖಮಾಪ್ನೋತಿ ಸುಖವನ್ಮನ್ಯತೇ ಗೃಹೇ ॥೪॥

ಧನಾರ್ಜನೇ ಪರಂ ಯತ್ನಂ ಕರೋತ್ಯಶುಭಕರ್ಮ ಚ ।
ತೃಷ್ಣಯಾ ಭವವಾಹಿನ್ಯಾ ಜಗದ್ಭೂತಾ ಇತಸ್ತತಃ ॥೫॥

ಪ್ರಧಾವಂತಿ ಮೂಢಧಿಯೋ ಹ್ಯನಿಶಂ ಧನಕಾಂಕ್ಷಯಾ ।
ಪ್ರಿಯಾನ್ ಪ್ರಾಣಾನ್ ಅನಾದೃತ್ಯ ಸಮುಚ್ಛ್ರಾಮ್ಯತಿ ಮೂಢಧೀಃ॥೬॥

ಹಿತಾಹಿತಂ ನ ಜಾನಾತಿ ನೈಹಿಕಂ ಪಾರಲೌಕಿಕಮ್ ।
ತೃಷ್ಣಾನೀಹಾರ ನಷ್ಟಾಕ್ಷೋ ನ ಜಾನಾತಿ ವಯೋ ಗತಮ್ ॥೭॥

---

ಮಲದಿಂದ ವಿಸರ್ಜಿಸಲ್ಪಟ್ಟ ಮಲದಲ್ಲಿ ಹುಟ್ಟಿರುವ ಕ್ರಿಮಿಯು ಹೇಗೆ ಆ ಮಲದೊಂದಿಗೇ ಇದ್ದುಕೊಂಡು ಸಂತೋಷವನ್ನು ಹೊಂದುವುದೋ ಅದರಂತೆ ಪುರುಷನೂ ಸಹ ಮೋಹಗೊಂಡವನಾಗಿ ಅಶುಚಿಯಾದ ಸ್ತ್ರೀದೇಹಸಂಗದಲ್ಲಿ ಸಂತೋಷವನ್ನು ಹೊಂದುತ್ತಾನೆ. ॥೩॥

ಈ ಕಾರಣದಿಂದ ದುಃಖವನ್ನು ಅನುಭವಿಸುತ್ತಾನೆ. ಆದರೂ ತಾನು ತನ್ನ ಮನೆಯಲ್ಲಿ ಸುಖವಾಗಿರುವೆನೆಂದು ತಿಳಿದುಕೊಳ್ಳುತ್ತಾನೆ. ॥೪॥

ದ್ರವ್ಯಸಂಪಾದನೆಯಲ್ಲಿ ಅಧಿಕವಾಗಿ ಪ್ರಯತ್ನಮಾಡುತ್ತಾನೆ ಮತ್ತು ಪಾಪ ಕರ್ಮವನ್ನೂ ಎಸಗುತ್ತಾನೆ. ಸಂಸಾರಸಾಗರದಲ್ಲಿ ನಿರಂತರವಾಗಿ ಪ್ರವಹಿಸುತ್ತಲಿರುವ ದುರಾಶೆಯಿಂದ ಯುಕ್ತರಾಗಿ ಅವಿವೇಕಿಗಳು ಹಗಲು, ರಾತ್ರಿಗಳಲ್ಲಿ ಇಲ್ಲಿಂದಲ್ಲಿಗೆ ಧನಾಪೇಕ್ಷಿಗಳಾಗಿ ಸಂಚಾರ ಮಾಡುತ್ತಾರೆ. ॥೫॥

ಅವಿವೇಕಿಯಾದ ಮನುಷ್ಯನು ತನ್ನ ಪ್ರಿಯವಾದ ಪ್ರಾಣಗಳ ಮೇಲಿನ ಆಸೆಯನ್ನೂ ತೊರೆದು ಶ್ರಮಪಡುತ್ತಾನೆ. ಆದರೆ ಇಹ ಮತ್ತು ಪರಲೋಕಗಳ ಹಿತವನ್ನಾಗಲಿ, ಅಹಿತವನ್ನಾಗಲೀ ಗಣನೆ ಮಾಡುವುದಿಲ್ಲ. ॥೬॥

ಆಶೆಯೆಂಬ ಹಿಮದಿಂದ ಆವರಿಸಲ್ಪಟ್ಟ ಕಣ್ಣುಗಳುಳ್ಳವನಾಗಿ, ವಯಸ್ಸು ಅತಿಕ್ರಮಿಸಿದರೂ ಅದನ್ನು ತಿಳಿಯಲಾರದವನಾಗುತ್ತಾನೆ. ॥೭॥

ನ ಬಂಧುರ್ನ ಪಿತಾ ಮಾತಾ ನ ತಸ್ಯ ಸ್ತ್ರೀಸಹೋದರಃ ।
ಏಕಮೇವ ಪರಂ ವಿತ್ತಂ ನಾನ್ಯಂ ಕಿಂಚನ ಸಂಸ್ಕೃತೌ ॥೮॥

ಯದರ್ಥಂ ತ್ಯಜತಿ ಪ್ರಾಣಾನ್ಪಿತೃಮಾತೃ ಸಹೋದರಾನ್ ।
ಸತ್ಯಂ ಧರ್ಮಂ ದಯಾಂ ಮೈತ್ರೀಂ ನ ಧನಾಶಾಂ ಕಥಂಚನ ॥೯॥

ಮಾನಾಪಮಾನಂ ಗಣಯೇನ್ನೈವ ಭಾವಿ ಶುಭಾಶುಭಮ್ ।
ಇಚ್ಛತೇ ಧನಮೇವೈಕಂ ಕೃತ್ವಾಽಪ್ಯಧಮಸೇವನಮ್ ॥೧೦॥

ಪೋಷ್ಯಾಃ ಪುತ್ರಕಳತ್ರಾದ್ಯಾಃ ದೇಯಮೇಭ್ಯಃ ಸುಖಂ ಪುನಃ ।
ನ ಸದರ್ಥೇ ಸ್ವವಿತ್ತಸ್ಯ ಕರೋತಿ ಕುಮತಿರ್ವ್ಯಯಂ ॥೧೧॥

---

ಧನಾರ್ಜನೆಯಲ್ಲಿ ಆಸಕ್ತನಾದವನು, ಬಂಧುಗಳು, ತಂದೆ, ತಾಯಿ, ಹೆಂಡಿತಿ, ಅಣ್ಣತಮ್ಮಂದಿರು ಮುಂತಾದವರನ್ನೂ ಲಕ್ಷಿಸುವುದಿಲ್ಲ. ಅವನಿಗೆ ಈ ಪ್ರಪಂಚದಲ್ಲಿ ಧನವನ್ನು ಬಿಟ್ಟು ಬೇರೆ ಯಾವ ವಸ್ತುವೂ ದೃಗ್ಗೋಚರವಾಗುವುದಿಲ್ಲ. ||೮||

ಧನಾಕಾಂಕ್ಷಿಯು ಯಾವ ಧನಕ್ಕೋಸ್ಕರ ಮಾತಾಪಿತೃ ಸಹೋದರರನ್ನೂ ಮತ್ತು ತನ್ನ ಪ್ರಾಣವನ್ನೂ ಸಹ ತೊರೆಯುವನೋ ಆ ಧನವೇ ಅವನಿಗೆ ಪ್ರಧಾನ ವಾದದ್ದಾಗಿರುತ್ತದೆ. ಧನಾಕಾಂಕ್ಷಿಯು ಸತ್ಯ, ಧರ್ಮ ದಯೆ ಮತ್ತು ಮೈತ್ರಿ ಇವುಗಳನ್ನು ತೊರೆಯಲೂ ಸಿದ್ಧನಾಗಿರುತ್ತಾನೆ. ಆದರೆ ದ್ರವ್ಯದ ಮೇಲಿನ ಆಶೆಯನ್ನು ಮಾತ್ರ ಎಂದಿಗೂ ತ್ಯಜಿಸಲಾರನು. ||೯||

ಧನಾಶೆಯುಳ್ಳವನು, ಗೌರವವನ್ನೂ, ತಿರಸ್ಕಾರವನ್ನೂ ಮುಂದೆ ಸಂಭವಿಸುವ ಶುಭ ಅಥವಾ ಅಶುಭಫಲವನ್ನೂ ಇವುಗಳಲ್ಲಿ ಯಾವುದನ್ನು ಲೆಕ್ಕಿಸುವುದಿಲ್ಲ. ಮತ್ತೇನೆಂದರೆ, ನೀಚಸೇವೆಯನ್ನಾದರೂ ಮಾಡಿ ಧನವನ್ನು ಆರ್ಜಿಸಬೇಕೆಂಬ ಬುದ್ಧಿಯುಳ್ಳವನಾಗಿ ಸದಾ ಧನವನ್ನೇ ಬಯಸುವವನಾಗುತ್ತಾನೆ. ||೧೦||

ಧನಾರ್ಜನೆಯಲ್ಲಿ ಆಸಕ್ತನಾದವನು ಪುತ್ರ, ಮಿತ್ರ, ಕಳತ್ರ ಮುಂತಾದ ಬಂಧುವರ್ಗದವರಿಗೆ ಸುಖವನ್ನುಂಟುಮಾಡಬೇಕೆಂಬ ಅಪೇಕ್ಷೆಯಿಂದ ಧನಾರ್ಜನೆಯಲ್ಲಿ ಆಸಕ್ತನಾಗುವನು. ಆದರೆ ದುರ್ಬುದ್ಧಿಯುಳ್ಳ ಅವನು ಸತ್ಕಾರ್ಯಕ್ಕೋಸ್ಕರ ಧನವನ್ನು ವ್ಯಯಮಾಡಲು ಒಪ್ಪುವುದಿಲ್ಲ. ||೧೧||

ನ ಸಾಧುಭ್ಯೋ ಕಿಂಚಿದ್ದಾತುಮುತ್ಸಹತೇಽಬುಧಃ ।
ದೇವೇ ದತ್ತಮುಕ್ಷಯಂ ಸ್ಯಾತ್ಪರತ್ರೇಹ ಶುಭಂ ಯಥಾ ॥೧೨॥

ಯದಿ ನ ಸ್ಯಾದ್ಗೃಹೇ ವಿತ್ತಂ ವಿವಾಹಾದ್ಯರ್ಥ ಸಿದ್ಧಯೇ ।
ಋಣೇನಾಪಿ ಚ ಕುರ್ವಂತಿ ಪ್ರತಿಷ್ಠಾರ್ಥಂ ಜನೇಷು ಹಿ ॥೧೩॥

ಬಂಧುಷ್ವಾಸಕ್ತಚಿತ್ತಸ್ಯ ನ ಪೋಷಣಪರಸ್ಯಚ ।
ಅಹರ್ನಿಶಂ ಕ್ಲೇಶವತಃ ಕುತೋ ಜ್ಞಾನಂ ಕುತಃಸುಖಂ ॥೧೪॥

ಜ್ಞಾತ್ವಾಽಥ ಧರ್ಮಕರ್ಮಾಣಿ ತದರ್ಥಂ ಕ್ಲಿಶ್ಯತೇ ಭೃಶಂ ।
ನ ದದಾತಿ ನ ಭುಂಕ್ತೇ ಚ ಜಾತೇಽಪಿ ಧನಸಂಚಯೇ ॥೧೫॥

---

ಅಜ್ಞಾನಿಯು ಸತ್ಪಾತ್ರದಲ್ಲೂ ಧನವನ್ನು ದಾನಮಾಡಲು ಉತ್ಸಾಹಪಡುವುದಿಲ್ಲ. ಧನವು ದೇವತಾಕಾರ್ಯದಲ್ಲಿ ಉಪಯೋಗಿಸಲ್ಪಟ್ಟರೆ ಇಹದಲ್ಲಿ ಅತಿಶಯವಾದ ಸೌಖ್ಯವೂ ಪರದಲ್ಲಿ ಶುಭಫಲವೂ ಉಂಟಾಗುವುದು. ಆದರೂ ಅವನು ದೇವತಾ ಕಾರ್ಯಕ್ಕೆ ಧನವನ್ನು ವಿನಿಯೋಗಿಸಲು ಇಷ್ಟಪಡುವುದಿಲ್ಲ. ॥೧೨॥

ಮನೆಯಲ್ಲಿ ಹಣವಿಲ್ಲದಿದ್ದರೆ, ವಿವಾಹಾದಿಕಾರ್ಯಗಳನ್ನು ನೆರವೇರಿಸುವುದಕ್ಕೋಸ್ಕರ ಸಾಲವನ್ನಾದರೂ ಮಾಡುತ್ತಾರೆ. ಏಕೆಂದರೆ, ಅವರು ಜನಗಳಲ್ಲಿ ತಮ್ಮ ಪ್ರತಿಷ್ಠೆಯನ್ನು ತೋರಿಸಿಕೊಳ್ಳಬೇಕೆಂಬ ಆಶೆಯಿಂದ ಕೂಡಿದವರಾಗಿರುತ್ತಾರೆ. ॥೧೩॥

ಬಂಧುಬಾಂಧವರಲ್ಲಿ ಆಸಕ್ತವಾದ ಮನಸ್ಸುಳ್ಳವನೂ, ಪತ್ನೀಪುತ್ರಾದಿಗಳನ್ನು ಪೋಷಿಸದೇ ಇರುವವನೂ ಆಗಿ ಹಗಲೂ ರಾತ್ರಿ ಎನ್ನದೆ ಯಾವಾಗಲೂ ತೊಂದರೆಯನ್ನನುಭವಿಸುತ್ತಾ ಇರುವ ಯಾವನಿಗೆ ತಾನೆ ಜ್ಞಾನವು ಲಭಿಸುವುದು ? ಮತ್ತು ಅಂತಹ ಯಾವನುತಾನೇ ಸುಖಿಯಾಗುವನು ? ॥೧೪॥

ಧರ್ಮಕಾರ್ಯಗಳನ್ನು ಅನುಷ್ಠಾನಮಾಡಬೇಕೆಂದು ತಿಳಿದು ಅದಕ್ಕೋಸ್ಕರ ಧನಾರ್ಜನೆಗಾಗಿ ಕಷ್ಟಪಡುತ್ತಾನೆ. ಆದರೆ ಧನಾರ್ಜನೆಯಾದ ತರುವಾಯ, ಧನವನ್ನು ಹೆಚ್ಚಾಗಿ ಕೂಡಿಟ್ಟ ಮೇಲೂ ದಾನವನ್ನು ಮಾಡಬಯಸುವುದಿಲ್ಲ. ॥೧೫॥

ನ ಕರೋತಿ ಹರೇರ್ಭಕ್ತಿಂ ನ ದಾನಂ ಸಾಧುಸಂಗಮಂ ।
ನ ತೀರ್ಥಯಾತ್ರಾಂ ಕೃಪಣಃ ಕುಟುಂಬಾಸಕ್ತಮಾನಸಃ ॥೧೬॥

ಕುರ್ವಂತಂ ವಿಷ್ಣುಭಕ್ತ್ಯಾದಿ ಪರಂ ಚೋಪಹಸತ್ಯಸೌ ।
ನಿಸ್ನೇಹೋಽಯಂ ಚಾಸಮರ್ಥೋ ನ ಪುಷ್ಣಾತಿ ಸ್ವಬಾಂಧವಾನ್ ॥೧೭॥

ಪರಲೋಕಃ ಕೇನ ದೃಷ್ಟಃ ಕ್ವ ವಾ ಮುಕ್ತಿರ್ಭವಿಷ್ಯತಿ ।
ಸ್ವಜನಃ ಕ್ಲಿಶ್ಯತೇ ಯತ್ರ ಮೂಢಸ್ಯಾಸ್ಯ ಕುಟುಂಬಿನಃ ॥೧೮॥

ಯದಿ ಕುಟುಂಬವ್ಯಾಸಕ್ತೋ ಮಹಾಮೋಹ ವಶಂಗತಃ ।
ನಾಶಯತ್ಯಾತ್ಮನಾಽಽತ್ಮಾನಂ ನೈವೋದ್ಧರತಿ ಸಂಸೃತೇಃ ॥೧೯॥

ಅಭಿಮಾನಂ ಚ ಕುರುತೇ ಕೋ ಮದನ್ಯೋಽಸ್ತಿ ಭೂತಲೇ ।
ದೇಶಾದ್ದೇಶಾಂತರಂ ಯಾತಿ ರಾಜ್ಞಾಂ ಸೇವಾಂ ಕರೋತಿ ಚ ॥೨೦॥

---

ಸ್ತ್ರೀಯಲ್ಲಿ ಆಸಕ್ತನಾದವನು ವಿಷ್ಣುವಿನಲ್ಲಿ ಭಕ್ತಿಯನ್ನಿಡುವುದಿಲ್ಲ. ಅತಿ ಲುಬ್ಧನಾಗಿ ದಾನ, ಸತ್ಸಹವಾಸ, ತೀರ್ಥಯಾತ್ರೆ ಮುಂತಾದವುಗಳನ್ನೂ ಆಚರಿಸು ವುದಿಲ್ಲ. ॥೧೬॥

ಹೀಗೆ ಧನಾರ್ಜನೆಯಲ್ಲಿ ಆಸಕ್ತನಾದವನು ವಿಷ್ಣುಭಕ್ತರನ್ನು ಅಪಹಾಸ್ಯ ಮಾಡುತ್ತಾನೆ. ಸ್ನೇಹಭಾವನೆಯಿಂದ ರಹಿತನಾಗಿ ಬೇರೆ ಯಾವ ಕಾರ್ಯಮಾ ಡಲೂ ಅಸಮರ್ಥನಾಗಿ, ತನ್ನ ಬಾಂಧವರನ್ನೂ ರಕ್ಷಿಸಲಾರನು. ॥೧೭॥

ಅಲ್ಲದೆ ಸ್ವರ್ಗಾದಿಪರಲೋಕಗಳನ್ನು ಯಾರುತಾನೇ ನೋಡಿರುವರು ? ಮುಕ್ತಿಯು ಎಲ್ಲಿ ತಾನೇ ಆಗುತ್ತದೆ ? ಎಂಬ ನಾಸ್ತಿಕಭಾವನೆಯಿಂದ ಯುಕ್ತನಾದ ಈ ಮೂಢನು ಸದಾ ಸ್ವಜನರನ್ನು ಹಿಂಸಿಸುತ್ತಿರುತ್ತಾನೆ. ॥೧೮॥

ಹೀಗೆ ನಾಸ್ತಿಕನಾಗಿ ಸ್ತ್ರೀಯರಲ್ಲಿ ಮೋಹವಿಟ್ಟು ಅಜ್ಞಾನಿಯಾಗಿದ್ದರೆ ತನ್ನಿಂದ ತಾನೇ ನಾಶಹೊಂದುವನೇ ಹೊರತು, ಈ ಸಂಸಾರಸಾಗರದಿಂದ ಎಂದಿಗೂ ಉದ್ಧಾರವನ್ನು ಹೊಂದಲಾರನು. (ಇಹದಲ್ಲಿ ಬಹುದುಃಖವನ್ನನುಭವಿಸಿ ಅಂತ್ಯದಲ್ಲಿ ನರಕಭಾಜನನಾಗುತ್ತಾನೆ ಎಂದು ಭಾವವು). ॥೧೯॥

ಇಂಥಾ ಅವಿವೇಕಿಯು ಬಹು ದುರಹಂಕಾರದಿಂದ ಕೂಡಿದವನಾಗಿ, ಈ ಜಗತ್ತಿನಲ್ಲಿ ನನಗಿಂತಲೂ ಗೌರವಶಾಲಿಯಾದವನು ಮತ್ತು ಸುಖಿಯೂ ಯಾವನು

ಪೌರುಷೇಣ ಚ ಯುಕ್ತಸ್ಯ ಜನಸ್ಯೈವ ಮಹೀತಲೇ ।
ಅಬಾಂಧವೋಽಪಿ ಬಂಧುಃ ಸ್ಯಾದನ್ಯಸ್ಯಾತ್ರ ಮಹಾಜನಾಃ ॥೨೧॥

ಗೃಹಂ ಕಸ್ಯ ಸುತಾಃ ಕಸ್ಯ ಮಿತ್ರಾಣಿ ಸ್ವಜನಾಃ ಸ್ತ್ರಿಯಃ ।
ಕಶ್ಚಿನ್ನ ಸುಖದೋ ಲೋಕೇ ಶರೀರೇ ದುಃಖಸಂಭವೇ ॥೨೨॥

ಯಾವದ್ದೇಹೋ ಮನುಷ್ಯಸ್ಯ ಸಮರ್ಥಃ ಕಾರ್ಯಸಾಧನೇ ।
ತಾವತ್ಸಮಾದರಂ ಯಾತಿ ವಿಪರೀತಮತೋಽನ್ಯಥಾ ॥೨೩॥

ತಸ್ಮಾತ್ಸಥಾ ಸಾಧನೀಯಮಾರೋಗ್ಯಂ ಪೌರುಷಂ ಯತಃ ।
ಏವಂ ಚಿಂತಯಮಾನಸ್ಯ ಕಾಲೋ ಯಾತಿ ಭೃಶಂ ವೃಥಾ ॥೨೪॥

---

ಇರುತ್ತಾನೆ? ಎಂದು ಹೇಳಿಕೊಳ್ಳುತ್ತಾ ಊರಿನಿಂದ ಊರಿಗೆ, ದೇಶದಿಂದ ದೇಶಕ್ಕೆ ತಿರುಗುತ್ತಾ ಕೊನೆಗೆ ಅಲ್ಪ ಸುಖವನ್ನು ಕೊಡುವ ರಾಜರುಗಳ ಸೇವೆಯನ್ನೂ ಮಾಡುತ್ತಾನೆ. (ಶಾಶ್ವತಸುಖವನ್ನು ಕೊಡುವ ಶ್ರೀಹರಿಯನ್ನು ಚಿಂತಿಸುವುದೇ ಇಲ್ಲ).॥೨೦॥

ಭೂತಲದಲ್ಲಿ ಪೌರುಷದಿಂದ ಕೂಡಿರುವ ಮನುಷ್ಯನಿಗೆ ಬಂಧುವಲ್ಲದ ಮಹಾಜನಗಳೂ ಕೂಡ ಬಾಂಧವರಾಗುತ್ತಾರೆ. ॥೨೧॥

ಮನೆಯು ಯಾರದು? ಪುತ್ರರು ಯಾರು? ಶರೀರದಲ್ಲಿ ದುಃಖವುಂಟಾದಾಗ ಸ್ನೇಹಿತರಾಗಲೀ, ಸ್ವಜನರಾಗಲೀ, ಸ್ತ್ರೀಯರಾಗಲೀ ಯಾರೂ ಸೌಖ್ಯವನ್ನುಂಟುಮಾಡಲಾರರು. ॥೨೨॥

ಮನುಷ್ಯನ ದೇಹವು ಎಲ್ಲಿಯ ವರೆಗೆ ತನ್ನ ಕಾರ್ಯಗಳನ್ನು ನೆರವೇರಿಸಲು ಸಮರ್ಥವಾಗಿರುವುದೋ, ಅಲ್ಲಿಯ ವರೆಗೆ ಅದು ಸರ್ವರ ಆದರಕ್ಕೂ ಪಾತ್ರವಾಗಿರುತ್ತದೆ. ದೇಹವು ಶುಷ್ಕವಾಗಿ ಕೆಲಸಮಾಡಲು ಅಶಕ್ತವಾದಾಗ ಅದನ್ನು ಯಾರೂ ಆದರಿಸುವುದಿಲ್ಲ. ॥೨೩॥

ಹೀಗೆ ಕ್ಷಣಿಕವಾದ ಪೌರುಷವನ್ನೂ ಮತ್ತು ಆರೋಗ್ಯವನ್ನೂ ಸಂಪಾದಿಸಬೇಕೆಂಬುದರಲ್ಲಿಯೇ ಚಿಂತೆಯನ್ನು ಮಾಡುತ್ತಾ ಇರುವ ಮನುಷ್ಯನಿಗೆ ಕಾಲವು ವ್ಯರ್ಥವಾಗಿ ಅತಿಕ್ರಮಿಸುವುದೇ ಹೊರತು ಇದರಿಂದ ಅವನಿಗೆ ಯಾವ ಪುರುಷಾರ್ಥವೂ ಲಭಿಸಲಾರದು. (ಎಂದಿಗಾದರೂ ನಾಶವಾಗತಕ್ಕ ದೇಹದ ಸೌಖ್ಯವನ್ನಪೇಕ್ಷಿಸದೆ, ಆತ್ಮೋದ್ಧಾರಕ್ಕೆ ತಕ್ಕ ಉಪಾಯವನ್ನು ಚಿಂತಿಸಬೇಕೆಂದು ಭಾವವು) ॥೨೪॥

ಅಹಂ ಮಮೇತಿ ಮೂಢಸ್ಯ ಸ್ವದೇಹೇಽತ್ಯಭಿಮಾನಿನಃ ।
ಕಾಮಾಸಕ್ತಸ್ಯ ನೋ ಸಿದ್ಧ ಮೈಹಿಕಂ ಪಾರಲೌಕಿಕಂ ॥೨೫॥

ವಿಘ್ನಭೂತಾಸ್ತು ಪಂಚೈವ ವಿದ್ಯಂತೇಽತ್ರ ಶರೀರಿಣಃ ।
ದೇವತಾಂತರಸೇವಾ ಸ್ತ್ರೀಸಂಗಮೋ ಧನಸಂಚಯಃ ॥೨೬॥

ಸ್ವಬಾಂಧವೇಷು ಚಾಸಕ್ತಿ ರಭಿಮಾನಂ ಚ ಪಂಚಮಃ ।
ಏತೈರ್ಮೋಹಿತಚಿತ್ತಸ್ಯ ನ ಭಕ್ತಿಃ ಸ್ಯಾಜ್ಜನಾರ್ದನೇ ॥೨೭॥

ಇತ್ಥಂ ಶನೈಸ್ತ್ಯಕ್ತಸತ್ಪೋಽ ಜನೋ ಯಾತ್ಯಧಮಾಂಗತಿಂ ।
ಮುನಯಃ ಸಂತಿ ಲೋಕೇಽಸ್ಮಿಂಸ್ತಪಸಾ ದಗ್ಧ ಕಿಲ್ಬಿಷಾಃ ॥೨೮॥
ಶಂಕಿತಾ ಘೋರಸಂಸಾರಾನ್ನಿತರಾಂ ವನಮಾಶ್ರಿತಾಃ ।

---

ಈ ಶರೀರವೇ ನಾನು, ಶರೀರವು ನನ್ನದೇ ಆಗಿರುತ್ತದೆ. ಹೀಗೆಂದು ಶರೀರದಲ್ಲಿ ಅತಿಯಾದ ಅಭಿಮಾನವುಳ್ಳ ವಿಷಯಾಸಕ್ತನಾದ ಅಜ್ಞಾನಿಗೆ ಐಹಿಕ ಸುಖವಾಗಲೀ ಆಮುಷ್ಮಿಕ ಎಂದರೆ ದೇಹತ್ಯಾಗಾನಂತರ ಲೋಕಾಂತರದಲ್ಲಿ ಆಗತಕ್ಕ ಸುಖವಾಗಲೀ ಲಭಿಸುವುದಿಲ್ಲ. ॥೨೫॥

ಶರೀರಧಾರಿಯಾದ ಜೀವನಿಗೆ ವಿಷ್ಣುವಿಗಿಂತ ಅತಿರಿಕ್ತವಾದ ಕ್ಷುದ್ರದೇವತೆಗಳ ಸೇವೆ, ಸ್ತ್ರೀಸಂಗವು, ಧನಸಂಗ್ರಹ, ಬಂಧು ಬಾಂಧವರಲ್ಲಿ ಆತ್ಮೀಯಭಾವನೆ ಮತ್ತು ದೇಹಾಭಿಮಾನ ಎಂಬ ಈ ಐದೂ ಮೋಕ್ಷಸಂಪಾದನೆಗೆ ಪ್ರತಿಬಂಧಕಗಳಾಗಿರುವುವು. ॥೨೬॥

ಮೇಲೆ ಹೇಳಿದ ಕ್ಷುದ್ರದೇವತೋಪಾಸನಾದಿಗಳಿಂದ ಮೋಹಿಸಲ್ಪಟ್ಟ ಮನಸ್ಸುಳ್ಳವನಿಗೆ ಜನಾರ್ದನನಾದ ವಿಷ್ಣುವಿನಲ್ಲಿ ಭಕ್ತಿಯು ಉತ್ಪನ್ನವಾಗುವುದಿಲ್ಲ. ಇದರಿಂದ ಅವನು ಕ್ರಮಕ್ರಮವಾಗಿ ದುರ್ಮಾರ್ಗಕ್ಕೆ ಎಳೆಯಲ್ಪಟ್ಟು ಕೊನೆಗೆ ನಿಕೃಷ್ಟವಾದ ಗತಿಯನ್ನು ಹೊಂದುವನು. ॥೨೭॥

ಈ ಭೂಲೋಕದಲ್ಲಿ ತಪಸ್ಸಿನಿಂದ ಪಾಪಗಳನ್ನು ಹೋಗಲಾಡಿಸಿಕೊಂಡು ಇರುವ ಮುನಿಗಳು, ಈ ಭಯಂಕರವಾದ ಸಂಸಾರದಿಂದ ಅಧೋಗತಿಯೇ ಪ್ರಾಪ್ತವಾಗುವುದು. ಎಂದು ತಿಳಿದವರಾಗಿ, ಈ ಸಂಸಾರದಲ್ಲಿ ವೈರಾಗ್ಯವನ್ನು ಹೊಂದಿದವರಾಗಿ ಜ್ಞಾನಸಂಪಾದನೆಗೋಸ್ಕರ ಅರಣ್ಯವನ್ನು ಆಶ್ರಯಿಸಿರುವರು. ॥೨೮॥

**ಕೇಚಿದ್ಧರಿಪದಂ ಪ್ರಾಪ್ತಾಃ ಪರಾವೃತ್ತಾ ನ ಭೂತಲೇ ॥೨೯॥**

**ಭಕ್ತಿಭಾವವಿಧಾನಾಸ್ತೇ ಪಾರ್ಷದಾಃ ಸನ್ನಿಧೌ ಸ್ಥಿತಾಃ ।**
**ನ ತ್ಯಜಂತಿ ಕ್ಷಣಮಪಿ ಕ್ವಾಪಿ ಪಾರ್ಶ್ವಂ ಮಧುದ್ವಿಷಃ ॥೩೦॥**

**ತಸ್ಮಾನ್ನ ಸಾ ಗತಿರ್ನೃಣಾಂ ಭವೇತ್ಕಪಟಕರ್ಮಿಣಾಂ ॥೩೧॥**

॥ ಋಷಯ ಊಚುಃ ॥

**ನಾರದಃ ಪಾರ್ಷದಶ್ರೇಷ್ಠೋ ವಿಷ್ಣೋರೇಕಾಂತಭಕ್ತಿಮಾನ್ ।**
**ಕೃಷ್ಣಂ ಹಿತ್ವಾ ತಸ್ಯ ಲೋಕಾನ್ ಪ್ರತಿ ಪರ್ಯಟನಂ ಕಥಂ ॥೩೨॥**

---

ಜ್ಞಾನಸಂಪಾದನೆಗೋಸ್ಕರ ಅರಣ್ಯವನ್ನು ಆಶ್ರಯಿಸಿದವರಲ್ಲಿ ಕೆಲವರು ಶಾಶ್ವತವಾದ ವಿಷ್ಣುವಿನ ಪದವಿಯನ್ನು (ಮುಕ್ತಿಯನ್ನು) ಹೊಂದಿದವರಾಗಿ ಪುನಃ ಹಿಂತಿರುಗಿ ಈ ಭೂಲೋಕದಲ್ಲಿ ಜನ್ಮವನ್ನು ಹೊಂದಿರುವುದಿಲ್ಲ. ॥೨೯॥

ಭಕ್ತಿಯೋಗದಿಂದ ಯುಕ್ತರಾದ ಅವರು ಸರ್ವದಾ, ವಿಷ್ಣುವಿನ ಸೇವಕರಾಗಿ ಅವನ ಸನ್ನಿಧಾನದಲ್ಲಿಯೇ ಇರುವವರಾಗುತ್ತಾರೆ. ಈರೀತಿಯಲ್ಲಿ ವಿಷ್ಣುಪದವಿಯನ್ನು ಪಡೆದ ಭಕ್ತರು ಕ್ಷಣಕಾಲವಾದರೂ ವಿಷ್ಣುವಿನ ಸಾನ್ನಿಧ್ಯವನ್ನು ತ್ಯಜಿಸದೆ ನಿರಂತರವಾಗಿ ಅವನನ್ನೇ ಸೇವಿಸುತ್ತಿರುವರು. ॥೩೦॥

ಆದುದರಿಂದ ಅತ್ಯಂತ ಪ್ರಯಾಸದಿಂದ ಪಡೆಯಲು ಸಾಧ್ಯವಾದ ಆ ವಿಷ್ಣುಪದವಿಯನ್ನು ಕಪಟಾಚರಣೆಯುಳ್ಳವರು ಹೊಂದಲು ಸಮರ್ಥರಾಗುವುದಿಲ್ಲ. ॥೩೧॥

ಋಷಿಗಳು ಹೇಳಿದರು--(ಈ ಹಿಂದೆ, ವಿಷ್ಣುವನ್ನು ಸಾಕ್ಷಾತ್ಕರಿಸಿ ಅವನ ಸಾನ್ನಿಧ್ಯವನ್ನು ಪಡೆದವರಿಗೆ ಪುನರಾವೃತ್ತಿಯಿರುವುದಿಲ್ಲ. ಅವರು ನಿರಂತರವಾಗಿ ವಿಷ್ಣುವನ್ನೇ ಧ್ಯಾನಿಸುವವರಾಗಿ, ವಿಷ್ಣುಪದವಿಯನ್ನು ತ್ಯಜಿಸದೆ ಅಲ್ಲಿಯೇ ಮಗ್ನರಾಗಿರುತ್ತಾರೆ. ಎಂಬ ಅಂಶವನ್ನು ಸೂತಮಹರ್ಷಿಯು ಹೇಳಲು, ವಿಷ್ಣುಭಕ್ತನಾದ ನಾರದನು ತ್ರಿಲೋಕಸಂಚಾರ ಮಾಡುತ್ತಿರಲು ಮೇಲೆ ಹೇಳಿದ ವಿಷಯವು ಹೇಗೆ ಸಂಗತವಾಗುವುದು? ಎಂಬ ಶಂಕೆಯನ್ನು ಹೊಂದಿದ ಋಷಿಗಳು, ಆ ಶಂಕೆಯನ್ನು ಹೋಗಲಾಡಿಸಿಕೊಳ್ಳಲು ಸೂತಮಹರ್ಷಿಯನ್ನು ಕುರಿತು ಕೇಳುತ್ತಾರೆ.) ಓ ಸೂತಮಹರ್ಷಿಯೇ, ವಿಷ್ಣುವಿನ ಅಂತರಂಗಭಕ್ತನೂ, ಸದಾ ಅವನ ಪಾರ್ಶ್ವದಲ್ಲಿಯೇ ಇರುವವನೂ ಆದ ನಾರದನು ವಿಷ್ಣುವಿನ ಸಾನ್ನಿಧ್ಯವನ್ನು ತ್ಯಜಿಸಿ ತ್ರಿಲೋಕಸಂಚಾರವನ್ನು ಹೇಗೆ ಮಾಡುತ್ತಾನೆ? ಎಂಬುದನ್ನು ವಿವರಿಸಿ ಹೇಳುವವನಾಗು. ॥೩೨॥

|| ಸೂತ ಉವಾಚ ||

ಸಂಸಾರಕೂಪಪತಿತಂ ವಿಷಯೈರ್ಮುಷಿತೇಕ್ಷಣಂ ।
ಗ್ರಸ್ತಂ ಕಾಲಾಹಿನಾ ದೃಷ್ಟ್ವಾ ಜಾಯತೇಽಸ್ಯ ದಯಾ ಜನಮ್॥೩೩॥

ಮೋಹೋಽಯಂ ಪಂಚಧಾ ಪ್ರೋಕ್ತೋ ಬಂಧನಾಯ ನೃಣಾಮಿಹ ।
ಮಾಯಾ ಗುಣೈಃ ಪ್ರತೀಕಾರಂ ತಸ್ಯ ವಕ್ಷ್ಯೇ ದ್ವಿಜೋತ್ತಮಾಃ॥೩೪॥

ನ ಹಿ ಕಶ್ಚಿದುಪಾಯೋಽತ್ರ ಭಗವಂತಂ ಹರಿಂ ವಿನಾ ।
ಸರ್ವಃ ಸರ್ವೈಃ ಸಹಚರತ್ಯವಸ್ಥಾಸ್ವನುವರ್ತತೇ ॥೩೫॥

ಸ್ವೀಯ ವೃತ್ತೇಶ್ಚ ಸಂಯೋಗಂ ನಿಮಿತ್ತೀಕೃತ್ಯ ಭೋಗಭಾಕ್ ।
ಸ ಜೀವೋ ವರ್ತತೇ ಗರ್ಭೇ ಯಥಾತತ್ಕಥಯಾಮ್ಯಹಂ ॥೩೬॥

---

ಸೂತಮಹರ್ಷಿಯು ಹೇಳಿದನು.---ಎಲೈ ಋಷಿಗಳಿರಾ, ಸಂಸಾರವೆಂಬ ಭಾವಿಯಲ್ಲಿ ಪತಿತರಾಗಿರುವ ಮತ್ತು ವಿಷಯ ಸುಖಗಳನ್ನು ಅನುಭವಿಸುವುದರಿಂದ ಜ್ಞಾನ ಶೂನ್ಯರಾಗಿ, ಸಂಸಾರಕೂಪದಿಂದ ಪಾರಾಗಲು ಉಪಾಯುವನ್ನು ಕಾಣದವರಾಗಿರುವ, ಜನನ ಮರಣ ಪ್ರವಾಹದಲ್ಲಿ ಸಿಲುಕಿದವರೂ ಆದ ಜನರನ್ನು ನೋಡಿ ವಿಷ್ಣುಭಕ್ತನಾದ ನಾರದನಿಗೆ ಅವರಲ್ಲಿ ಒಂದು ವಿಧವಾದ ದಯೆಯು ಉತ್ಪನ್ನವಾಗಿರುತ್ತದೆ. ||೩೩||

ಎಲೈ ದ್ವಿಜೋತ್ತಮರೇ, ಈ ಹಿಂದೆ ಮನುಷ್ಯರಿಗೆ ಮೋಕ್ಷವನ್ನು ಪಡೆಯಲು ಪ್ರತಿಬಂಧಕಗಳಾದ ಮೋಹವು ಐದು ವಿಧವಾಗಿ ಇರುವುದೆಂದು ಹೇಳಿರುವೆನು. ಈ ಐದು ವಿಧವಾದ ಮೋಹವೇ ಅನಾದಿ ಸಿದ್ಧವಾದ ಮಾಯೆಯು. ಅದು ಸತ್ತ್ವ ರಜಸ್ತಮಸ್ಸುಗಳೆಂಬ ಮೂರು ಗುಣಗಳಿಂದ ಉಂಟಾಗಿರುತ್ತದೆ. ಆ ಮೋಹವನ್ನು ಹೋಗಲಾಡಿಸುವ ಉಪಾಯವನ್ನು ಹೇಳುವೆನು. ಮೋಹವನ್ನು ನಾಶಮಾಡುವ ಉಪಾಯುವೆಂದರೆ ಹರಿಯೇ ಆಗಿರುವನು. ಷಡ್ಗುಣೈಶ್ವರ್ಯ ಸಂಪನ್ನನಾದ ಹರಿಯನ್ನು ಬಿಟ್ಟು ಮೋಹವನ್ನು ನಾಶಮಾಡುವ ಬೇರೆಯ ಯಾವ ವಸ್ತುವೂ ಉಪಾಯುಭೂತವಾಗಿ ಇರುವುದಿಲ್ಲ. ||೩೪||

ಎಲ್ಲರೂ ಇತರರೊಡನೆ ಸಹಕರಿಸುತ್ತಾ ವ್ಯವಹಾರವನ್ನು ನೆರವೇರಿಸುತ್ತಾರೆ. ಪ್ರತಿಯೊಬ್ಬನೂ ತನ್ನ ಅವಸ್ಥೆಯ ಅವಶ್ಯಕತೆ ಔಚಿತ್ಯಗಳಿಗೆ ತಕ್ಕಂತೆ ಇತರರೊಡನೆ

**ಯದೈವ ಜಾಯತೇ ಸಂಗಃ ಶುಕ್ರಶೋಣಿತಯೋರಿಹ ।**
**ಗರ್ಭಭ್ರೂಣಸ್ತ್ವನುದಿನಂ ತದಾರಭ್ಯ ಪ್ರವರ್ಧತೇ ॥೩೭॥**

**ದ್ರವರೂಪಂ ತದೇಕಾಹ್ನಾ ಕಲಲಂ ಜಾಯತೇ ತ್ರ್ಯಹಾತ್ ।**
**ವೃದ್ಧಿಸ್ತು ಸಪ್ತರಾತ್ರೇಣ ಪಕ್ಷೇಣ ಕಠಿನಂ ಭವೇತ್ ॥೩೮॥**

**ಶಿರೋ ಮಾಸದ್ವಯೇನ ಸ್ಯಾತ್ಪಾಣಿಪಾದಂ ತ್ರಿಮಾಸಕೈಃ ।**
**ಕಟ್ಯುದರಾಂಗುಲೀರೂಪಂ ತುರ್ಯೇ ಮಾಸ್ಯಭಿಜಾಯತೇ ॥೩೯॥**

**ಜಾಯಂತೇ ಮಾಸಿ ರಕ್ತಾದಿ ಧಾತವಃ ಸಪ್ತ ಪಂಚಮೇ ।**
**ಷಷ್ಠೇ ತು ಪೃಷ್ಠವಂಶಾದಿಕೀಕಸಂ ಕರ್ಣನಾಸಿಕೇ ॥೪೦॥**

---

ಸಹಕರಿಸಲು ಅನುಸರಿಸಿ ಹೋಗುತ್ತಾನೆ. ಹಾಗೆಯೇ ತನ್ನ ಜೀವಿಕೆಯನ್ನೂ ಅನುಸರಿಸುತ್ತಿರುತ್ತಾನೆ. ಅವಶ್ಯಕವಾದಾಗಲೆಲ್ಲಾ ಇತರರೊಡನೆ ಸಂಬಂಧವನ್ನು ಪಡೆದು ಅದಕ್ಕೆ ಹೊಂದಿಕೊಂಡು ಕಾರ್ಯಗಳನ್ನು ನೆರವೇರಿಸುತ್ತಾ ಸುಖದುಃಖಗಳ ಅನುಭವ ರೂಪವಾದ ಫಲಕ್ಕೂ ಭಾಗಿಯಾಗುತ್ತಿರುತ್ತಾನೆ. ಈ ತತ್ವಕ್ಕೆ ಅನುಸರಿಸಿ ಗರ್ಭದಲ್ಲೂ ಮಾರ್ಪಾಟು ಆಗುತ್ತದೆ. ಅದರ ವಿವರಣೆಯನ್ನು ಮುಂದೆ ಹೇಳುವೆನು. ॥೩೫-೩೬॥

ಲೋಕದಲ್ಲಿ ಯಾವಾಗ ಸ್ತ್ರೀಪುರುಷರ ಸಂಯೋಗ ಉಂಟಾಗಿ, ಶುಕ್ರಶೋಣಿತಗಳ ಮೇಲನವು ಉಂಟಾಗುವುದೋ, ಆಕಾಲದಿಂದ ಮೊದಲುಗೊಂಡು, ಗರ್ಭಪಿಂಡವು ಪ್ರತಿದಿನವೂ ವೃದ್ಧಿಯನ್ನು ಹೊಂದುತ್ತಲಿರುತ್ತದೆ. ॥೩೭॥

ಆ ಶುಕ್ರಶೋಣಿತಗಳು ಪ್ರಥಮ ದಿವಸದಲ್ಲಿ ದ್ರವರೂಪದಿಂದಿದ್ದು ಮೂರು ದಿವಸಗಳಲ್ಲಿ ಅವೆರಡೂ ಪರಸ್ಪರವಾಗಿ ಬೆರಕೆಯಾಗುತ್ತವೆ. ಏಳು ದಿವಸಗಳಲ್ಲಿ ವೃದ್ಧಿಯನ್ನು ಹೊಂದುತ್ತವೆ. ಹೀಗೆ ವೃದ್ಧಿಯನ್ನು ಹೊಂದಿದ ಪಿಂಡವು ಹದಿನೈದು ದಿವಸಗಳಲ್ಲಿ ಕಠಿಣವಾಗಿ ಆಗುತ್ತದೆ. ॥೩೮॥

ಆ ಗರ್ಭಪಿಂಡದಲ್ಲಿ ಎರಡು ತಿಂಗಳಿಗೆ ಶಿರಸ್ಸೂ, ಮೂರು ತಿಂಗಳುಗಳಲ್ಲಿ ಕೈ ಮತ್ತು ಕಾಲುಗಳೂ, ನಾಲ್ಕನೆಯ ತಿಂಗಳಿನಲ್ಲಿ ಸೊಂಟ, ಹೊಟ್ಟೆ ಕೈ ಬೆರಳುಗಳೂ ಉಂಟಾಗುತ್ತವೆ. ಐದನೆಯ ತಿಂಗಳಿನಲ್ಲಿ ಪೃಷ್ಠವಂಶ ಮುಂತಾದುವುಗಳೂ ಅಸ್ಥಿ, ಕಿವಿಗಳೂ, ಮೂಗು, ಮುಖ, ಕಣ್ಣು ಇವುಗಳೂ ಉಂಟಾಗುತ್ತವೆ. ಒಂಬತ್ತನೆಯ

ಮುಖಂ ನೇತ್ರಂ ಚ ಭವತಿ ನಖರೋಮಾದಿ ಸಪ್ತಮೇ ।
ಸೂಕ್ಷ್ಮಭಾವೋ ಸ್ಥನಿಯಚ್ಚ ಯುಗಪಜ್ಜಾಯತೇಽಖಿಲಂ ॥೪೧॥

ಓಜೋಽಷ್ಟಮೇ ಸಂಚರತಿ ಗರ್ಭೇ ಮಾತರಿ ಚಾಸಕೃತ್ ।
ತೇನ ಮಾತುರ್ಭವೇದ್ಗ್ಲಾನಿರ್ಜಾತಶ್ಚೈವ ನ ಜೀವತಿ ॥೪೨॥

ಸ ದೇಹೀ ನವಮೇ ಮಾಸಿ ಸರ್ವಲಕ್ಷಣ ಸಂಯುತಃ ।
ಜಾನನ್ ಶುಭಾಶುಭಂ ಕರ್ಮ ಸಂಸ್ಮರೇತ್ಪೂರ್ವಜನ್ಮಜಮ್ ॥೪೩॥

ಮಾತರೋ ವಿವಿಧಾ ದೃಷ್ಟಾಃ ಪಿತರೋ ಭ್ರಾತರಸ್ತಥಾ ।
ನಾನಾಯೋನಿಮುಹಂ ಪ್ರಾಪ್ತೋ ಮನುಷ್ಯಪಶುಪಕ್ಷಿಣಾಂ ॥೪೪॥

---

ಮಾಸದಲ್ಲಿ ಉಗುರು ಕೂದಲು ಮುಂತಾದುವುಗಳೂ ಹುಟ್ಟುತ್ತವೆ. ಈ ಮೇಲೆ ಹೇಳಿದ ಸ್ಥೂಲಶರೀರದ ಭಾಗಗಳೊಡನೆ ಸೂಕ್ಷ್ಮಭಾಗಗಳಾದ ಇತರ ಅಂಶಗಳೂ ಜೊತೆ ಜೊತೆಯಲ್ಲಿಯೇ ಒಟ್ಟೊಟ್ಟಾಗಿಯೇ ಉಂಟಾಗಿ ಎಲ್ಲವೂ ಬೆಳೆದು ಬಲಗೊಳ್ಳುತ್ತಾ ಬರುತ್ತವೆ. ॥೩೯-೪೦-೪೧॥

ಎಂಟನೆಯ ಮಾಸದಲ್ಲಿ ಮಾತೃಗರ್ಭದಲ್ಲಿ ಓಜೋಭಾಗವು ಅನೇಕ ವೇಳೆ ಸಂಚರಿಸುತ್ತದೆ. ಇದರಿಂದ ಮಾತೃವಿಗೆ ಬಹಳ ಬಳಲಿಕೆಯುಂಟಾಗುತ್ತದೆ. ಹೀಗೆ ಓಜಸ್ಸು ಅತಿಯಾಗಿ ಸಂಚರಿಸಿದರೆ ಮಾತೃವು ಬದಕುವುದಿಲ್ಲ. ॥೪೨॥

ಒಂಬತ್ತನೆಯ ತಿಂಗಳಿನಲ್ಲಿ ಗರ್ಭದಲ್ಲಿರುವ ದೇಹಧಾರಿಯಾದ ಜೀವನು, ಸಕಲ ಮನುಷ್ಯಲಕ್ಷಣಗಳಿಂದ ಕೂಡಿದವನಾಗಿ ತಾನು ಹಿಂದಿನ ಜನ್ಮಗಳಲ್ಲಿ ಆಚರಿಸಿದ ಪುಣ್ಯಕರ್ಮಗಳನ್ನೂ ಮತ್ತು ಪಾಪಕರ್ಮಗಳನ್ನೂ ಸ್ಮರಿಸುತ್ತಾನೆ. ॥೪೩॥

ಗರ್ಭವಾಸಿಯಾದ ಜೀವನು ಈ ರೀತಿ ಪೂರ್ವಜನ್ಮದ ಕರ್ಮಗಳನ್ನೆಲ್ಲ ವನ್ನೂ ಸ್ಮರಿಸುತ್ತಾನೆ. ನಾನು ಇದುವರೆಗೆ ಅನೇಕ ಮಾತೃಗಳನ್ನು ನೋಡಿರುವೆನು. ಎಂದರೆ ಈ ಜನ್ಮದಲ್ಲಿರುವಂತೆ ಹಿಂದೆ ಅನೇಕ ಜನ್ಮಗಳಲ್ಲಿ ಮಾತೃಗರ್ಭದಲ್ಲಿ ವಾಸಮಾಡಿದ್ದೆನು. ಹಾಗೆಯೇ ಅನೇಕ ಪಿತೃಗರ್ಭದಲ್ಲಿ ವಾಸಮಾಡಿದ್ದೆನು. ಹಾಗೆಯೇ ಅನೇಕ ಪಿತೃಗಳನ್ನೂ ಮತ್ತು ಅನೇಕ ಸಹೋದರರನ್ನೂ ನೋಡಿದ್ದೆನು. ಹಿಂದಿನ ಜನ್ಮಗಳಲ್ಲಿ ಮನುಷ್ಯ, ಪಶು, ಪಕ್ಷಿ ಮುಂತಾದ ಅನೇಕ ಯೋನಿಗಳನ್ನು ಹೊಂದಿದ್ದೆನು. ॥೪೪॥

ತತಶ್ಚ್ರೋಷಿತೋಽತಿದುಃಖೇನ ಗರ್ಭೇ ಮೂತ್ರಮಲಾವೃತಃ ।
ಉಲ್ಬೇನ ವೇಷ್ಟಿತೋ ಭುಗ್ನ ಪೃಷ್ಠ ಗ್ರೀವಾಸ್ಥಿ ಸಂಹತಿಃ ॥೪೫॥

ಗರ್ಭಾಶಯೇ ಸ್ಥಿತೋ ದೇಹೀ ಜ್ಞಾತವಾಂಶ್ಚಿಂತಯೇದಿದಮ್ ।
ಕಿಂ ಕೃತಂ ದುಷ್ಕೃತಂ ಕರ್ಮ ಯತೋ ಗರ್ಭೇ ನಿವೇಶಿತಃ ॥೪೬॥

ಪತಿತೋ ನಿರಯೇ ಘೋರೇ ದುಸ್ಸಹೇ ಗರ್ಭಸಂಜ್ಞಿತೇ ।
ಯದಿತೋ ನಿರ್ಗಮಿಷ್ಯಾಮಿ ಭಜಿಷ್ಯಾಮಿ ಹರಿಂ ಪ್ರಭುಂ ॥೪೭॥

ಯೇನ ಭೂಯೋ ಗರ್ಭವಾಸ ದುಃಖಂ ದ್ರಕ್ಷ್ಯಾಮಿ ನ ಕ್ವಚಿತ್ ।
ಶತಃ ಸ ದಶಮೇ ಮಾಸಿ ನವಮೇ ಚಾನಿಲೈರ್ಬಲಾತ್ ॥೪೮॥

ನಿಸ್ಸಾರಿತೋಽತಿ ದುಃಖಾರ್ತೋ ಯೋನಿಮಾರ್ಗೇಣ ಸಂಕಟಾತ್ ।
ನಿರ್ಗತೋ ಯೋನಿತೋ ದೇಹೀ ಮಾಯಯಾ ಶ್ಲಿಷ್ಯತೇ ಪುನಃ ॥೪೯॥

---

ಈ ಜನ್ಮದಂತೆ ಹಿಂದಿನ ಜನ್ಮಗಳಲ್ಲಿಯೂ, ನಾನು ಮಲಮೂತ್ರಗಳಿಂದ ಆವರಿಸಲ್ಪಟ್ಟವನಾಗಿ ಮಾತೃಗರ್ಭದಲ್ಲಿ ಅತ್ಯಂತ ದುಃಖದಿಂದ ವಾಸವನ್ನು ಮಾಡಿದೆನು. ಅಲ್ಲಿಯೂ ಪೃಷ್ಠ, ಗ್ರೀವಾ, (ಕತ್ತು) ಮೂಳೆಗಳ ಸಮೂಹ ಮುಂತಾದ ಅವಯವಗಳಿಂದ ಕೂಡಿದವನಾಗಿ ಜರಾಯು ಚೀಲದಿಂದ ಆವರಿಸಲ್ಪಟ್ಟಿದ್ದೆನು.॥೪೫॥

ಈ ರೀತಿಯಲ್ಲಿ ಗರ್ಭದಲ್ಲಿ ಇರುವ ಜೀವನು ಪೂರ್ವಜನ್ಮದ ವೃತ್ತಾಂತಗಳನ್ನು ಸ್ಮರಿಸುವವನಾಗಿ ಮುಂದೆ ಹೇಳುವ ರೀತಿಯಲ್ಲಿ ಚಿಂತಿಸುವನು.

ಯಾವ ಪಾಪಕರ್ಮದಿಂದ ಈ ಗರ್ಭವಾಸವನ್ನು ಅನುಭವಿಸುತ್ತಿರುವೆನು ? ಅಂತಹ ಯಾವ ಪಾಪಕರ್ಮವನ್ನು ನಾನು ಮಾಡಿರುವೆನು ? ಗರ್ಭವೆಂದು ಹೆಸರುಳ್ಳ, ಸಹಿಸಲಸಾಧ್ಯವಾದ, ಈ ಘೋರವಾದ ನರಕದಲ್ಲಿ ಏಕೆ ಬಿದ್ದಿರುವೆನು ? ಈ ಗರ್ಭವಾಸದಿಂದ ನಾನು ಬಿಡುಗಡೆಯನ್ನು ಹೊಂದಿ ಹೊರಬಿದ್ದವನಾದರೆ, ಲೋಕೇಶ್ವರನಾದ ಶ್ರೀಹರಿಯನ್ನು ಭಜಿಸುವೆನು. ಯಾವ ಪ್ರಭುವನ್ನು ಭಜಿಸುವುದರಿಂದ ಪುನಃ ಈ ಗರ್ಭವಾಸದಿಂದುಂಟಾಗುವ ದುಃಖವನ್ನು ಹೊಂದುವುದಿಲ್ಲವೋ, ಅಂತಹ ಹರಿಯನ್ನು ಭಜಿಸುವೆನು. ॥೪೬-೪೭॥

ಅನಂತರದಲ್ಲಿ ದೇಹಧಾರಿಯಾಗಿ ಮಾತೃಗರ್ಭದಲ್ಲಿ ವಾಸಿಸುತ್ತಿರುವ ಜೀವನು ಒಂಬತ್ತನೆಯ ತಿಂಗಳಿನಲ್ಲಿ ಒಂದುವಿಧವಾದ ವಾಯುವಿನಿಂದ ಹೊರಕ್ಕೆ ತಳ್ಳಲ್ಪಟ್ಟವ

**ಪಿತೃಭ್ಯಾಂ ಜಡವದ್ಬಾಲಃ ಪೋಷ್ಯಮಾಣೋಽತಿ ಮೂಢಧೀಃ ।**
**ಅಹೋ ಪೋಷಣ ಚಾತುರ್ಯಂ ಹರೇರದ್ಭುತ ಕರ್ಮಣಃ ॥೫೦॥**

**ಗರ್ಭೇ ನಾನಾಹ್ಯಾಂತ್ರನಾಡೀ ಪ್ರಾಪ್ತೇನೈ(ರ)ವ ರಸೇನ ಭೃತ್ ।**
**ಮಾತುರ್ಜಗ್ಧಾನ್ನ ಪಾನೋತ್ಥೈರ್ಬಾಲ್ಯೇಸ್ತನ್ಯೈಶ್ಚ ಪೋಷಣಂ ॥೫೧॥**

**ಶಕ್ತಿರ್ನ ಚಾಲನೇಽಂಗಾನಾಂ ಪಾರ್ಶ್ವಸ್ಯ ಪರಿವರ್ತನೇ ।**
**ದಷ್ಟಃ ಶಯ್ಯಾ ಸ್ಥಿತೈಃ ಕೀಟೈಃ ಮಲಾಕ್ತಃ ಶಯಿತಃ ಸುಖಂ ॥೫೨॥**

---

ನಾಗಿ ಅತಿ ದುಃಖದಿಂದ ಹೊರಗೆ ಬರುವನು. ವೈಷ್ಣವೀಮಾಯೆಯು ಈರೀತಿಯಲ್ಲಿ ಹೊರಗೆ ಬಂದ ಅವನನ್ನು ಅಜ್ಞಾನವು ಪುನಃ ಆವರಿಸುವುದು. ॥೪೮-೪೯॥

ಅಜ್ಞಾನದ ಸಂಬಂಧದಿಂದ ಅವಿವೇಕಿಯಾಗಿರುವಾಗ ಆ ಬಾಲಕನು ಬಾಲ್ಯದಲ್ಲಿ ತಂದೆ ತಾಯಿಗಳಿಂದ ಪೋಷಿಸಲ್ಪಡುತ್ತಾನೆ. ಅಘಟನಘಟನೆಯಲ್ಲಿ ಸಮರ್ಥನಾದ ಪರಮಾತ್ಮನು, ಮಕ್ಕಳನ್ನು ಪೋಷಿಸುವುದರಲ್ಲಿ ಏರ್ಪಡಿಸಿರುವ ಈ ಚಾತುರ್ಯವು ಆಶ್ಚರ್ಯವೇ ಸರಿ. ॥೫೦॥

ಜಗದ್ರಕ್ಷಕನಾದ ಹರಿಯು, ಪ್ರಾಣಿಗಳನ್ನು ಗರ್ಭದಲ್ಲಿರುವಾಗಲೂ ಮತ್ತು ಗರ್ಭದಿಂದ ಹೊರಕ್ಕೆ ಬಂದ ತರುವಾಯವೂ, ಪೋಷಣೆಮಾಡುವ ಕ್ರಮವು ಈರೀತಿಯಲ್ಲಿರುತ್ತದೆ. ಗರ್ಭದಲ್ಲಿ ಅನೇಕ ಒಳನಾಡಿಗಳಿರುವುವು. ತಾಯಿಯು ಸೇವಿಸಿದ ಅನ್ನಪಾನಾದಿಗಳು ರಸರೂಪವಾಗಿ ಪರಿಣಮಿಸಿ, ಆ ಒಳನಾಡಿಗಳ ಮೂಲಕ ಶಿಶುವಿನ ದೇಹವನ್ನು ಸೇರುವುದು. ಇದರಿಂದ ಶಿಶುವು ಜೀವಿಸುತ್ತದೆ. ಇದು ಗರ್ಭದಲ್ಲಿ ಶಿಶುವು ಇರುವಾಗ ಅದನ್ನು ಕಾಪಾಡುವ ಕ್ರಮವಾಗಿರುತ್ತದೆ. ಗರ್ಭದಿಂದ ಹೊರಗೆ ಬಂದಮೇಲೆ ಬಾಲ್ಯಾವಸ್ಥೆಯಲ್ಲಿ, ಮಾತೃವಿನ ಸ್ತನ್ಯವನ್ನು ಪಾನಮಾಡಿ ಜೀವಿಸುತ್ತದೆ. ಇದು ಶಿಶುವು ಬಾಲ್ಯಾವಸ್ಥೆಯಲ್ಲಿರುವಾಗ ಅದನ್ನು ಪೋಷಿಸುವ ಕ್ರಮವಾಗಿರುತ್ತದೆ. ॥೫೧॥

ಶಿಶುವಿಗೆ ಬಾಲ್ಯಾವಸ್ಥೆಯಲ್ಲಿ, ತನ್ನ ಅಂಗಗಳನ್ನು ಅತ್ತಿತ್ತ ಚಲಿಸುವುದಕ್ಕೂ ಮತ್ತು ಪಾರ್ಶ್ವಗಳಲ್ಲಿ ಹೊರಳುವುದಕ್ಕೂ ತಕ್ಕ ಶಕ್ತಿಯಿರುವುದಿಲ್ಲ. ಹಾಸಿಗೆಯಲ್ಲಿರುವ ಕ್ರಿಮಿ ಕೀಟಗಳು ಇವನನ್ನು ಕಚ್ಚುವುವು. ಮತ್ತು ಮಲಮೂತ್ರಗಳಿಂದ ಯುಕ್ತವಾಗಿರುತ್ತಾನೆ. ಆದರೂ ಶಿಶುವು ಸುಖವಾಗಿಯೇ ಮಲಗಿರುತ್ತದೆ. ॥೫೨॥

**ಮೂಕಸ್ತು ಕರ್ಮಣಾಽಶಕ್ತಃ ಪಂಗುರ್ಯಾನೇ ಗೃಹೇ ಕುಣಿಃ ।**
**ಕಾಲೇ ಕತಿಪಯಾ(ಯೇಽ)ತೀತೇ ಭಾಷತೇ ಪರಿಗಚ್ಛತಿ ॥೫೩॥**

**ದಿವಾನಿಶಂ ಸಮೀಪೇಽಸ್ಯ ವರ್ತತೇ ಹಿತಕೃದ್ಧರಿಃ ।**
**ಇಂದ್ರಿಯಾಣಾಂ ಪರಾವೃತ್ತ್ಯಾ ನೈವ ಜಾನಾತಿ ಮೂಢಧೀಃ ॥೫೪॥**

**ತಂ ವಿನಾ ಪೋಷಕಃ ಕೋಽನ್ಯೋ ಧಾತಾ ಪಾಲಯಿತಾ ಪ್ರಭುಃ ।**
**ಆದೌ ಮಧ್ಯೇ ತಥಾಽಂತೇ ಚ ಹರಿಃ ಸರ್ವತ್ರ ಸಂಸ್ಥಿತಃ ॥೫೫॥**

**ನ ತಂ ವಿನಾ ಕ್ವಚಿತ್ ಸ್ನೇಹೋ ದೇಹ ಗೇಹ ಸುತಾದಿಷು ।**
**ನ ತಿಷ್ಠತಿ ಕ್ಷಣಮಪಿ ದಗ್ಧತಂತುರ್ಯಥಾಪಟಃ ॥೫೬॥**

---

ಬಾಲ್ಯದಲ್ಲಿ ಶಿಶುವು ವಾಗ್ವ್ಯಾಪಾರವಿಲ್ಲದಿರುವುದರಿಂದ ಮಾತನಾಡುವ ಸಾಮರ್ಥ್ಯವಿಲ್ಲದುದಾಗಿ ಮೂಕನಂತೆ ಇರುವುದು. ಪಾದಗಳು ಸಂಚರಿಸುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲವಾದುದರಿಂದ ಮನೆಯಲ್ಲಿಯೂ ಸಂಚರಿಸಲಾರದೆ ಕುಂಟನಂತೆ ಇರುವುದು. ಕೈಗಳಿಗೆ ಯಾವ ಕೆಲಸವನ್ನೂ ಮಾಡುವ ಸಾಮರ್ಥ್ಯವಿಲ್ಲದಿರುವುದರಿಂದ ಹೆಳವನಂತೆ ಇರುವುದು. ಆದರೆ ಕೆಲವು ಕಾಲವು ಅತಿಕ್ರಮಿಸಲು ಮಾತನಾಡಲೂ ಮತ್ತು ಸಂಚರಿಸಲೂ ಶಕ್ತಿಯು ಬರುತ್ತದೆ. ॥೫೩॥

ಹಿತೈಷಿಯಾದ ಶ್ರೀಮದ್ವಿಷ್ಣುವು ಅಹೋರಾತ್ರಿಗಳಲ್ಲಿಯೂ ಪುರುಷನ ಸಮೀಪದಲ್ಲಿಯೇ ಇರುವನು. ಆದರೆ ಅಜ್ಞನಾದ ಇವನು ವಿಷಯಾಸಕ್ತನಾಗಿ ಇಂದ್ರಿಯಗಳನ್ನು ಬಾಹ್ಯವ್ಯಾಪಾರಗಳಿಂದ ಉಪಸಂಹರಿಸಿ, ಹಿಂತಿರುಗಿಸಿ ನೋಡಲಾರದೆ ವಿಷ್ಣುವನ್ನು ತಿಳಿಯದವನಾಗಿರುತ್ತಾನೆ. ॥೫೪॥

ಮನುಷ್ಯನನ್ನು ಪೋಷಿಸಲು ವಿಷ್ಣುವನ್ನು ಬಿಟ್ಟು ಬೇರೆಯವನಾದ ಪಾಲಕನೂ, ಮತ್ತು ಸಮರ್ಥನೂ ಯಾರು ತಾನೇ ಇರುವರು? ಆ ಹರಿಯು ಮನುಷ್ಯನ ಬಾಲ್ಯ, ಯೌವನ, ವಾರ್ಧಕ್ಯವೆಂಬ ಮೂರು ಅವಸ್ಥೆಗಳಲ್ಲಿಯೂ ಮನುಷ್ಯನ ಸಮೀಪದಲ್ಲಿ ಅನುಸರಿಸಿರುವನು. ॥೫೫॥

ವಿಷ್ಣುವಿನಲ್ಲಿ ಇಟ್ಟಿರುವ ಪ್ರೀತಿಯು (ಭಕ್ತಿಯು) ಶಾಶ್ವತವಾಗಿರುವುದು. ವಿಷ್ಣುವನ್ನು ಬಿಟ್ಟು ಇನ್ನಿತರ ದೇಹ, ಗೃಹ, ಪುತ್ರ, ಮಿತ್ರ ಕಳತ್ರಾದಿಗಳಲ್ಲಿಟ್ಟು

ತಸ್ಮಿನ್ವಿನಿಸ್ಸೃತೇ ದೇಹಾತ್ತತ್ರ ಸರ್ವೇಂದ್ರಿಯಾಣಿ ಚ ।
ಸ್ವವೃತ್ತಿಷು ನಿವರ್ತಂತೇ ಮೃತ ಇತ್ಯುಚ್ಯತೇ ನೃಭಿಃ ॥೫೭॥

ಯದಿ ತೇ ನ ಭವೇತ್ ಸ್ನೇಹೋ ಹರಿಣಾ ನ ಗೃಹಾದಿಷು ।
ಕಥಂ ಮೋಹಃ ಪುನಃ ಕಾರ್ಯೋ ಮೋಹಾಬ್ಧಿ ನರಕಂ ವ್ರಜೇತ್॥೫೮॥

ತಸ್ಮಾನ್ನಿತ್ಯಂ ಸ ಭಗವಾನ್ ಸೇವ್ಯಃ ಸತ್ಪುರುಷೈರಿಹ ।
ಕಾಮಿನ್ಯಾ ವ್ಯಭಿಚಾರಿಣ್ಯಾ ಯಥಾಕಾಲ ಪ್ರಬುದ್ಧಯಾ ॥೫೯॥

ಯಥಾ ಪ್ರಪದ್ಯತೇ ಜಾರಸ್ತು(ಸ್ತೋ)ಷ್ಯತೇ ಸ ಚ ಸರ್ವಥಾ ।
ಯಥಾ ಕಲ್ಪತರುಃ ಸಾಕ್ಷಾತ್ ಆಶ್ರಿತೇಭ್ಯೋಽರ್ಥದೋ ಭವೇತ್ ॥೬೦॥

---

ಇರುವ ಪ್ರೀತಿಯು (ಸ್ನೇಹವು) ಸುಡಲ್ಪಟ್ಟ ದಾರಗಳಿಂದ ಕೂಡಿರುವ ಬಟ್ಟೆಯಂತೆ ಕಾರ್ಯಕರಣಸಾಮರ್ಥ್ಯವಿಲ್ಲದುದಾಗಿರುತ್ತದೆ. ||೫೬||

ಹರಿಯು ಈ ದೇಹವನ್ನು ತ್ಯಜಿಸಲು, ಸಕಲ ಇಂದ್ರಿಯಗಳೂ, ತಮ್ಮ ತಮ್ಮ ವ್ಯಾಪಾರಗಳಿಂದ ವಿಶ್ರಾಂತಿಯನ್ನು ಹೊಂದುವುವು. ಆವಾಗಲೇ ಮನುಷ್ಯನು ಮೃತನಾದನು. ಎಂದು ಹೇಳಲ್ಪಡುತ್ತಾನೆ. ||೫೭||

ಗೃಹ, ಆರಾಮ, ಪುತ್ರ, ಮಿತ್ರ, ಕಳತ್ರಾದಿಗಳಲ್ಲಿ ಅಭಿಮಾನವನ್ನಿಡದೆ ಆ ಹರಿಯಲ್ಲಿಯೇ ಭಕ್ತಿಭಾವನೆಯನ್ನಿಡುವವನಿಗೆ ಹೇಗೆತಾನೆ ಅಜ್ಞಾನವೂ ಮತ್ತು ಅದರ ಕಾರ್ಯವಾದ ಸಂಸಾರವೂ ಸಂಭವಿಸುವುದು ? ಆದುದರಿಂದ ಹರಿಯಲ್ಲಿ ಭಕ್ತಿಯುತನಾದ ಮನುಜನು ಸಂಸಾರಸಾಗರವೆಂಬ ನರಕವನ್ನು ಹೇಗೆತಾನೇ ಪಡೆದಾನು ? ಪಡೆಯುವುದಿಲ್ಲ. ||೫೮||

ಆದುದರಿಂದ ಲೋಕದಲ್ಲಿ ವಿವೇಕಿಗಳು ಅನವರತವೂ ಭಗವಂತನಾದ ಶ್ರೀಹರಿಯನ್ನು ಸೇವಿಸಬೇಕು. ಆಯಾಕಾಲಗಳಲ್ಲಿ, ತನ್ನ ವ್ಯಭಿಚಾರ ಕಾರ್ಯದಲ್ಲಿ ಜಾಗರೂಕಳಾಗಿರುವ ಜಾರಿಣಿಯಾದ ಸ್ತ್ರೀಯಿಂದ ಜಾರನು ಹೇಗೆ ಸಂತೋಷ ಪಡುವನೋ, ಅದರಂತೆ ಆ ಹರಿಯನ್ನು ಭಜಿಸುವವನು ಆನಂದವನ್ನು ಹೊಂದುವನು ಮತ್ತು ಕಲ್ಪವೃಕ್ಷವು ಹೇಗೆ ತನ್ನನ್ನು ಆಶ್ರಯಿಸಿದವರಿಗೆ ಇಷ್ಟಾರ್ಥಗಳನ್ನು ನೀಡುವುದೋ ಅದರಂತೆ ಹರಿಯು ತನ್ನನ್ನು ಆಶ್ರಯಿಸಿದವರಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುವವನಾಗಿರುವನು. ||೫೯-೬೦||

ಕೋಟಿಭಿರ್ಬಂಧುಭಿರ್ನೈವ ಕರ್ತುಂ ಶಕ್ಯಂ ಹಿತೈಷಿಭಿಃ ।
ಹೃದಯಸ್ಥೇನ ಹರಿಣಾ ಕ್ರಿಯತೇ ಯಜ್ಜನಸ್ಯ ಹಿ ॥೬೧॥

ಅತ್ಯುನ್ನತಂ ನಮಯತಿ ನಮಿತಂ ಪರಿವರ್ಧಯೇತ್ ।
ಕ್ಷಣಾದ್ವರ್ಧಯತೇ ಹೀನಂ ಕರೋತ್ಯೇಕಂ ಕ್ಷಣೇನ ಹಿ ॥೬೨॥

ಚಿಂತಿತಂ ಪುರುಷೈಃ ಕಾರ್ಯಂ ಯತ್ನೈಶ್ಚ ಪರಿರಕ್ಷಿತಂ ।
ನಾನಾಪಾಪೈರ್ವಿರಚಿತಂ ನಶ್ಯತೇ ನ ವಿನಾಶ್ರಿತಂ ॥೬೩॥

---

ಹರಿಭಕ್ತನ ಹೃದಯದಲ್ಲಿ ನೆಲೆಸಿರುವ ಹರಿಯು ಭಕ್ತನಿಗೆ ಯಾವ ಉಪಕಾರವನ್ನು ಮಾಡುವನೋ ಆ ಉಪಕಾರವನ್ನು ಹಿತೈಷಿಗಳಾದ ಮತ್ತು ಕೋಟಿ ಸಂಖ್ಯಾತರಾದ ಬಂಧುಗಳೂ ಸಹ ಮಾಡಲಾರರು. ॥೬೧॥

ಭಗವಂತನಾದ ವಿಷ್ಣುವು ಉನ್ನತಸ್ಥಾನದಲ್ಲಿರುವವನನ್ನು ಅಧೋಗತಿಗೆ ಇಳಿಸುವ ಸಾಮರ್ಥ್ಯವುಳ್ಳವನಾಗಿರುವನು. ಅಧೋಗತಿಯಲ್ಲಿರುವವನಿಗೆ ಉನ್ನತ ಪದವಿಯನ್ನು ದಯಪಾಲಿಸುವ ಸಾಮರ್ಥ್ಯವುಳ್ಳವನಾಗಿರುತ್ತಾನೆ. ಎಂದರೆ ಹರಿಯು ತನ್ನಲ್ಲಿ ಭಕ್ತಿಯನ್ನಿಡದೆ ಕೇವಲ ವಿಷಯಾಸಕ್ತರಾಗಿ ಮದಾಂಧರಾದವರಿಗೆ, ಅಧೋಗತಿಯನ್ನು ಕೊಡುವವನೂ, ತನ್ನನ್ನು ಪೂಜಿಸುವವರನ್ನು ಅಭಿವೃದ್ಧಿಸ್ಥಿತಿಯಲ್ಲಿಡುವ ಸಾಮರ್ಥ್ಯವುಳ್ಳವನೂ ಆಗಿರುವನೆಂದರ್ಥವು. ಅದರಂತೆ ಅವನು ದರಿದ್ರನನ್ನು ಐಶ್ವರ್ಯವಂತನನ್ನಾಗಿಯೂ, ಐಶ್ವರ್ಯವಂತನನ್ನು ದರಿದ್ರನನ್ನಾಗಿಯೂ ಮಾಡುವ ಸಾಮರ್ಥ್ಯವುಳ್ಳವನಾಗಿರುತ್ತಾನೆ. ॥೬೨॥

ಆದುದರಿಂದ ವಿವೇಕಿಗಳಾದ ಪುರುಷರು ಈ ಅಂಶವನ್ನು ಚೆನ್ನಾಗಿ ತಿಳಿದು ಮಾಡಬೇಕಾದುದನ್ನು ಪ್ರಯತ್ನಪೂರ್ವಕವಾಗಿ, ಎಂದರೆ ಔದಾಸೀನ್ಯವಿಲ್ಲದೆ, ನೆರವೇರಿಸಬೇಕು. ಪಾಪಿಷ್ಠರಾದ ಜನರು ವಿವೇಚಿಸದೆ ಮಾಡಿದ ಕಾರ್ಯವು ನಾಶವಾಗುವುದುಂಟು. ಫಲವಾಗದ ಮಾತ್ರಕ್ಕೆ ಪ್ರಯತ್ನವು ನಿಷ್ಫಲವೆಂದು ತಿಳಿಯಬಾರದು. ಪಾಪದಿಂದ ಫಲಪ್ರಾಪ್ತಿಗೆ ಈಗ ಅಡ್ಡಿ ಮಾತ್ರ ಉಂಟಾಗಿರುತ್ತದೆಂದು ತಿಳಿಯಬೇಕು. ॥೬೩॥

ತೃಣೀ ಕರೋತ್ಯಸೌ ಮೇರುಂ ತೃಣಮೇಕಂ ಕರೋತಿ ಯಃ ।
ಅಚ್ಛೇದ್ಯಂ ಛೇದಯತ್ಯಾಶು ಅಭೇದ್ಯಂ ಭೇದಯತ್ಯಪಿ ॥೬೪॥

ಬ್ರಹ್ಮಾಂಡಕೋಟಿಸ್ರಷ್ಟಾ ಸ ಕಟಾಕ್ಷ ಕ್ಷಣಮಾತ್ರತಃ ।
ಸಂಹರ್ತಾ ಪಾಲಕಶ್ಚೈಕಸ್ತತಃ ಕೋಽನ್ಯೋ ಭವೇದ್ವಿಭುಃ ॥೬೫॥

ಯೇ ಸಂಸ್ಥಿತಾ ಆತ್ಮನಿ ಯೋಗವಂತಃ
ತದ್ಭಕ್ತಿಭಾವೇನ ಸುಖಂ ನಿವಿಷ್ಟಾಃ ।
ಸ್ವರ್ಗಾದಿ ಸೌಖ್ಯಂ ಪರಿಹೃತ್ಯ ದೂರಾತ್
ಆನಂದ ಸಂದೋಹ ಮವಾಪ್ನುವಂತಿ ॥೬೬॥

ಇತಿ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ
ಸೂತಶೌನಕಸಂವಾದೋ ನಾಮ ಸಪ್ತಮೋಽಧ್ಯಾಯಃ

---

ಭಗವಂತನು ಮೇರುವನ್ನು ತೃಣಸದೃಶವಾದುದನ್ನಾಗಿಯೂ ತೃಣವನ್ನು ಮೇರುವನ್ನಾಗಿಯೂ ಮಾಡುವ ಸಾಮರ್ಥ್ಯವುಳ್ಳವನಾಗಿರುವನು. ಛೇದಿಸಲಸಾಧ್ಯವಾದುದನ್ನೂ ಛೇದಿಸಬಲ್ಲನು. ಮತ್ತು ಭೇದಿಸಲಸಾಧ್ಯವಾದುದನ್ನು ಭೇದಿಸಬಲ್ಲನು ! ॥೬೪॥

ಕೋಟಿಬ್ರಹ್ಮಾಂಡಗಳನ್ನು ಸೃಷ್ಟಿಸುವ ಆ ಹರಿಯು ತನ್ನ ಕಡೆಗಣ್ಣಿನ ನೋಟದಿಂದಲೇ ಜಗತ್ತನ್ನು ರಕ್ಷಿಸುವವನೂ ಮತ್ತು ಸಂಹರಿಸುವವನೂ ಆಗಿರುವನು. ಅವನಿಗಿಂತಲೂ ಬೇರೆಯಾದವನು ಯಾವನು ತಾನೇ ಜಗತ್ಸೃಷ್ಟಿ, ಸ್ಥಿತಿ, ಲಯಗಳಲ್ಲಿ ಸಮರ್ಥನಾದಾನು ? ॥೬೫॥

ಯಾವ ಭಕ್ತರು ತಮ್ಮ ಚಿತ್ತವೃತ್ತಿಗಳನ್ನು ನಿರೋಧಮಾಡಿ, ಆತ್ಮನಲ್ಲಿ ಭಕ್ತಿಭಾವನೆಯುಳ್ಳವರಾಗಿ ಸುಖಾಸೀನರಾಗಿರುವರೋ, ಅವರು ಸ್ವರ್ಗಾದಿಗಳಿಂದ ಉಂಟಾಗುವ ಸುಖವನ್ನು ತೃಣೀಕರಿಸಿ ಮೋಕ್ಷದ ನಿತ್ಯವಾದ ಆನಂದಪರಂಪರೆಗಳನ್ನು ಹೊಂದುತ್ತಾರೆ. ॥೬೬॥

ಇಲ್ಲಿಗೆ ಸಕಲಪುರಾಣಗಳ ಸಾರಭೂತವಾದ ಆದಿಪುರಾಣದಲ್ಲಿ ಸೂತಶೌನಕ ಸಂವಾದದಲ್ಲಿ ಜೀವಾಗಮರೀತಿ ಎಂಬ ಏಳನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

|| ಅಥ ಅಷ್ಟಮೋಽಧ್ಯಾಯಃ ||

## ಎಂಟನೆಯ ಅಧ್ಯಾಯವು

|| ಸೂತ ಉವಾಚ ||

**ಯೇ ಭಕ್ತಿಯುಕ್ತಾ ಗೋವಿಂದೇ ತೇಷಾಂ ವಕ್ಷ್ಯಾಮಿ ಲಕ್ಷಣಂ ।**
**ಆತ್ಮನಃ ಶ್ರೇಯ ಇಚ್ಛದ್ಭಿಃ ಶ್ರೋತವ್ಯಂ ಮನಸಾಽಽಸ್ತಿಕೈಃ ॥೧॥**

**ನ ಹಿ ವಾಂಛಂತಿ ತೇ ಸ್ವರ್ಗಮಣಿಮಾದಿಕಮಷ್ಟಕಂ ।**
**ಬ್ರಹ್ಮಲೋಕಂ ಧರೇಶತ್ವಂ ಸರ್ವಂ ಕಾಲಪರಿಪ್ಲುತಂ ॥೨॥**

**ತಥಾ ಮುಕ್ತಿಂ ನ ವಾಂಛಂತಿ ಯೇ ಭಕ್ತಾಸ್ತೇ ಹರಿಪ್ರಿಯಾಃ ।**
**ನ ತಥಾ ತತ್ಪ್ರಿಯಾ ಲಕ್ಷ್ಮೀರ್ವಕ್ಷಸ್ಸ್ಥಾಽಪಿ ನಿರಂತರಂ ॥೩॥**

---

ಸೂತನು ಹೇಳಿದನು—ಎಲೈ ಮಹರ್ಷಿಗಳೇ, ವಿಷ್ಣುವಿನಲ್ಲಿ ಯಾರು ಭಕ್ತಿಯುಕ್ತರಾಗಿರುವರೋ ಅವರ ಲಕ್ಷಣಗಳನ್ನು ಹೇಳುವೆನು. ತಮಗೆ ಶ್ರೇಯಸ್ಸನ್ನು ಬಯಸುವ ಆಸ್ತಿಕರು ಭಕ್ತನ ಲಕ್ಷಣಗಳನ್ನು ಅವಶ್ಯವಾಗಿ ಕೇಳಬೇಕು. ||೧||

ಹರಿಭಕ್ತರು ಸ್ವರ್ಗಲೋಕವನ್ನಾಗಲೀ ಅಥವಾ ಅಣಿಮಾದಿ ಅಷ್ಟೈಶ್ವರ್ಯಗಳನ್ನಾಗಲೀ ಅಪೇಕ್ಷಿಸುವುದಿಲ್ಲ. ಹಾಗೆಯೇ ಬ್ರಹ್ಮಲೋಕವನ್ನಾಗಲೀ, ಪ್ರಭುತ್ವವನ್ನಾಗಲೀ ಅಪೇಕ್ಷಿಸುವವರಾಗುವುದಿಲ್ಲ. ಏಕೆಂದರೆ ಇವೆಲ್ಲವೂ ಶಾಶ್ವತವಾಗಿಲ್ಲದೇ ಮೃತ್ಯುಗ್ರಸ್ತವಾಗಿರುತ್ತವೆ. ||೨||

ಹರಿಯ ಪ್ರೀತಿಗೆ ಪಾತ್ರರಾದ ಭಕ್ತರು ಮುಕ್ತಿಯನ್ನೂ ಅಪೇಕ್ಷಿಸುವುದಿಲ್ಲ. ಹಾಗೆಯೇ ಹರಿಯ ಪ್ರೇಯಸಿಯಾದ ಲಕ್ಷ್ಮಿಯು ಅವನ ವಕ್ಷಸ್ಥಳದಲ್ಲಿಯೇ ನೆಲಸಿರುವವಳಾದರೂ ಮೋಕ್ಷವನ್ನೂ ಬಯಸುವುದಿಲ್ಲ. ಇವರೆಲ್ಲರಿಗೂ ಹರಿಸೇವೆಯೇ ಇಷ್ಟತಮವಾಗಿರುತ್ತದೆ. ||೩||

**ಮಹಾದೇವೋ ನಾಪ್ಯನಂತೋ ಯಥಾ ಭಕ್ತೋ ಹರೇಃ ಪ್ರಿಯಃ ।**
**ಲೋಕೇಽಸ್ಮಿನ್ ಸ್ವಾಮಿನಃ ಸಂತಿ ಸೇವಕೈಃ ಪರಿರಕ್ಷಿತಾಃ ।**
**ನ ತಥಾಽಯಂ ಹರಿಃ ಸ್ವಾಮೀ ಪಾತಿ ಭೃತ್ಯಾನ್ ಸ್ವಯಂ ಯತಃ॥೪॥**

|| ಋಷಯ ಊಚುಃ ||

**ಕೇ ಭಕ್ತಾಃ ಕಾ ಕ್ರಿಯಾ ತೇಷಾಂ ಲಕ್ಷಣಂ ಚ ತಥಾ ಮುನೇ ।**
**ಕಥಂ ಹಿ ಭಜನಂ ವಿಷ್ಣೋಃ ಯತಃ ಪ್ರೀತೋ ಭವೇದ್ಧರಿಃ ॥೫॥**

|| ಸೂತ ಉವಾಚ ||

**ಅನನ್ಯಶರಣಾಃ ಶಾಂತಾಃ ಸಾಧವಃ ಸಾಧುಭೂಷಣಾಃ ।**
**ಯಶೋ ಮುರಾರೇಃ ಶೃಣ್ವಂತಿ ಕಥಯಂತಿ ಸ್ಮರಂತಿ ಚ ॥೬॥**

**ಯೇ ಕಲತ್ರ ಗೃಹಪ್ರಾಣಾನ್ಪುತ್ರವಿತ್ತೇಷ್ಟ ಮಂಗಲಂ ।**
**ತ್ಯಕ್ತ್ವಾ ತಚ್ಛರಣಂ ಪ್ರಾಪ್ತಾಃ ಸ ಕಥಂ ತಾನ್ ಸಮುತ್ಸೃಜೇತ್॥೭॥**

---

ವಿಷ್ಣುವಿಗೆ ತನ್ನ ಭಕ್ತನು ಎಷ್ಟು ಪ್ರೀತಿಪಾತ್ರನಾಗಿರುವನೋ, ಅದರಂತೆ ಮಹಾದೇವನಾಗಲೀ, ಅನಂತನಾಗಲೀ ವಿಷ್ಣುವಿನ ಪ್ರೀತಿಗೆ ಪಾತ್ರರಾಗಿರುವುದಿಲ್ಲ. ಏಕೆಂದರೆ ಲೋಕದಲ್ಲಿ ಪ್ರಭುಸೇವೆಯನ್ನು ಮಾಡುವ ಭೃತ್ಯರೇ ಸ್ವಾಮಿಯನ್ನು ರಕ್ಷಿಸುವವರಾಗಿರುತ್ತಾರೆ. ಆದರೆ ವಿಷ್ಣುವು ಮಾತ್ರ ಹಾಗಿಲ್ಲದೆ ತನ್ನ ಭಕ್ತರನ್ನೂ ತಾನೇ ರಕ್ಷಿಸುವವನಾಗಿರುತ್ತಾನೆ. ||೪||

ಋಷಿಗಳು ಹೇಳಿದರು— ಓ ಸೂತಮಹರ್ಷಿಯೇ, ಯಾರು ವಿಷ್ಣುವಿನ ಭಕ್ತರೆನಿಸಿಕೊಳ್ಳುವರು ? ಅವರ ವರ್ತನೆಯು ಹೇಗಿರುವುದು ? ಮತ್ತು ಅವರ ಲಕ್ಷಣಗಳು ಯಾವುವು ? ವಿಷ್ಣುವು ಪ್ರೀತನಾಗುವಂತೆ ಅವನನ್ನು ಭಜಿಸುವ ಕ್ರಮವು ಯಾವುದು ? ಎಂಬ ವಿಷಯಗಳನ್ನು ಹೇಳುವವನಾಗು. ||೫||

ಸೂತನು ಹೇಳಿದನು— ಯಾರು ಅನನ್ಯಶರಣರಾಗಿ ಎಂದರೆ ವಿಷ್ಣುವನ್ನು ಬಿಟ್ಟು ಬೇರೆ ಯಾರೂ ನಮ್ಮನ್ನು ರಕ್ಷಿಸುವವರಿಲ್ಲವು. ಎಂದು ತಿಳಿದವರಾಗಿ, ಅಂತ ರಿಂದ್ರಿಯಗಳನ್ನು ನಿಗ್ರಹಿಸಿ, ವಿಷ್ಣುವಿನ ಕೀರ್ತಿಯನ್ನು ಕೇಳುತ್ತಾರೋ, ಕಥನ ಮಾಡುತ್ತಾರೋ ಮತ್ತು ಸತತವಾಗಿ ಸ್ಮರಿಸುತ್ತಾರೋ, ಸತ್ಪುರುಷರಾದ ಅವರೇ ವಿಷ್ಣುವಿಗೆ ಪ್ರಿಯರಾಗಿರುವರು. ಏಕೆಂದರೆ ಕಳತ್ರ (ಹೆಂಡತಿ) ಗೃಹ, ಪ್ರಾಣಗಳು,

**ಅಹರ್ನಿಶಂ ಪ್ರಿಯೋ ಯೇಷಾಂ ಹರಿರಾತ್ಮಾ ಸತಾಂಗತಿಃ ।**
**ತಂ ವಿನಾನ್ಯಂ ನ ಜಾನಂತಿ ಭಕ್ತಾಸ್ತೇ ಚ ಹರೇಃ ಪ್ರಿಯಾಃ ॥೮॥**

**ಯಾದೃಶೀ ಚ ಕ್ರಿಯಾ ಯೇಷಾಂ ತಾಂ ಶೃಣುಧ್ವಂ ದ್ವಿಜೋತ್ತಮಾಃ ।**
**ಹರ್ಯರ್ಥಂ ಗೃಹಕಾರ್ಯಾಣಿ ದೇಹಾಗಾರ ಸುತಾದಯಃ ॥೯॥**

**ಮಿಥೋ ಹಿ ನಿತರಾಂ ಕೃಷ್ಣ ಶ್ರವಣಂ ಕೀರ್ತನಂ ಪ್ರಿಯಾಃ ।**
**ವಾಚಾ ಗಾಯಂತಿ ತಲ್ಲೀಲಾಂ ಕರ್ಣೇ ಶೃಣ್ವಂತಿ ತದ್ಯಶಃ ॥೧೦॥**

**ಪದ್ಭಿರ್ಗಚ್ಛಂತಿ ಕ್ಷೇತ್ರಾಣಿ ಕರೈರ್ಮಂದಿರಮಾರ್ಜನಂ ।**
**ಪಶ್ಯಂತಿ ರೂಪಂ ಚಕ್ಷುಭ್ಯಾಂ ಗಂಧಂ ಜಿಘ್ರಂತಿ ನಾಸಯಾ ॥೧೧॥**
**ಹರೇರ್ನಿರ್ಮಾಲ್ಯ ಪುಷ್ಪಸ್ಯಾಽಽಲಿಂಗನಂ ಯೇ ಚ ಕುರ್ವತೇ ।**

---

ಪುತ್ರ, ಧನ ಮುಂತಾದುವುಗಳನ್ನು ತೊರೆದು ಯಾರು ವಿಷ್ಣುವನ್ನೇ ರಕ್ಷಕನನ್ನಾಗಿ ತಿಳಿದು ನಿರಂತರವಾಗಿ ಭಜಿಸುವರೋ, ಸಾಧುಗಳಿಗೂ ಅಲಂಕಾರಪ್ರಾಯರಾದ ಅವರನ್ನು ಭಕ್ತಪ್ರಿಯನಾದ ಶ್ರೀಹರಿಯು ಹೇಗೆತಾನೇ ದೂರೀಕರಿಸುವನು ? ॥೬-೭॥

ಸತ್ಪುರುಷರ ಪ್ರಾಪ್ಯಸ್ಥಾನನಾದ ಶ್ರೀಹರಿಯನ್ನು ಆತ್ಮಭಾವನೆಯಿಂದ ಯಾರು ಭಜಿಸುವರೋ ಮತ್ತು ನಮಗೆ ಹರಿಯಲ್ಲದೆ ಬೇರೆ ರಕ್ಷಕರಿಲ್ಲವು. ಎಂದು ಯಾರು ತಿಳಿದುಕೊಳ್ಳುವರೋ, ಅವರೇ ಹರಿಯ ಪರಮ ಭಕ್ತರಾಗಿರುತ್ತಾರೆ ಮತ್ತು ಅವರೇ ಹರಿಗೆ ಅತ್ಯಂತ ಪ್ರಿಯರಾಗಿರುತ್ತಾರೆ. ॥೮॥

ಯಾರು ವಿಷ್ಣುವಿನಲ್ಲಿ ಪ್ರಿಯರಾಗಿ ಭಕ್ತರಾಗಿರುತ್ತಾರೋ ಅಂಥಾ ವಿಷ್ಣು ಭಕ್ತರ ವರ್ತನೆಯನ್ನು ಹೇಳುವೆನು ಕೇಳಿರಿ. ಯಾರು ವಿಷ್ಣುವಿನಲ್ಲಿ ಭಕ್ತಿಯುಳ್ಳವರಾಗಿರುವರೋ ಅವರು ಗೃಹಕೃತ್ಯಗಳನ್ನೂ, ದೇಹ, ಗೃಹ, ಪುತ್ರ, ಮಿತ್ರ, ಕಳತ್ರ ಮುಂತಾದುವುಗಳನ್ನು ಹರಿಯಲ್ಲಿ ಅರ್ಪಿಸಿ, ಸದಾ ಶ್ರೀಕೃಷ್ಣನ ಚರಿತ್ರೆಗಳನ್ನು ಕೇಳುತ್ತಿರುವವರೂ ಮತ್ತು ಕಥನಮಾಡುವವರೂ ಆಗಿರುತ್ತಾರೆ. ಅಂತಹ ಭಕ್ತರು ವಾಗಿಂದ್ರಿಯದಿಂದ (ನಾಲಗೆಯಿಂದ) ಶ್ರೀಕೃಷ್ಣನ ಲೀಲೆಗಳನ್ನು ಗಾನಮಾಡುವರು. ಕಿವಿಯಿಂದ ಅವನ ಯಶಸ್ಸನ್ನು ಕೇಳುವರು. ಕಾಲುಗಳಿಂದ ವಿಷ್ಣುವಿನ ಕ್ಷೇತ್ರಗಳನ್ನು ಕುರಿತು ನಡೆದು ಹೋಗುವರು. ಕೈಗಳಿಂದ ದೇವಾಲಯವನ್ನು ಪರಿಷ್ಕರಿಸುವರು. ಕಣ್ಣುಗಳಿಂದ ವಿಷ್ಣುವಿನ ರೂಪವನ್ನು ನೋಡುವರು. ಘ್ರಾಣೇಂದ್ರಿಯ

ಭಕ್ತ್ಯಾ ಪಾದೋದಕಂ ಪೀತ್ವಾ ಯಾಂತಿ ಸಂತರ್ಪಣಂ ಹೃದಿ ॥೧೨॥

ಮಾನಸೇ ಚರಣಂ ವಿಷ್ಣೋರ್ನೈವೇದ್ಯಮುದರೇ ತಥಾ ।
ನಿರ್ಮಾಲ್ಯ ಚಂದನಂ ಭಾಲೇ ಮಸ್ತಕೇ ತುಲಸೀದಲಂ ॥೧೩॥

ಧಾರಯಂತಿ ಪ್ರತಿದಿನಂ ಶ್ರೀಕೃಷ್ಣೈಕಾಗ್ರಚೇತಸಃ ।
ಏವಂ ಕ್ರಿಯಾ ಹಿ ಭಕ್ತಾನಾಂ ಲಕ್ಷಣಾನಿ ವದಾಮ್ಯಹಂ ॥೧೪॥

ಲೋಕಶ್ರುತಿವಿಭಕ್ತಾನಿ ಸರ್ವಶಾಸ್ತ್ರೋಚಿತಾನಿ ಚ ।
ಆಚರಣಾನಿ ಚಿಹ್ನಾನಿ ವೈಜಯಂತೀವ ವೈಷ್ಣವೀ ॥೧೫॥

ದೃಶ್ಯಂತೇ ಯೇಷು ಭಕ್ತೇಷು ತ ಏವ ಹಿ ಪ್ರಿಯಾ ಹರೇಃ ।
ಕ್ಷಿಪ್ತಾವಮಾನಿತಾ ಧ್ವಸ್ತಾಸ್ತಾಡಿತಾಃ ಪೀಡಿತಾ ಅಪಿ ॥೧೬॥
ನ ವಿಕ್ರಿಯಾ ಪ್ರಭವತಿ ಪ್ರತೀಕಾರಂ ನ ಕುರ್ವತೇ ।

---

ದಿಂದ (ಮೂಗುಗಳಿಂದ) ಗಂಧವನ್ನು ಆಘ್ರಾಣಿಸುವರು. ಮತ್ತು ಹರಿಯನ್ನು ಪೂಜಿಸಿದ ನಿರ್ಮಾಲ್ಯ ಪುಷ್ಪಗಳನ್ನು ಆಲಿಂಗಿಸುವರು ಎಂದರೆ ಧರಿಸುವರು. ॥೯-೧೦-೧೧॥

ವಿಷ್ಣುಭಕ್ತರು ವಿಷ್ಣುವಿನ ಪಾದಗಳನ್ನು ಪ್ರಕ್ಷಾಲನಮಾಡಿ ಆ ಉದಕ ವನ್ನು ಪಾನಮಾಡಿ ಮನಸ್ಸಿನಲ್ಲಿ ಅತಿ ಸಂತೋಷವನ್ನು ಹೊಂದುತ್ತಾರೆ. ಮತ್ತು ಮನಸ್ಸಿನಲ್ಲಿ ವಿಷ್ಣುವಿನ ಪಾದಗಳನ್ನೂ, ಉದರದಲ್ಲಿ ಅವನ ನೈವೇದ್ಯಗಳನ್ನೂ ಹಣೆಯಲ್ಲಿ ಸ್ವಾಮಿಗೆ ಲೇಪಿಸಿದ್ದ ಉಳಿದ ಚಂದನವನ್ನೂ ಶಿರಸ್ಸಿನಲ್ಲಿ ತುಳಸೀ ದಳವನ್ನೂ ಧರಿಸಿ ಪ್ರತಿದಿನವೂ ಶ್ರೀ ಕೃಷ್ಣನಲ್ಲಿಯೇ ನೆಟ್ಟಮನಸ್ಸಿನಿಂದ ಇರುತ್ತಾರೆ. ॥೧೨-೧೩॥

ವಿಷ್ಣುಭಕ್ತರ ವರ್ತನೆಯು ಈರೀತಿಯಾದುದಾಗಿರುತ್ತದೆ. ಇನ್ನು ಮುಂದೆ ಭಕ್ತರ ಲಕ್ಷಣಗಳನ್ನು ಹೇಳುವೆನು ಕೇಳಿರಿ. ವಿಷ್ಣುವನ್ನು ಗುರುತಿಸಲು ಅವನು ಧರಿಸುವ ವೈಜಯಂತಿ ಎಂಬ ಹೆಸರುಳ್ಳ ರತ್ನಮಾಲಿಕೆಯು ಹೇಗೆ ಚಿಹ್ನೆಯಾಗಿರು ತ್ತದೆಯೋ, ಅದರಂತೆ ವಿಷ್ಣುಭಕ್ತರಲ್ಲಿ ಸಕಲ ಶಾಸ್ತ್ರವಿಹಿತವಾಗಿಯೂ, ವೈದಿಕ ಗಳಾಗಿಯೂ, ಮತ್ತು ಲೌಕಿಕಗಳಾಗಿಯೂ ಇರುವ ಪುಂಡ್ರಾದಿಗಳು ಚಿಹ್ನೆಗಳಾಗಿರು

**ಹಿತಂ ಕುರ್ವಂತಿ ಸರ್ವೇಷಾಂ ಕರುಣಾ ದೀನವತ್ಸಲಾಃ ॥೧೭॥**

**ಮಿತಿಕ್ಷವೋಽಲ್ಪ ವಾಚೋ ಹಿ ಮಹಾಂತೋ ಲೋಕಪಾವನಾಃ ।**
**ತೇ ಪ್ರಿಯಾಃ ಶ್ರೀಹರೇರ್ಭಕ್ತಾಃ ಪ್ರೇಮಮಾಧ್ವೀಕಮಕ್ಷಿಕಾಃ ॥೧೮॥**

**ಭಜನಂ ವಿಮಲಂ ವಿಷ್ಣೋರ್ಭಕ್ತಿಭಾವೇನ ಚಾಸಕೃತ್ ।**
**ಪುಂಸಾಂ ನ ಪುರುಷಾರ್ಥೋಽನ್ಯೋ ಭಜನಾದಿತಿ ಚಿಂತಯೇತ್ ॥೧೯॥**

**ನ ಯೋಗೋ ನ ಚ ಸಾಂಖ್ಯಂ ಚ ನ ದಾನಂ ನ ತಪಃ ಫಲಂ ।**
**ನೇಷ್ಟಾ ಪೂರ್ತಾದಿಕಂ ಕರ್ಮ ಪರಲೋಕೇಽತಿ ಸೌಖ್ಯದಂ ॥೨೦॥**

ತ್ತವೆ. ಯಾರಲ್ಲಿ ಈ ಚಿಹ್ನೆಗಳು ಕಂಡುಬರುವುವೋ ಅವರೇ ವಿಷ್ಣುವಿಗೆ ಪ್ರಿಯರಾಗಿರುವರು. ॥೧೪-೧೫॥

ವಿಷ್ಣುಭಕ್ತನು ಪರರಿಂದ ತಿರಸ್ಕರಿಸಲ್ಪಟ್ಟರೂ, ಅವಮಾನಿಸಲ್ಪಟ್ಟರೂ, ಹೊಡೆಯಲ್ಪಟ್ಟರೂ, ಅಥವಾ ಪೀಡಿಸಲ್ಪಟ್ಟರೂ ಸಹ ಯಾವ ವಿಕಾರವನ್ನೂ ಹೊಂದುವುದಿಲ್ಲ ಮತ್ತು ತಿರಸ್ಕಾರಾದಿಗಳಿಗೆ ತಕ್ಕ ಪ್ರತೀಕಾರಕಾರ್ಯಗಳನ್ನೂ ಮಾಡುವುದಿಲ್ಲ. ಅಷ್ಟೇ ಅಲ್ಲದೆ ಅಂತಹವರು, ॥೧೬॥

ಸಕಲ ಪ್ರಾಣಿಗಳಿಗೂ ಹಿತವನ್ನೇ ಮಾಡತಕ್ಕವರಾಗಿರುತ್ತಾರೆ. ಮತ್ತು ದೀನರಲ್ಲಿ ಮರುಕವುಳ್ಳವರಾಗಿರುತ್ತಾರೆ. ಇದಲ್ಲದೆ ಸಹನಶಕ್ತಿಯುಳ್ಳವರೂ, ಮಹಾತ್ಮರೂ, ಮಿತವಾಗಿ ಮಾತನಾಡುವವರೂ ಮತ್ತು ಲೋಕವನ್ನೇ ಪವಿತ್ರೀಕರಿಸುವವರೂ ಆಗಿರುತ್ತಾರೆ. ॥೧೭॥

ಭಕ್ತಿ ಎಂಬ ಮಧುವನ್ನು, ಜೇನುನೊಣಗಳಂತೆ ಸವಿಯುವ ಅಂತಹ ಭಕ್ತರೇ ಶ್ರೀಹರಿಗೆ ಪ್ರಿಯರಾಗಿರುತ್ತಾರೆ. ವಿಷ್ಣುವಿನಲ್ಲಿ ಭಕ್ತಿಪುರಸ್ಸರವಾಗಿ ಮಾಡಿರುವ ಪವಿತ್ರವಾದ ಯಾವ ಸೇವೆಯಿರುವುದೋ, ಆ ಸೇವೆಯೇ ಮನುಜರಿಗೆ ಪರಮಪುರುಷಾರ್ಥಸಾಧನವಾಗಿರುತ್ತದೆ. ಇದಕ್ಕಿಂತಲೂ ಅತಿರಿಕ್ತವಾದ ಮಿಗಿಲಾದ ಪುರುಷಾರ್ಥ ಸಾಧನವು ಮತ್ತೊಂದಿರುವುದಿಲ್ಲ. ॥೧೮॥

ಲಭೇದ್ಯೋಗೇನ ಸಾಂಖ್ಯೇನ ಜ್ಞಾನಂ ಬ್ರಹ್ಮೈಕದರ್ಶನಂ ।
ತಪಸಾ ಕ್ರಿಯಯಾ ದಾನೈರಿಷ್ಟಾಪೂರ್ತೈಶ್ಚ ಕರ್ಮಭಿಃ ॥೨೧॥

ಇಹಾಮುತ್ರ ಫಲಂ ಲಬ್ಧ್ವಾ ಸುಖಂ ಭುಕ್ತ್ವಾ ಪುನಃ ಪತೇತ್ ।
ತಸ್ಮಾದನಿತ್ಯಮಖಿಲಂ ದೂರತಃ ಪರಿವರ್ಜಯೇತ್ ॥೨೨॥

ಸುಖಸ್ಯ ಕಾರಣಂ ವಿಷ್ಣೋರ್ಭಜನಂ ನಾಪರಂ ಶುಚಿ ।
ಅಯಮೇವ ಪರೋ ಧರ್ಮಸ್ತಥಾ ಸರ್ವೋತ್ತಮೋ ವಿಧಿಃ ॥೨೩॥

ಜನ್ಮ ತಚ್ಛೋಭನಂ ಜಂತೋರ್ಜೀವಿತಂ ಚ ಸುಜೀವಿತಂ ।
ಮನೋವಾಕ್ಕಾಯ ಕರ್ಮೈರ್ಯತ್ ಸೇವ್ಯತೇ ಹರಿರೀಶ್ವರಃ ॥೨೪॥

---

ಯೋಗಮಾರ್ಗವು, ಜ್ಞಾನಮಾರ್ಗವು, ದಾನ, ತಪಸ್ಸು, ಯಜ್ಞಯಾಗಾದಿಗಳೂ, ವಾಪೀಕೂಪತಟಾಕಾದಿಗಳ ನಿರ್ಮಾಣಕ್ರಿಯೆಯೂ, ಇವು ಯಾವುವೂ ಪರಲೋಕದಲ್ಲಿ ನಿರತಿಶಯವೂ ನಿತ್ಯವೂ ಆದ ಸೌಖ್ಯವನ್ನುಂಟುಮಾಡಲಾರವು. ॥೨೦॥

ಯೋಗಮಾರ್ಗ ಮತ್ತು ಜ್ಞಾನಮಾರ್ಗಗಳಿಂದ ಅದ್ವೈತ ಬ್ರಹ್ಮಾತ್ಮೈಕ್ಯದ ಅನುಭವವನ್ನು ಹೊಂದುವನು. ತಪಸ್ಸು, ದಾನ, ಇಷ್ಟಾಪೂರ್ತ ಕರ್ಮ ಮುಂತಾದುವುಗಳಿಂದ ಫಲವನ್ನು ಹೊಂದಿ, ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸೌಖ್ಯವನ್ನನುಭವಿಸಿ, ಕರ್ಮಗಳ ಪುಣ್ಯವು ಕ್ಷಯಿಸಲು ಪುನಃ ಸಂಸಾರಸಾಗರದಲ್ಲಿ ಬೀಳುವನು. ॥೨೧॥

ಆದುದರಿಂದ ಮೇಲೆ ಹೇಳಿದ ಇಷ್ಟಾಪೂರ್ತ ಮೊದಲಾದ ಕರ್ಮಗಳಿಂದ ಬರುವ ಸೌಖ್ಯವು ಶಾಶ್ವತವಲ್ಲವಾದುದರಿಂದ ಅವುಗಳನ್ನು ದೂರದಲ್ಲಿರಿಸಬೇಕು. (ತ್ಯಜಿಸಬೇಕು.)

ಪವಿತ್ರವಾದ ವಿಷ್ಣುಭಜನೆಯೇ ಕಡೆಗೆ ನಿತ್ಯವಾದ ಸುಖಕ್ಕೆ ಕಾರಣವಾಗಿರುತ್ತದೆ. ಇದೇ ನಿರ್ದುಷ್ಟವಾದ ಧರ್ಮವೂ ಮತ್ತು ಸರ್ವೋತ್ಕೃಷ್ಟವಾದ ಮೋಕ್ಷಸಾಧನವೂ ಆಗಿರುತ್ತದೆ. ॥೨೩॥

ವಿಷ್ಣುವಿನಲ್ಲಿ ಭಕ್ತಿಯುಳ್ಳವನ ಜನ್ಮವು ಮಂಗಳಕರವಾದುದು. ಮತ್ತು ಅವನ ಜೀವನವು ಪವಿತ್ರವಾದದ್ದಾಗಿರುತ್ತದೆ. ಏಕೆಂದರೆ ಅವನು ವಾಕ್, ಕಾಯ ಕರ್ಮಗಳಿಂದ ಸದಾ ವಿಷ್ಣುವನ್ನೇ ಸೇವಿಸುತ್ತಿರುತ್ತಾನೆ. ॥೨೪॥

**ಸಾ ವಾಣೀ ಯಾ ಗುಣಾನ್ ಬ್ರೂತೇ ಕರೌ ಕರ್ಮಕರೌ ಹರೇಃ ।**
**ಮನಶ್ಚ ತಂ ಸ್ಮರೇನ್ನಿತ್ಯಂ ಚಕ್ಷುಸ್ತದ್ದರ್ಶನೋತ್ಸುಕಂ ॥೨೫॥**

**ಕರ್ಣೌ ಚ ತತ್ಕಥಾಽಽಸಕ್ತೌ ಘ್ರಾಣಂ ನಿರ್ಮಾಲ್ಯ ಗಂಧಹೃತ್ ।**
**ಗಾತ್ರಂ ಚ ಪಾವಿತಂ ವಿಷ್ಣೋಃ ಪಾದೋದಕ ನಿಷೇವಣೈಃ ॥೨೬॥**

**ಧಾತ್ರಾ ಯತ್ನಾದ್ದಿವ್ಯಂ ನಮಿತುಂ**
**ಯಚ್ಛಿರೋ ಹಿ ವಿಹಿತಂ ಮನುಜಾನಾಂ ।**
**ದೇವಕೀತನಯ ಪಾದ ಸರೋಜೇ**
**ನ ನೇಮೋ ಸದಾಽಪಿ ಭಾರಮಿವಾತ್ರ ॥೨೭॥**

---

ಯಾವ ಮಾತು ಹರಿಯ ಗುಣಕೀರ್ತನವನ್ನು ಮಾಡುವುದೋ, ಯಾವ ಕೈಗಳು ಹರಿಯಸೇವೆಯನ್ನು ಮಾಡುವುವೋ, ಯಾವ ಮನಸ್ಸು ಹರಿಯನ್ನು ಸ್ಮರಿಸುವುದೋ ಮತ್ತು ಯಾವ ಕಣ್ಣುಗಳು ಹರಿಯ ದರ್ಶನದಲ್ಲಿ ಉತ್ಸಾಹಪೂರಿತವಾದುವುಗಳೋ, ಆ ವಾಣಿ ಹಸ್ತ ಮುಂತಾದುವುಗಳೇ ಸಾರ್ಥಕಗಳಾಗಿರುತ್ತವೆ. ಮತ್ತು ಯಾವ ಮನುಜನ ಕರ್ಣಗಳು ಹರಿಯ ಕಥಾಶ್ರವಣದಲ್ಲಿ ಆಸಕ್ತವಾಗಿರುವುವೋ, ಘ್ರಾಣೇಂದ್ರಿಯವು ನಿರ್ಮಾಲ್ಯ ಗಂಧವನ್ನು ಆಘ್ರಾಣಿಸುತ್ತದೆಯೋ, ಅಂತಹವನ ಕರ್ಣಗಳು ಮತ್ತು ಘ್ರಾಣೇಂದ್ರಿಯವು ಸಾರ್ಥಕಗಳಾಗಿರುತ್ತವೆ. ಯಾವ ದೇಹವು ವಿಷ್ಣುವಿನ ಪಾದೋದಕದಿಂದ ಪವಿತ್ರಮಾಡಲ್ಪಟ್ಟಿರುವುದೋ ಆ ದೇಹವೇ ಸಫಲವಾಗಿರುತ್ತದೆ. ॥೨೫-೨೬॥

ಸೃಷ್ಟಿಕರ್ತನಾದ ಬ್ರಹ್ಮನು, ದೇವಕೀಪುತ್ರನಾದ ಕೃಷ್ಣನ ಪಾದಕಮಲಗಳನ್ನು ನಮಸ್ಕರಿಸುವುದಕ್ಕೋಸ್ಕರ ಮನುಷ್ಯರ ಶಿರಸ್ಸನ್ನು ಪ್ರಯತ್ನಪೂರ್ವಕವಾಗಿ ಸೃಷ್ಟಿಸಿರುವನು. ಹೀಗಿರುತ್ತಿರಲು ಯಾವ ಮನುಜನ ಶಿರಸ್ಸು ಆ ದೇವಕೀತನಯನಾದ ಶ್ರೀಕೃಷ್ಣನ ಪಾದಾರವಿಂದಗಳನ್ನು ನಮಸ್ಕರಿಸುವುದಿಲ್ಲವೋ ಅಂತಹ ಶಿರಸ್ಸು ಆ ದೇಹಕ್ಕೆ ಭಾರಭೂತವಾಗಿಯೇ ಇರುವುದಲ್ಲದೆ ಅದರಿಂದ ಮತ್ತೆ ಯಾವ ಪ್ರಯೋಜನವೂ ಉಂಟಾಗುವುದಿಲ್ಲ. ॥೨೭॥

**ಯಾ ವದೇನ್ನ ಹರಿನಾಮುಗುಣಂ ಸಾ**
**ಪ್ರೋಚ್ಯತೇ ವಿಪುಲದರ್ದುರ ಜಿಹ್ವಾ ।**
**ತಚ್ಛೃ್ರತೇರ್ಹಿ ವಿಮುಖಾವಪಿ ಕರ್ಣೌ**
**ಭಿತ್ತಿರಂಧ್ರಮಿವ ಕುಂಡಲಕಾಂತೌ** ॥೨೮॥

**ಕೇಕಿ ಪಿಚ್ಛ ಸದೃಶೇ ನಯನೇ**
**ತೇ ಹರೇ ರಖಿಲ ಸೌಷ್ಠವರೂಪಂ ।**
**ಪಶ್ಯತೋ ನ ನ ಚ ಗಂಧ ವಿಹೀನಂ**
**ರಾಜತೇ ನು ಕಮಲಂ ವಿಫಲಂ ಹಿ** ॥೨೯॥

ಯಾವ ನಾಲಿಗೆಯು ಹರಿಯ ನಾಮವನ್ನು ಮತ್ತು ಅವನ ಅನಂತಕಲ್ಯಾಣ ಗುಣಗಳನ್ನು ಉಚ್ಚರಿಸುವುದಿಲ್ಲವೋ, ಆ ನಾಲಿಗೆಯು ಅತ್ಯಂತ ದುಷ್ಟವಾದದ್ದಾಗಿರುತ್ತದೆ. ಮತ್ತು ಹರಿಯ ನಾಮಗಳನ್ನು ಮತ್ತು ಗುಣಗಳನ್ನು ಕೇಳದೇ ಇರುವ ಕರ್ಣಗಳು, ಗೋಡೆಯಲ್ಲಿರುವ ರಂಧ್ರದಂತೆ ನಿರರ್ಥಕಗಳಾಗಿರುತ್ತವೆ. ಎಂದರೆ ಗೋಡೆಯಲ್ಲಿ ಅನೇಕ ರಂಧ್ರಗಳಿರುತ್ತವೆ. ಅವುಗಳಿಂದ ಯಾವ ಪ್ರಯೋಜನವೂ ಲಭಿಸುವುದಿಲ್ಲ. ಅದರಂತೆ ಹರಿನಾಮವನ್ನು ಕೇಳದೇ ಇರುವ ಕರ್ಣಗಳು ನಿರರ್ಥಕವಾದುವುಗಳೆಂದು ಅರ್ಥವು. ॥೨೮॥

ಯಾವ ನಯನಗಳು ಹರಿಯ ಸುಂದರವಾದ ರೂಪವನ್ನು ನೋಡುವುವೋ, ಆ ನಯನಗಳು ನವಿಲುಗರಿಗೆ ಸದೃಶವಾದ ಸೌಂದರ್ಯವುಳ್ಳವುಗಳು, ಎಂದರೆ ಅಂತಹ ಕಣ್ಣುಗಳೇ ಸಾರ್ಥಕಗಳಾಗಿರುತ್ತವೆ. ಎಂದರ್ಥವು. ಅದಲ್ಲದೆ ಹರಿಯ ಸುಂದರ ರೂಪವನ್ನು ನೋಡದೇ ಇರುವ ಕಣ್ಣುಗಳು, ನಿರ್ಗಂಧವಾದ ಕಮಲಪುಷ್ಪದಂತೆ ನಿಷ್ಫಲವಾಗಿದ್ದುಕೊಂಡು ಶೋಭೆಯನ್ನುಂಟುಮಾಡಲಾರವು. ಎಂದರೆ ಕಮಲ ಪುಷ್ಪದಲ್ಲಿ ಸುಗಂಧವಿದ್ದರೆ ಆ ಪುಷ್ಪವು ಶೋಭಿಸುವುದು. ಅದಿಲ್ಲದಿದ್ದರೆ ಕಮಲಕ್ಕೆ ಶೋಭೆಯೇ ಇರುವುದಿಲ್ಲ. ಅದರಂತೆ ಹರಿಯ ರೂಪವನ್ನು ನೋಡುವವರ ಕಣ್ಣುಗಳೇ ಸಾರ್ಥಕಗಳು. ಮತ್ತು ಆ ಕಣ್ಣುಗಳು ಶೋಭಿಸುವುವು. ಹರಿಯ ರೂಪವನ್ನು ನೋಡದೆ ಇರುವ ಕಣ್ಣುಗಳು ನಿಷ್ಫಲಗಳಾಗಿ ಶೋಭಿಸುವುದಿಲ್ಲವೆಂದರ್ಥವು. ॥೨೮-೨೯॥

ಯಾವ ಪಾದಗಳು ವಿಷ್ಣುದೇವಾಲಯವನ್ನು ಕುರಿತು ಹೋಗುವುದಿಲ್ಲವೋ ಅಂತಹ ಪಾದಗಳು ಮರದಿಂದ ನಿರ್ಮಿಸಲ್ಪಟ್ಟವುಗಳಂತಾಗಿರುತ್ತವೆ. ಎಂದರೆ ಮರದ ಕಾಲುಗಳು ಅಚೇತನವಾಗಿದ್ದುಕೊಂಡು ಅವುಗಳಿಂದ ಉತ್ತಮ ಪ್ರಯೋಜನವು

ಭೂರುಹಾವಯವ ನಿರ್ಮಿತ ಪಾದೌ
ಯೌ ನ ಗಚ್ಛತ ಇವೌ ಹರಿಸದ್ಮ ।
ತಾದೃಶೌ ಕನಕ ಭೂಷಿತಹಸ್ತೌ
ಯೌ ಹರೇಃ ನ ಕುರುತಃ ಪರಿಚರ್ಯಾಂ ॥೩೦॥

ಇತ್ಥಂ ವಿಷ್ಣಾವರ್ಪಿತಾನೀಂದ್ರಿಯಾಣಿ
ಯೈಸ್ತೈರ್ಭಕ್ತೈರ್ಜನ್ಮಲಬ್ಧಂ ಪೃಥಿವ್ಯಾಂ ।
ಯೇಽನ್ಯೇ ದುಷ್ಟಾ ವಿಷಯಾಸಕ್ತ ಚಿತ್ತಾಃ
ಮನುಷ್ಯಾಣಾಂ ನಿಷ್ಫಲಂ ಜನ್ಮ ತೇಷಾಂ ॥೩೧॥

ಇತಿ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ ಸೂತ ಶೌನಕ ಸಂವಾದೇ ಭಕ್ತಿಫಲವರ್ಣನಂ ನಾಮ ಅಷ್ಟಮೋಽಧ್ಯಾಯಃ

ಬರುವುದಿಲ್ಲವು. ಅದರಂತೆ ವಿಷ್ಣುದೇವಾಲಯವನ್ನು ಪ್ರವೇಶಿಸವೇ ಇರುವ ಕಾಲುಗಳು ಚೇತನವಾಗಿದ್ದರೂ, ಅವುಗಳಿಂದ ಉತ್ತಮ ಪ್ರಯೋಜನವೇ ಇಲ್ಲವೆಂದರ್ಥವು. ಹಾಗೆಯೇ ಯಾವ ಕೈಗಳು ಹರಿಯ ಶುಶ್ರೂಷೆಯನ್ನು ಮಾಡುವುದಿಲ್ಲವೋ, ಆ ಕೈಗಳು ಸುವರ್ಣಾಭರಣಗಳಿಂದ ಅಲಂಕರಿಸಲ್ಪಟ್ಟವುಗಳಾಗಿದ್ದರೂ ಶೋಭಿಸವು. ಎಂದರೆ ಹರಿಸೇವೆಯನ್ನು ಆಚರಿಸದಿರುವ ಕೈಗಳು ವಿಫಲವಾಗಿರುವುವು ಏಕೆಂದರೆ ಅವು ಮೋಕ್ಷವೆಂಬ ನಿತ್ಯಾನಂದಫಲವನ್ನು ಕಡೆಗೆ ಉಂಟುಮಾಡಲಾರದವಾಗುತ್ತವೆ.॥೩೦॥

ಈ ರೀತಿಯಲ್ಲಿ ಯಾವ ಭಕ್ತರು ತಮ್ಮ ಚಕ್ಷುರಾದಿ ಇಂದ್ರಿಯಗಳನ್ನು ವಿಷ್ಣುವಿನ ದರ್ಶನ ಮುಂತಾದುವುಗಳಿಂದ ವಿಷ್ಣುವಿನಲ್ಲಿ ಅರ್ಪಿಸಿರುವರೋ ಅವರ ಜನ್ಮವೇ ಸಫಲವಾದುದಾಗಿರುತ್ತದೆ. ಇದಲ್ಲದೇ, ಯಾವ ದುಷ್ಟರು ಸದಾ ವಿಷಯ ಸುಖಗಳಲ್ಲಿ ಮಗ್ನರಾಗಿ ತಮ್ಮ ಇಂದ್ರಿಯಗಳನ್ನು ದುರುಪಯೋಗಪಡಿಸುವರೋ, ಅಂತಹ ಮನುಷ್ಯರ ಜನ್ಮವು ದುಷ್ಫಲವಾದುದಾಗಿರುತ್ತದೆ. ॥೩೧॥

ಇಲ್ಲಿಗೆ ಸಕಲ ಪುರಾಣ ಸಾರಭೂತವಾದ ಆದಿಪುರಾಣದಲ್ಲಿ ಸೂತ ಶೌನಕ ಸಂವಾದದಲ್ಲಿ ಭಕ್ತಿಯ ಫಲವನ್ನು ತಿಳಿಸುವ ಎಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ನವಮೋಽಧ್ಯಾಯಃ ||

## ಒಂಬತ್ತನೆಯ ಅಧ್ಯಾಯವು

|| ಮುನಯ ಊಚುಃ ||

**ಕ್ವಾಸ್ತೇ ಕೃಷ್ಣಃ ಸದಾ ತಸ್ಯ ಕ್ರೀಡಾ ಕುತ್ರ ಪುರೀಶ್ವರೀ ।**
**ಪ್ರೇಷ್ಠಃ ಕ್ವ ಪರ್ವತಶ್ರೇಷ್ಠಃ ಕಃ ಕಾ ಚ ಸರಿದುತ್ತಮಾ ॥೧॥**
**ಕೋ ಗ್ರಾಮಃ ಕಿಂ ವನಂ ವಿದ್ವಂಸ್ತ್ವಂ ತನ್ನೋ ಬ್ರೂಹಿ ತತ್ತ್ವತಃ ।**

---

ಆರನೆಯ ಅಧ್ಯಾಯಲ್ಲಿ ಕೃಷ್ಣನ ಅವತಾರಕಥೆಯನ್ನು ಮತ್ತು ಅವನ ಬಾಲ ಲೀಲೆಗಳನ್ನು ಸೂತರು ಸಂಕ್ಷೇಪವಾಗಿ ವರ್ಣಿಸಲು ಅವನ ಕಥೆಯನ್ನು ಮತ್ತು ಲೀಲೆಯನ್ನು ವಿಸ್ತಾರವಾಗಿ ಕೇಳಲು ಇಚ್ಛೆಯುಳ್ಳವರಾಗಿ ಮುನಿಗಳು ಸೂತನನ್ನು ಕುರಿತು ಹೇಳಿದರು. ಓ ಸೂತಮಹರ್ಷಿಯೇ, ನೀನು ಹಿಂದೆ ಶ್ರೀಕೃಷ್ಣನ ಅವತಾರ ಕಥೆಯನ್ನು ಹೇಳಿರುವೆ. ಆ ಕೃಷ್ಣನು ಯಾವ ಸ್ಥಳದಲ್ಲಿ ಸರ್ವದಾ ವಾಸಿಸುವನು ? ಅವನು ಕ್ರೀಡಿಸಿದ ಸ್ಥಳವು ಯಾವುದು ? ಅವನು ವಾಸಮಾಡುತ್ತಿದ್ದ ಉತ್ತಮ ಪಟ್ಟಣವಾವುದು ? ಅವನು ಉದ್ಧರಿಸಿದ ಶ್ರೇಷ್ಠವಾದ ಪರ್ವತವಾವುದು ಮತ್ತು ಅದರ ನಾಮಧೇಯವೇನು ? ಅವನು ಜಲಕ್ರೀಡೆಯಾಡಿದ ನದಿಯು ಯಾವುದು ? ತನ್ನ ಗೆಳೆಯರೊಂದಿಗೆ ಯಾವ ಯಾವ ವನಗಳಲ್ಲಿ ಬಾಲಲೀಲೆಗಳನ್ನು ಅಭಿನಯಿಸಿದನು ? ಮತ್ತು ಅವನ ಸ್ನೇಹಿತರಾದ ಗೋಪಾಲರು ವಾಸಮಾಡುತ್ತಿದ್ದ ಗ್ರಾಮವು ಯಾವುದು ? ಎಂಬ ಅಂಶಗಳನ್ನು ನಮಗೆ ವಿಸ್ತಾರವಾಗಿ ಹೇಳುವವನಾಗು. ||೧||

ಏವಂ ಪೃಷ್ಟೋ ಮುನಿಃ ಶ್ರೇಷ್ಠಃ ಪ್ರತಿಪೂಜ್ಯ ವಚೋಽಬ್ರವೀತ್ ॥೨॥

॥ ಸೂತ ಉವಾಚ ॥

ಮಾಥುರಂ ಮಂಡಲಂ ವಿಪ್ರ ಯೋಜನಾನಾಂ ಚ ವಿಂಶತಿಃ ।
ಚಕ್ರಂ ಸುದರ್ಶನಂ ನಾಮ ತಸ್ಯೋಪರಿ ವಿರಾಜತೇ ॥೩॥

ಆಸ್ತೇ ಯತ್ರ ಹರಿಃ ಸಾಕ್ಷಾನ್ನಿತ್ಯಂ ಸನ್ನಿಹಿತಃ ಸ್ವಯಂ ।
ನ ಮುಂಚತಿ ಕದಾಚಿದ್ವೈ ಸ್ಥಾನಂ ಸ್ವೀಯಂ ಸದಾ ಪ್ರಿಯಂ ॥೪॥

ತತ್ಸ್ಥಾನ ಸದೃಶಂ ಸ್ಥಾನಂ ತ್ರಿದಿವೇಽಪಿ ಚ ದುರ್ಲಭಂ ।
ಸರ್ವಲೋಕಾದ್ವೃತಂ ಶುದ್ಧಂ ವೈಕುಂಠೇನ ಸಮಂ ಹಿತಂ ॥೫॥

ನ ಭೂಮಿಃ ಕಲ್ಪಿತಾ ಶ್ರೇಷ್ಠಾ ನ ಕಾಲಕಲಿತೋ ಜನಃ ।
ಯೋಗಿನಾಂ ಯಾಜ್ಞಿಕಾನಾಂ ಚ ತತ್ ಸ್ಥಾನಮತಿದುರ್ಲಭಂ ॥೬॥

ಮುನಿಗಳು ಹೀಗೆಂದು ಪ್ರಶ್ನಿಸಲು ಸೂತನು ಅವರ ಮಾತನ್ನು ಲಾಲಿಸಿ, ಮುಂದೆ ಹೇಳುವ ರೀತಿಯಲ್ಲಿ ಹೇಳಿದನು. ॥೨॥

ಎಲೈ ಬ್ರಾಹ್ಮಣರೇ, ಮಥುರವೆಂಬ ಹೆಸರುಳ್ಳ ಒಂದು ದೇಶವಿರುವುದು. ಆ ದೇಶವು ಇಪ್ಪತ್ತು ಯೋಜನ ವಿಸ್ತೀರ್ಣವುಳ್ಳದ್ದಾಗಿರುತ್ತದೆ. ಆ ದೇಶದಲ್ಲಿ ಸುದರ್ಶನ ವೆಂಬ ಹೆಸರುಳ್ಳ ಒಂದು ರಾಜ್ಯವಿರುತ್ತದೆ. ॥೩॥

ಆ ರಾಜ್ಯವು ಹರಿಗೆ ಅತ್ಯಂತ ಪ್ರಿಯವಾದದ್ದಾಗಿರುತ್ತದೆ. ಅದರಲ್ಲಿ ಸಾಕ್ಷಾತ್ ಶ್ರೀಹರಿಯು ವಾಸಿಸುತ್ತಾನೆ. ಈ ಸ್ಥಾನವನ್ನು ತ್ಯಜಿಸದೆ ಸದಾಕಾಲವೂ ಇಲ್ಲಿಯೇ ಅವನು ನೆಲೆಸಿರುತ್ತಾನೆ. ॥೪॥

ಆ ಸ್ಥಳಕ್ಕೆ ಸದೃಶವಾದ ಸ್ಥಳವು ಸ್ವರ್ಗಲೋಕದಲ್ಲಿಯೂ ದುರ್ಲಭವಾಗಿರುವುದು. ಅಲ್ಲದೆ ಅದು ಸಕಲ ಲೋಕಗಳಿಗಿಂತಲೂ ಪವಿತ್ರವಾದುದಾಗಿಯೂ ಮತ್ತು ವೈಕುಂಠಕ್ಕೆ ಸಮಾನವಾದುದಾಗಿಯೂ ಇರುತ್ತದೆ. ॥೫॥

ಕೃತಕವಾದ ಭೂಮಿಯು ಶ್ರೇಷ್ಠವಾಗಿರುವುದಿಲ್ಲ. ಅದರಂತೆ ಮೃತ್ಯುವಿನ ಬಾಯಿಗೆ ತುತ್ತಾಗುವ ಮನುಷ್ಯರೂ ಶ್ರೇಷ್ಠರಾಗಿರುವುದಿಲ್ಲ. ಆದರೆ ಶ್ರೀಕೃಷ್ಣನ ವಾಸಸ್ಥಳವಾದ ಸುದರ್ಶನವೆಂಬ ರಾಜ್ಯವು ಕೃತಕವಾಗಿರದೆ ಸ್ವಾಭಾವಿಕವಾದುದಾಗಿ

**ತತ್ರ ರಮ್ಯಾ ಮಧುಪುರೀ ಪ್ರಿಯಾ ಭಗವತೋ ಹರೇಃ ।**
**ಸರಿದ್ವರಾಯಾಃ ಕಾಲಿಂದ್ಯಾಸ್ತಟೇ ವಾಸಮುಪೇಯುಷೀ ॥೭॥**

**ಹೇಮಭೂಃ ಭೂಧರಶ್ರೇಷ್ಠೋ ಗೋವರ್ಧನ ಇತಿ ಶ್ರುತಃ ।**
**ಯಸ್ಮಿನ್ ದೇಶೇಽಸ್ತಿ ಪರಮಃ ಪುಣ್ಯವದ್ಭಿರ್ನಿಷೇವಿತಃ ॥೮॥**

**ಯಂ ದಧಾರೈಕಹಸ್ತೇನ ಕೃಷ್ಣೋ ವಾಮೇನ ಲೀಲಯಾ ।**
**ಗೋಪಗೋಪೀಗವಾವಿಷ್ಟಾ ಸ್ನಾನಾರ್ಥಂ ಚ ನಿಷೇವಿತಾ ॥೯॥**

**ಕಾಲಿಂದೀ ಹಿ ನದೀ ಶ್ರೇಷ್ಠಾ ರವೇಃ ಪುತ್ರೀ ಹರೇಃ ಪ್ರಿಯಾ ।**
**ವೃಂದಾವನಂ ನಾಮ ವನಂ ಯಸ್ಯಾಸ್ತಿ ಸುಖಸದ್ಮವತ್ ॥೧೦॥**

**ಸರ್ವಂ ಸೇವಿತಕೃಷ್ಣಂ ಸ್ಯಾತ್ ಕ್ರೀಡಾ ಯತ್ರ ಸದಾ ಹರೇಃ ।**
**ಗೋಪಾನಾಂ ವಸತಿಸ್ತತ್ರ ನಂದಗ್ರಾಮ ಉದಾಹೃತಃ ॥೧೧॥**

---

ರುತ್ತದೆ. ಆ ರಾಜ್ಯವು ಯೋಗಿಗಳಿಗೂ ಮತ್ತು ಕರ್ಮಿಷ್ಠರಿಗೂ ಸಹ ದುರ್ಲಭವಾಗಿರುತ್ತದೆ. ||೬||

ಆ ರಾಜ್ಯದಲ್ಲಿ ಭಗವಂತನಾದ ವಿಷ್ಣುವಿಗೆ ಪ್ರಿಯವಾದ ಮಧುಪುರಿ ಎಂಬ ಪಟ್ಟಣವು ಕಾಲಿಂದೀನದಿಯ ದಡದಲ್ಲಿ ಶೋಭಿಸುತ್ತದೆ. ||೭||

ಆ ದೇಶದಲ್ಲಿ ಸುವರ್ಣಮಯವಾದ ಭೂಮಿಯುಳ್ಳ ಮತ್ತು ಪುಣ್ಯಶಾಲಿಗಳಿಂದ ಸೇವಿಸಲ್ಪಡುವ ಗೋವರ್ಧನವೆಂದು ಹೆಸರುಳ್ಳ ಪ್ರಖ್ಯಾತವಾದ ಪರ್ವತವಿರುವುದು. ||೮||

ಆ ಗೋವರ್ಧನ ಪರ್ವತವನ್ನು ಕೃಷ್ಣನು ತನ್ನ ವಾಮಹಸ್ತದಿಂದ ಲೀಲಾಜಾಲವಾಗಿ ಎತ್ತಿಹಿಡಿದನು. ಸ್ನಾನಕ್ಕೋಸ್ಕರ ಬರುವ ಗೋಪಗೋಪಿಯರಿಂದ ಸೇವಿಸಲ್ಪಡುವುದಾಗಿಯೂ ಮತ್ತು ಸೂರ್ಯಪುತ್ರಿಯೂ ಆದ ಕಾಳಿಂದೀನದಿಯು ಶ್ರೀಕೃಷ್ಣನಿಗೆ ಬಹಳ ಪ್ರಿಯವಾದುದಾಗಿರುತ್ತದೆ. ||೯||

ಭಗವಂತನಾದ ಹರಿಗೆ ವೃಂದಾವನವೆಂಬ ವನವೇ ಗೃಹದಂತೆ ಸುಖವನ್ನುಂಟುಮಾಡುವುದಾಗಿರುತ್ತದೆ. ||೧೦||

ವೃಂದಾವನವೆಲ್ಲವೂ ಶ್ರೀಕೃಷ್ಣನನ್ನು ಸೇವಿಸುತ್ತದೆ. ಯಾವ ಗ್ರಾಮದಲ್ಲಿ ಶ್ರೀಕೃಷ್ಣನು ಕ್ರೀಡಿಸಿದನೋ ಆ ಗ್ರಾಮವು ಗೋಪಾಲಕರ ವಾಸಸ್ಥಳವಾದ ನಂದಗ್ರಾಮವೆಂದು ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ||೧೧||

**ಸಿದ್ಧಾ ಅಷ್ಟೌ ನಿಷೇವಂತೇ ಪ್ರಭುಂ ತದ್ಗ್ರಾಮವಾಸಿನಃ ।**
**ನ ಕಾಮಯಂತೇ ತೇ ಮುಕ್ತಿಂ ಕೃಷ್ಣಾನುಗ್ರಹಶಾಲಿನಃ ॥೧೨॥**

**ಭಜತಾಂ ತು ವಿಭೂನಾಂ ಚ ವೈಕುಂಠೇ ಮುಕ್ತಿರುತ್ತಮಾ ।**
**ಯಾಂ ದತ್ವಾ ಭಗವಾನ್ ಕೃಷ್ಣೋ ಭಕ್ತೇಭ್ಯೋ ಹ್ಯನೃಣೋ ಭವೇತ್॥೧೩॥**

**ಯೋಗಿಭ್ಯೋ ಯೋಗಸಂಸಿದ್ಧಿಂ ದತ್ವಾ ಕಾಮಾಂಶ್ಚ ಕಾಮಿನಾಂ ।**
**ಮುನಿಭ್ಯಃ ಪರಮಾಂ ಮುಕ್ತಿಂ ಹರಿರ್ದತ್ವಾಽನೃಣೋ ಭವೇತ್ ॥೧೪॥**

**ಏತೇ ಹಿ ವಂಚಿತಾಃ ಸರ್ವೇ ಲಬ್ಧಂ ಚೈಷಾಮಭೀಪ್ಸಿತಂ ।**
**ನಿಷ್ಕಾಮೇಭ್ಯೋ ನಿಜಂ ರೂಪಂ ಧ್ಯಾನಗಮ್ಯಂ ಚತುರ್ಭುಜಂ ॥೧೫॥**

ನಂದಗ್ರಾಮದಲ್ಲಿ ವಾಸಿಸುವ ಎಂಟು ಮಂದಿ ಸಿದ್ಧಪುರುಷರು ಪ್ರಭುವಾದ ಶ್ರೀಕೃಷ್ಣನನ್ನು ಸೇವಿಸುತ್ತಾರೆ. ಹೀಗೆ ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರರಾದ ಅವರು ಮುಕ್ತಿಯನ್ನು ಬಯಸುವುದೇ ಇಲ್ಲ. ॥೧೨॥

ಶ್ರೀಕೃಷ್ಣನನ್ನು ಸೇವಿಸುವ ಪುಣ್ಯಶಾಲಿಗಳಿಗೆ ದಿವ್ಯವಾದ ವೈಕುಂಠಲೋಕದಲ್ಲಿ ಶ್ರೇಷ್ಠಪುರುಷಾರ್ಥವಾದ ಮೋಕ್ಷವು ದೊರೆಯುತ್ತದೆ. ಮಹಾಮಹಿಮನಾದ ಶ್ರೀಕೃಷ್ಣನು ಭಕ್ತರಿಗೆ ಮೋಕ್ಷವನ್ನೂ ಅನುಗ್ರಹಿಸಿ ತಾನು ಸಾಲದ ಭಾರವನ್ನು ಕಳೆದುಕೊಂಡ ಮಾನವನಂತೆ, ಸುಖಿಯಾಗುವಂತೆ ತೋರುತ್ತಾನೆ. ಎಂದರೆ ಭಕ್ತರು ಮುಕ್ತಿಗೆ ತಕ್ಕ ಯೋಗ್ಯತೆಯನ್ನು ಪಡೆದ ಕೂಡಲೆ ಅವರಿಗೆ ಇಷ್ಟಾರ್ಥವನ್ನು ಕರುಣಿಸಿ ಕರ್ತವ್ಯಧರ್ಮವನ್ನು ನಿರ್ವಹಿಸಿದಂತೆ, ನಿರಾತಂಕವಾದ ಶಾಂತಿಸುಖವನ್ನು ಪಡೆದಂತೆ, ಆನಂದಿಸುತ್ತಿರುತ್ತಾನೆಂದು ಭಾವವು. ॥೧೩॥

ಪರಮ ಕರುಣಿಯಾದ ಶ್ರೀಹರಿಯು, ಯೋಗಿಗಳಿಗೆ ಯೋಗಸಿದ್ಧಿಯನ್ನೂ ಕರ್ಮಫಲವನ್ನಪೇಕ್ಷಿಸುವವರಿಗೆ ಅವರ ಇಷ್ಟಾರ್ಥಗಳನ್ನೂ, ಮುನಿಗಳಿಗೆ ಮುಕ್ತಿಯನ್ನೂ ದಯಪಾಲಿಸಿ ತಾನು ಋಣಮುಕ್ತನಾಗುವನು. ॥೧೪॥

ಈ ಸರ್ವರೂ, ತಮ್ಮ ಇಷ್ಟಾರ್ಥಗಳನ್ನು ಪಡೆದವರಾಗಿ ವಿಷ್ಣುವಿನಿಂದ ವಂಚಿಸಲ್ಪಡುತ್ತಾರೆ! ಏಕೆಂದರೆ ಕರ್ಮಫಲಕ್ಕೋಸ್ಕರ ಅವರು ವಿಷ್ಣುವನ್ನು ಆರಾಧಿಸುತ್ತಾರೆ. ಆ ಕರ್ಮ ಫಲವು ಲಭಿಸಿದಮೇಲೆ ಇವರ ಮೇಲಿನ ಕ್ಷೇಮ ವಿಚಾರಣೆಯ ಭಾರವು ವಿಷ್ಣುವಿನಮೇಲಿರುವುದಿಲ್ಲ. ವಿಷ್ಣುವು ಇವರ ಫಲಗಳನ್ನು ದಯಪಾಲಿಸಿ

**ನ ದಾನ್ಯೈರ್ನ ತಪೋಭಿಶ್ಚ ತಥಾ ಯೋಗಾದಿ ಸಾಧನೈಃ ।**
**ನ ದೃಶ್ಯಂ ಭಕ್ತಿಭಾವೈಸ್ತು ದೃಶ್ಯಂ ವೃಂದಾವನಂ ವನಂ ॥೧೬॥**

**ವನಾನಿ ದ್ವಾದಶ ಬುಧೈಃ ಕಥಿತಾನೀಹ ಭೂತಲೇ ।**
**ನಾಮಾನಿ ತೇಷಾಂ ಶೃಣುತ ವದಾಮ್ಯುದ್ದೇಶತಃ ಸ್ಫುಟಮ್ ॥೧೭॥**

**ಆದ್ಯಂ ಮಧುವನಂ ತತ್ರ ದ್ವಿತೀಯಂ ತಾಲಸಂಜ್ಞಿಕಮ್ ।**
**ತೃತೀಯಂ ಕುಮುದಂ ನಾಮ ಬಹುಲಾಖ್ಯಂ ಚತುರ್ಥಕಂ ॥೧೮॥**

**ಖಾದಿರಂ ಪಂಚಮಂ ಚೈವ ಷಷ್ಠಂ ಬಿಲ್ವಕಸಂಜ್ಞಿತಮ್ ।**
**ಸಪ್ತಮಂ ಲೌಹ ಸಂಜ್ಞಂ ತು ಭಾಂಡೀರಂ ಚಾಷ್ಟಮಂ ಸ್ಮೃತಮ್ ॥೧೯॥**

---

ಋಣಮುಕ್ತನಾಗುವನು. ಇದಲ್ಲದೇ ನಿಷ್ಕಾಮದಿಂದ ತನ್ನನ್ನು ಆರಾಧಿಸುವವರಿಗೆ ಶ್ರೀಕೃಷ್ಣನು ಧ್ಯಾನೈಕವೇದ್ಯವಾದ ಮತ್ತು ಚತುರ್ಭುಜಗಳಿಂದ ಯುಕ್ತವಾದ ತನ್ನ ನಿಜರೂಪವನ್ನು ತೋರಿಸುವನು. ॥೧೫॥

ಯಾವ ವೃಂದಾವನವೆಂಬ ವನದಲ್ಲಿ ವಿಷ್ಣುವು ನೆಲಸಿರುವನೋ, ಆ ವನವು ದಾನಗಳಿಂದಾಗಲೀ, ಕೃಚ್ಛ್ರಚಾಂದ್ರಾಯಣಾದಿ ತಪಸ್ಸುಗಳಿಂದಲಾಗಲೀ, ಹಠ ಯೋಗವೇ ಮುಂತಾದ ಸಾಧನದಿಂದಲಾಗಲೀ ದೃಗ್ಗೋಚರವಾಗುವುದಿಲ್ಲ. ಮತ್ತೇ ನೆಂದರೆ, ವಿಷ್ಣುವಿನಲ್ಲಿ ಭಕ್ತಿಭಾವನೆಯಿದ್ದರೆ ಮಾತ್ರ ಆ ಭಕ್ತಿಪ್ರಭಾವದಿಂದ ವೃಂದಾ ವನವು ದೃಗ್ಗೋಚರವಾಗುವುದು. ॥೧೬॥

ಈ ಭೂಲೋಕದಲ್ಲಿ ಹನ್ನೆರಡು ವಿಧವಾದ ವನಗಳಿರುತ್ತವೆ. ಎಲೈ ಋಷಿ ಗಳೇ, ಆ ವನಗಳ ಹೆಸರುಗಳನ್ನು ವಿವರವಾಗಿ ಹೇಳುತ್ತೇನೆ. ಕೇಳುವವರಾಗಿರಿ. ॥೧೭॥

ಆ ವನಗಳಲ್ಲಿ ಮೊದಲನೆಯದು ಮಧುವನವೆಂದೂ, ಎರಡನೆಯದು ತಾಲ ವನವೆಂದೂ, ಮೂರನೆಯದು ಕುಮುದವನವೆಂದೂ, ನಾಲ್ಕನೆಯದು ಬಹುಲವನ ವೆಂದೂ ಹೆಸರುಳ್ಳದ್ದಾಗಿರುತ್ತದೆ. ॥೧೮॥

ಐದನೆಯದು ಖಾದಿರವನವೂ, ಆರನೆಯದು ಬಿಲ್ವಕವೆಂಬ ಹೆಸರುಳ್ಳ ವನವೂ, ಏಳನೆಯದು ಲೌಹವೆಂಬ ಹೆಸರುಳ್ಳದ್ದೂ, ಎಂಟನೆಯದು ಭಾಂಡೀರ

**ನವಮಂ ಭದ್ರಕಂನಾಮ ಕಾಮಿಕಂ ದಶಮಂ ವನಂ ।**
**ಏಕಾದಶಂ ಛತ್ರವನಂ ವೃಂದಾವನಮಥಾದಿಮಂ ॥೨೦॥**

**ತತ್ರ ವೈದ್ವಾದಶಾದಿತ್ಯಾಃ ತೇಷು ವಿಷ್ಣುಃ ಪರೋ ಮತಃ ।**
**ತಥಾ ವನೇಷು ಸರ್ವೇಷು ಪರಂ ವೃಂದಾವನಂ ವನಂ ॥೨೧॥**

|| ಋಷಯ ಊಚುಃ ||

**ಕುತೋ ವೃಂದಾವನಂ ಚೇದಂ ಶ್ರೇಷ್ಠಂ ಮಾಥುರ ಮಂಡಲೇ ।**
**ಹರೇರತಿಪ್ರಿಯಂ ಕಸ್ಮಾತ್ ಕಥಂ ಕ್ರೀಡತಿ ನಿತ್ಯಶಃ ॥೨೨॥**

|| ಸೂತ ಉವಾಚ ||

**ಶೃಣ್ವಂತು ಮುನಯಃ ಸರ್ವೇ ಸುಗೋಪ್ಯಂ ವಚನಂ ಮಮ ।**
**ನ ಕಸ್ಯಾಗ್ರೇಽಪಿ ಕಥಿತಂ ಸಾಂಪ್ರತಂ ಕಥಯಾಮಿ ವಃ ॥೨೩॥**

ವನವೂ, ಒಂಬತ್ತನೆಯದು ಭದ್ರಕವೆಂಬ ವನವೂ, ಹತ್ತನೆಯದು ಕಾಮಿಕವನವೂ, ಛತ್ರವನವು ಹನ್ನೊಂದನೆಯದೂ, ಮತ್ತು ಈ ಮೊದಲು ಹೇಳಿದ ವೃಂದಾವನವೆಂಬ ಸಂಜ್ಞೆಯುಳ್ಳ ವನವು ಹನ್ನೆರಡನೆಯದೂ ಆಗಿರುತ್ತದೆ. ||೧೯-೨೦||

ಆ ದ್ವಾದಶ ವನಗಳಲ್ಲಿದ್ವಾದಶಾದಿತ್ಯರು ನೆಲೆಸಿರುವರು. ಆ ದ್ವಾದಶಾದಿತ್ಯರಲ್ಲಿ ವಿಷ್ಣುವು ಅತ್ಯಂತ ಶ್ರೇಷ್ಠನಾಗಿರುವನು. ಹಿಂದೆ ಹೇಳಿದ ದ್ವಾದಶವನಗಳಲ್ಲಿ ವೃಂದಾವನವು ಶ್ರೇಷ್ಠವಾದುದಾಗಿರುತ್ತದೆ. ||೨೧||

ಋಷಿಗಳು ಪ್ರಶ್ನೆಮಾಡುತ್ತಾರೆ. ಓ ಸೂತ ಮಹರ್ಷಿಯೇ, ಮಾಥುರ ದೇಶದಲ್ಲಿ ವೃಂದಾವನವನವೇ ಶ್ರೇಷ್ಠವಾಗಿರಲು ಕಾರಣವೇನು? ಆ ವನವು ಶ್ರೀಹರಿಗೆ ಪ್ರಿಯವಾಗಲು ಕಾರಣವೇನು? ಮತ್ತು ಅಲ್ಲಿ ನಿತ್ಯವೂ ಹರಿಯು ಹೇಗೆ ಕ್ರೀಡಿಸುತ್ತಿರುತ್ತಾನೆ? ಎಂಬ ವಿಷಯಗಳನ್ನು ಹೇಳುವವನಾಗು. ||೨೨||

ಸೂತನು ಹೇಳಿದನು ಎಲೈ ಋಷಿಗಳೇ, ನೀವು ಪ್ರಶ್ನಿಸಿದ ಈ ವಿಷಯವನ್ನು ನಾನು ಹಿಂದೆ ಯಾರಿಗೂ ಹೇಳಿರುವುದಿಲ್ಲ. ಈಗ ನಿಮಗೆ ಹೇಳುತ್ತೇನೆ. ಗೋಪ್ಯವಾದ ನನ್ನ ಈ ವಚನವನ್ನು ನೀವೆಲ್ಲರೂ ಕೇಳುವವರಾಗಿರಿ. ||೨೩||

ಪುರಾವೃತ್ತೇ ತು ಮುನಯೋ ದೃಷ್ಟಂ ಮೇ ಮಹದದ್ಭುತಂ ।
ಏಕದಾ ನಾರದೋ ಯಾತಃ ಶ್ವೇತದ್ವೀಪಮನುತ್ತಮಂ ॥೨೪॥

ಯತ್ರಾಸ್ತೇ ಭಗವಾನ್ವಿಷ್ಣುಃ ಬಿಭ್ರಚ್ಛಬ್ದಮಯಂ ವಪುಃ ।
ದರ್ಶನಾರ್ಥಂ ಭಗವತೋ ಗತಃ ಸ ಪರಮಾತ್ಮನಃ ॥೨೫॥

ದೃಷ್ಟ್ವಾ ನಾರಾಯಣಸ್ತತ್ರ ತಮಿತ್ಥಂ ಸಮವರ್ಧಯತ್ ।
ಮುನೇ ಸುಸ್ವಾಗತಂ ತೇಽಸ್ತು ಆಗಚ್ಛೋಪವಿಶಸ್ವ ಚ ॥೨೬॥

ಭವತೋ ಮೇ ಪ್ರಿಯಶ್ಚಾನ್ಯೋ ಭಕ್ತೇಷು ನ ಹಿ ವಿದ್ಯತೇ ।
ಲೋಕಪರ್ಯಟನೇ ಗಾಯನ್ಗುಣಾನ್ಮಮ ಸಮಂತತಃ ॥೨೭॥

ಉದ್ಧರಿಷ್ಯನ್ದೀನ ಜನಾನ್ವಿಷಯೇಷ್ವತಿರಾಗಿಣಃ ।
ದರ್ಶನಸ್ಪರ್ಶವಿಷಯೈಸ್ತಾನ್ ಕೃತಾರ್ಥಾನ್ಕರೋಷಿ ವೈ ॥೨೮॥

---

ಎಲೈ ಋಷಿಗಳೇ, ಹಿಂದೆ ಒಂದಾನೊಂದು ಕಾಲದಲ್ಲಿ ನಾನು ಮಹದಾಶ್ಚರ್ಯಕರವಾದ ವಿಷಯವನ್ನು ನೋಡಿದೆನು.—ಒಂದಾನೊಂದು ಕಾಲದಲ್ಲಿ ನಾರದನು ಆ ಶ್ವೇತದ್ವೀಪಕ್ಕೆ ಹೋದನು. ಅಲ್ಲಿ ಭಗವಂತನಾದ ವಿಷ್ಣುವು ಶಬ್ದಮಯವಾದ ದೇಹವನ್ನು ಧರಿಸಿ ನೆಲೆಸಿರುವನು. ಅಲ್ಲಿಗೆ ಆ ನಾರದನು ಪರಮಾತ್ಮನಾದ ವಿಷ್ಣುವಿನ ದರ್ಶನಕ್ಕೋಸ್ಕರ ಹೋಗಿದ್ದನು. ॥೨೪-೨೫॥

ತನ್ನ ದರ್ಶನಾರ್ಥವಾಗಿ ಬಂದ ಆ ನಾರದನನ್ನು ನೋಡಿ, ಭಗವಂತನಾದ ವಿಷ್ಣುವು ಸಂತೋಷಗೊಂಡವನಾಗಿ ಮುಂದೆ ಹೇಳುವಂತೆ ಹೇಳಿದನು.- ಎಲೈ ಮುನಿಯೇ, ನಿನಗೆ ಸುಖಾಗಮನವೇ ? ಇತ್ತಬಂದು ಕುಳಿತುಕೊಳ್ಳುವವನಾಗು. ನನ್ನ ಭಕ್ತವೃಂದದಲ್ಲಿ ನಿನಗಿಂತಲೂ ಪ್ರಿಯನಾದ ಭಕ್ತನು ಬೇರೊಬ್ಬನಿಲ್ಲವು. ॥೨೬॥

ಏಕೆಂದರೆ ನೀನು ಲೋಕಗಳನ್ನು ಸಂಚರಿಸುತ್ತಾ, ನನ್ನ ಗುಣಗಳನ್ನು ಗಾನಮಾಡುವವನಾಗಿ, ವಿಷಯಾಸಕ್ತರಾಗಿರತಕ್ಕ ದೀನಜನಗಳನ್ನು ದರ್ಶನ ಮತ್ತು ಸ್ಪರ್ಶನ ಮುಂತಾದುವುಗಳಿಂದ ಕೃತಕೃತ್ಯರನ್ನಾಗಿಮಾಡುತ್ತಿರುವೆ. ॥೨೭-೨೮॥

ಇದಾನೀಂ ಮಾನುಷೇ ಲೋಕೇ ಕಾ ಕಥಾ ವದ ಮೇ ಮುನೇ ।
ಕಿಂಚಿತ್ ತ್ವಯಾಽದ್ಭುತಂ ದೃಷ್ಟಮನುಭೂತಮಥ ಕ್ವಚಿತ್ ॥೨೯॥

ಪೃಷ್ಟಃ ಸ ತೇನ ಮುನಯೋ ಜಗದೀಶೇನ ಭಾಸ್ವತಾ ।
ತಮುವಾಚೇದಿದಂ ವಿಷ್ಣುಂ ಲೋಕವೃತ್ತವಿದೀಶ್ವರಮ್ ॥೩೦॥

ಅಧುನಾ ತ್ವದ್ದರ್ಶನೇನ ಚಿತ್ತಂ ಮೇ ವಿಶದೀಕೃತಮ್ ।
ಚರನ್ ಲೋಕಾನ್ ತವೋದ್ಗಾಯನ್ ಲೀಲಾಂ ಭುವನಪಾವನೀಂ ॥೩೧॥

ಅನುಭೂತಂ ಶೃಣು ವಿಭೋ ಯತ್ಕಿಂಚಿನ್ಮೇಽಧುನಾ ಹರೇಃ ।
ಭಾರತೇ ಮಾನಸಂ ನಾಮ ಸರೋಽಸ್ತಿ ಪೂತಮುತ್ತಮಂ ॥೩೨॥

ಅಗಾಧಮವಿಷಂ ತತ್ರ ದೃಷ್ಟ್ವಾ ಮೇ ಮುನಯೋ ದಶ ।
ಧ್ಯಾಯಂತಃ ಪರಮಾತ್ಮಾನಂ ಗುಣಾತೀತಂ ಗುಣೋದಯಂ ॥೩೩॥

---

ಎಲೈ ಮುನಿಯೇ, ಮನುಷ್ಯಲೋಕದ ಸಮಾಚಾರವನ್ನು ಹೇಳುವವನಾಗು. ಅಲ್ಲಿ ನೀನು ನೋಡಿರುವ ಮತ್ತು ಅನುಭವಿಸಿರುವ ಅದ್ಭುತ ವಿಚಾರಗಳನ್ನು ತಿಳಿಸುವವನಾಗು. ॥೨೯॥

ಎಲೈ ಋಷಿಗಳೇ, ಜಗತ್ಪ್ರಭುವಾದ ವಿಷ್ಣುವು ನಾರದನನ್ನು ಕುರಿತು ಹೀಗೆಂದು ಪ್ರಶ್ನಿಸಲಾಗಿ, ತ್ರಿಲೋಕಗಳ ವೃತ್ತಾಂತವನ್ನೂ ತಿಳಿದಿರುವವನಾದ ನಾರದನು ವಿಷ್ಣುವನ್ನು ಕುರಿತು ಇಂತೆಂದು ಹೇಳಿದನು. ॥೩೦॥

ಓ ಪ್ರಭುವೇ, ನಿನ್ನ ದರ್ಶನಮಾತ್ರದಿಂದಲೇ ಈಗ ನನ್ನ ಚಿತ್ತವು ನಿರ್ಮಲವಾಯಿತು. ಲೋಕಗಳನ್ನು ಸಂಚರಿಸುತ್ತಾ ನಿನ್ನ ಲೀಲೆಗಳನ್ನು ಗಾನ ಮಾಡುತ್ತಿರುವ ನಾನು ಮನುಷ್ಯಲೋಕದಲ್ಲಿ ಅನುಭವಿಸಿದ ಒಂದು ವೃತ್ತಾಂತವನ್ನು ಹೇಳುವೆನು, ಕೇಳುವವನಾಗು. ॥೩೧॥

ಭರತಭೂಮಿಯಲ್ಲಿ ಗಂಭೀರವೂ, ನಿರ್ಮಲವೂ ಮತ್ತು ಶ್ರೇಷ್ಠವೂ ಆದ ಮಾನಸವೆಂದು ಹೆಸರುಳ್ಳ ಒಂದು ಸರೋವರವು ಇರುತ್ತದೆ. ಆ ಸರೋವರದ ದಡದಲ್ಲಿ ಹತ್ತು ಮಂದಿ ಋಷಿಗಳು ನನಗೆ ಕಾಣಿಸಿಕೊಂಡರು. ಅವರು ಸತ್ತ್ವರಜಸ್ತಮೋಗುಣ ರಹಿತನೂ, ಅನಂತ ಕಲ್ಯಾಣಗುಣ ಸಂಪನ್ನನೂ ಆದ ಪರಮಾತ್ಮನನ್ನು ಧ್ಯಾನಮಾಡುತ್ತಿದ್ದರು. ॥೩೨-೩೩॥

ನ ಶೃಣ್ವಂತಿ ನ ಪಶ್ಯಂತಿ ನ ವದಂತಿ ಪರಂ ಗತಾಃ ।
ಸ್ಥಿತೋಽಸ್ಮ್ಯಹಂ ಚಿರಂ ತತ್ರ ಕದಾಚಿತ್ ಪ್ರವದಂತಿ ಚೇತ್ ॥೩೪॥

ಏತೇ ಹಿ ನಾಬ್ರುವನ್ ಬ್ರಹ್ಮ ಸಂವಿಗ್ನ ಆಗತಸ್ತತಃ
ತದ್ಬ್ರೂಹಿ ತ್ವಂ ಹೃಷೀಕೇಶ ಕಿಂನು ಧ್ಯಾಯಂತಿ ತೇ ಬುಧಾಃ ।
ಸರಸ್ತೀರಂ ಕಥಂ ಯಾತಾಃ ಕೇ ತೇ ವಾ ವದ ನೋ ಪ್ರಭೋ ॥೩೫॥

ನಾರದಾದ್ಭುತಮೇತಚ್ಚ ಕಥನೀಯಂ ನ ಹಿ ಕ್ವಚಿತ್ ।
ತಥಾಽಪಿ ಚ ತವ ಸ್ನೇಹಾತ್ಕಥಯಿಷ್ಯಾಮಿ ತಚ್ಛೃಣು ॥೩೬॥

ತೇ ಧ್ಯಾಯಂತಿ ಮಹಾತ್ಮಾನಃ ಕೃಷ್ಣಂ ವೃಂದಾವನೇ ಸ್ಥಿತಮ್ ।
ಗೋಪಿಕಾರಮಣಂ ಕಾಂತಂ ಪರಂ ಲಾವಣ್ಯಭಾಜನಂ ॥೩೭॥

---

ಈ ಪ್ರಕಾರವಾಗಿ ಆ ಪರಮಾತ್ಮನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ಧ್ಯಾನ ಮಾಡುತ್ತಿರುವ ಆ ಋಷಿಗಳು ಯಾವ ಶಬ್ದವನ್ನೂ ಗ್ರಹಿಸುವುದಿಲ್ಲ. ಯಾರನ್ನೂ ನೋಡುವುದಿಲ್ಲ. ಯಾವ ಮಾತನ್ನೂ ಆಡುವುದಿಲ್ಲ. ಹೀಗಿರಲು ಒಂದಾನೊಂದು ಸಮಯದಲ್ಲಾದರೂ ಅವರು ಏನನ್ನಾದರೂ ಮಾತನಾಡುವರೋ ಎಂದು ನಾನು ನಿರೀಕ್ಷಿಸುತ್ತಾ ಬಹುಕಾಲ ಪರ್ಯಂತ ಅಲ್ಲಿಯೇ ನಿಂತವನಾದೆನು. ॥೩೪॥

ಬಹಳಕಾಲ ಪರ್ಯಂತ ನಿರೀಕ್ಷಿಸಿದೆನಾದರೂ, ಆ ಋಷಿಗಳು ಮಾತನಾಡ ಲಿಲ್ಲ. ಬಳಿಕ ನಾನು ವ್ಯಾಕುಲಿತನಾಗಿ ಅಲ್ಲಿಂದ ಹಿಂತಿರುಗಿದವನಾದೆನು. ಓ ಹೃಷೀ ಕೇಶನೇ, ಆ ಋಷಿಗಳು ಯಾರು? ಅವರು ಏನನ್ನು ಧ್ಯಾನಿಸುತ್ತಿರುವರು? ಮತ್ತು ಆ ಸರೋವರದ ದಡವನ್ನು ಹೇಗೆ ಸೇರಿದರು? ಎಂಬ ಸರ್ವ ವಿಷಯುಗಳನ್ನೂ ನನಗೆ ಹೇಳುವವನಾಗು? ॥೩೫॥

ಎಲೈ ನಾರದನೇ, ನೀನು ಕೇಳಿದ ವಿಷಯವು ಅತ್ಯಂತ ಆಶ್ಚರ್ಯಕರ ವಾದದ್ದೂ ಮತ್ತು ಗೋಪ್ಯವಾದದ್ದೂ ಆಗಿರುತ್ತದೆ. ಆ ವಿಷಯವು ಮತ್ತೊಬ್ಬರಿಗೆ ಹೇಳತಕ್ಕದ್ದಲ್ಲವು. ಆದರೂ, ನಿನ್ನಲ್ಲಿ ನನಗಿರುವ ಪ್ರೀತಿ ವಿಶೇಷದಿಂದ ಈ ವಿಷಯ ವನ್ನು ಹೇಳುವೆನು, ಕೇಳುವವನಾಗು, ॥೩೬॥

ಮಹಾತ್ಮರಾದ ಆ ಋಷಿಗಳು ಗೋಪಿಕಾರಮಣನೂ, ಮನೋಹರನೂ, ಮತ್ತು ಅತಿ ಸುಂದರನೂ ಆದ ವೃಂದಾವನದಲ್ಲಿ ವಾಸಮಾಡುವ ಶ್ರೀಕೃಷ್ಣ ಪರ

ಕದಾಚಿದ್ಧ್ಯಾಯಮಾನಾನಾಂ ಆವಿರಾಸೀಚ್ಚತುರ್ಭುಜಃ ।
ತಂ ದೃಷ್ಟ್ವಾ ಪರಮಾತ್ಮಾನಂ ವೈಕುಂಠೇಶಂ ರಮಾಪತಿಮ್ ॥೩೮॥

ಅರ್ಚಯಿತ್ವಾ ಮಹಾತ್ಮಾನಃ ಪ್ರತ್ಯುತ್ಥಾನ ಪುರಃ ಸರಂ ।
ತುಷ್ಟುವುಃ ಪರಯಾ ಭಕ್ತ್ಯಾ ಪುಟಿತಾಂಜಲಯಃ ಪ್ರಭುಮ್ ॥೩೯॥

ಪ್ರಸನ್ನೋ ಭಗವಾಂಸ್ತೇಷಾಂ ತಪಸಾ ಬಾಧಿತೋಽಬ್ರವೀತ್ ।
ಯದಭೀಷ್ಟಂ ವರಂ ಶಶ್ವದ್ವರಯಧ್ವಂ ಮಹತ್ತಮಾಃ ॥೪೦॥

ಮದ್ದರ್ಶನಂ ಹಿ ಭೂತಾನಾಂ ಶ್ರೇಯಸಾಂ ಪರಮೋ ವಿ(ಽವ)ಧಿಃ ।

॥ ಮಹತ್ತಮಾ ಊಚುಃ ॥

ಯದಿ ತ್ವಂ ವರದೋ ವಿಷ್ಣೋ ಚಾಸ್ಮಾಕಂ ತು ವರೋಽಧುನಾ ॥೪೧॥

ಕಿಂತು ರೂಪಂ ಹ್ಯೇತದೇವ ಚಾನ್ಯದ್ವಾಽಪಿ ಮಹತ್ತಮಮ್ ।
ಕೋ ಲೋಕಃ ಕಾ ಪ್ರಿಯಾ ಭೂಮಿಃ ಕ್ವ ನಿವಾಸೋ ವದಾಧುನಾ ॥೪೨॥

---

ಮಾತ್ಮನನ್ನು ಧ್ಯಾನಮಾಡುತ್ತಿರುವರು. ಈ ಪ್ರಕಾರವಾಗಿ ಧ್ಯಾನಮಾಡುತ್ತಿರುವ ಆ ಮಹಾತ್ಮರ ಮುಂಭಾಗದಲ್ಲಿ ಚತುರ್ಭುಜನಾದ ಶ್ರೀ ಕೃಷ್ಣನು ಕಾಣಿಸಿಕೊಂಡನು. ||೩೭||

ವೈಕುಂಠ ಲೋಕಕ್ಕೆ ಅಧಿಪತಿಯೂ, ಲಕ್ಷ್ಮೀಕಾಂತನೂ ಆದ ವಿಷ್ಣುವನ್ನು ನೋಡಿ, ಮಹಾತ್ಮರಾದ ಋಷಿಗಳು, ಪ್ರತ್ಯುತ್ಥಾನ ಪೂರ್ವಕವಾಗಿ ಅವನನ್ನು ಸ್ವಾಗತಿಸಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದರು ಮತ್ತು ಅಂಜಲಿ ಬದ್ಧರಾಗಿ ಭಕ್ತಿಯಿಂದ ಸ್ತುತಿಸಿದರು. ಆ ಋಷಿಗಳ ತಪಸ್ಸಿನಿಂದ ಸಂತುಷ್ಟನಾದ ವಿಷ್ಣುವು ಅವರನ್ನು ಕುರಿತು ಹೀಗೆಂದು ಹೇಳಿದನು. ||೩೮-೩೯||

ಎಲೈ ಮಹಾತ್ಮರೇ, ನಿಮಗೆ ಅಭಿಲಷಿತವಾದ ವರನ್ನು ನೀವು ಪ್ರಾರ್ಥಿಸಿರಿ. ಕೊಡುವೆನು. ನನ್ನ ಸಂದರ್ಶನವೇ ಪ್ರಾಣಿಗಳಿಗೆ ಶ್ರೇಯಸ್ಸಿನ ಪರಮಾವಧಿಯಾಗಿರುತ್ತದೆ. ||೪೦-೪೧||

ಮಹತ್ತಮರಾದ ಋಷಿಗಳು ಹೇಳಿದರು—ಓ ವಿಷ್ಣುವೇ, ನೀನು ವರವನ್ನು ಕೊಡುವವನಾದ ಪಕ್ಷದಲ್ಲಿ, ನೀನು ನಮಗೆ ತೋರಿಸುತ್ತಿರುವ, ಈ ರೂಪವೇ ನಿನ್ನ ಯಥಾರ್ಥವಾದ ರೂಪವೇ ? ಅಥವಾ ಇದಕ್ಕಿಂತಲೂ ಶ್ರೇಷ್ಠವಾದ ರೂಪವು ನಿನಗೆ

॥ ಶ್ರೀ ಭಗವಾನುವಾಚ ॥

**ಅಸ್ತಿ ಮೇ ಪರಮಂ ರೂಪಮಚಿಂತ್ಯಪದ ಸೌಖ್ಯದಂ ।**
**ತನ್ನಿತ್ಯಂ ಕ್ರೀಡತೇ ಯತ್ರ ವಲ್ಲವೀಗಣವೇಷ್ಟಿತಮ್ ॥೪೩॥**

**ಭೂಲೋಕೇ ಭಾರತೇ ವರ್ಷೇ ಮಾಥುರೇ ಮಂಡಲೇ ಶುಭೇ ।**
**ಭೂಮಿಃ ಪವಿತ್ರಾತಿತರಾಂ ತತ್ರ ವೃಂದಾವನಂ ಮಹತ್ ॥೪೪॥**

**ಗೋವರ್ಧನೋ ಗಿರಿವರೋ ನಂದಗ್ರಾಮಃ ಕ್ಷಮೀ ಪ್ರಭುಃ ।**
**ಪ್ರಿಯಾ ಸರಿದ್ವರಾ ಯತ್ರ ಕಾಲಿಂದೀ ಶಮನಸ್ವಸಾ ॥೪೫॥**

**ಇತ್ಯಾಕರ್ಣ್ಯ ಮುನಿಶ್ರೇಷ್ಠಾಃ ಸೋತ್ಕಂಠಾ ದರ್ಶನೋದ್ಯತಾಃ ।**
**ತತಸ್ತಾನ ಬ್ರವೀದ್ವಿಷ್ಣುರ್ಮಾಧವೋ ಮಧುಸೂದನಃ ॥೪೬॥**

---

ಇರುವುದೇ ? ಎಂಬ ಅಂಶವನ್ನು ನಮಗೆ ಹೇಳುವವನಾಗು. ಇದೇ ನಾವು ಕೇಳುವ ವರವಾಗಿರುತ್ತದೆ. ಹಾಗೆ ನಿನಗೆ ಇದಕ್ಕಿಂತಲೂ ಶ್ರೇಷ್ಠವಾದ ಬೇರೆ ರೂಪವು ಇರುವುದಾದರೆ, ಆ ರೂಪಧಾರಿಯಾದ ನೀನು ನೆಲೆಸಿರುವ ಲೋಕವು ಯಾವುದು ? ನಿನಗೆ ಪ್ರೀತಿಪಾತ್ರವಾದ ಆ ಸ್ಥಳವು ಯಾವುದು ? ಮತ್ತು ನಿನ್ನ ವಾಸಸ್ಥಳವು ಯಾವುದು ? ಎಂಬ ವಿಷಯಗಳನ್ನು ಹೇಳುವವನಾಗು. ॥೪೨॥

ಎಲೈ ಋಷಿಗಳೇ, ನೀವು ಈಗ ನೋಡುತ್ತಿರುವ ನನ್ನ ಈ ರೂಪಕ್ಕಿಂತಲೂ ಬೇರೆಯಾದ ರೂಪವು ನನಗೆ ಇರುವುದು. ಆ ರೂಪವು ನಿತ್ಯವೂ, ಶಾಶ್ವತವಾದ ಪದವಿಯನ್ನು ದಯಪಾಲಿಸುವುದೂ, ಅತ್ಯಾನಂದದಾಯಕವೂ ಆಗಿರುವುದು. ಆ ರೂಪವು ಸರ್ವದಾ ಗೋಪಿಕಾಸ್ತ್ರೀಯರಿಂದ ಆವೃತವಾಗಿ ಕ್ರೀಡಿಸುತ್ತಲಿರುವುದು. ಭೂಲೋಕದ ಭಾರತಭೂಮಿಯಲ್ಲಿ ಮಾಥುರವೆಂಬ ಹೆಸರುಳ್ಳ ಒಂದು ದೇಶವು ಇರುತ್ತದೆ. ಆ ದೇಶದಲ್ಲಿ ಪವಿತ್ರವಾದ ಒಂದು ಸ್ಥಳದಲ್ಲಿ ಶ್ರೇಷ್ಠವಾದ ವೃಂದಾವನವು ಇರುತ್ತದೆ. ಇದಲ್ಲದೆ ಆ ಸ್ಥಳದಲ್ಲಿ ಗೋವರ್ಧನವೆಂದು ಸಂಜ್ಞೆಯುಳ್ಳ ಪರ್ವತವೂ, ನಂದಗ್ರಾಮವೆಂಬ ಗ್ರಾಮವೂ, ಯಮುನ ಸೋದರಿಯಾದ ಕಾಲಿಂದೀ ಎಂಬ ನದಿಯೂ ಕ್ಷಮಾಗುಣಶಾಲಿಯಾದ ಸ್ವಾಮಿಯೂ ಇರುತ್ತಾರೆ. ಇವೆಲ್ಲವೂ ನನಗೆ ಪ್ರಿಯವಾದದ್ದಾಗಿರುತ್ತವೆ. ॥೪೩-೪೪-೪೫॥

ಹೀಗೆಂದು ಹೇಳಿದ ವಿಷ್ಣುವಿನ ಮಾತನ್ನು ಕೇಳಿ ಆ ಮುನಿಶ್ರೇಷ್ಠರು ಸಂತುಷ್ಟರಾಗಿ ವಿಷ್ಣುವಿನ ಆ ರೂಪವನ್ನು ನೋಡಲು ಉತ್ಸುಕರಾದರು. ಬಳಿಕ

ಯಾದೃಶೇನಾದ್ಯ ತಪಸಾ ಸಮ್ಯಗಾರಾಧಿತೋಽಸ್ಮ್ಯಹಂ ।
ಏತಾದೃಶಾನಾಂ ತಪಸಾಂ ಕೋಟಿಭಿರ್ನಾಽಪಿ ಲಭ್ಯತೇ ॥೪೭॥

ಇತ್ಯುಕ್ತ್ವಾಽಂತರ್ದಧೇ ವಿಷ್ಣುಃ ಸ್ವರ್ಲೋಕಂ ಭಾಸ್ವರಂ ತತಃ ।
ತೇಽಥ ಚಿತ್ತಂ ಸಮಾಧಾಯ ಧ್ಯಾನಂ ಚಕ್ರುರತಂದ್ರಿತಾಃ ॥೪೮॥

ಪುನಸ್ತಪ್ತೋಽತಿ ತಪಸಾ ಮಾವಿರಾಸೀತ್ತಥಾ ಪ್ರಭುಃ ।
ತಥಾಽಪಿ ನ ವರಂ ಚೇಷ್ಟಂ ದದೌ ತೇಭ್ಯಃ ಕೃಪಾಽನ್ವಿತಃ ॥೪೯॥

ಶರೀರಾಣಿ ಗೃಹೀತಾನಿ ಕಾಲಕುಕ್ಷೌ ಪುನಃ ಪುನಃ ।
ನ ಕರ್ಮ ಜನಿತಾನ್ಯೇವ ತಪಸಾ ಸಂಚಿತಾನಿ ಹಿ ॥೫೦॥

---

ರಮಾಪತಿಯಾದ ಮತ್ತು ಮಧು ಎಂಬ ರಾಕ್ಷಸನನ್ನು ಕೊಂದ ವಿಷ್ಣುವು ಆ ಋಷಿಗಳನ್ನು ಉದ್ದೇಶಿಸಿ ಹೀಗೆಂದು ಹೇಳಿದನು. ||೪೬||

ಎಲೈ ಋಷಿಗಳೇ, ನೀವು ಎಂತಹ ತಪಸ್ಸಿನಿಂದ ನನ್ನನ್ನು ಆರಾಧಿಸಿರುವಿರೋ ಅಂತಹ ಕೋಟಿ ತಪಸ್ಸುಗಳಿಂದಲೂ ಆ ನನ್ನ ದರ್ಶನವು ದುರ್ಲಭವಾಗಿರುತ್ತದೆ. ||೪೭||

ಹೀಗೆಂದು ಹೇಳಿದ ತರುವಾಯ ವಿಷ್ಣುವು ಅಂತರ್ಧಾನನಾಗಿ ಸ್ವರ್ಗಲೋಕವನ್ನು ಕುರಿತು ತೆರಳಿದನು. ಬಳಿಕ ಋಷಿಗಳು ಚಿತ್ತಸಮಾಧಾನವನ್ನು ಹೊಂದಿ, ಉತ್ಸಾಹಪೂರಿತರಾಗಿ ಪುನಃ ವಿಷ್ಣುವನ್ನು ಕುರಿತು ಧ್ಯಾನಮಾಡಿದರು. ||೪೮||

ಪುನಃ ತಪಸ್ಸನ್ನಾಚರಿಸುವ ಆ ಮುನಿಗಳ ಮುಂಭಾಗದಲ್ಲಿ ಪ್ರಭುವಾದ ವಿಷ್ಣುವು ಮತ್ತೊಮ್ಮೆ ಕಾಣಿಸಿಕೊಂಡನು. ಆದರೆ ಹಿಂದಿನಂತೆಯೇ ಆ ಋಷಿಗಳಿಗೆ ಇಷ್ಟಾರ್ಥಗಳನ್ನು ದಯಪಾಲಿಸಲಿಲ್ಲ ! ||೪೯||

ಎಲೈ ಋಷಿಗಳೇ, ಮಹಾಕಾಲದ ಮಧ್ಯದಲ್ಲಿ ನಾನು ಆಗಾಗ್ಗೆ ಜನ್ಮಗಳನ್ನು ಪಡೆಯುತ್ತಿರುತ್ತೇನೆ. ಆದರೆ ಆ ಜನ್ಮಗಳು, ಇತರ ಜೀವರಿಗೆ ಹೇಗೋಹಾಗೆ ತಪಸ್ಸೇ ಮುಂತಾದ ಕರ್ಮಗಳ ಫಲಾನುಭವಕ್ಕಾಗಿ ಎಂದರೆ ಕರ್ಮಾಧೀನವಾಗಿ ಬರುವುದಿಲ್ಲ. ಮತ್ತೇನೆಂದರೆ ಧರ್ಮಸಂಸ್ಥಾಪನೆಗೋಸ್ಕರ ಜಗದ್ರಕ್ಷಣೆಗಾಗಿ ನಾನೇ ಸ್ವತಂತ್ರವಾದ ನನ್ನ ಇಚ್ಛೆಯಿಂದಲೇ ಜನ್ಮಗಳನ್ನು ಪರಿಗ್ರಹಿಸುತ್ತೇನೆ. ಜನರು ಎಲ್ಲರೂ ಧರ್ಮದ

**ಅಸ್ಥೀನಿ ನ ವಿನಶ್ಯಂತಿ ದೇಹಾಂತರಮನುಕ್ರಮಾತ್ ।**
**ಕಾಲೋ ಹಿ ಗಮಿತೋ ಯಾವಾನ್ ಕರಕಾಂಶ್ಚ ಯಥಾಮಿತಾಃ ॥೫೧॥**

**ತದ್ವದಾಮಿ ಮುನಿಶ್ರೇಷ್ಠ ಶೃಣುಷ್ವಾವಹಿತೋಽಧುನಾ ।**
**ಏಕೈಕಸ್ಯ ಶರೀರಾಣಿ ಕೋಟಿ ಕೋಟಿ ಶತಾನಿ ಚ ॥೫೨॥**

**ಪತಿತಾನಿ ಮುನಿಶ್ರೇಷ್ಠ ಕಲ್ಪೇ ಕಲ್ಪೇ ವಿಪರ್ಯಯಂ ।**
**ಏತಾವಂತಿ ಗಮಿಷ್ಯಂತಿ ಶರೀರಾಣಿ ಯದಾ ಮುನೇ ॥೫೩॥**

---

ಪುನರುಜ್ಜೀವನಕ್ಕಾಗಿ ಮಾಡುವ ಪ್ರಾರ್ಥನೆಗೆ ಅನುಸಾರವಾಗಿ ನಾನು ಆಗಾಗ್ಗೆ ಅವತಾರಗಳನ್ನು ಸ್ವೀಕರಿಸುತ್ತಾ ಜಗದ್ರಕ್ಷಣ ಕಾರ್ಯವನ್ನು, ಎಂದರೆ ದುಷ್ಟನಿಗ್ರಹ, ಶಿಷ್ಟಾನುಗ್ರಹರೂಪವಾದ ಕರ್ಮದಿಂದ ಧರ್ಮಾಚರಣೆಯು ಪೂರ್ವದಂತೆ ಮುಂದಕ್ಕೂ ನೆರವೇರುತ್ತಿರುವುದರಿಂದ, ದೇವತೆಗಳಿಗೂ ಮಾನವರಿಗೂ ಪರಸ್ಪರವಾದ ಶ್ರೇಯಸ್ಸಾಧನೆಯಾಗುವಂತೆ ಮಾಡುತ್ತಿರುತ್ತೇನೆ. ||೫೦||

ಜೀವರು ದೇಹಾಂತರಗಳನ್ನು ಪಡೆಯುತ್ತಿದ್ದರೂ ಹಿಂದಿನ ಜನ್ಮಗಳಲ್ಲಿ ಮಾಡಿರಬಹುದಾದ ಕರ್ಮಗಳ ಸಾರವು, ಎಂದರೆ ಫಲವನ್ನು ಕೊಡುವ ಸಾಮರ್ಥ್ಯವು, ಮಾತ್ರ ನಾಶವಾಗುವುದಿಲ್ಲ. ಅದು ಮುಂದಾದರೂ ತಕ್ಕ ಕಾಲದಲ್ಲಿ ತನ್ನ ಫಲವನ್ನು ಕೊಟ್ಟೇ ಕೊಡುತ್ತದೆ. ಆದರೆ ನೀರಿನ ಗಡ್ಡೆಯು ಕರಗಿಹೋಗುವಂತೆ, ಅದಕ್ಕೆ ತಕ್ಕಷ್ಟು ಕಾಲವು ಕಳೆಯಬೇಕು. ಆಮೇಲೆ ಅದು ಫಲವನ್ನು ಕೊಡುತ್ತದೆ. ||೫೧||

ಎಲೈ ಮುನಿಶ್ರೇಷ್ಠನೇ, ಆದುದರಿಂದ ನಾನು ಈಗ ಹೇಳುತ್ತಿರುವುದನ್ನು ಗಮನವಿಟ್ಟು ಕೇಳು. ಜೀವರಿಗೆ ಒಬ್ಬೊಬ್ಬರಿಗೂ ಅನೇಕ ಕೋಟಿ ಜನ್ಮಗಳು ಕಳೆದಿರುತ್ತವೆ. ಎಂದರೆ ಹಿಂದೆ ಎಷ್ಟು ಜನ್ಮಗಳು ಕಳೆದಿವೆ ಎಂಬುದನ್ನು ಲೆಕ್ಕಮಾಡಿ ಹೇಳಲಾಗುವುದಿಲ್ಲವು! ಏಕೆಂದರೆ ಈ ಸಂಸಾರವು ಅನಾದಿಯಾಗಿದೆ. ||೫೨||

ಹೀಗೆ ಶರೀರಗಳು ಒಂದೊಂದಾಗಿ ಬಂದು ಹೋಗುತ್ತಿರಲು, ಇವೆಲ್ಲವೂ ಪ್ರತಿಕಲ್ಪದ ತುದಿಯಲ್ಲಿ ಬದಲಾವಣೆಯನ್ನು ಹೊಂದುತ್ತವೆ. ಜನರ ಪಾಪಗಳೆಲ್ಲವೂ ನಷ್ಟವಾಗಿ ಪುಣ್ಯವು ಹೆಚ್ಚಾಗಲು ಅದರ ಫಲವಾಗಿ ಅವರು ಪವಿತ್ರವಾದ ಕ್ಷೇತ್ರವನ್ನು ಪಡೆಯುತ್ತಾರೆ. ||೫೩||

**ತದಾ ವೃಂದಾವನಂ ಪ್ರಾಪ್ಯ ತಪಸ್ತ್ಯಾಗೋ ಭವಿಷ್ಯತಿ ।**
**ಪ್ರೇಮಭಕ್ತಿರತಾನಾಂ ಚ ಶರೀರಾಣಿ ನವಾನಿ ಹಿ ॥೫೪॥**

**ಭವಿಷ್ಯಂತಿ ನ ಸಂದೇಹಃ ಸುಖಂ ಪ್ರಾಪ್ಸ್ಯಂತಿ ತೇ ಭೃಶಂ ।**
**ಇತ್ಯಾಕರ್ಣ್ಯ ಮುನಿಶ್ರೇಷ್ಠೋ ದ್ರಷ್ಟುಮುತ್ಕಂಠಿತೋಽಭವತ್ ॥೫೫॥**

**ಸ್ಮರನ್ ವೃಂದಾವನಂ ಭೂಯೋ ನಾರದಃ ಪ್ರಣನಾಮ ಹ ।**
**ತ್ವಮಾಜ್ಞಾಪಯ ಗಚ್ಛಾಮಿ ಹ್ಯನಿರುದ್ಧ ಸ್ತ್ವಥಾಬ್ರವೀತ್ ॥೫೬॥**

**ಕಥಂ ಮುನೇ ತ್ವಯಾ ಜ್ಞಾತಮಶ್ರುತಂ ಕಾರಣಂ ಪರಂ ।**
**ಪ್ರಯಾಹಿ ತ್ವಂ ಮಹಾರಣ್ಯೇ ಸ್ನಾತ್ವಾ ಸರಸಿ ಮಾನಸೇ ॥೫೭॥**

---

ಈ ಕ್ರಮದಲ್ಲಿ ಜೀವರು ಆಗ ವೃಂದಾವನವೆಂಬ ಶ್ರೀಕೃಷ್ಣನ ಪುಣ್ಯಕ್ಷೇತ್ರದಲ್ಲಿ ವಾಸವನ್ನು ಪಡೆಯುತ್ತಾರೆ. ಆ ಪಾವನವಾದ ಕ್ಷೇತ್ರದಲ್ಲಿರುವಾಗ ಯಜ್ಞದಾನ ತಪಸ್ಸುಗಳನ್ನು ಮಾಡಬೇಕಾದ ಅವಶ್ಯಕತೆಯು ತಪ್ಪಿಹೋಗುತ್ತದೆ. ಗುರುಹಿರಿಯರಲ್ಲೂ ದೇವರಲ್ಲೂ ಇರುವ ಪ್ರೀತಿಗೆ ಭಕ್ತಿ ಎಂದು ಹೆಸರು. ಅಂತಹ ಪ್ರೇಮಭಕ್ತಿಯಲ್ಲಿ ಆಸಕ್ತರಾಗಿರುವ ಆ ಪುಣ್ಯಶಾಲಿಗಳಿಗೆ ಹೊಸದಾದ ಶರೀರಗಳುಂಟಾಗುತ್ತವೆ. ॥೫೪॥

ಇಂತಹ ಶುಭಕರವಾದ ಶರೀರಗಳು ಉಂಟಾಗಲು ಆ ಪುಣ್ಯಶಾಲಿಗಳು ಅತ್ಯುತ್ತಮವಾದ ಸುಖವನ್ನು ಪಡೆಯುವರು. ಇದರಲ್ಲಿ ಸಂಶಯವಿಲ್ಲವು. ಹೀಗೆಂಬ ಮಾತನ್ನು ಕೇಳಿದ ಕೂಡಲೆ ಆ ಮುನಿಶ್ರೇಷ್ಠನು ಆ ವೃಂದಾವನಕ್ಷೇತ್ರವನ್ನು ನೋಡಲು ಕುತೂಹಲವುಳ್ಳವನಾದನು. ॥೫೫॥

ಈ ರೀತಿಯಲ್ಲಿ ನಾರದಮುನಿಯು ವೃಂದಾವನಕ್ಷೇತ್ರದ ಮಹಿಮೆಯನ್ನು ಮನಸ್ಸಿನಲ್ಲಿ ಭಾವಿಸುತ್ತಾ ಅನಿರುದ್ಧನನ್ನು ಕುರಿತು ನೀನು ಅಪ್ಪಣೆಮಾಡುವುದಾದರೆ ನಾನು ಬೃಂದಾವನಕ್ಕೆ ಹೋಗುತ್ತೇನೆಂದು ಹೇಳಲು, ಅನಿರುದ್ಧನು ನಾರದನನ್ನು ಕುರಿತು ಹೀಗೆ ಹೇಳಿದನು. ॥೫೬॥

ಓ ನಾರದಮುನಿಯೇ, ಈ ಉತ್ತಮವಾದ ಸದ್ಗತಿಯ ಕಾರಣವನ್ನು, ಸಾಮಾನ್ಯಜನರಿಗೆ ತಿಳಿಯದೇ ಇರುವ ಈ ಸಾಧನವನ್ನು ನೀನು ಹೇಗೆ ಮನಗಂಡವನಾದೆ? ಮುಂದಿರುವ ದೊಡ್ಡ ಕಾಡಿನಲ್ಲಿರುವ ಮಾನಸಸರೋವರದಲ್ಲಿ ಶುದ್ಧಿಸ್ನಾನವನ್ನು ನೆರವೇರಿಸಿದ ಮೇಲೆ ನೀನು ಆ ಬೃಂದಾವನಕ್ಷೇತ್ರಕ್ಕೆ ಹೋಗು. ॥೫೭॥

ಕ(ತ)ದಾ ಹಿ ಭಗವಾನ್ ಕೃಷ್ಣೋ ದರ್ಶನಂ ದಾಸ್ಯತಿ ಸ್ವಯಂ ।
ಇತ್ಯುಕ್ತೋ ಲೋಕಗುರುಣಾ ನಾರದೋ ಮುನಿಸತ್ತಮಃ ॥೫೮॥

ವದನ್ನಿತ್ಥಂ ಪ್ರತಸ್ಥೇ ಸ ಹೃದಿ ಧ್ಯಾಯನ್ ಹರಿಂ ತತಃ ।
ತತ್ರ ದೃಷ್ಟ್ವಾ ಸರೋ ದಿವ್ಯಂ ನಾನಾದ್ರುಮಸಮಾಕುಲಂ ॥೫೯॥

ಮಹನ್ಮನಃಪ್ರಖ್ಯಜಲಂ ವಾಯುನಾ ಪರಿಸೇವಿತಂ ।
ಹಂಸಕಾರಂಡವಾಕೀರ್ಣಂ ಚಕ್ರವಾಕೋಪಸೇವಿತಂ ॥೬೦॥

ವಿಚಿತ್ರಕಮಲಾಸನ್ನಂ ನೃತ್ಯದ್ಭ್ರಮರಸಂಕುಲಂ ।
ದೃಷ್ಟ್ವೈವ ತತ್ಸರಃ ಶೀಘ್ರಂ ಸ್ನಾನಾರ್ಥಂ ಪ್ರಾವಿಶತ್ತದಾ ॥೬೧॥

ಆಗ ಷಡ್ಗುಣೈಶ್ವರ್ಯಶಾಲಿಯಾದ ಕೃಷ್ಣನು ನಿನಗೆ ತಾನಾಗಿಯೇ ದರ್ಶನವನ್ನು ದಯಪಾಲಿಸುವನು. ಹೀಗೆಂದು ಲೋಕಕ್ಕೆಲ್ಲಕ್ಕೂ ಗುರುವಾದ ಅನಿರುದ್ಧನು ಹೇಳಲು, ಮುನಿಶ್ರೇಷ್ಠನಾದ ನಾರದನು ಅದರಲ್ಲಿ ಆದರವುಳ್ಳವನಾದನು. ॥೫೮॥

ಆ ಅನಿರುದ್ಧನು ಹೇಳಿದಂತೆ ಶ್ರೀಕೃಷ್ಣನು ನನಗೆ ಯಾವಾಗ ದರ್ಶನವನ್ನು ದಯಪಾಲಿಸಿ ಅನುಗ್ರಹಿಸುವನೋ ಎಂದು ಮನಸ್ಸಿನಲ್ಲಿ ಅಂದು ಕೊಳ್ಳುತ್ತಾ ನಾರದ ಮುನಿಯು ಶ್ರೀಹರಿಯನ್ನು ಧ್ಯಾನಮಾಡುತ್ತಾ ಪ್ರಯಾಣ ಮಾಡಿ ಆ ಸ್ಥಳದಲ್ಲಿ ಆ ದಿವ್ಯವಾದ ಮಾನಸಸರೋವರವನ್ನು ಕಂಡನು. ಅದು ನಾನಾ ಬಗೆಯ ವೃಕ್ಷಗಳಿಂದ ಸುತ್ತಲೂ ಕೂಡಿದ್ದಿತು. ॥೫೯॥

ಆ ದೊಡ್ಡ ಸರೋವರದ ನೀರು ಮನಸ್ಸಿನಂತೆ ತಿಳಿಯಾಗಿ ನಿರ್ಮಲವಾಗಿದ್ದಿತು. ಮಂದಮಾರುತವು ಆ ನೀರಿನ ಮೇಲೆ ಬೀಸುತ್ತಿತ್ತು. ಅದರ ದಡದಲ್ಲಿ ಹಂಸ ಮತ್ತು ಕಾರಂಡವ ಪಕ್ಷಿಗಳು ವಿಹರಿಸುತ್ತಿದ್ದುವು. ಹಾಗೆಯೇ ಚಕ್ರವಾಕ ಪಕ್ಷಿಗಳೂ ಅಲ್ಲಿ ಕ್ರೀಡಿಸುತ್ತಿದ್ದುವು. ॥೬೦॥

ಮತ್ತು ಆ ಕೊಳದಲ್ಲಿ ನಾನಾ ಬಗೆಯ ಕಮಲಗಳು ಇದ್ದುವು. ಅವುಗಳ ಮಕರಂದ ರಸವನ್ನು ಸವಿದು ಸಂತೋಷದಿಂದ ಕುಣಿಯುತ್ತಿದ್ದ ದುಂಬಿಗಳಿಂದ ಅದು ತುಂಬಿದ್ದಿತು. ಇಂತಹ ಮನೋಹರವಾದ ಕೊಳವನ್ನು ನಾರದ ಮುನಿಯು ಆಗ ನೋಡಿದ ಕೂಡಲೇ ಅಲ್ಲಿ ಸ್ನಾನವನ್ನು ಮಾಡಲು ಇಳಿದನು. ॥೬೧॥

**ಸ್ನಾತ ಏವಾಭವತ್ಕನ್ಯಾ ನಾಸೀತ್ತಲ್ಲಿಂಗ ಸಂಸ್ಮೃತಿಃ ।**
**ದೃಷ್ಟ್ವಾ ಕನ್ಯಾತನುಂ ಸ್ವೀಯಾಂ ವಿಸ್ಮಯಃ ಪರಮೋ ಹ್ಯಭೂತ್॥೬೨॥**

**ತದಾ ಕನ್ಯಾ ಸ್ವರೂಪೇಣ ನಾರದಸ್ತ್ವತ್ಯಚಿಂತಯತ್ ।**
**ಕುತೋಽಹಂ ಸಂಸ್ಥಿತಾ ಕನ್ಯಾ ಕೋ ವಾ ಭಾವೋ ಹ್ಯಭೂನ್ಮಮ ॥೬೩॥**

**ಏವಂ ಚ ಕನ್ಯಾ ತನ್ವಾ ತು ವಿಸ್ಮಯಃ ಪರಮೋ ಹ್ಯಭೂತ್ ।**
**ತದಾ ಕನ್ಯಾ ಸ್ವರೂಪಿಣ್ಯಾ ಹ್ಯೋದಿತಾ ಹ್ಯಹಮೇಕಯಾ ॥೬೪॥**

**ದೃಷ್ಟ್ವಾ ಚ ಕನ್ಯಕಾಂ ಸಾ ಮಾಮಪೃಚ್ಛದಿದಮದ್ಭುತಂ ।**
**ಕಾಽಸಿ ಕಸ್ಯಾಸಿ ವಾಮೋರು ಕಿಮರ್ಥಮಿಹ ತಿಷ್ಠಸಿ ॥೬೫॥**

---

ಆ ನಾರದ ಮುನಿಯು ಅಲ್ಲಿ ಸ್ನಾನಮಾಡಿದ ಮಾತ್ರದಿಂದ ಒಬ್ಬ ಕನ್ಯೆಯಾಗಿ ಪರಿಣಾಮವನ್ನು ಪಡೆದನು. ಅಲ್ಲದೆ ಅವನು ತನ್ನ ಪೂರ್ವದ ಪುರುಷ ರೂಪದ ಸ್ಮೃತಿಯನ್ನೂ ಕಳೆದುಕೊಂಡನು. ಹಾಗೆ ಉಂಟಾದ ತನ್ನ ಕನ್ಯಾಶರೀರದ ಸೊಬಗನ್ನು ನೋಡಿ ಅವನಿಗೆ ತುಂಬ ಆಶ್ಚರ್ಯವೂ ಉಂಟಾಯಿತು. ಇದರಂತೆಯೇ ಜೀವರಿಗೆ ಗರ್ಭದಲ್ಲಿರುವಾಗ ಅವರ ಹಿಂದಿನ ಜನ್ಮಗಳ ಸ್ಮರಣೆಯು ಇರುತ್ತದೆ. ಆದರೆ ಗರ್ಭದಿಂದ ಹೊರಕ್ಕೆ ಜನನವಾಗಿ ಬಂದ ಕೂಡಲೆ ಆ ಸ್ಮೃತಿ ಎಲ್ಲವೂ ವೈಷ್ಣವೀಮಾಯೆಯ ಆವರಣದಿಂದ ತಪ್ಪಿಹೋಗುತ್ತದೆ ಎಂದು ಹೇಳಿರುವುದನ್ನೂ ಜ್ಞಾಪಿಸಿಕೊಳ್ಳಬಹುದು. ||೬೨||

ಆಗ ಕನ್ಯಾರೂಪದಲ್ಲಿರುವ ನಾರದನು ಹೀಗೆ ಆಲೋಚಿಸಿದನು. ನಾನು ಎಲ್ಲಿಂದ ಬಂದೆನು ? ಈಗ ಎಲ್ಲಿ ಇರುತ್ತೇನೆ ? ನಾನು ನೆರವೇರಿಸಬೇಕಾಗಿರುವ ಉದ್ದೇಶವಾವುದು ? ನನ್ನ ಭಾವವೇನು ? ||೬೩||

ಈರೀತಿಯಲ್ಲಿ ಆ ಕನ್ಯಾರೂಪದಿಂದ ಹೆಚ್ಚಾದ ಆಶ್ಚರ್ಯವು ಅವನಿಗೆ ಉಂಟಾಯಿತು. ಹೀಗಿರಲು ಆಗ ಅಲ್ಲಿದ್ದ ಒಬ್ಬ ಕನ್ಯೆಯು ನನ್ನನ್ನು ಕುರಿತು ಹೀಗೆ ಹೇಳಿದಳು. ||೬೪||

ಕನ್ಯಾರೂಪದಿಂದ ಕೂಡಿದ್ದ ನನ್ನನ್ನು ಆ ಹುಡುಗಿಯು ನೋಡಿ ಆಶ್ಚರ್ಯದಿಂದ ನನ್ನನ್ನು ಕುರಿತು, ಓ ಕನ್ಯೆಯೇ ನೀನು ಯಾರು ? ಯಾರ ಮಗಳು ? ಸುಂದರವಾದ ಊರುಗಳುಳ್ಳ ಹುಡುಗಿಯೇ, ನೀನು ಈ ನಿರ್ಜನ ಪ್ರದೇಶದಲ್ಲಿ ಏತಕ್ಕಾಗಿ ಒಬ್ಬಳೇ ಬಂದು ಇರುವೆ ? ಎಂದು ಕೇಳಿದಳು. ||೬೫||

ಕಿಮನ್ವೇಷಯಸೀಹ ತ್ವಂ ಕಿಂಚಿತ್ತೇ ವಿಸ್ಮಿತಂ ತ್ವಿಹ ।
ಕಥಯ ತ್ವಮಿದಂ ಮೇಽದ್ಯ ಯತ್ತೇ ಮನಸಿ ವರ್ತತೇ

ಅದ್ಯ ತೇ ದರ್ಶನಾತ್ಪ್ರೀತಿಃ ಮನಸಾಽತಿಪ್ರವರ್ತಿತಾ ।
ಇತ್ಯಾ ಶ್ರುತ್ಯ ವಚಸ್ತಸ್ಯಾಃ ಕನ್ಯಾಯಾಃ ಸಾ ಚ ಮಾನದಾ ॥೬೭॥

ಉವಾಚ ವಚನಂ ಚಾರು ಕನ್ಯಾ ಯಾ ಮಾನಸೋದ್ಭವಾ ।
ಅಹಂ ತೇ ಗುಣಸಂಪತ್ತ್ಯಾ ಜಾತಾಽಸ್ಮಿ ವಶವರ್ತಿನೀ ॥೬೮॥

ಅತೋ ಹಾರ್ದಂ ಪ್ರಕಥಯೇ ಯದುದ್ಯಂ ಪರಿವರ್ತತೇ ।
ಶೃಣು ಮೇ ವಚನಂ ಭೀರು ಯದೃಷ್ಟ್ವಾಽಹಂ ತ್ವಯಾಽಧುನಾ ॥೬೯॥

ಎಲೈ ರಮಣಿಯೇ, ಇಲ್ಲಿ ನೀನು ಏನನ್ನು ಹುಡುಕುತ್ತಿರುವೆ? ನಿನ್ನ ಮನಸ್ಸಿಗೆ ಕಾಣಬರುವ ಈ ಆಶ್ಚರ್ಯವಾದರೂ ಏನು? ಏಕೆ ಅಚ್ಚರಿಪಡುತ್ತಿರುವೆ? ಈ ವಿಷಯವನ್ನು ಈಗ ನನಗೆ ಹೇಳು. ನಿನ್ನ ಮನಸ್ಸಿನಲ್ಲಿರುವ ಉದ್ದೇಶವೇನು? ||೬೬||

ಓ ತರುಣಿಯೇ, ನಿನ್ನನ್ನು ಈಗ ನೋಡಿದ್ದರಿಂದಲೆ ನನ್ನ ಮನಸ್ಸಿನಲ್ಲಿ ಪ್ರೇಮವು ಹೆಚ್ಚಾಗಿ ಉಂಟಾಗಿರುತ್ತದೆ. ಅದರಿಂದ ನಿನ್ನನ್ನು ಕೇಳಿದೆನು. ಈ ರೀತಿಯಾದ ಆ ಕನ್ಯೆಯ ಮಾತನ್ನು ಕೇಳಿ, ಅವಳ ಮಾತಿಗೂ, ಪ್ರಶ್ನೆಗಳಿಗೂ ಗೌರವವನ್ನು ಕೊಟ್ಟು ಹೀಗೆ ಹೇಳಲುಪಕ್ರಮಿಸಿದಳು. ||೬೭||

ಓ ವೃಂದಾವನದ ಕನ್ಯೆಯೇ, ನಾನು ಈ ಮಾನಸಸರೋವರದಿಂದ ಹುಟ್ಟಿದವಳಾಗಿದೇನೆ. ನಿನ್ನಲ್ಲಿರುವ ಸುಗುಣಗಳ ಅತಿಶಯದಿಂದ ನನ್ನಲ್ಲಿ ಉಂಟಾಗಿರುವ ವಿಶ್ವಾಸದಿಂದ ನಿನಗೆ ಮನಸೋತಿರುತ್ತೇನೆ. ಆದುದರಿಂದ ನನ್ನ ವಿಷಯವನ್ನು ಮುಚ್ಚುಮರೆ ಇಲ್ಲದೆ ಸಂಕೋಚವೂ ಇಲ್ಲದೆ ಹೇಳುವೆನು. ಕೇಳು. ||೬೮||

ಆದುದರಿಂದ ನನ್ನ ಹೃದಯದಲ್ಲಿದ್ದು ಹೊರಹೊಮ್ಮುತ್ತಿರುವ ಅಭಿಪ್ರಾಯವನ್ನು ನಿನಗೆ ನಾನು ಹೇಳುತ್ತೇನೆ. ಅದನ್ನು ಕೇಳು. (ಅವಳ ಆ ಮಾತನ್ನು ಕೇಳಿ ಬೃಂದಾವನದ ಕನ್ಯೆಯು ಸರೋವರದ ಕನ್ಯೆಯು (ನಾರದನ)ನ್ನು ಕುರಿತು ಹೀಗೆ ಹೇಳಿದಳು.) ನಾನು ನಿನಗೆ ಏಕೆ ಇಲ್ಲಿ ಕಾಣಿಸಿಕೊಂಡೆನೆಂಬುದನ್ನು ವಿವರಿಸುವೆನು, ಕೇಳು. ||೬೯||

**ವೃಂದಾವನಗತಾ ಭೂಮಿಃ ಪವಿತ್ರಾ ನಂದಸದ್ಮ ಚ ।**
**ಸರ್ವಸೌಖ್ಯಪ್ರದಸ್ಸಾಕ್ಷಾತ್ ಕೃಷ್ಣೋ ವೃಂದಾವನೇಶ್ವರಃ ॥೭೦॥**

**ಶ್ಯಾಮಾಂಗಸುಂದರಃ ಸೌಮ್ಯಃ ಸಾಕ್ಷಾನ್ಮನ್ಮಥಮನ್ಮಥಃ ।**
**ಪೀತಾಂಬರಧರಃ ಸ್ರಗ್ವೀ ಶಿಖಿಪುಚ್ಛಾವತಂಸಕೃತ್ ॥೭೧॥**

**ಕೋಟೀಂದುಸೂರ್ಯಸದೃಶೋ ಗೋಪಿಕಾವೃಂದಸಂವೃತಃ ।**
**ಕ್ರೀಡನ್ ರಹೋ ರಮಯತಿ ರಾಧಿಕಾಂ ವೃಷಭಾನುಜಾಂ ॥೭೨॥**

**ಕ್ಷಣಂ ನೋಪರಮೇತ್ತತ್ರ ಕ್ರೀಡತೇ ಚ ದಿವಾನಿಶಂ ।**
**ಕುಂಜೇ ಕುಂಜೇ ಲತಾಕುಂಜೇ ಶಯ್ಯಾಃ ಕುಸುಮನಿರ್ಮಿತಾಃ॥೭೩॥**

---

ಈ ಬೃಂದಾವನ ಭೂಮಿಯು ಪಾವನವಾದುದು. ಹಾಗೆಯೇ ನಂದನ ಮನೆಯೂ ಪವಿತ್ರವಾಗಿದೆ. ಅಲ್ಲಿ ಈ ಬೃಂದಾವನಕ್ಕೆ ಪ್ರಭುವಾಗಿರುವ ಶ್ರೀಕೃಷ್ಣನು ಎಲ್ಲರಿಗೂ ಎಲ್ಲಸೌಖ್ಯಗಳನ್ನೂ ನೇರವಾಗಿ ಅನುಗ್ರಹಿಸುವವನಾಗಿರುತ್ತಾನೆ. ॥೭೦॥

ಆ ಶ್ರೀಕೃಷ್ಣನು ಶರೀರವನ್ನು ಧರಿಸಿರುವ ಮನ್ಮಥನ ಹಾಗೆ, ಮೇಘವರ್ಣದ ಮೈಯಿಂದ ಸುಂದರನಾಗಿ, ಸೌಮ್ಯವಾದ ಸ್ವರೂಪವುಳ್ಳವನಾಗಿ ಹಳದಿಯ ರೇಷ್ಮೆಯ ವಸ್ತ್ರಗಳನ್ನೂ ಹೂಮಾಲೆಯನ್ನೂ ಧರಿಸಿ, ನವಿಲಿನ ಗರಿಯಿಂದ ಮಾಡಿದ ಶಿರಪೇಷ್ ತುರಾಯಿ ಮುಂತಾದ ಆಭರಣಗಳಿಂದ ಅಲಂಕೃತನಾಗಿ ಮನೋಹರನಾಗಿದಾನೆ. ॥೭೧॥

ಅನೇಕ ಸೂರ್ಯರಂತೆ ಶಾಖ ಚಟುವಟಿಕೆಗಳನ್ನುಂಟುಮಾಡುವ, ಚಂದ್ರನಂತೆ ಆಹ್ಲಾದಕರನಾದ, ಗೋಪಸ್ತ್ರೀಯರಿಂದ ಕೂಡಿದ ಆ ಕೃಷ್ಣಪರಮಾತ್ಮನು ಯದು ವಂಶದ ವೃಷಭಾನುವಿನ ಮಗಳಾಗಿರುವ ರಾಧಾದೇವಿಯೊಡನೆ ಏಕಾಂತದಲ್ಲಿ ವಿಹರಿಸುತ್ತಾ ಸಂತೋಷಪಡಿಸುತ್ತಿದಾನೆ. ॥೭೨॥

ಅವನು ಉಪವನದಲ್ಲಿರುವ ಲತಾಮಂಟಪಗಳಲ್ಲಿ ಹೂವುಗಳಿಂದ ಸಿದ್ಧಮಾಡಲ್ಪಟ್ಟ ಹಾಸಿಗೆಗಳಲ್ಲಿ ಹಗಲೂ ರಾತ್ರಿಗಳಲ್ಲಿ ಒಂದುಕ್ಷಣವೂ ಎಡೆಬಿಡದೆ ಕ್ರೀಡಿಸುತ್ತಿದಾನೆ. ॥೭೩॥

ಇತ್ಯಾನಂದಮಯಾ ಯತ್ರ ಪ್ರವಹಂತಿ ರಸಾಬ್ಧಯಃ ।
ಯತ್ರೈವಾಮರ ಮುಖ್ಯಾನಾಂ ನ ಪ್ರವೇಶಃ ಕಥಂಚನ ॥೭೪॥

ಕೇ ಯೋಗಿನೋ ವರಾಕಾ ಹಿ ತಪೋದಾನಪರಾಶ್ಚಯೇ ।
ಶ್ರೀಪತೇರಪಿ ಭಕ್ತಾನಾಂ ಸುಪ್ರವೇಶಃ ಕಥಂಚನ ॥೭೫॥

ದೂತಿಕಾಃ ಸುವಿಲಾಸಿನ್ಯಶ್ಚಾಷ್ಟೌ ಸ್ಯುಃ ಪರಿಚಾರಿಕಾಃ ।
ತಾಶ್ಚೈವಾಸ್ಮಿನ್ವನೇ ರಮ್ಯೇ ವಿಚರಂತಿ ಮುದಾಽನ್ವಿತಾಃ ॥೭೬॥

ಗೋಪಾಲಾಶ್ಚೈವ ಕ್ರೀಡಂತೇ ದೇವನಾರ್ಯಃ ಸಮಂತತಃ ।
ಶ್ರಮಾದೇತತ್ಸ್ಥಲಂ ಪ್ರಾಪ್ಯ ಸಾನಂದಂ ಗೋಭಿರನ್ವಿತಂ ॥೭೭॥

ಜಲಸ್ಥಲವನಕ್ರೀಡಾ ರಾಸಲೀಲಾ ವಿಭೇದತಃ ।
ವೃಷಭಾನು ಸುತಾ ತತ್ರ ಕ್ರೀಡತೇ ಸ್ವಸಖೀಜನೈಃ ॥೭೮॥

---

ಈ ರೀತಿಯಲ್ಲಿ ಆನಂದವೆಂಬ ರಸದಿಂದ ತುಂಬಿ ಹರಿಯುತ್ತಿರುವ ನದಿಯು ಇರುವ ಆ ಸ್ಥಳಕ್ಕೆ ದೇವತೆಗಳಲ್ಲಿ ಮುಖ್ಯರಾದವರೂ ಸಹ ಎಂದಿಗೂ ಪ್ರವೇಶ ಮಾಡಲು ಸಾಧ್ಯವಿಲ್ಲವು. ||೭೪||

ತಪಸ್ಸು, ದಾನ ಇವುಗಳಿಂದ ಶ್ರೇಷ್ಠಪದವಿಯನ್ನು ಪಡೆದ ಯೋಗಿಗಳಾದರೂ ಎಷ್ಟುಮಾತ್ರದವರು? ಅವರೂ ಅನರ್ಹರು! ಆದರೆ ಲಕ್ಷ್ಮೀಪತಿಯ ಭಕ್ತರಾಗಿರುವ, ಯಾರಾದರೂ ಸಹ ಅಲ್ಲಿಗೆ ಪ್ರವೇಶಿಸಲು ಅಸಾಧ್ಯವಲ್ಲವು. ||೭೫||

ವಿಲಾಸಿಗಳಾದ ದೂತಿಕೆಯರು ಮತ್ತು ಎಂಟು ಜನ ಸೇವಕಿಯರು ಮಾತ್ರ ಈ ಮನೋಹರವಾದ ವನದಲ್ಲಿ ಸಂತೋಷದಿಂದ ಸಂಚರಿಸುವರು. ||೭೬||

ಈ ವನದಲ್ಲಿ ಗೋಪಾಲಕರೂ ದೇವತಾಸ್ತ್ರೀಯರುಗಳೂ ಗೋವುಗಳೊಂದಿಗೆ ಕೂಡಿರುವ ಈ ರಾಸಕ್ರೀಡೆಯ ಸ್ಥಳವನ್ನು ಬಹುಶ್ರಮಪಟ್ಟು ಸೇರಿ, ಆನಂದದಿಂದ ಕ್ರೀಡಿಸುತ್ತಿರುವರು. ||೭೭||

ಈ ವನದದಲ್ಲಿ ವೃಷಭಾನುವಿನ ಮಗಳಾದ ರಾಧಿಕೆಯು ತನ್ನ ಸಖಿಯರೊಂದಿಗೆ ಜಲದಲ್ಲಿಯೂ, ಭೂಮಿಯಲ್ಲಿಯೂ ಸಹ ಜಲಕ್ರೀಡೆ ರಾಸಕ್ರೀಡೆ ಮೊದಲಾದ ವಿಧವಿಧವಾದ ಕ್ರೀಡೆಗಳನ್ನು ನಡೆಸುತ್ತಿರುವಳು. ||೭೮||

**ಗೌರಾಂಗೀ ನೀಲವಸನಾ ಸ್ವರ್ಣರತ್ನವಿಭೂಷಿತಾ ।**
**ಸುನೂಪುರ ಪದಾಘಾತ ಮುಖರೀ ಕೃತದಿಜ್ಮುಖಾ ॥೭೯॥**

**ಕಿಮಹಂ ವರ್ಣಯೇ ತತ್ರ ಯತ್ಸುಖಂ ಸಂಭವೇನ್ಮಮ ।**
**ಕರೋಮಿ ಕಿಂ ದರ್ಶನಾರ್ಥಂ ವದ ಸೌಮ್ಯೇ ಕೃಪಾಽನ್ವಿತೇ ॥೮೦॥**

॥ ಕನ್ಯೋವಾಚ ॥

**ವೃಂದಾವನೇಶ್ವರಂ ಭದ್ರೇ ನಿವೇದಯ ಮಮಾಗಮಂ ।**
**ನಹೀಶ್ವರಾಣಾಂ ಭವನೇ ಪ್ರವೇಶೋ ಭವತಿ ಸ್ವಯಂ ॥೮೧॥**

॥ ಸೂತ ಉವಾಚ ॥

**ಇತ್ಯುಕ್ತ್ವಾ ಸಾ ತತೋ ಗತ್ವಾ ಕೃಷ್ಣಾಂತಿಕಮುವಾಚ ಹ ।**

---

ರಾಧಿಕೆಯು ಗೌರವರ್ಣವುಳ್ಳವಳಾಗಿ ಮೇಘದ ಬಣ್ಣದ ಸೀರೆಯನ್ನುಟ್ಟು ಸುವರ್ಣದ, ಮುತ್ತು ಮತ್ತು ರತ್ನದ ಒಡವೆಗಳಿಂದ ಅಲಂಕರಿಸಲ್ಪಟ್ಟವಳಾಗಿ, ಕಾಲು ಕಡಗಗಳನ್ನು ಧರಿಸಿರುವಳು. ಅವಳು ನಡೆಯುವಾಗ ಕಾಲಂದಿಗೆಗಳ ಶಬ್ದವು ಮನೋಹರವಾಗಿ ದಿಕ್ಕುಗಳಲ್ಲಿ ಮೊಳಗುತ್ತಿರಲು, ಅವಳು ವಿಹರಿಸುತ್ತಿರುವಳು. ॥೭೯॥

ಈ ರೀತಿಯಲ್ಲಿ ಸರ್ವಾಲಂಕಾರಯುತಳಾದ ರಾಧಿಕೆಯು ಕ್ರೀಡಿಸುವ ವನದಲ್ಲಿ ನಾನೂ ಅನುಭವಿಸುವ ಸುಖವನ್ನು ಏನೆಂದು ಹೇಳಲಿ? ಹೇ ಸೌಮ್ಯ ಳಾದ ಸಖಿಯೇ, ನನಗೆ ಈ ಕೃಷ್ಣನ ದರ್ಶನವನ್ನು ಪಡೆಯಲು ನಾನು ಏನನ್ನು ಮಾಡಲಿ? ಕೃಪೆಯಿಂದ ಹೇಳುವವಳಾಗು. ॥೮೦॥

ಕನ್ನಿಕೆಯು ಹೇಳಿದಳು—ಹೇ ಮಂಗಳಕರಳೇ, ಲೋಕದೊಡೆಯನ ಮನೆಯನ್ನು ಎಲ್ಲರೂ ಯಾವಾಗಲೂ ಪ್ರವೇಶಮಾಡಲು ಸಾಧ್ಯವಿಲ್ಲವು. ಆದುದ ರಿಂದ ಮೊದಲು ನೀನು ಹೋಗಿ ವೃಂದಾವನೇಶ್ವರನಾದ ಶ್ರೀಕೃಷ್ಣನಿಗೆ ನನ್ನ ಆಗಮನವನ್ನು ತಿಳಿಸುವವಳಾಗು. ॥೮೧॥

ಸೂತಮಹರ್ಷಿಯು ಹೇಳಿದನು—ಹೀಗೆಂದು ಹೇಳಲ್ಪಟ್ಟ ವೃಂದಾವನ ಕನ್ಯೆಯು ಅಲ್ಲಿಂದ ಹೊರಟು, ಶ್ರೀಕೃಷ್ಣನ ಬಳಿಯಲ್ಲಿ ಸೇರಿ ಅವನನ್ನು ಕುರಿತು ಹೀಗೆಂದು ಹೇಳಿದಳು.

ಕೃಷ್ಣ ಕೃಷ್ಣ ಕೃಪಾಸಿಂಧೋ ಗೋಪಿಕಾ ಪ್ರಾಣವಲ್ಲಭ ॥೮೨॥

ಶೃಣುಷ್ವ ವಚನಂ ವಾಗ್ಮಿನ್ ದೃಷ್ಟಂ ಯನ್ಮಹದದ್ಭುತಂ ।
ಚರಂತೀ ವಿಪಿನೇ ಕನ್ಯಾ ದೃಷ್ಟ್ವಾ ಮಾನಸಸತ್ತಟೇ ॥೮೩॥

ರೂಪಮತ್ಯದ್ಭುತಂ ತಸ್ಯಾಃ ಕಥ್ಯತೇ ಕಿಂ ತವಾಗ್ರತಃ ।
ನ ಭೂತಲೇ ನ ಪಾತಾಲೇ ನ ದೇವಭವನೇ ಕ್ವಚಿತ್ ॥೮೪॥

ದೃಶ್ಯಂ ರೂಪಂ ಭವೇತ್ತಸ್ಯಾಸ್ತ್ವಹಂ ಜಾನೇ ಪ್ರಭಾನ್ವಿತಂ ।
ಕಾರಣಂ ಕಿಂ ನ ಜಾನಾಮಿ ಕಥಂ ತತ್ರ ಸ್ಥಿತಾ ಶುಭಾ ॥೮೫॥

ಸರ್ವಂ ತ್ವಂ ವೇತ್ಸಿ ಭಗವನ್ಯಥಾ ರುಚಿ ಕುರು ಪ್ರಭೋ ।
ಸಖ್ಯಾ ವಚನಮಾಕರ್ಣ್ಯ ಮುದಿತೋ ಭಗವಾನ್ ಹರಿಃ ॥೮೬॥

---

ಓ ಕೃಷ್ಣನೇ, ಕೃಪಾಸಿಂಧುವೇ, ಗೋಪಿಕಾಸ್ತ್ರೀಯರಿಗೆ ಅವರ ಪ್ರಾಣಗಳಷ್ಟು ಪ್ರೀತಿಪಾತ್ರನೇ, ವಾಗ್ಮಿಯೇ, ನಾನು ಹೇಳುವ ಅತ್ಯದ್ಭುತವಾದ ಈ ಮಾತನ್ನು ಕೇಳುವವನಾಗು. ॥೮೨॥

ಮಾನಸಸರೋವರದ ದಡದಲ್ಲಿರುವ ಕಾಡಿನಲ್ಲಿ ಸಂಚರಿಸುತ್ತಿದ್ದ ಒಬ್ಬ ಬಾಲಿಕೆಯನ್ನು ನೋಡಿದೆನು. ಆ ಬಾಲಿಕೆಯ ಅತ್ಯದ್ಭುತವಾದ ರೂಪವನ್ನು ನಿನ್ನ ಮುಂದೆ ಏನೆಂದು ಹೇಳಲಿ! ॥೮೩॥

ಭೂಮಿಯಲ್ಲಾಗಲೀ ಪಾತಾಳದಲ್ಲಾಗಲೀ ದೇವಲೋಕದಲ್ಲಾಗಲೀ ಇಂಥಾ ರೂಪವತಿಯನ್ನು ಎಲ್ಲಿಯೂ ಕಾಣಲಾಗುವುದಿಲ್ಲವು! ಆದರೂ ಇಂಥಾ ರೂಪವತಿಯನ್ನು ನಾನು ನೋಡಿದೆನು! ಅವಳು ಆ ಸ್ಥಳದಲ್ಲಿ ನಿಂತಿರುವುದರ ಕಾರಣವನ್ನು ನಾನು ತಿಳಿಯೆನು. ॥೮೪-೮೫॥

ಓ ದೇವನೇ, ಸರ್ವವನ್ನೂ ನೀನು ತಿಳಿದಿರುವೆ. ನಿನಗೆ ಹೇಗೆ ಮಾಡುವುದು ಇಷ್ಟವೋ ಹಾಗೆ ಮಾಡು.

ಸಖಿಯು ಹೇಳಿದ ಮಾತನ್ನು ಕೇಳಿ ಷಡ್ಗುಣೈಶ್ವರ್ಯದಿಂದ ಕೂಡಿದ ಹರಿಯು ಸಂತೋಷದಿಂದ ನಕ್ಕನು. ಗೋಪಿಕಾಸ್ತ್ರೀಯರೂ ಕೂಡ ನಗುಮುಖವುಳ್ಳ

ವ್ರಜಸ್ತ್ರೀಯೋಽಪಿ ಮುದಿತಂ ಶ್ರುತ್ವಾ ಚೋತ್ಕಂಠಿತಂ ಭೃಶಂ ।
ಕೃಷ್ಣಂ ವಿಜ್ಞಾಪಯಾ ಮಾಸುಃ ಕನ್ಯಕಾದರ್ಶನಂ ಪ್ರತಿ ॥೮೭॥

ತತಃ ಪ್ರೋವಾಚ ತಾಃ ಕೃಷ್ಣಃ ಶೃಣುಧ್ವಂ ವ್ರಜಯೋಷಿತಃ ।
ಸ್ತ್ರೀಣಾಂ ಚಲಸ್ವಭಾವೋಽಯಂ ಕೌತುಕಾಯ ಮನಶ್ಚಲೇತ್ ॥೮೮॥

ಮಮ ಯಾನಂ ತದಗ್ರೇ ತು ಚೈಕಕಸ್ಯ ನ ಯುಜ್ಯತೇ ।
ತಸ್ಮಾತ್ತತ್ರ ತು ಗಂತವ್ಯಂ ಭವತೀಭಿಃ ಪ್ರಯತ್ನತಃ ॥೮೯॥

ದೃಷ್ಟ್ವಾ ರೂಪಂ ತು ಯುಷ್ಮಾಕಂ ವಿಸ್ಮಿತಾಽತ್ರಾಗತಾ ಭವೇತ್ ।
ತಸ್ಯೈ ಸುಖಂ ಪ್ರದಾತವ್ಯಂ ಸರ್ವಮಸ್ಮಾಭಿರೇವ ತು ॥೯೦॥

ಕುರುಧ್ವಂ ಮಂಡಲಂ ಗೋಪ್ಯೋ ಪಾದನ್ಯಾಸ ಸುಶೋಭಿತಂ ।
ಚಲಧ್ವಂ ತತ್ರ ತಾಂ ದ್ರಷ್ಟುಂ ಮಯಾ ಸಹ ಸಮಂತತಃ ॥೯೧॥

---

ಕೃಷ್ಣನನ್ನು ನೋಡಿ ಕುತೂಹಲವುಳ್ಳವರಾಗಿ, ಆ ಕನ್ನಿಕೆಯನ್ನು ನೋಡಲು ಇಷ್ಟವುಳ್ಳವರಾಗಿ, ಆಕೆಯನ್ನು ನೋಡಲು ಅವಕಾಶಕೊಡಬೇಕೆಂದು ಕೃಷ್ಣನಿಗೆ ನಿವೇದಿಸಿದರು. ॥೮೭॥

ಅನಂತರದಲ್ಲಿ ಶ್ರೀಕೃಷ್ಣನು ಅವರನ್ನು ಕುರಿತು ಹೀಗೆಂದು ಹೇಳಿದನು. ಎಲೌ ಗೋಪಿಯರೇ, ಕೇಳಿರಿ. ಆಶ್ಚರ್ಯಕರವಾದ ವಿಷಯವನ್ನು ಕಂಡರೆ ಮನಸ್ಸು ಹೆಚ್ಚಾಗಿ ಚಲಿಸುವುದು ಹೆಂಗಸರ ಸ್ವಭಾವವು. ॥೮೮॥

ಆ ಕನ್ನಿಕೆಯ ಬಳಿಗೆ ನಾನೊಬ್ಬನೇ ಏಕಾಂಗಿಯಾಗಿ ಹೋಗುವುದು ಯೋಗ್ಯವಾದುದಲ್ಲ. ಆದುದರಿಂದ ನಿಮ್ಮೆಲ್ಲರೊಡನೆ ಹೋಗುವುದು ಅವಶ್ಯಕವು. ॥೮೯॥

ಆ ಕನ್ನಿಕೆಯು ನಿಮ್ಮೆಲ್ಲರ ರೂಪವನ್ನೂ ನೋಡುತ್ತಲೆ ಆಶ್ಚರ್ಯವನ್ನು ಹೊಂದುವಳು ! ನಾವುಗಳು ಅನುಭವಿಸುವ ಸುಖವನ್ನೇ ಅವಳಿಗೂ ಸಹ ನಾವೆಲ್ಲರೂ ದೊರಕಿಸಿಕೊಟ್ಟು ಆದರಿಸಬೇಕು. ॥೯೦॥

ಎಲೌ ಗೋಪಿಯರೇ, ನೀವುಗಳೆಲ್ಲರೂ ಒಂದು ಮಂಡಲದಲ್ಲಿ ಗುಂಪಾಗಿ ಸೇರಿರಿ. ಅನಂತರದಲ್ಲಿ ನನ್ನೊಡನೆ ಶೋಭಾಯಮಾನವಾಗಿ ಹೆಜ್ಜೆಗಳನ್ನು ಇಡುತ್ತಾ ಅವಳನ್ನು ನೋಡಲು ನಡೆಯುವವರಾಗಿರಿ. ॥೯೧॥

**ತತೋ ಮಂಡಲ ಮಧ್ಯಸ್ಥೋ ವಿರೇಜೇ ಭಗವಾನ್ ಸ್ವಯಂ ।**
**ಯಥಾ ರಾಸನಿಶಾಃ ಶಶ್ವತ್ತಥಾ ಯಾತಾಸ್ತದೀಹಯಾ ॥೯೨॥**

**ವನಂ ಕುಸುಮಿತಂ ತಾವದ್ಗಾಯಕಾ ವಿಹಗಾ ಜಗುಃ ।**
**ರತ್ಯುಪಾಯಾಕರಂ ಚಾಸೀತ್ತದೈವ ವಿಪಿನಂ ಮಹತ್ ॥೯೩॥**

|| ಋಷಯ ಊಚುಃ ||

**ಕತಿಗೋಪ್ಯಃ ಕಥಂ ಕೃಷ್ಣೋ ಬಹುಭಿಃ ಕ್ರೀಡತೇ ವನೇ ।**
**ಏಕೋ ವಾ ಬಹುರೂಪೋ ವಾ ಯಥಾವತ್ಪ್ರಮದಾಕುಲೈಃ ॥೯೪॥**

**ಕದಾ ಕ್ರೀಡಾಸಮಾರಂಭಃ ಸದಾ ವಾ ಕಾಲತೋಽಪಿ ವಾ ।**
**ಅಸ್ಮಾಕಂ ಮಹದೌತ್ಸುಕ್ಯಂ ತತ್ಕ್ರೀಡಾಶ್ರವಣಾಯ ಹಿ ॥೯೫॥**

---

ತರುವಾಯ ಭಗವಂತನಾದ ಶ್ರೀಕೃಷ್ಣನು ಆ ಗೋಪಿಯರ ಗುಂಪಿನ ಮಧ್ಯದಲ್ಲಿ, ರಾತ್ರಿವೇಳೆಯಲ್ಲಿ ಕ್ರೀಡಿಸುವ ರಾಸಕ್ರೀಡೆಯಲ್ಲಿ ಹೇಗೋ ಹಾಗೆ, ವಿಹರಿಸುತ್ತಾ ಪ್ರಕಾಶಿಸಿದನು. ಆ ಗೋಪಸ್ತ್ರೀಯರೂ ಆ ಕನ್ನಿಕೆಯನ್ನು ನೋಡಬೇಕೆಂಬ ಇಚ್ಛೆಯಿಂದ ನಡೆದರು. ||೯೨||

ಆ ವನವು ಹೂವುಗಳುಳ್ಳದ್ದಾಗಿ ರಮ್ಯವಾಗಿತ್ತು. ಪಕ್ಷಿಗಳು ಸಂಗೀತಗಾರರಂತೆ ಮನೋಹರವಾಗಿ ಧ್ವನಿಮಾಡುತ್ತಿದ್ದವು. ಆ ದೊಡ್ಡ ಕಾಡೂ ಸಹ ಆಗ ಹೆಚ್ಚಾಗಿ ಪ್ರೀತಿಯ ಅನುಭವವನ್ನುಂಟುಮಾಡಲು ತಕ್ಕದ್ದಾಗಿತ್ತು. ||೯೩||

ಋಷಿಗಳು ಹೇಳಿದರು--ಅಲ್ಲಿ ಕ್ರೀಡಿಸುತ್ತಿದ್ದ ಗೋಪಿಯರು ಎಷ್ಟು ಜನರಿದ್ದರು? ಅವರೊಡನೆ ಶ್ರೀಕೃಷ್ಣನು ಯಾವ ರೀತಿಯಲ್ಲಿ ಕ್ರೀಡಿಸುತ್ತಿದ್ದನು? ಆ ನಾರೀಮಣಿಯರ ಗುಂಪಿನಲ್ಲಿ ಅವನು ಕ್ರೀಡಿಸುತ್ತಿದ್ದದು ಒಂದು ರೂಪಿನಿಂದಲೇ ಅಥವಾ ಬಹುರೂಪಗಳಿಂದಲೆ? ಈ ವಿವರಗಳನ್ನೂ ಹೇಳಿರಿ. ||೯೪||

ಆ ಕ್ರೀಡೆಯು ನಡೆಯುತ್ತಿದ್ದ ಕಾಲವಾವುದು? ಯಾವಾಗಲೂ ನಡೆಯುತ್ತಿದ್ದಿತೇ? ಅಥವಾ ಗೊತ್ತಾದ ಕಾಲದಲ್ಲಿ ನಡೆಯುತ್ತಿದ್ದಿತೇ? ಈ ಕ್ರೀಡಾವಿನೋದದ ವಿವರವನ್ನು ಕೇಳುವುದರಲ್ಲಿ ನಮಗೆ ಬಹಳ ಆಸಕ್ತಿಯಿದೆ. ||೯೫||

**ತವಾತ್ರ ಶ್ರದ್ದಧಾನಾನಾಂ ಬ್ರೂಹಿ ತ್ವಂ ಕೃಪಯಾ ಮುನೇ ॥೯೬॥**

**ಇತಿ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ**
**ಸೂತ ಶೌನಕ ಸಂವಾದೋ ನಾಮ ನವಮೋಽಧ್ಯಾಯಃ**

---

ಓ ಮುನಿಯೇ, ಶ್ರದ್ಧೆಯಿಂದ ಕೇಳುವ ನಮಗೆ ಇವುಗಳನ್ನು ಕೃಪೆಮಾಡಿ ಹೇಳುವವನಾಗು. ॥೯೬॥

ಇಲ್ಲಿಗೆ ವ್ಯಾಸಕೃತವಾದ ಎಲ್ಲ ಪುರಾಣಗಳ ಮುಖ್ಯ ತಾತ್ಪರ್ಯವನ್ನು
ಒಳಗೊಂಡಿರುವ ಈ ಆದಿಪುರಾಣದಲ್ಲಿ ಸೂತಶೌನಕ ಸಂವಾದದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

---

## || ಅಥ ದಶಮೋಽಧ್ಯಾಯಃ ||

### ಹತ್ತನೆಯ ಅಧ್ಯಾಯವು

|| ಸೂತ ಉವಾಚ ||

ನಾರದಸ್ತ್ವೇಕದಾ ಯಾತಃ ಸತ್ಯಲೋಕಂ ಸನಾತನಂ ।
ತತ್ರೋಪವಿಷ್ಟಂ ಸದಸಿ ಶ್ರುತೀನಾಂ ಮೂರ್ತಿಸಂಭೃತಾಂ ॥೧॥

ಪಿತರಂ ಸರ್ವ ಶಾಸ್ತ್ರಜ್ಞಂ ವೇದವೇದಾಂತ ಪಾರಗಂ ।
ದೃಷ್ಟ್ವಾ ತಮುಪ ಸಂಗಮ್ಯ ಪಪ್ರಚ್ಛೈವ ಮುನೀಶ್ವರಾಃ ॥೨॥

ತತ ಊಚೇ ಪುರಾವೃತ್ತಂ ಯಾತಂ ಸ ಭಗವಾನಜಃ ।
ತದಹಂ ತು ಪ್ರವಕ್ಷ್ಯಾಮಿ ಶೃಣ್ವಂತು ಮುನಿಸತ್ತಮಾಃ ॥೩॥

---

ಎಲೈ ಮುನಿಶ್ರೇಷ್ಠರೇ, ಒಂದಾನೊಂದು ಕಾಲದಲ್ಲಿ ನಾರದನು ಸತ್ಯಲೋಕವನ್ನು ಪಡೆದವನಾಗಿ, ಸಭೆಯಲ್ಲಿ ಕುಳಿತಿರುವ, ಇಂದ್ರಿಯಗೋಚರವಾಗುವಂತೆ ಮೂರ್ತಿಮತ್ತಾದ ವೇದಗಳಿಗೆ ಜನಕನೂ, ಸರ್ವಶಾಸ್ತ್ರಗಳ ಅರ್ಥವನ್ನು ತಿಳಿದಿರುವವನೂ, ವೇದವೇದಾಂತಪಾರಂಗತನೂ ಆದ, ಬ್ರಹ್ಮನನ್ನು ನೋಡಿ ಅವನ ಸಮೀಪವನ್ನೈದಿ ಈ ವಿಚಾರವನ್ನು ಪ್ರಶ್ನೆಮಾಡಿದನು. ॥೧-೨॥

ಬಳಿಕ ಭಗವಂತನಾದ ಬ್ರಹ್ಮನು ಪೂರ್ವದಲ್ಲಿ ನಡೆದ ಈ ವೃತ್ತಾಂತವನ್ನು ಅವನಿಗೆ ಹೇಳಿದನು. ಎಲೈ ಮುನಿಶ್ರೇಷ್ಠರೇ, ನಾನು ಈ ವಿಷಯವನ್ನು ನಿಮಗೆ ಹೇಳುವೆನು, ಕೇಳುವವರಾಗಿರಿ. ॥೩॥

|| ಭಗವಾನುವಾಚ ||

**ಸಂಹೃತ್ಯೇದಂ ಜಗತ್ಸರ್ವಂ ಸುಪ್ತಶಕ್ತಿರಧೋಕ್ಷಜಃ ।**
**ಮಯಿ ಲೀನ ಮಿದಂ ಸರ್ವಂ ರಹೋ ನಿಸ್ಸಾರಯಾಮಿ ತತ್ ||೪||**

**ರಹಸ್ಯಮಹಮೇಕೋಽತ್ರ ಚೇತ್ಯಾಲೋಚಿತವಾನ್ ಸ್ವಯಂ ।**
**ತದಾ ವಿಷ್ಣೋರ್ನಾಭಿರೂಢಮಬ್ಜಮಾಸೀದನುತ್ತಮಂ ||೫||**

**ಕೀಟಾಣು ಕೀಟವಚ್ಚಾಹಂ ಕಮಲಾತ್ಪ್ರಜ್ವಲದ್ಯುತೇಃ ।**
**ತತೋಽಭವಂ ಮಹಾಭಾಗ ಪ್ರಭಾತೇ ಸಂಪ್ಲುತೋದಕೇ ||೬||**

**ದಿಶೋ ವಿಲೋಕಮಾನಸ್ಯ ಚತ್ವಾರಿ ವದನಾನಿ ಮೇ ।**
**ಬಭೂವುರತಿ ಭೀತಸ್ಯ ತದಾ ಮೇ ವಿಸ್ಮಯೋಽಭವತ್ ||೭||**

---

ಜಗತ್ಸೃಷ್ಟಿಗಿಂತ ಪೂರ್ವದಲ್ಲಿ ಜಿತೇಂದ್ರಿಯರಾದ ಯೋಗಿಗಳಿಗೆ ಗೋಚರನಾಗುವ, ನಾಶವಿಲ್ಲದ ಸ್ವರೂಪವುಳ್ಳ, ವಿಷ್ಣುವು ಜಗತ್ತಿನ ಉತ್ಪತ್ತಿ ಮತ್ತು ಸ್ಥಿತಿಗಳಿಗೆ ಉಪಾದಾನ ಕಾರಣವಾದ ಮಾಯೆಯೆಂಬ ಶಕ್ತಿಯನ್ನು ಉಪಸಂಹರಿಸಿದವನಾಗಿರಲು, ಅದರೊಂದಿಗೆ ಅದರ ಕಾರ್ಯವಾದ ಸಕಲ ಜಗತ್ತನ್ನೂ ಉಪಸಂಹರಿಸಲು, ಆವಾಗ ಈ ಪ್ರಪಂಚವೆಲ್ಲವೂ ವಿಷ್ಣುವಿನ ದೇಹದಲ್ಲಿ ಇದ್ದ ನನ್ನಲ್ಲಿ ಅಡಗಿಹೋಗಿದ್ದಿತು. ಈ ಪ್ರಪಂಚವನ್ನು ಪುನಃ ಸೃಷ್ಟಿಕಾಲದಲ್ಲಿ ನಾನು ಹೊರಹೊಮ್ಮಿಸುತ್ತಿರುವೆನು. ಇದರ ರಹಸ್ಯವನ್ನೂ ಕ್ರಮರೀತಿಗಳನ್ನೂ ಹೇಳುವವನಾಗುತ್ತೇನೆ. ||೪||

ವಿಷ್ಣುವಿನ ಶರೀರದಲ್ಲಿ ಏಕಾಕಿಯಾಗಿದ್ದ ನಾನು ಸ್ವತಃ ರಹಸ್ಯವಾದ ವಿಷಯವೊಂದನ್ನು ಎಂದರೆ ಒಬ್ಬನೇ ಆಗಿರುವುದನ್ನು ಕುರಿತು ಆಲೋಚಿಸಿದೆನು. ಆಗ ವಿಷ್ಣುವಿನ ನಾಭಿಯಿಂದ ಸುಂದರವಾದ ಕಮಲವು ಪ್ರಾದುರ್ಭವಿಸಿತು. ||೫||

ತರುವಾಯ ವಿಷ್ಣುವಿನ ಪ್ರಕಾಶಮಾನವಾದ ಆ ನಾಭಿಕಮಲದಿಂದ ಕೀಟಗಳಲ್ಲೆಲ್ಲಾ ಅತಿ ಚಿಕ್ಕದಾದ ಕೀಟವು (ಹುಳುವು) ಹುಟ್ಟುವಂತೆ ನಾನು (ಸರ್ವತೋ ಜಲಮಯವಾದ ಆ ಸ್ಥಳದಲ್ಲಿ) ಪ್ರಭಾತಕಾಲದಲ್ಲಿ ಹುಟ್ಟಿದೆನು. (ಪ್ರಾದುರ್ಭವಿಸಿದೆನು.) ||೬||

ಬಳಿಕ ನಾಲ್ಕು ದಿಕ್ಕುಗಳನ್ನೂ ನೋಡುತ್ತಲಿದ್ದ ನನಗೆ ನಾಲ್ಕು ಮುಖಗಳು ಉಂಟಾಗಿ ಇರುವಂತೆ ತೋರಿತು! ಇದರಿಂದ ಭಯ ಭ್ರಾಂತನಾಗಿದ್ದ ನನಗೆ ಅತ್ಯಾಶ್ಚರ್ಯವುಂಟಾಯಿತು! ||೭||

**ಕಿಂ ಕರೋಮ್ಯಹ ಮೇಕೋಽತ್ರ ಕೋ ಮೇ ಸಾ(ಹಾ)ಯ್ಯಕೃದ್ಭವೇತ್ ।**
**ಕಸ್ಮಾದಿಹ ಮಹದ್ಭೂತೋ ನಾಸ್ಯದೃಶ್ಯೋಽಹಮೇಕರಾಟ್ ॥೮॥**

**ಕೋ ಜನ್ಮದಾತಾ ಕಿಂ ನಾಮ ನ ಹಿ ಕಿಂಚಿದ್ವಿಲೋಕಯೇ ।**
**ಜಲಾನ್ನಭಃ ಪ್ರವಿಷ್ಟೋಽಹಂ ತತಃ ಸಂವಿಗ್ನ ಮಾನಸಃ ॥೯॥**

**ವಿಚಿನ್ವತೋ ಗತಃ ಕಾಲೋ ಮೇ ಭವೇಚ್ಛರದಾಂ ಶತಂ ।**
**ತದಾ ಸ್ವಯಂ ಭೃಂಗಪತೇ ರೂಪಂ ಕೃತ್ವಾ ಸಮಾಗತಃ ॥೧೦॥**

**ಸ ಪೃಷ್ಟವಾನಜ್ಞ ಇವ ಕಸ್ತ್ವಂ ಕಥಮಿಹ ಸ್ಥಿತಃ ।**
**ಮಯೋಕ್ತಂ ನಾಭಿಜಾನಾಮಿ ಜನ್ಮ ನಾಮಾಹಮಾತ್ಮನಃ ॥೧೧॥**

---

ಈ ಸ್ಥಳದಲ್ಲಿ ನಾನೊಬ್ಬನೇ ಇದ್ದುಕೊಂಡು ಏನನ್ನು ಮಾಡಲಿ? ಈಗ ನನಗೆ ಸಹಾಯವನ್ನು ನೀಡುವವರು ಯಾರಿರುವರು? ಇಲ್ಲಿ ನಾನೊಬ್ಬನೇ ಏತಕ್ಕೋಸ್ಕರ ಉದ್ಭವಿಸಿದೆನು? ಹೀಗೆಂದು ಯೋಚಿಸುತ್ತಿದ್ದೆನು. ಮತ್ತು ॥೮॥

ನನ್ನ ಜನಕನು ಯಾರು? ಅವನ ನಾಮಧೇಯವೇನು? ಇವು ಯಾವುದನ್ನೂ ನಾನು ತಿಳಿಯಲಾರದೆ ಇರುವೆನು! ಈ ಪ್ರಕಾರವಾಗಿ ಚಿಂತಿಸಿದ ಅನಂತರದಲ್ಲಿ ನಾನು ಆ ನೀರಿನಿಂದ ಆಕಾಶವನ್ನು ಪಡೆದು ವ್ಯಾಕುಲಿತಚಿತ್ತನಾಗಿ, ನನ್ನ ಉತ್ಪತ್ತಿಯ ರೀತಿಯನ್ನು ತಿಳಿದುಕೊಳ್ಳಲು ಪುನಃ ಚಿಂತಿಸುತ್ತಿರಲು, ಹೀಗೆ ನೂರು ಸಂವತ್ಸರಗಳು ಕಳೆದುಹೋದುವು. ॥೯॥

ಆಗ ಪರಮಾತ್ಮನು ಜೇನುಹುಳುಗಳಿಗೆ ಪ್ರಭುವಿನ ರೂಪವನ್ನು ಧರಿಸಿ ನಾನಿದ್ದೆಡೆಗೆ ಬಂದು ನನ್ನನ್ನು ಕುರಿತು, ನೀನು ಯಾರು? ಏತಕ್ಕೋಸ್ಕರ ಇಲ್ಲಿ ನಿಂತಿರುವೆ? ಎಂದು ಏನನ್ನೂ ತಿಳಿಯದವನಂತೆ ಪ್ರಶ್ನಿಸಿದನು. ॥೧೦॥

ಭೃಂಗವು ಹೀಗೆಂದು ಕೇಳಲು, ಅದನ್ನು ಕುರಿತು, ನನ್ನ ಉತ್ಪತ್ತಿಯಾದ ಕ್ರಮವನ್ನೂ ಮತ್ತು ನಾಮಧೇಯವನ್ನೂ ನಾನು ತಿಳಿಯದವನಾಗಿದ್ದೇನೆ! ಎಂದು ಉತ್ತರವಿತ್ತೆನು. ॥೧೧॥

**ತಮುಪೃಚ್ಛಂ ತು ಕಥಯ ಮುಹ್ಯಂ ನಾಮ ಚ ಜನ್ಮ ಚ ।**
**ಶ್ರುತ್ವಾ ಕರೋಮಿ ಯತ್ಕಾರ್ಯಮಾತ್ಮನಃ ಸ್ವವಿಚಾರತಃ ॥೧೨॥**

|| ಭೃಂಗಾಧಿಪ ಉವಾಚ ||

**ಶೃಣುಷ್ವಾವಹಿತಃ ಸರ್ವಂ ಯತ್ತ್ವಂ ಮಾಂ ಪೃಷ್ಟವಾನಿಹ ।**
**ಸಮಾಶ್ವಾಸ್ಯ ಸ ಮಾಮಿತ್ಥಂ ವಿಷ್ಟರಂ ಚ ಗೃಹೀತವಾನ್ ॥೧೩॥**

**ಅರ್ವಾಗಥೋ ಬಹುತಿಥೋ ಗತಃ ಕಾಲೋ ವಿಚಿನ್ವತಃ ।**
**ಆಸೀನ್ಮೌನೀ ಭೃಂಗರಾಜೋ ನೋತ್ತರಂ ವಾಸ್ತವಂ ದದೌ ॥೧೪॥**

**ಅಥೈವಂ ವಕ್ತುಮಾರೇಭೇ ಸೃಷ್ಟಿಪ್ರಕರಣಂ ಚ ಸಃ । ॥೧೫॥**

**ಶೃಣು ತೇಽಹಂ ಪ್ರವಕ್ಷ್ಯಾಮಿ ವಿಷ್ಣೋಃ ರೂಪಂ ದ್ವಿಧಾ ಮತಂ ।**
**ನಿತ್ಯಂ ವಿಹಾರ ಏಕೇನ ಚಾನ್ಯೇನ ಸೃಷ್ಟಿ ರೇವ ಹಿ ॥೧೬॥**

---

ಮತ್ತು ಪುನಃ ನಾನು ಆ ಭೃಂಗವನ್ನೇ ಕುರಿತು ಹೀಗೆಂದು ಕೇಳಿದೆನು. ಓ ಭೃಂಗಪತಿಯೇ, ನನ್ನ ಉತ್ಪತ್ತಿಯು ಹೇಗೆ ಉಂಟಾಯಿತು? ಮತ್ತು ನನ್ನ ನಾಮಧೇಯುವೇನು? ಇವುಗಳನ್ನು ತಿಳಿದುಕೊಂಡು ನಾನು ನನ್ನ ಸ್ವಂತ ವಿಚಾರದಿಂದ ಮುಂದಿನ ಕಾರ್ಯವನ್ನು ಕೈಗೊಳ್ಳುವೆನು. ||೧೨||

ಭೃಂಗಾಧಿಪನು ಹೇಳಿದನು—ನೀನು ಕೇಳುವ ವಿಷಯುವನ್ನು ಹೇಳುವೆನು. ಸಾವಧಾನದಿಂದ ಕೇಳುವವನಾಗು. ನನ್ನನ್ನು ಹೀಗೆಂದು ಸಮಾಧಾನಪಡಿಸಿ ಆಸನವನ್ನು ಸ್ವೀಕರಿಸಿದನು. ಹೀಗಿರುತ್ತಿರಲು ಬಹುಕಾಲವು ಅತಿಕ್ರಮಿಸಿತು. ಆದರೂ ಭೃಂಗರಾಜನು ಮೌನವನ್ನು ತಾಳಿದವನಾಗಿ ನಿಜವಾದ ಯಾವ ಉತ್ತರವನ್ನೂ ಹೇಳಲಿಲ್ಲ. ||೧೩-೧೪||

ಹೀಗೆ ಬಹುಕಾಲ ಕಳೆದನಂತರದಲ್ಲಿ ಭೃಂಗಾಧಿಪನು ಮುಂದೆ ಹೇಳುವ ರೀತಿಯಲ್ಲಿ ಸೃಷ್ಟಿಯ ಕ್ರಮುವನ್ನು ಹೇಳತೊಡಗಿದನು. ||೧೫||

ಎಲೈ ಬ್ರಹ್ಮನೇ, ಹಿಂದೆ ನೀನು ಪ್ರಶ್ನಿಸಿದ ವಿಷಯುವನ್ನು ಹೇಳುವೆನು. ಕೇಳುವವನಾಗು. ವಿಷ್ಣುವಿನ ರೂಪವು ಎರಡು ವಿಧವಾಗಿರುವುದು. ಒಂದು ರೂಪದಿಂದ ಸದಾ ವಿಹರಿಸುವನು. ಮತ್ತೊಂದು ರೂಪದಿಂದ ಅವನು ಸೃಷ್ಟಿಯುನ್ನು ಮಾಡುವನು. ||೧೬||

**ಯದ್ರೂಪಂ ಜಗತಃ ಸ್ರಷ್ಟುಸ್ತಸ್ಯ ನಾಭಿ ಸಮುದ್ಭವಂ ।**
**ಪದ್ಮಂ ಯತೋ ಜನ್ಮ ತವ ಜಗತ್ಸ್ರಷ್ಟುಂ ತಥಾ ಕುರು ॥೧೭॥**

॥ ಬ್ರಹ್ಮೋವಾಚ ॥

**ನಿಶಮ್ಯ ವಚನಂ ತಸ್ಯ ಸಮಾಧಾಯ ಮನಃ ಸ್ವಯಂ ।**
**ಸೃಷ್ಟವಾನೇವ ತತ್ಸರ್ವಂ ಯದುಕ್ತಂ ತೇನ ಚಾಲಿನಾ ॥೧೮॥**

**ತತೋಽಹಮೂಚೇ ಭ್ರಮರಂ ವದ ವಿಷ್ಣೋರ್ಮಹಾತ್ಮನಃ ।**
**ಕ್ರೀಡಾಂ ನಿತ್ಯ ವಿಹಾರಾಖ್ಯಾಂ ಕ್ವ ಸಾ ಭವತಿ ತದ್ವದ ॥೧೯॥**

**ವೈಕುಂಠೇ ಸತ್ಯಲೋಕೇ ವಾ ನಾಗಲೋಕೇಽಥವಾ ಭುವಿ ।**
**ಸ್ವರ್ಲೋಕೇ ಸುರಭೀ ನಾಮ್ನ್ಯಾ ಚಾನ್ಯಯಾ ಯದಿ ಕಾ ಕ್ವ ಸಾ ॥೨೦॥**

---

ಜಗತ್ಸೃಷ್ಟಿಕರ್ತೃವಾದ ವಿಷ್ಣುವಿನ ನಾಭಿಯಲ್ಲಿ ಉತ್ಪನ್ನವಾದ ಕಮಲದಿಂದ ನೀನು ಜನಿಸಿರುವೆ. ನೀನೇ ಸೃಷ್ಟಿಕರ್ತೃವಾದ ವಿಷ್ಣುವಿನ ಮತ್ತೊಂದು ರೂಪವಾಗಿರುವೆ. ಆದುದರಿಂದ ಇನ್ನುಮುಂದೆ ಜಗತ್ತುಗಳನ್ನು ಸೃಷ್ಟಿಮಾಡುವವನಾಗು. ॥೧೭॥

ಬ್ರಹ್ಮನು ಹೇಳಿದನು - ಭೃಂಗಾಧಿಪತಿಯ ವಚನವನ್ನು ಕೇಳಿ ನಾನು ಮನಸ್ಸಮಾಧಾನವುಳ್ಳವನಾಗಿ, ಅವನ ಮಾತಿಗನುಸಾರವಾಗಿ ಸಕಲ ಲೋಕಗಳನ್ನೂ ಸೃಜಿಸಿದೆನು. ॥೧೮॥

ಜಗತ್ಸೃಷ್ಟಿಯಾದ ತರುವಾಯ ನಾನು ಭೃಂಗಾಧಿಪತಿಯನ್ನು ಕುರಿತು, ಮಹಾತ್ಮನಾದ ವಿಷ್ಣುವು ಯಾವ ಸ್ಥಳದಲ್ಲಿ ವಿಹರಿಸುವನು ? ಅದನ್ನು ಹೇಳುವವನಾಗು. ಎಂದು ಕೇಳಿದೆನು. ॥೧೯॥

ಓ ಭೃಂಗಾಧಿಪತಿಯೇ, ಚತುರ್ದಶಭುವನಗಳಲ್ಲಿ ವಿಷ್ಣುವು ವಿಹರಿಸುವ ಪ್ರದೇಶವಾವುದು ? ಸತ್ಯಲೋಕವೇ, ನಾಗಲೋಕವೇ, ಭೂಲೋಕವೇ, ಸ್ವರ್ಗಲೋಕವೇ ಅಥವಾ ಇವುಗಳಲ್ಲದೆ ಮತ್ತೆ ಬೇರೆ ಸ್ಥಳವಿರುವುದೇ, ಆ ಸ್ಥಳವಾವುದು ? ಅದನ್ನು ತಿಳಿಸುವವನಾಗು. ॥೨೦॥

|| ಭೃಂಗರಾಜ ಉವಾಚ ||

ಏವಮೇವ ಪುರಾ ಪೃಷ್ಟೋ ವೈಕುಂಠೇ ಭ್ರಮರಾಧಿಪಃ ।
ಕೀರೇಣ ಮುನಿನಾ ತತ್ರ ಪಕ್ಷಿರೂಪೇಣ ಭಾಸ್ವತಾ ॥೨೧॥

ಇದಂ ರಹಸ್ಯಮಾಶ್ಚರ್ಯಂ ಕಥಯಾಮಿ ತವಾಧುನಾ ।
ನ ತತ್ರ ಮೃತ್ಯುರ್ನ ಜರಾ ನ ಶೋಕೋ ನ ಚ ಮತ್ಸರಃ ॥೨೨॥

ಸತ್ವಾದಯೋ ಗುಣಾ ನೈವ ನ ಶೀತೋಷ್ಣೇಂದು ಭಾಸ್ಕರಾಃ ।
ವಸಂತಿ ಚ ಪುರೇ ತಸ್ಮಿನ್ ಮುನಯಃ ಪಕ್ಷಿರೂಪಿಣಃ ॥೨೩॥

ಗಾಯಂತಿ ವಿಷ್ಣೋಶ್ಚರಿತಂ ಶೃಣ್ವಂತಿ ಚ ಸಮಾಹಿತಾಃ ।
ತತ್ರ ಕೀರವರಃ ಕೋಽಪಿ ಪಪ್ರಚ್ಛ ಭ್ರಮರಾಧಿಪಂ ॥೨೪॥

|| ಕೀರವರ ಉವಾಚ ||

ಕಿಂ ಪರಂ ರೂಪಮಸ್ತೀಹ ವಿಷ್ಣೋರ್ಭಗವತಃ ಪ್ರಭೋಃ ।
ಚಂಚರೀಕ ಸಮಾಖ್ಯಾಹಿ ಕಾ ಲೀಲಾ ಭಗವತ್ಪ್ರಿಯಾ ।
ಕುತ್ರ ಕ್ರೀಡಾ ನಿಶಾಂತಂ ತು ಕಾಽವನಿಃ ಕಾ ಸರಿತ್ಪ್ರಿಯಾ ॥೨೫॥

---

ಭೃಂಗಾಧಿಪತಿಯು ಹೇಳಿದನು. ಎಲೈ ಪಿತಾಮಹನೇ, ಹಿಂದೆ ಒಂದಾನೊಂದು ಕಾಲದಲ್ಲಿ ವೈಕುಂಠವಲ್ಲಿ ಒಂದು ಶುಕವು ನೀನು ಕೇಳಿದ ವಿಷಯವನ್ನೇ ವಿಷ್ಣುವನ್ನು ಕುರಿತು ಕೇಳಿತು. ||೨೧||

ಈ ವಿಷಯವು ರಹಸ್ಯವೂ ಮತ್ತು ಪರಮಾಶ್ಚರ್ಯಕರವೂ ಆಗಿರುವುದು. ಅದನ್ನೇ ನಿನಗೆ ತಿಳಿಸುವೆನು. ವಿಷ್ಣುವು ವಿಹಾರಮಾಡುವ ಸ್ಥಳದಲ್ಲಿ ಜನ್ಮ, ಮರಣ, ಶೋಕ, ಮತ್ಸರ, ಸತ್ತ್ವರಜಸ್ತಮೋಗುಣಗಳು, ಶೀತ, ಉಷ್ಣ, ಸೂರ್ಯ, ಚಂದ್ರ ಇವು ಯಾವುವೂ ಇರುವುದಿಲ್ಲ ಆ ಸ್ಥಳದಲ್ಲಿ ಪಕ್ಷಿರೂಪಧಾರಿಗಳಾದ ಮುನಿಗಳು ವಿಷ್ಣು ಚರಿತ್ರೆಯನ್ನು ಕೇಳುವರು. ಮತ್ತು ಗಾನಮಾಡುವರು. ಹೀಗಿರುತ್ತಿರಲು ಆ ಪಕ್ಷಿ ಸಂಘದಲ್ಲಿ ಒಂದು ಪಕ್ಷಿಯು ಭ್ರಮರಾಧಿಪತಿಯಾದ ನನ್ನನ್ನು ಕುರಿತು ಹೀಗೆಂದು ಪ್ರಶ್ನಿಸಿತು. ||೨೨-೨೩-೨೪||

ಕೀರವು (ಪಕ್ಷಿಯು) ಹೇಳಿತು—ಓ ಭೃಂಗಾಧಿಪತಿಯೇ, ಜಗತ್ಪ್ರಭುವಾದ ವಿಷ್ಣುವಿಗೆ ಈಗ ಕಾಣಿಸುತ್ತಿರುವ ರೂಪಕ್ಕಿಂತಲೂ ವ್ಯತಿರಿಕ್ತವಾದ ರೂಪವು

|| ಭೃಂಗರಾಜ ಉವಾಚ ||

ಇದಂ ಗುಹ್ಯತಮಂ ಕೀರ ತ್ವಯಾ ಪೃಷ್ಟಂ ಮಹಾಮತೇ ।
ತಥಾಽಪಿ ತುಭ್ಯಂ ವಕ್ಷ್ಯಾಮಿ ಕಥಾಯೋಗ್ಯಸ್ತ್ವಮೇವ ಹಿ ||೨೬||

ವರಾರೋಹಾಃ ಪ್ರಿಯಾಃ ಸರ್ವಾಃ ರಾಸೇ ನೃತ್ಯಪರಾ ಹಿ ಯಾಃ ।
ವಿಷ್ಣೋರ್ವರಾಂಗನಾಃ ಸಾರ್ಧಂ ಯಾಭಿರ್ನಿತ್ಯಂ ವಿಚಿತ್ರಧಾ ||೨೭||

ಗಿತಗಾನೈಸ್ತಥಾ ನೃತ್ಯೈರ್ವಾದ್ಯೈರ್ನಾನಾ ವಿಧೈರಪಿ ।
ಕೃಷ್ಣಃ ಕ್ರೀಡತಿ ಶೃಂಗಾರರಸ ವಿಹ್ವಲ ಮಾನಸಃ ||೨೮||

ಕರೋತಿ ರಸಿತಾಸ್ತಾಃ ಸಃ ಸ್ವತೋಽಪಿ ಪ್ರೇಮ ವಿಹ್ವಲಾಃ ।
ಕೀರಾನುರಾಗಬಹುಲಂ ರಹಸ್ಯಮತುಲಂ ಯತಃ ||೨೯||

---

ಇರುವುದೇ? ಅಂತಹ ರೂಪವು ಇರುವುದೇ ಆದರೆ ಲೀಲಾಮಯನಾದ ವಿಷ್ಣುವಿಗೆ ಪ್ರಿಯವಾದ ಲೀಲೆಯ ರೂಪವು ಯಾವುದು ಎಂಬುದನ್ನು ಹೇಳುವವನಾಗು. ಮತ್ತು ಅವನು ಎಲ್ಲಿ ಕ್ರೀಡಿಸುವನು? ಅವನ ನಿಲಯವು ಯಾವುದು? ಅವನು ವಾಸಿಸುವ ನಗರವಾವುದು? ಮತ್ತು ಅವನಿಗೆ ಪ್ರಿಯವಾದ ಜಲಾಶಯವಾವುದು? ||೨೫||

ಭೃಂಗಾಧಿಪತಿಯು ಹೇಳಿತು – ಎಲೈ ಬುದ್ಧಿಶಾಲಿಯಾದ ಕೀರವೇ, ನೀನು ಕೇಳಿದ ಈ ವಿಷಯವು ಅತ್ಯಂತ ಗೋಪ್ಯವಾಗಿರುವುದು. ಆದರೂ ನೀನು ಕೇಳುತ್ತಿರುವುದರಿಂದ ತಿಳಿಯಲು ಯೋಗ್ಯನಾದ ನಿನಗೆ ಹೇಳುವೆನು. ||೨೬||

ವಿಷ್ಣುವಿಗೆ ಅತ್ಯುತ್ತಮರಾದ ದಿವ್ಯ ಜಾತೀಯರಾದ ಅನೇಕ ಪ್ರೇಯಸೀಯರು ಇರುವರು. ಅವರೆಲ್ಲರೂ ಸದಾ ರಾಸಕ್ರೀಡೆಯಲ್ಲಿಯೂ ಮತ್ತು ನೃತ್ಯದಲ್ಲಿಯೂ ಪ್ರೀತಿಯುಳ್ಳವರಾಗಿರುವರು. ವಿಷ್ಣುವು ಪ್ರೇಯಸಿಯರಾದ ಅವರೊಂದಿಗೆ ನಿತ್ಯವೂ ಅನೇಕ ವಿಧವಾದ ಲೀಲೆಗಳನ್ನು ಅನುಭವಿಸುವನು. ||೨೭||

ಶ್ರೀ ಕೃಷ್ಣನು ಶೃಂಗಾರರಸದಿಂದ ವಿವಶವಾದ ಮನಸ್ಸುಳ್ಳವನಾಗಿ ನಾನಾವಿಧವಾದ ಗೀತ, ಗಾನ, ನೃತ್ಯ, ವಾದ್ಯ ಇವುಗಳಿಂದ ಆಸಕ್ತನಾಗಿ ಆ ಸ್ತ್ರೀಯರೊಂದಿಗೆ ಕ್ರೀಡಿಸುವನು. ||೨೮||

ಮತ್ತು ಸ್ವಾಭಾವಿಕವಾಗಿಯೇ ತನ್ನಲ್ಲಿ ಪ್ರೇಮವುಳ್ಳ ತನ್ನ ಪ್ರಿಯತಮೆಯರನ್ನು ಅನುರಾಗ ಮತ್ತು ರಹಸ್ಯವಾದ ಶೃಂಗಾರಚೇಷ್ಟೆಗಳಿಂದ ಸಂತೋಷಪಡಿಸುವನು. ||೨೯||

**ಅತೋ ಬುಧೈರ್ಹಿ ವಕ್ತವ್ಯಃ ಪಾತ್ರೇ ನಾನ್ಯತ್ರ ಕರ್ಹಿಚಿತ್ ।**
**ವೇದ್ಮ್ಯಹಂ ವಾರಿಧಿರ್ವೇತ್ತಿ ನಾರದೋ ವಾ ಕುಮಾರಕಃ ॥೩೦॥**

**ಅಗ್ನೀ ರುದ್ರೋಽನಿಶಂ ವೇತ್ತಿ ನಾನ್ಯಃ ಕಶ್ಚನ ಕುತ್ರಚಿತ್ ।**
**ವದಂತಿ ಸಾಧವಃ ಸ್ವಾಂತಂ ನಿಜವಿತ್ತಂ ನ ವೈ ಕ್ವಚಿತ್ ॥೩೧॥**

**ನ ಯಥಾ ಸುಧಿಯಃ ಸ್ತೇನಂ ದರ್ಶಯಂತಿ ನಿಜಂ ಧನಂ ।**
**ತಥೈವ ಜ್ಞಾನಿನೋ ಭಕ್ತಾಃ ಹೃದಯಸ್ಥಂ ಮಹಾಧನಂ ॥೩೨॥**

**ಏವಮೇವ ಹಿ ಶ್ರೀಕೃಷ್ಣಃ ಪ್ರೇಮಲೀಲಾರಹಸ್ಯಕಂ ।**
**ಪ್ರಕಾಶಯಂತ್ಯ ಭಕ್ತಾನಾಂ ನ ಮೂಢಾನಾಂ ಸಮಾಪತಃ ॥೩೩॥**

**ವಿಷ್ಣುಸೇವಾ ರಸಾರ್ಥೀ ಯಃ ಕೀರ ಕ್ಷೀರ ಪಯೋನಿಧೌ ।**
**ವಿಷ್ಣುತ್ವಮಪಿ ವಿಸ್ಮೃತ್ಯ ಸ ವೈ ವಸತಿ ನಿತ್ಯಶಃ ॥೩೪॥**

---

ಆದುದರಿಂದ ಯುಕ್ತಾಯುಕ್ತ ವಿವೇಕವುಳ್ಳ ಜ್ಞಾನಿಗಳು ಈ ಗೋಪ್ಯವಾದ ವಿಷಯವನ್ನು ಸತ್ಪಾತ್ರನಿಗೆಮಾತ್ರ ಹೇಳಬೇಕು. ಬೇರೆಯವರಿಗೆ ಹೇಳಲಾಗದು.

ಗುಪ್ತವಾದ ಈ ವಿಷಯವನ್ನು ನಾನು ತಿಳಿದಿರುತ್ತೇನೆ. ಇದಲ್ಲದೇ ಸಮುದ್ರ ರಾಜನೂ, ನಾರದನೂ, ಷಣ್ಮುಖನೂ, ಅಗ್ನಿಯೂ ಮತ್ತು ರುದ್ರನೂ ತಿಳಿದಿರುವರು. ಇವರಲ್ಲದೇ ಮತ್ಯಾರೂ ಈ ವಿಷಯವನ್ನು ತಿಳಿದಿರುವುದಿಲ್ಲ. ॥೩೦॥

ಸತ್ಪುರುಷರು ಎಂದರೆ ವಿಷ್ಣುಭಕ್ತರಾದ ಜ್ಞಾನಿಗಳು, ಬುದ್ಧಿಶಾಲಿಗಳಾದ ಧನಿಕರು ಹೇಗೆ ತಮ್ಮ ಧನವನ್ನು ಪರರಿಗೆ ಪ್ರದರ್ಶಿಸುವುದಿಲ್ಲವೋ ಆದರಂತೆ, ಹೃದಯ ಗತವಾದ ಈ ರಹಸ್ಯವೆಂಬ ಧನವನ್ನು ಪ್ರಕಾಶಪಡಿಸುವುದಿಲ್ಲ. ಆದರಂತೆಯೇ ಶ್ರೀ ಕೃಷ್ಣನ ರಹಸ್ಯವಾದ ಪ್ರೇಮಲೀಲೆಗಳನ್ನು ಭಕ್ತರಲ್ಲದವರಿಗೂ ಮತ್ತು ಅವಿವೇಕಿ ಗಳಿಗೂ ತಿಳಿಸುವುದಿಲ್ಲ. ॥೩೧-೩೨-೩೩॥

ಎಲೈ ಕೀರನೇ, ಕ್ಷೀರಸಾಗರಶಾಯಿಯಾದ ವಿಷ್ಣುವಿನ ಸೇವೆಯಲ್ಲಿ ಯಾವನು ಆಸಕ್ತನಾಗಿರುತ್ತಾನೋ ಅವನು ತನಗೆ ಪ್ರಾಪ್ತವಾಗಿರುವ ವಿಷ್ಣುತ್ವವನ್ನೂ ಮರೆತು ಅನಂತವಾದ ಆನಂದವನ್ನು ಅನುಭವಿಸುವವನಾಗುತ್ತಾನೆ. ॥೩೪॥

ವನಂ ವೃಂಧಾವನಂ ನಾಮ ಹ್ಯನಾದಿ ನಿಧನಂ ಮತಂ ।
ನಿತ್ಯಂ ಕ್ರೀಡಾರತಸ್ತತ್ರ ಗೋಪೀಭಿರ್ಗೋಪವೇಷಭೃತ್ ॥೩೫॥

ನಾಸ್ತಿ ತತ್ಸದೃಶಂ ರೂಪಂ ನ ಸ್ತ್ರಿಯೋ ಗೋಪಿಕಾಸಮಾಃ ।
ಸ್ವಬಿಂಬ ಪ್ರತಿಬಿಂಬೇನ ಕ್ರಿಡತೇ ವಿಪಿನೇಽನಿಶಂ ॥೩೬॥

ಅಥ ಕೃಷ್ಣ ಸಖೀನಾಂ ಚ ಸಂಖ್ಯಾ ಯಾಃ ಸಂವದಾಮಿ ತೇ ।
ತತ್ರಾತೀವ ರಹೋ ರಮ್ಯಂ ವದಿಷ್ಯೇಽಗ್ರೇಽತಿ ವಲ್ಲಭಂ ॥೩೭॥

ಯೇನ ನಾರಾಯಣಃ ಸಾಕ್ಷಾತ್ ಸ್ವತೋ ನಾರೀ ವಶಂ ಗತಃ ।
ಕಾಚಿತ್ಕಲಾನಿಧಿಪ್ರಾಯಾ ವಲ್ಲಭಾ ಬಲ್ಲವೀ ಹರೇಃ ॥೩೮॥

ಮಾಧವೀ ಮಧುರಾಕಾರಾ ನ ತಾಂ ಜಾನಂತಿ ಪಂಡಿತಾಃ ॥೩೯॥

---

ವೃಂದಾವನವೆಂಬ ಹೆಸರುಳ್ಳ ಒಂದು ವನವು ಇರುವುದು. ಆ ವನವು ಅನಾದಿಯೂ ನಾಶರಹಿತವೂ ಆಗಿರುತ್ತದೆ. ಅದರಲ್ಲಿ ಗೋಪವೇಷಧಾರಿಯಾದ ವಿಷ್ಣುವು ಗೋಪಿಕಾಸ್ತ್ರೀಯರೊಂದಿಗೆ ಕ್ರೀಡಾಸಕ್ತನಾಗಿರುವನು. ॥೩೫॥

ಗೋಪವೇಷಧಾರಿಯಾದ ವಿಷ್ಣುವಿನ ಆ ರೂಪಕ್ಕೆ ಸದೃಶವಾದ ಮತ್ತಾವ ರೂಪವಾಗಲೀ, ಆ ಸ್ತ್ರೀಯರಿಗೆ ಸಮರಾದ ಮತ್ತಾವ ಸ್ತ್ರೀಯರಾಗಲೀ ಇರುವುದಿಲ್ಲ. ಆ ಗೋಪೀವಲ್ಲಭನು ತನ್ನ ಬಿಂಬಕ್ಕೆ ಪ್ರತಿಬಿಂಬದಂತೆ ಇರುವ ಆ ಸ್ತ್ರೀಯರೊಂದಿಗೆ ವೃಂದಾವನದಲ್ಲಿ ವಿಹರಿಸುವನು. ॥೩೬॥

ಇನ್ನು ಮುಂದೆ ಶ್ರೀ ಕೃಷ್ಣನ ಪ್ರಿಯತಮೆಯರಾದ ಆ ಗೋಪಿಕಾಸ್ತ್ರೀಯರ ಸಂಖ್ಯೆಯನ್ನು ಹೇಳುವೆನು. ಅದರಲ್ಲಿಯೂ ಅತ್ಯಂತ ರಮಣೀಯವೂ ಗುಪ್ತವೂ ಆದ ಒಂದು ವಿಷಯವನ್ನು ಮುಂದೆ ಹೇಳುವೆನು. ಅದೇನೆಂದರೆ ರೂಪಲಾವಣ್ಯ ಗಳಿಗೆ ನಿಧಿಪ್ರಾಯಳಾದ ಓರ್ವ ಗೋಪಿಕಾಸ್ತ್ರೀಯು ಪ್ರೇಮಪಾಶಕ್ಕೆ ಸಿಲುಕಿ ಸಾಕ್ಷಾತ್ ಶ್ರೀಮನ್ನಾರಾಯಣನು ಸ್ತ್ರೀಯ ಅಧೀನನಾಗಿರುತ್ತಾನೆ. ॥೩೭-೩೮॥

ಸುಂದರವಾದ ದೇಹಾಕೃತಿಯುಳ್ಳ ಮಾಧವನ ಪ್ರಿಯತಮೆಯಾದ ಆ ಮಾಧವೀ ಎಂಬ ಸ್ತ್ರೀಯನ್ನು ಜ್ಞಾನಿಗಳೂ ಸಹ ತಿಳಿಯಲಾರರು ! ॥೩೯॥

ತಿಸ್ರಃ ಕೋಟ್ಯೋ ವಲ್ಲವೀನಾಂ ಸಮಾಜ
ಸ್ತಾವದ್ರೂಪೋ ವಲ್ಲವಃ ಸೋಽಪಿ ಮಧ್ಯೇ ।
ಕಾಚಿತ್ತಾಸಾಂ ನಾಟ್ಯವಿದ್ಯಾ ಪ್ರಶಸ್ತಾ
ಶಶ್ವಚ್ಚಾನ್ಯಾ ಗಾನವೇದ ಪ್ರವೀಣಾ ॥೪೦॥

ಕಾಚಿತ್ತಾಸಾಂ ವಾದ್ಯಪೂರಪ್ರವಿಜ್ಞಾ
ನೃತ್ಯತ್ಯನ್ಯಾ ತಾಲಮಾನಪ್ರತರ್ಕಾ ।
ಕಾಚಿತ್ತಾಸಾಂ ವಾಟಿಕಾಧಾನದಕ್ಷಾ
ಚಾನ್ಯಾಽಭಿಜ್ಞಾ ವಸ್ತ್ರದಾನ ಪ್ರಯತ್ನೇ ॥೪೧॥

ತತ್ತತ್ಪಶ್ಚಾತ್ಪ್ರಾಪ್ತಕಾಲೇ ಚ ಕಾರ್ಯಂ
ಕುರ್ವಂತ್ಯಸ್ತಾ ಸ್ತೋಷಯಂತ್ಯಃ ಸ್ವನಾಥಂ ।
ಏವಂ ತಾಭಿಃ ಕೃಷ್ಣ ಏವಾನುರೂಪಂ
ಕರ್ತಾ ತತ್ರ ದ್ಗೋಪಿಕಾ ಭಾವದಕ್ಷಃ ॥೪೨॥

ಇತಿ ಶ್ರೀಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ
ನಾರದಶೌನಕ ಸಂವಾದೋ ನಾಮ ದಶಮೋಽಧ್ಯಾಯಃ

---

ಆ ಗೋಪಿಕಾಸ್ತ್ರೀಯರ ಸಮಾಜದಲ್ಲಿ ಮೂರುಕೋಟಿ ಸಂಖ್ಯಾತರಾದ ಸ್ತ್ರೀಯರಿರುವರು. ಆ ಸ್ತ್ರೀಯರ ಮಧ್ಯದಲ್ಲಿ ಗೋಪವೇಷಧಾರಿಯಾದ ವಿಷ್ಣುವೂ ಸಹ ಅಷ್ಟೇ ರೂಪಗಳನ್ನು (ಮೂರು ಕೋಟಿ ರೂಪಗಳನ್ನು) ಧರಿಸಿ ವಿಹರಿಸುವನು. ಅವರಲ್ಲಿ ಒಬ್ಬ ಗೋಪಿಕೆಯು ನಾಟ್ಯವಿದ್ಯೆಯಲ್ಲಿ ಚತುರಳು. ಮತ್ತೊಬ್ಬಳು ಗಾನ ವಿದ್ಯೆಯಲ್ಲಿಯೂ, ಇನ್ನೊಬ್ಬಳು ವಾದ್ಯವಿದ್ಯೆಯನ್ನು ತಿಳಿದವಳೂ, ಮತ್ತೊಬ್ಬಳು ತಾಲಕ್ಕೆ ಅನುಗುಣವಾಗಿ ನೃತ್ಯಮಾಡುವವಳೂ ಮತ್ತೊಬ್ಬಳು ಉದ್ಯಾನವನವನ್ನು ಅಲಂಕರಿಸುವುದರಲ್ಲಿ ನಿಪುಣಳೂ ಇನ್ನೊಬ್ಬಳು ವಸ್ತ್ರಧಾರಣೆಯಲ್ಲಿ ಚತುರಳೂ ಆಗಿರುತ್ತಾರೆ. ॥೪೦-೪೧॥

ಬಳಿಕ ಕ್ರೀಡೆಯ ಕಾಲವು ಪ್ರಾಪ್ತವಾಗಲು ಆ ಪ್ರಿಯತಮೆಯರು ಆಯಾ ಕಾಲಕ್ಕನುಗುಣವಾದ ಶೃಂಗಾರಚೇಷ್ಟೆಗಳಿಂದ ತಮ್ಮ ಪ್ರಿಯತಮನ ಮನಸ್ಸನ್ನು

ಸಂತೋಷಪಡಿಸುವರು. ಆಯಾ ಗೋಪಿಯರ ಭಾವಗಳನ್ನು ತಿಳಿದುಕೊಳ್ಳುವುದರಲ್ಲಿ ನಿಪುಣವಾದ ಕೃಷ್ಣನೂ ಸಹ ಅದಕ್ಕನುಗುಣವಾಗಿ ಅವರೊಂದಿಗೆ ವಿಹರಿಸುವನು. ||೪೨||

ಇಲ್ಲಿಗೆ ಸಕಲ ಪುರಾಣ ಸಾರಭೂತವಾದ ಆದಿಪುರಾಣದಲ್ಲಿ
ನಾರದ ಶೌನಕ ಸಂವಾದದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಏಕಾದಶೋಽಧ್ಯಾಯಃ ||

## ಹನ್ನೊಂದನೆಯ ಅಧ್ಯಾಯವು

|| ಭೃಂಗಾಧಿಪ ಉವಾಚ ||

**ಸರ್ವಯೂಥ ಪ್ರಸಂಖ್ಯಾನಂ ಶತಾನಿ ತ್ರೀಣಿ ವಿದ್ಧಿ ವೈ ।**
**ನಿಯುತೇ ನಿಯುತೇ ಮುಖ್ಯಾಸ್ತಾಸಾಂ ನಾಮಾನಿ ಮೇ ಶೃಣು ॥೧॥**

**ವಿಧುಂತುದಾ ವಿಧುರತಾ ರಾಗರಂಗಾ ಸುರಾಗಿಣೀ ।**
**ಕಾಮಕಂದಾ ಸುನಂದಾ ಚ ನಂದಿನೀ ನಾದನಂದಿನೀ ॥೨॥**

**ನೇತ್ರಸೌಭಾಗ್ಯ ಸುಭಗಾ ಮೋದಮಾನಾ ಮನಸ್ವಿನೀ ।**
**ಮನೋಭವಾ ವಿರಾಗಾ ಚ ಹಾವಹಾರಾ ರತಿಪ್ರದಾ ॥೩॥**

**ಧನ್ಯಾ ಧನೇಶ್ವರೀ ಧಾಮಾ ಭಾವಾಭಾವಪ್ರಮೋದಿನೀ ।**
**ಮುಕ್ತಾ ಮನೋಹರಾ ಸಾಧ್ವೀ ಮಾಲತೀ ಮಲಯಾಶ್ರಯಾ ॥೪॥**

**ಮದಾಲಸಾ ಮನೋಽಭೀಷ್ಟಾ ಮನೋಜ್ಞಾ ಮಾನಸಾಽಬಲಾ ।**
**ಚಿತ್ರಾ ವೇತ್ರವತೀ ಭೀಮಾ ಭಾವಭೇದಾ ಸದಾಚಲಾ ॥೫॥**

**ಚಂಚಲಾ ಚಪಲಾ ಕಾಂತಾ ಕಲಾ ಕಾಮ ಪ್ರವೇದಿನೀ ।**
**ಕಲೋತ್ತಮಾ ಕಲಾಽಭಿಜ್ಞಾ ಧನಿಷ್ಠಾ ಚ ಕಲಾವತೀ ॥೬॥**

---

ಭೃಂಗಾಧಿಪನು ಹೇಳಿದನು—ಕೃಷ್ಣನ ಪ್ರೇಯಸಿಯರಾದ ಗೋಪಿಯರು ಅನೇಕರಿರುವರು. ಅವರು ಮೂರುನೂರು ಗುಂಪುಗಳಾಗಿರುವರು. ಅವರಲ್ಲಿ ಹತ್ತು ಲಕ್ಷಕ್ಕೆ ಒಬ್ಬೊಬ್ಬರಂತೆ ಪ್ರಧಾನರಾದ ಸ್ತ್ರೀಯರಿರುವರು. ಅವರ ಹೆಸರುಗಳನ್ನು ಹೇಳು ತ್ತೇನೆ. ಕೇಳು. ||೧||

ವಿಧೃತಾಽನಂಗಭುಜಾಯಾ ಮನ್ಮಥೋದಯ ಪಂಜಿಕಾ ।
ಕಾಮವೃಂದಾ ಸುನಂದಾ ಚ ನಂದಿನೀ ನಯನೋತ್ಸವಾ ॥೭॥

ಕನಕಾಂಗೀ ಕುರಂಗಾಕ್ಷೀ ಚಂದ್ರಾಸ್ಯಾ ಚಂದ್ರಮಂಡನಾ ।
ಮದೋನ್ಮತ್ತಾ ಮದೋತ್ಸಾಹಾ ಹಂಸೀ ಹಂಸಗತಿಸ್ತಥಾ ॥೮॥

ಕಂದರ್ಪ ಮಂಜರೀ ವೇಲಾ ಬಲಿಷ್ಠಾ ಕಲಭಾಷಿಣೀ ।
ವರಾಂಗದಾ ವಿಶಾಲಾಕ್ಷೀ ವಿಶಾಖಾ ವಿಶದಾಶಯಾ ॥೯॥

ಕೃಷ್ಣಾ ಕೃಷ್ಣವತೀ ಭಾವಾ ಭಯಭೇದಪ್ರದರ್ಶಿತಾ ।
ನವಾಂಗಾ ನವವಾಸಾಶ್ಚ ನವೀನಾ ಪ್ರೇಮಕಾರಿಣೀ ॥೧೦॥

ಸಾರಿಕಾ ಸರಲಾ ಶಾಂತಾ ಕಾಂತಾ ಕಾಮ ಪ್ರದಾಯಿನೀ ।
ಪ್ರೇಮವತೀ ನಾಗರಿಕಾ ನವೀನಾ ನವಮಂಜರೀ ॥೧೧॥

ಭೇದಭಾವ ವಿಶಿಷ್ಟಾ ಚ ಧನ್ಯಾ ಸಾಧ್ಯಾಚ ಗೋಮತೀ ।
ಆನವಾ ಪೀನನಂದಾ ಚ ಪ್ರನೋದಾ ಮುದಿತಾನನಾ ॥೧೨॥

ಮಾನಶಾಂತಾ ನವೀನಾ ಚ ಭಾಮಿನೀ ಪ್ರೇಮಕಾರಿಣೀ ।
ಸಾರಿಕಾ ಸರಲಾ ಶಾಂತಾ ಕಾಂತಾ ಕಾಮಪ್ರದಾ ಶುಭಾ ॥೧೩॥

ಪ್ರೇಮಬದ್ಧಾ ಮಧುಮುಖೀ ಮನೋಜ್ಞಾ ಮಂದಗಾಮಿನೀ ।
ಕಾಮಿನೀ ರಮಿತಾ ರಾಮಾ ನಿಷ್ಠಾ ಚ ಅತಿಕೃಶೋದರೀ ॥೧೪॥

ವರಾಂಗನಾಽಥ ಬಿಂಬೋಷ್ಠೀ ವೇಲಾವಲಯ ಭೂಷಣಾ ।
ವಲ್ಲವೀ ರಣಿತಾ ವಾಗ್ಮೀ ವರಭೇದಾ ವಿನೋದಿನೀ ॥೧೫॥

ಬಲೋನ್ನತಾ ಬಲಾಕಾ ಚ ಪಾವನೀ ಪಾ(ಚಿ)ವಿಕಾ ಪರಾ ।
ಪರೋದಯಾ ದಯಾವೇದೀ ದೇವತಾ ಲಲನಾ ಲತಾ ॥೧೬॥

ಆನಂದಭದ್ರಾ ಭದ್ರಾ ಗೌಃ ಭ(ದ್ರ)ದ್ರಾ ಭಾವಾ ವಿಲಾಸಿನೀ ।
ಅಂಗದಾಽನಂಗದಾ ಧಾತ್ರೀ ಧರ್ಮಪಾ ತ್ರಿವರಾ ಹರೇಃ ॥೧೭॥

ಮಾಧವೀ ಮಂದಗಾ ಗಂಗಾ ಮಂಜರೀ ಪಾರ್ವತೀ ತಥಾ ।
ಪರಾ ತಾರಾ ಪರೇಶಾ ಚ ಪರಮಾ ಸುರಮಾ ಪರಾ ॥೧೮॥

ಸಮೋಷ್ಣೀ ಸಮುಕರ್ಣಾ ಚ ಕಾಮಿನೀ ರತಿ ಯಾಮಿನೀ ।
ಪಂಜಿಕಾ ಮದನಪ್ರಾಣಾ ಸಾಂಜನೀ ಮದಭಾವಿನೀ ॥೧೯॥

ಚಂದ್ರಾವಲೀ ಶಶಿಕಲಾ ಯೋನಿಯುಕ್ತಾ ಮನೋರಮಾ ।
ಭದ್ರಾವತೀ ಭಗವತೀ ತತಃ ಸೌದಾಮಿನೀ ಮತಾ ॥೨೦॥

ಚಂಪಾವತೀ ಚಂಪಾಕಲಿಃ ಪರಾ ನೀರವತೀ ಪ್ರಮಾ ।
ಮಾನಿನೀ ಮದನೋತ್ಸಾಹಾ ತಥಾ ಮಂದಾಲಸಾ ಪರಾ ॥೨೧॥

ಪಟ್ವೀ ಪಾಟೋಲಿಕಾ ಷಡ್ಗ ಖಂಡಿತಾ ಮನ್ಮಥೋಜ್ವಲಾ ।
ವರೂಥಿನೀ ವನಲತಾ ವ್ರಜವಲ್ಲೀ ತಿಲೋತ್ತಮಾ ॥೨೨॥

ರಸಾ ಗಂಧರ್ವಿಣೀ ಭಿಜ್ಯಾ ವಜ್ರಾ ಭೋಗಪ್ರದಾಯಿನೀ ।
ವೈಕುಂಠ ಮಂಜರೀ ರುಕ್ಮಾ ತಥಾ ರುಕ್ಮವತೀ ಮತಾ ॥೨೩॥

ಕುಂಜರೀ ಭದ್ರರೇಖಾ ಚ ಹರಿಣೀ ಭದ್ರಲೇಖಿಕಾ ।
ಚರಿತ್ರಾ ಚಂದ್ರತಿಲಕಾ ಕಾತರಾಕ್ಷೀ ಸುಮಂದಿರಾ ॥೨೪॥

ಚಿತ್ರಾಂಗಾ ತುಂಗವಿದ್ಯಾ ಚ ಮಂಜುಮೇಧಾ ರಸಾಲಿಕಾ ।
ಸೌರಸೇನೀ ಸುಗಂಧಾ ಚ ಸುಮಧ್ಯಾ ತನುಮಧ್ಯಮಾ ॥೨೫॥

ಗುಣಚೂಡಾ ಮೇದಿನೀ ಚ ಕರಿಣೀ ರಾಗವೇಲಿಕಾ ।
ಮಂಜುಕೇಶೀ ಮಂಜುವಕ್ತ್ರಾ ತಥಾ ಕಂದರ್ಪಸುಂದರೀ ॥೨೬॥

ಸುಸಂಗತಾ ಮಧುಸ್ಯಂದಾ ಇಂದುಲೇಖಾ ಮನೋಜವಾ ।
ಪರಂಮತಾ ಅತಿವಿನತಾ ಪ್ರಮೀಲಾ ಪಟುಭಾಷಿಣೀ ॥೨೭॥

ಪರಾತ್ಮಿಕಾ ಪರೋತ್ಕರ್ಷಾ ಕಲಿತಾ ಅಚಲಗಾಮಿನೀ ।
ಭಾರಹಾ ವರಮಾಲಾ ಚ ವರಾರೋಹಾ ತಿಲೋತ್ತಮಾ ॥೨೮॥

ನಾಮನೇತ್ರಾ ಚ ಸೋನ್ಮೇಷಾ ಚಂಚಲಾಚಲಭಾಷಿಣೀ ।
ಚಲಕ್ರೀಡಾ ಚಲಾತ್ಮಾ ಚ ಚಕ್ಷಣೀ ಚತುರಾನನಾ ॥೨೯॥

ಪ್ರಾಣಪಾತ್ರಾ ಪರಪ್ರಾಣಾ ರಮಣೀ ಪರಪಾವನೀ ।
ಪಟೋಚ್ಚಾ ಲಂಬಕೇಶೀ ಚ ಕಲಾಭಾವಾ ಕಲಾಂಜನೀ ॥೩೦॥

ಕಾರ್ಯಪಟ್ವೀ ಪರಪ್ರೀತಾ ಪರಕಾಮಾ ಪರಂಮುದಾ ।
ಯಾಮಿನೀ ಜನಿತಾಶೇಷಾ ಪತಗಾ ರತಿಚಂಚಲಾ ॥೩೧॥

ಯಶಃಪರಾ ಯಶೋಧನಾ ಜಲಜಾಕ್ಷೀ ಜಯಪ್ರದಾ ।
ಯಾಮಿತಾ ಯಮಿತಾ ಕಾಮಾ ಬಾಲಭಾವಾ ರಸಾಕರಾ ॥೩೨॥

ಮಂಜುಪಾಣಿಃ ಮಂಜುಪದಾ ವರದೀಪ್ತಿಃ ಮನೋರಮಾ ।
ಕಂಜನಾಭಿಃ ಅಥೋ ನಾಮಾ ಕಾಮರಂಗವಶಂಗತಾ ॥೩೩॥

ಭಾನುಕಾಭಾ ವೀತಬಲಾ ಭೀರುಭಾವಾ ಪ್ರಮೋದಿನೀ ।
ವರಾಂಗನಾ ವರಾಮೋದಾ ವನಬಂಧುಃ ವನೋತ್ಸವಾ ॥೩೪॥

ವನಭಾವಾ ವನಮತಾ ವನಮಂಜುಃ ವನಾಂಬುಜಾ ।
ವನಭೂಃ ವನಜಾ ಯೋಷಾ ಘೋಷಮಂಜುವ್ರಜಾ ಬಲಾ ॥೩೫॥

ವ್ರಜಾಂಗನಾ ವ್ರಜವಧೂಃ ವ್ರಜಕೇಲಿಃ ವ್ರಜೋತ್ಸವಾ ।
ವ್ರಜಬಾಲಾ ವ್ರಜೇಶಾ ಚ ವ್ರಜೇಶಪರಮಪ್ರಿಯಾ ॥೩೬॥

ಘೋಷವೃಂದಾ ಘೋಷಲತಾ ಘೋಷರಾಜವಿಲಾಸಿನೀ ।
ಘೋಷನಂದಾ ನಂದಕಂದಾ ನಿತ್ಯಾನಂದವಿನೋದಿನೀ ॥೩೭॥

ಭಾನುವೃಂದಾ ಚಂದ್ರವೃಂದಾ ಕಾಮವೃಂದಾ ಕಲಾಪಟುಃ ।
ಕಿಶೋರೀ ನಾಗರೀ ನೇತ್ರೀ ನಯಕಾಂತಾ ನಯಾನುಗಾ ॥೩೮॥

ನೀತಿವಾಙ್ಮಯನಾ ಕಾಂತಾ ತ್ವಲಯಾ ಚ ಅಲಯೋದಯಾ ।
ಸರ್ವಯೂಥಪ್ರಧಾನಾ ಚ ಪರಯೂಥಾ ವಿನೋದಿನೀ ॥೩೯॥

---

(ಮೇಲೆ ಕಂಡ ಶ್ಲೋಕಗಳಲ್ಲಿ ಅಥ ಚ ಮುಂತಾದ ಅವ್ಯಯಗಳ ಹೊರತು

ವಿಶೇಷಾ ವಿಶಿಖಾ ವಿಶ್ವಾ ಗುಣಾ ಗುಣವತೀ ಶುಭಾ ।
ಇತ್ಯಾದ್ಯಾ ಯೂಥಮುಖ್ಯಾಶ್ಚ ಯೂಥೇ ಲಕ್ಷಾಭಿಧೇ ಚರಾಃ ॥೪೦॥

ಅಥಾ ಪರಾ ರಾಧಿಕಾಯಾಃ ಸಖ್ಯಃ ಶಶ್ವನ್ಮನೋರಮಾಃ ।
ವಿಮಲಾ ರಾಧಿಕಾ ಭೃಂಗೀ ನಿಭೃತಾ ಅಭಿಮತಾ ಪರಾ ॥೪೧॥

ತಥಾಃಷ್ಟೌ ಸದೃಶಾಸ್ತಸ್ಯಾವರಾಃ ಸಖ್ಯಸ್ತಥಾ ಪರಾಃ ।
ಶಾರದಾ ಜನನೀ ಯಸ್ಯಾಃ ಪತಿರ್ನಾ ಕೀರ ಸಂಜ್ಞಿತಃ ॥೪೨॥

ತಾಂಬೂಲಹೃತ್ಸ ಕರುಣಾ ಪ್ರಗಲ್ಭಾ ಲಲಿತಾ ವರಾ ।
ದ್ವಿತೀಯಾ ತು ವಿಶಾಖೇತಿ ದೇವೀ ವಿದ್ಯಾರಸಾಲಯಾ ॥೪೩॥

---

ಉಳಿದ ಸಮಸ್ತ ಆಕಾರಾಂತ ಈಕಾರಾಂತ ಶಬ್ದಗಳು ಪ್ರಧಾನರಾದ ಗೋಪಿಕಾಸ್ತ್ರೀಯರ ಹೆಸರುಗಳನ್ನು ಬೋಧಿಸುತ್ತವೆ ಎಂದು ತಿಳಿಯತಕ್ಕದ್ದು.) ||೨-೩೯||

ಮೇಲೆ ಹೇಳಿದ ಈ ಗೋಪಿಕಾಸ್ತ್ರೀಯರು, ಲಕ್ಷ ಗೋಪಿಕಾಸ್ತ್ರೀಯರಿಂದ ಕೂಡಿಕೊಂಡಿರುವ ಪ್ರತಿಯೊಂದು ಸಮುದಾಯದಲ್ಲಿಯೂ ಪ್ರಧಾನರಾಗಿರುವರು. ||೪೦||

ಎಲೈ ಬ್ರಹ್ಮನೇ, ಇನ್ನು ಮುಂದೆ ರಾಧಿಕೆಯೆಂಬ ಗೋಪಿಕಾಸ್ತ್ರೀಯ ಸಖಿಯರಾದ ಇತರ ಸ್ತ್ರೀಯರ ಹೆಸರುಗಳನ್ನು ಹೇಳುವೆನು. ಇವು ರಾಧಿಕೆಯ ಆರು ಸಖಿಯರ ಹೆಸರುಗಳಾಗಿರುತ್ತವೆ. ||೪೧||

ಇನ್ನು ಮುಂದೆ ರಾಧಿಕೆಗೆ ಸದೃಶರಾದ ಶ್ರೇಷ್ಠರಾದ ಎಂಟು ಜನ ಸಖಿಯರ ಹೆಸರುಗಳನ್ನು ಹೇಳುವೆನು. ಕೇಳುವವನಾಗು. ಆ ಎಂಟು ಮಂದಿ ಸಖಿಯರಲ್ಲಿ ಮೊದಲನೆಯವಳೂ, ಮನೋಹರಳೂ, ತಾಂಬೂಲಹಾರಿಣೀ ಎಂಬ ನಾಮಧೇಯ ಉಳ್ಳವಳೂ ಆಗಿರುತ್ತಾಳೆ. ಅವಳ ಜನನಿಯು ಹೆಸರು ಶಾರದೆಯೆಂದೂ, ಪತಿಯ ಹೆಸರು ಕೀರ ಎಂದೂ ಇರುತ್ತದೆ. ||೪೨||

ಎರಡನೆಯವಳು ಸಕಲ ವಿದ್ಯೆಗಳಿಗೂ ಮತ್ತು ಶೃಂಗಾರಾದಿ ರಸಗಳಿಗೂ ನಿಧಿಪ್ರಾಯಳಾಗಿ ವಿಶಾಖಾ ಎಂಬ ಹೆಸರನ್ನು ಪಡೆದ ದೇವಿಯಾಗಿರುತ್ತಾಳೆ. ||೪೩||

ತಾರಾವಲೀ ಧರಾಸ್ತಿಸ್ರಃ ಪತ್ನ್ಯಸ್ತಾಸಾಂ ತು ಪಾವನಾಃ ।
ಕೃಷ್ಣಮಾಯಾ ವನಸರಃ ಸರ್ವಂ ವಿಶ್ವೈಕ ಪಾವನಂ ॥೪೪॥

ನಾನಾರ್ಥದಕ್ಷಿಣಸ್ತಸ್ಯಾಃ ಪತಿರ್ವಚ್ಛವಸಂಜ್ಞಿತಃ ।
ಸಾಮ ದಾನಂ ತತೋ ಭೇದೋ ಭಯಾದಿಷ್ವಿತಿ ಸಂಮತಂ ॥೪೫॥

ನಾನಾವಸ್ತ್ರ ಪ್ರಯೋಗಾ ಸಾ ಪ್ರಗಲ್ಭಾ ಪರಮಾ ಮತಾ ।
ತೃತೀಯಾ ಚಂಪಕಲತಾ ಚಂಪಕಾಂಗೀ ಸುಭೂಷಣಾ ॥೪೬॥

ನೀಲಪ್ರಭ ದುಕೂಲಾ ಚ ಪಿತಾ ವಾಮುಸ್ತಥೈವ ಚ ।
ಮಾತಾ ಚ ವಾಟಿಕಾ ತಸ್ಯಾಃ ಪತಿಶ್ಚಂಡಾಕ್ಷ ಏವಚ ॥೪೭॥

ಸೂಚಿತಶ್ಚಾಧಿಕಾರೋಽಸ್ಯಾಃ ಪಾಕಭೇದೇಽಧಿಕಾರಿಣೀ ।
ಮಿಷ್ಟವಸ್ತು ಪ್ರದಾನೇನ ಸಾ ಹರೇಃ ಪ್ರೀತಿವರ್ಧಿನೀ ॥೪೮।

---

ತಾರಾವಳಿ (ನಕ್ಷತ್ರಗಳಸಾಲು) ಎಂಬ ಹಾರವನ್ನು ಧರಿಸಿರುವ ಈ ಮೂವರು ಹೆಂಡಿತಿಯರೂ ಶುದ್ಧಸ್ವಭಾವರು. ಕೃಷ್ಣಮಾಯಾ ಎಂಬ ಆ ಬೃಂದಾವನದಲ್ಲಿರುವ ಸರೋವರವು ಪ್ರಪಂಚದಲ್ಲಿ ತುಂಬ ಪವಿತ್ರವಾದುದು. ಅವಳ ಒಡೆಯನು ಸಾಮ, ದಾನ, ಭೇದ, ಭಯ ಮುಂತಾದ ಚತುರುಪಾಯಗಳಲ್ಲಿ ಕುಶಲನಾಗಿ, ವಚ್ಛವ ಎಂಬ ಹೆಸರಿನಿಂದ ಪ್ರಸಿದ್ಧನಾಗಿದಾನೆ. ಆ ಎರಡನೆಯವಳು ಬಹುಬಗೆಯ ವಸ್ತ್ರಧಾರಣದಲ್ಲಿ ಕುಶಲಳಾಗಿ ತುಂಬ ಬುದ್ಧಿಮತೀ ಎನಿಸಿಕೊಂಡಿರುತ್ತಾಳೆ. ||೪೪-೪೫||

ಮೂರನೆಯವಳು ಸಂಪಿಗೆಯ ಹೂವಿನಂತೆ ಮೃದುವಾದ ಅವಯವಗಳುಳ್ಳವಳೂ, ಶೋಭನವಾದ ಒಡವೆಗಳನ್ನು ಧರಿಸುವವಳೂ, ನೀಲವರ್ಣವುಳ್ಳ ರೇಷ್ಮೆವಸ್ತ್ರವನ್ನು ಉಡುವವಳೂ, ಚಂಪಕಲತಾ ಎಂಬ ನಾಮಧೇಯವನ್ನು ಹೊಂದಿರುವವಳೂ ಆಗಿರುತ್ತಾಳೆ. ಅವಳ ಪಿತೃವಿನ ಹೆಸರು ವಾಮು ಎಂದು ಇರುತ್ತದೆ. ವಾಟಿಕೆ ಎಂಬುವಳು ಅವಳ ಮಾತೃವಾಗಿದ್ದಾಳೆ. ಚಂಡಾಕ್ಷನು ಅವಳ ಪತಿಯಾಗಿರುತ್ತಾನೆ. ಅವಳು ಶ್ರೀಕೃಷ್ಣನ ಪಾಕಶಾಲೆಯಲ್ಲಿ ಪಕ್ವಾನ್ನಗಳನ್ನು ಮಾಡುವವಳಾಗಿ ರುಚಿಕರವಾದ ಭಕ್ಷ್ಯಭೋಜ್ಯಗಳನ್ನು ಕೊಡುವುದರ ಮೂಲಕ ಶ್ರೀಹರಿಗೆ ತನ್ನಲ್ಲಿರುವ ಪ್ರೀತಿಯನ್ನು ಅಭಿವೃದ್ಧಿಗೊಳಿಸುವವಳಾಗಿರುತ್ತಾಳೆ. ||೪೬-೪೭-೪೮||

**ಚಿತ್ರಾ ದೇವೀ ಚತುರ್ಥಾ ಚ ಕುಂಕುಮಾಂಗೀ ಮನೋರಮಾ ।**
**ಅರುಣಾ ಕರುಣಾದ್ರಾ ಸ್ಯಾತ್ಪಿತಾಽಸ್ಯಾಶ್ಚತುರಃ ಸ್ಮೃತಃ ॥೪೯॥**

**ಮಾತಾಽಸ್ಯಾಶ್ಚರ್ವಿಕಾನಾಮ ಪತಿರಸ್ಯಾಶ್ಚ ಪೀಠರಃ ।**
**ತ್ರಿಕಾಲಜ್ಞಾನ ಸಂಪನ್ನಾ ಜ್ಯೋತಿಶ್ಶಾಸ್ತ್ರ ವಿಶಾರದಾ ॥೫೦॥**

**ಪಶುವಿದ್ಯಾ ವಿದಗ್ಧಾ ಚ ಪಾನಭೋಜ್ಯ ವಿದಾಮ್ವರಾ ।**
**ಸುಗಂಧ ಜಲಕಾರ್ಯೇ ವಾ ಅಧಿಕಾರವತೀ ಚ ಸಾ ॥೫೧॥**

**ಪಂಚಮೀ ತುಂಗವಿದ್ಯಾ ಚ ಸುಗಂಧಾ ಕುಂಕುಮಾಽಷ್ಟಮೀ**
**ಪಟ್ಟಮಂಡಲ ವಸ್ತ್ರೇಷು ಅತಿದಕ್ಷಾ ಮನೋಹರಾ ॥೫೨॥**

**ಪಿತಾ ಪೌಷಕಸಂಜ್ಞೋಽಸ್ಯಾ ಮಾತಾ ಮೇಧಾ ಪತಿಸ್ತಥಾ ।**
**ವಾಣೀ ಶಾಖಾಶ್ಚಾಧಿಕೃತಾಃ ಸರ್ವಶಾಸ್ತ್ರಾರ್ಥ ವೇದನೇ ॥೫೩॥**

---

ನಾಲ್ಕನೆಯ ಸಖಿಯು ಚಿತ್ರಾದೇವಿ ಎಂಬ ಹೆಸರುಳ್ಳವಳು. ಕುಂಕುಮದಂತೆ ಆರಕ್ತವಾದ ಅವಯುವಗಳುಳ್ಳವಳೂ, ಕಾರುಣ್ಯಪೂರಿತಳೂ ಆಗಿದ್ದಾಳೆ. ಇವಳ ತಂದೆಯ ಹೆಸರು ಚತುರ ಎಂಬುದಾಗಿಯೂ, ತಾಯಿಯ ಹೆಸರು ಚರ್ವಿಕೆ ಎಂದೂ, ಪತಿಯ ಹೆಸರು ಪೀಠರ ಎಂದೂ ಇರುತ್ತದೆ. ಇವಳು ಜ್ಯೋತಿಶ್ಶಾಸ್ತ್ರವನ್ನು ತಿಳಿದವಳೂ, ತ್ರಿಕಾಲಜ್ಞಾನವುಳ್ಳವಳೂ, ಪ್ರಾಣಿಶಾಸ್ತ್ರವನ್ನು ಬಲ್ಲವಳಾಗಿಯೂ, ರುಚಿಕರವಾದ ಪಾನೀಯಗಳನ್ನೂ ಮತ್ತು ಭೋಜ್ಯಪದಾರ್ಥಗಳನ್ನು ತಯಾರಿಸುವ ವಿಧಾನವನ್ನು ತಿಳಿದವಳಾಗಿಯೂ ಇರುತ್ತಾಳೆ. ಅವಳು ಶ್ರೀಕೃಷ್ಣನ ಮನೆಯಲ್ಲಿ ಸುಗಂಧಯುಕ್ತವಾದ ಪನ್ನೀರು ಜಲವನ್ನು, ಅತ್ತರನ್ನೂ, ಮಾಡುವ ಅಧಿಕಾರವನ್ನು ಹೊಂದಿದವಳಾಗಿದ್ದಾಳೆ. ॥೪೯-೫೦-೫೧॥

ಐದನೆಯ ಸಖಿಯು ತುಂಗವಿದ್ಯಾ ಎಂಬ ನಾಮಧೇಯವನ್ನುಳ್ಳವಳಾಗಿರುವಳು. ಇವಳು ಎಂಟನೆಯವಳಂತೆ ಸುಗಂಧ ಮುಖವಾಸನೆಯುಳ್ಳ ಕುಂಕುಮದಂತೆ ಆರಕ್ತವರ್ಣವಾದ ಶರೀರವುಳ್ಳವಳಾಗಿಯೂ, ಪಟ್ಟವಸ್ತ್ರಗಳ ಅಲಂಕಾರದಲ್ಲಿ ಅತಿ ಚತುರಳಾಗಿಯೂ ಮತ್ತು ಮನೋಹರಳಾಗಿಯೂ ಇರುವಳು. ಇವಳ ತಂದೆಯ ಹೆಸರು ಪೌಷಕನೆಂದೂ, ತಾಯಿಯ ಹೆಸರು ಮೇಧಾ ಎಂದೂ, ಪತಿಯ ಹೆಸರು ಪೌಷಕನೆಂದೂ ಇರುತ್ತದೆ. ಇವಳು ಸಕಲ ವಿದ್ಯೆಗಳನ್ನೂ ಅರಿತವಳಾಗಿ

**ಸಂಗೀತಸಂಗನಿರತಾ ವೀಣಾವಾದ ಪಟೀಯಸೀ ।**
**ಸಂಧಿಕಾರ್ಯೇ ಪ್ರಗಲ್ಭಾ ಸಾ ಕ್ಷಣದಾ ಸುವಿಲಾಸಿನೀ ॥೫೪॥**

**ಇಂದುಲೇಖಾ ತತಃ ಷಷ್ಠೀ ಹರಿತಾಲ ಸಮಾನನಾ ।**
**ಸರ್ವಾಂಗ ಶೋಭನಾ ಸಾ ಹಿ ದಾಡಿಮೀ ಕುಸುಮಾಂಶುಕಾ ॥೫೫॥**

**ಅತ್ಯಂತ ಸುಂದರೀ ಕಾಂತಾ ವಾವದೂಕಾ ವಿಲಾಸಿನೀ ।**
**ಸಾಗರಸ್ತು ಪಿತಾ ತಸ್ಯಾ ಮಾತಾ ವೇಲಾ ಮಹೋದಯಾ ॥೫೬॥**

**ದುರ್ಬಲಸ್ತು ಪತಿಸ್ತಸ್ಯಾಃ ಕಾಮಶಾಸ್ತ್ರ ವಿಶಾರದಾ ।**
**ವಶೀಕರಣಮಂತ್ರೇಷು ತ್ವತಿ ಸೌಭಾಗ್ಯಮಂತ್ರಿತಾ ॥೫೭॥**

**ಲೇಪಸ್ಯ ಸಾಧನೇ ದೂತೀ ಕರ್ಮಣ್ಯಗ್ರ್ಯಾ ವಿಚಕ್ಷಣಾ ।**
**ಭಾಂಡಾಗಾರಸ್ಥ ರಕ್ಷಾದಿ ಕರ್ಮಣ್ಯಪ್ಯಧಿಕಾರಿಣೀ ॥೫೮॥**

---

ಸರ್ವಶಾಸ್ತ್ರಗಳ ಅರ್ಥಗಳನ್ನು ತಿಳಿಯುವುದರಲ್ಲಿ ಚತುರಳು. ಇವಲ್ಲದೆ ಸಂಗೀತದಲ್ಲಿ ಆಸಕ್ತಳಾಗಿಯೂ, ವೀಣೆಯನ್ನು ನುಡಿಸುವುದರಲ್ಲಿ ಚಟುವಟಿಕೆಯುಳ್ಳವಳೂ, ಸಂಧಿಕಾರ್ಯದಲ್ಲಿ, ಎಂದರೆ ಪತಿಯು ಕೋಪಗೊಳ್ಳಲು ಅವನ ಕೋಪವನ್ನು ಹೋಗಲಾಡಿಸಿ ಅವನೊಡನೆ ಪ್ರೀತಿಯನ್ನು ಬೆಳೆಸುವ ಕಾರ್ಯದಲ್ಲಿ, ಚತುರಳೂ, ಹರ್ಷವನ್ನುಂಟುಮಾಡುವವಳೂ, ವಿಲಾಸವತಿಯೂ ಆಗಿರುವಳು. ॥೫೨-೫೩-೫೪॥

ಆರನೆಯ ಸಖಿಯು ಇಂದು ಲೇಖಾ ಎಂಬ ನಾಮಧೇಯವುಳ್ಳವಳಾಗಿರುವಳು. ಇವಳು ಹರಿತಾಲಕ್ಕೆ ಸದೃಶವಾದ ಮುಖವುಳ್ಳವಳಾಗಿಯೂ ಸಕಲ ದೇಹಾವಯವಗಳಿಂದಲೂ ಅತಿಮನೋಹರಳಾಗಿಯೂ, ದಾಳಿಂಬೆಯ ಹೂವಿನಂತೆ ರಕ್ತವರ್ಣವುಳ್ಳ ಸೀರೆಯುಳ್ಳವಳಾಗಿಯೂ, ಅತಿ ಸುಂದರಳಾಗಿಯೂ, ಕಾಂತಿಯುಕ್ತಳೂ, ಮಾತನಾಡುವುದರಲ್ಲಿ ಚತುರಳೂ, ವಿಲಾಸವತಿಯೂ ಆಗಿ ಇರುವಳು. ಇವಳ ತಂದೆಯ ಹೆಸರು ಸಾಗರ ಎಂಬುದಾಗಿಯೂ, ತಾಯಿಯ ಹೆಸರು ವೇಲಾ ಎಂದೂ, ಪತಿಯ ಹೆಸರು ದುರ್ಬಲನೆಂದೂ ಇರುತ್ತದೆ. ಇವಳು ಕಾಮಶಾಸ್ತ್ರದಲ್ಲಿ ವಿಶಾರದಳಾಗಿಯೂ, ವಶೀಕರಣ ಮಂತ್ರವನ್ನು ಚೆನ್ನಾಗಿ ತಿಳಿದವಳಾಗಿಯೂ, ಸುಗಂಧ ದ್ರವ್ಯಗಳ ಲೇಪನದಲ್ಲಿ ಚತುರಳೂ, ದೂತಿಯ ಕೆಲಸಗಳಲ್ಲಿ ನಿಪುಣಳೂ ಆಗಿರುತ್ತಾ ಬೊಕ್ಕಸದಲ್ಲಿರುವ

**ಸಪ್ತಮೀ ರಂಗದೇವೀ ತು ಪದ್ಮಕಿಂಜಲ್ಕಭಾಸುರಾ ।**
**ಜಾತೀ ಪುಷ್ಪಾಂಶುಕಾ ತಸ್ಯಾ ರಂಗಸಾರಃ ಪಿತಾ ಮತಃ ॥೫೯॥**

**ಮಾತಾ ಚ ಕರುಣಾ ತಸ್ಯಾಃ ಪತಿರ್ವಕ್ರೇಕ್ಷಣಃ ಸ್ಫುಟಂ ।**
**ಅನುಲೇಪನ ಗಂಧೇಷು ಧೂಪವ್ಯಜನ ಕರ್ಮಸು ॥೬೦॥**

**ಸ್ರಗಾದಿರಚನಾಯಾಂ ತು ಸುಂದರೀ ಯಾಽಧಿಕಾರಿಣೀ ।**
**ಮಮತಾ ಭಗಿನೀ ತಸ್ಯಾ ರಾಧಿಕಾಯಾಶ್ಚ ಕೃತ್ರಿಮಾ ॥೬೧॥**

**ದೇವಬಂಧುಃ ಪಿತಾ ತಸ್ಯಾಃ ಸುದೇವೀ ಜನನೀ ಶುಭಾ ।**
**ಪತಿಸ್ತಸ್ಯಾಃ ಖಲೇಹಶ್ಚ ಕೋಪನಖ್ಯಾತಿಮಾಶ್ರಿತಃ ॥೬೨॥**

---

ಅಮೂಲ್ಯವಾದ ಧನಕನಕ ವಸ್ತುಗಳನ್ನು ರಕ್ಷಿಸುವ ಅಧಿಕಾರವನ್ನು ಹೊಂದಿರುವವಳೂ ಆಗಿರುತ್ತಾಳೆ. ॥೫೫-೫೬-೫೭-೫೮॥

ಏಳನೆಯ ಸಖಿಯ ಹೆಸರು ರಂಗದೇವೀ ಎಂದು ಇರುತ್ತದೆ. ಇವಳು ಕಮಲ ಪುಷ್ಪದ ಕೇಸರಗಳಂತೆ ದೇಹಕಾಂತಿಯುಳ್ಳವಳಾಗಿಯೂ, ಜಾಲೀಪುಷ್ಪದ ವರ್ಣದಿಂದ ಕೂಡಿದ ವಸ್ತ್ರವುಳ್ಳವಳಾಗಿಯೂ ಇರುವಳು. ಇವಳ ತಂದೆಯ ಹೆಸರು ರಂಗಸಾರನೆಂದೂ, ತಾಯಿಯ ಹೆಸರು ಕರುಣಾ ಎಂದೂ, ಪತಿಯ ಹೆಸರು ವಕ್ರೇಕ್ಷಣನೆಂದೂ ಆಗಿರುವುದು. ಇವಳು ಅಂಗಗಳಿಗೆ ಲೇಪಿಸಲು ಯೋಗ್ಯವಾದ ಸುಗಂಧದ್ರವ್ಯಗಳನ್ನು ಸಿದ್ಧಪಡಿಸುವುದರಲ್ಲಿಯೂ ಮತ್ತು ಧೂಪದ ಕೆಲಸದಲ್ಲಿಯೂ ಅಲ್ಲದೆ ಚಾಮರವನ್ನು ಬೀಸುವಿಕೆ ಮೊದಲಾದ ಕೆಲಸಗಳಲ್ಲಿ ಕುಶಲಳಾಗಿಯೂ, ಪುಷ್ಪಮಾಲಿಕೆಗಳನ್ನು ರಚಿಸುವ ಅಧಿಕಾರವನ್ನು ಹೊಂದಿರುವವಳೂ ಆಗಿರುತ್ತಾಳೆ. ॥೫೯-೬೦॥

ಎಂಟನೆಯ ಸಖಿಯು ಮಮತಾ ಎಂಬ ನಾಮಧೇಯವುಳ್ಳವಳೂ, ರಾಧಿಕೆಯ ಕೃತ್ರಿಮ ಸಹೋದರಿಯೂ ಆಗಿರುತ್ತಾಳೆ. ಇವಳ ತಂದೆಯ ಹೆಸರು ದೇವಬಂಧು ಎಂಬುದಾಗಿಯೂ, ತಾಯಿಯ ಹೆಸರು ಸುದೇವೀ ಎಂದೂ, ಪತಿಯ ಹೆಸರು ಖಲೇಹನೆಂದೂ ಆಗಿರುತ್ತದೆ. ಆ ಖಲೇಹನು ಕೋಪನನೆಂಬ ಹೆಸರಿನಿಂದಲೂ ಪ್ರಸಿದ್ಧನಾಗಿರುವನು. ॥೬೧-೬೨॥

ಅಂಜನಾಭ್ಯಂಗಕುಶಲಾ ಕೇಶಸಂಸ್ಕಾರಕಾರಿಣೀ ।
ತನುರೂಪಾಽತಿಸುಖದಾ ಕೋಮಲಾಂಗೀ ಮನೋಹರಾ ॥೬೩॥

ಗಂಡೂಷಕ್ಷೇಪ ಪಾತ್ರಾದಿಷ್ವಧಿಕಾರ ಪರಾಯಣಾ ॥೬೪॥

ಇತ್ಯಷ್ಟೌ ವೈ ರಾಧಿಕಾ ಸೇವಿಕಾ ಯಾಃ
ಯಥಾಶ್ರೇಷ್ಠಾ ಗೋಪಿಕಾಃ ಸುಪ್ರತಿಷ್ಠಾಃ ।
ಕುಂಜೇ ಕುಂಜೇ ಸ್ವೇಚ್ಛಯಾ ತಾಶ್ಚರಂತ್ಯೋ
ವಕ್ಷ್ಯೇ ತೇ ಕಿಂ ಚೈಶ್ವರಂ ತದ್ವಿಭುತ್ವಮ್ ॥೬೫॥

ಇತಿ ಶ್ರೀ ಸಕಲಪುರಾಣಸಾರಭೂತೇ ಅದಿಪುರಾಣೇ ವೈಯಾಸಿಕೇ
ನಾರದಶೌನಕಸಂವಾದೇ ಏಕಾದಶೋಽಧ್ಯಾಯಃ

---

ಮಮತಾ ಎಂಬ ಸಖಿಯು ಕಣ್ಣುಗಳಿಗೆ ಅಂಜನ (ಕಾಡಿಗೆ) ವನ್ನು ಲೇಪಿಸುವುದರಲ್ಲಿಯೂ ಮತ್ತು ತೈಲಸ್ನಾನವನ್ನು ಮಾಡಿಸುವುದರಲ್ಲಿಯೂ ಚತುರಳು. ಕೇಶಸಂಸ್ಕಾರದಲ್ಲಿ ಎಂದರೆ ತಲೆಕೂದಲುಗಳನ್ನು ಬಾಚುವುದು ಮುಂತಾದ ಕೆಲಸಗಳನ್ನು ಮಾಡುವವಳೂ, ಅತ್ಯಂತ ಸುಂದರವಾದ ರೂಪವುಳ್ಳವಳೂ ಮತ್ತು ಅತ್ಯಂತ ಸುಖವನ್ನುಂಟುಮಾಡುವವಳೂ, ಮೃದುವಾದ ದೇಹಾವಯವಗಳುಳ್ಳವಳೂ, ಮನೋಹರಳೂ, ಗಂಡೂಷವೆಂಬ ಪಾತ್ರೆಯನ್ನು ಸಿದ್ಧಪಡಿಸುವ ಅಧಿಕಾರವನ್ನು ಹೊಂದಿರುವವಳೂ ಆಗಿರುತ್ತಾಳೆ. (ಗಂಡೂಷಪಾತ್ರೆಯೆಂದರೆ ಉಚ್ಛಿಷ್ಟ ಜಲವನ್ನು ಬಾಯಿಯಿಂದ ಉಗುಳಲು ಆಧಾರಭೂತವಾದ ಪಾತ್ರೆ). ॥೬೩-೬೪॥

ಈ ಪ್ರಕಾರವಾಗಿ ಎಂಟು ಜನ ಶ್ರೇಷ್ಠರಾದ ಗೋಪಿಕಾಸ್ತ್ರೀಯರು ರಾಧಿಕೆಯ ಸಖಿಯರಾಗಿರುತ್ತಾರೆ. ಆ ಸಖಿಯರು ಪ್ರತಿಯೊಂದು ಲತಾಕುಂಜದಲ್ಲಿಯೂ ಸ್ವೇಚ್ಛೆಯಿಂದ ಸಂಚರಿಸುವರು. ಆ ಶ್ರೀಹರಿಯ ನಿರಂಕುಶವಾದ ಪ್ರಭುತ್ವವನ್ನು ಏನೆಂದು ಹೇಳಲಿ! ಅದನ್ನು ವರ್ಣಿಸಿ ಮುಗಿಸಲು ಅಸಾಧ್ಯವಾಗಿರುವುದು. ॥೬೫॥

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ನಾರದಶೌನಕಸಂವಾದದಲ್ಲಿ ಹನ್ನೊಂದನೆಯ ಅಧ್ಯಾಯವು ಸಮಾಪ್ತವಾಯಿತು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

|| ಅಥ ದ್ವಾದಶೋಽಧ್ಯಾಯಃ ||

## ಹನ್ನೆರಡನೆಯ ಅಧ್ಯಾಯವು

|| ಕೀರವರ ಉವಾಚ ||

**ಭೃಂಗಾಧಿಪ ಮಹಾಬುದ್ಧೇ ರಾಧಿಕಾಯಾಃ ಕುಲಂ ವದ ।**
**ಕಸ್ಯ ವಂಶೇ ಸಮುತ್ಪನ್ನಾ ತಸ್ಯಾಃ ಕೋ ಜನಕೋಽಭವತ್ ||೧||**

**ಕಾ ಮಾತಾ ಭ್ರಾತರಃ ಕೇ ವೈ ಮಹ್ಯಮೇತತ್ಪ್ರಕಾಶಯ ।**
**ತ್ವಂ ಹಿ ಬ್ರಹ್ಮವಿದಾಂ ವಿಜ್ಞಃ ಸ್ವೇಚ್ಛಾ ಪಕ್ಷಿತನುಂ ಗತಃ ||೨||**

---

ಕೀರಶ್ರೇಷ್ಠವು ಹೇಳಿತು.—ಓ ಅತ್ಯಂತ ಬುದ್ಧಿಶಾಲಿಯಾದ ಭೃಂಗಾಧಿಪನೇ, ರಾಧಿಕೆಯ ವಂಶವು ಯಾವುದು? ಅವಳು ಯಾರ ವಂಶದಲ್ಲಿ ಹುಟ್ಟಿದಳು? ಮತ್ತು ಅವಳ ಜನಕನಾರು? ಎಂಬ ಅಂಶಗಳನ್ನು ಹೇಳುವವನಾಗು. ||೧||

ಎಲೈ ಭೃಂಗಾಧಿಪನೇ, ರಾಧಿಕೆಯ ತಾಯಿಯು ಯಾರು? ಮತ್ತು ಅವಳ ಸಹೋದರರು ಯಾರು? ಎಂಬ ವಿಷಯಗಳನ್ನೂ ತಿಳಿಸುವವನಾಗು. ನೀನು ಪಕ್ಷಿರೂಪವನ್ನು ಧರಿಸಿರುವವನಾದರೂ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾಗಿ ಸ್ವೇಚ್ಛೆಯಿಂದ ಈ ಪಕ್ಷಿಯ ಆಕೃತಿಯನ್ನು ಹೊಂದಿರುವೆ. ಆದುದರಿಂದ ನೀನು ರಾಧಿಕೆಯ ಕುಲದ ವೃತ್ತಾಂತವನ್ನೂ ತಿಳಿಸಲು ಸಮರ್ಥನಾಗಿರುವೆ. ಕೀರವು ಹೀಗೆಂದು ಪ್ರಾರ್ಥಿಸಲು, ||೨||

|| ಭೃಂಗಾಧಿಪ ಉವಾಚ ||

**ಧನ್ಯೋಽಸಿ ತ್ವಂ ಮಹಾಬುದ್ಧೇ ಮಮಾನುಗ್ರಹ ಕೃದ್ಭವಾನ್ ।**
**ಯತೋಽತಿ ವಿಶದಂ ವಿಷ್ಣೋಶ್ಚರಿತಂ ಪೃಷ್ಟವಾನಸಿ ॥೩॥**

**ಆಸಿಷೇಣೋ ಮಹಾಗೋಪಃ ಪುರಾಽಸೀದತಿಪಾವನಃ ।**
**ಆರ್ಷ್ಟಿಗ್ರಾಮೇಽಸ್ಯ ವಸತಿಃ ಸರ್ವಸಂಪತ್ಸಮೃದ್ಧಿಯುಕ್ ॥೪॥**

**ತಸ್ಯ ಪುತ್ರೋ ಮಹಾಭಾನುಃ ಸ್ವರ್ಭಾನುಶ್ಚ ತದಾತ್ಮಜಃ ।**
**ತಸ್ಯಾಸೀದತಿಪುಣ್ಯಾತ್ಮಾ ವೃಷಬಾಹುಃ ಪರೋದಯಃ ॥೫॥**

**ಮಾತಾಽಸ್ಯ ಮಾನವೀ ನಾಮ್ನೀ ಪಾತಿವ್ರತ್ಯ ಪರಾಯಣಾ ।**
**ತಸ್ಯಾತ್ಮಜಾಸ್ತು ಚತ್ವಾರಃ ಸದಾ ಕೃಷ್ಣೈಕಚೇತಸಃ ॥೬॥**

---

ಭೃಂಗಾಧಿಪತಿಯು ಹೇಳಿತು—ಎಲೈ ಮಹಾಜ್ಞಾನಿಯಾದ ಕೀರಶ್ರೇಷ್ಠನೇ, ನೀನು ಧನ್ಯನು. ನೀನು ವಿಷ್ಣುವಿನ ಚರಿತ್ರೆಯನ್ನೇ ವಿಸ್ತಾರವಾಗಿ ತಿಳಿದುಕೊಳ್ಳುವುದಕ್ಕೋಸ್ಕರ ನನ್ನನ್ನು ಪ್ರಶ್ನೆಮಾಡಿದುದರಿಂದ ನಾನು ಅದನ್ನು ಹೇಳುವುದರಿಂದ ಕೃತಾರ್ಥನಾಗಿ ನಿನ್ನಿಂದ ಅನುಗ್ರಹಿಸಲ್ಪಟ್ಟಿರುವೆನು. ||೩||

ಪೂರ್ವಕಾಲದಲ್ಲಿ ಅತ್ಯಂತ ಶ್ರೇಷ್ಠನೂ, ಧನಕನಕಾದಿ ಸಕಲ ಸಂಪತ್ತುಗಳನ್ನು ಪಡೆದವನೂ ಆದ ಆಸಿಷೇಣನೆಂಬ ಹೆಸರುಳ್ಳ ಗೋಪಾಲಕನಿದ್ದನು. ಅವನು ಆರ್ಷ್ಟಿಗ್ರಾಮವೆಂಬ ಸ್ಥಳದಲ್ಲಿ ವಾಸಿಸುತ್ತಿದ್ದನು. ||೪||

ಆಸಿಷೇಣನಿಗೆ ಮಹಾಭಾನುವೆಂಬ ಹೆಸರುಳ್ಳ ಪುತ್ರನೂ, ಮಹಾಭಾನುವಿಗೆ ಸ್ವರ್ಭಾನುವೆಂಬ ಹೆಸರುಳ್ಳ ಪುತ್ರನೂ,. ಇದ್ದರು. ಸ್ವರ್ಭಾನುವಿಗೆ ಅತಿ ಪುಣ್ಯಶಾಲಿಯೂ ಸಂಪದ್ಯುಕ್ತನೂ ಆದ ವೃಷಭಾನುವೆಂಬ ಪುತ್ರನಿದ್ದನು. ||೫||

ವೃಷಭಾನುವಿಗೆ ಪತಿವ್ರತೆಯೂ, ಮಾನವೀ ಎಂಬ ನಾಮಧೇಯವನ್ನು ಪಡೆದವಳೂ ಆದ ತಾಯಿಯು ಇದ್ದಳು. ಅವಳಿಗೆ ಶ್ರೀ ಕೃಷ್ಣನಲ್ಲಿ ಅನನ್ಯಭಕ್ತರಾದ ನಾಲ್ಕು ಮಂದಿ ಪುತ್ರರಿದ್ದರು. ||೬||

ವೃಷವೃಘ್ನೋರ್ಮನಸ್ಸೌಖ್ಯಃ ಸ್ತೋಕಕೃಷ್ಣಸ್ತಥಾಽಪರಃ ।
ಶ್ರೀದಾಮಾ ಚ ಚತುರ್ಥಸ್ತು ಕನ್ಯೇ ಹಿ ಕೃಷ್ಣವಲ್ಲಭೇ ॥೭॥

ರಾಧಿಕಾಯಮತೇ ಬಾಲೇ ಮಹಾಬುದ್ಧಿ ಬಲೋದಯೇ ।
ತತ್ರಾಪಿ ರಾಧಿಕಾ ಶಶ್ವದತಿ ಪ್ರಾಣಪ್ರಿಯಾ ಹರೇಃ ॥೮॥

ಅಷ್ಟಮ್ಯಾಂ ಭಾದ್ರಶುಕ್ಲಸ್ಯ ಸಾ ಜಾತಾ ರವಿವಾಸರೇ ।
ರಾತ್ರೌ ಪರಾಹ್ಣಸಮಯೇ ಜ್ಯೇಷ್ಠಾ ಯಾಶಾ ೧ತಿಮೇ ಪದೇ ॥೯॥

ಕಿಮಹಂ ವರ್ಣಯೇ ಭಾಗ್ಯಂ ರಾಧಾಯಾಃ ಪರಮಾದ್ಭುತಂ ।
ಬ್ರಹ್ಮಾದಯೋಽಪಿ ನ ವಿದುಃ ಪರಮಾನಂದ ಮಂದಿರಂ ॥೧೦॥

ತತೋ ವಿವಾಹಮಕರೋದ್ವೃಷಭಾನುರ್ಗುಣೋದಯಃ ।
ವೈಶಾಖೇ ಸಿತಪಕ್ಷೇ ಚ ತೃತೀಯಾ ಚಾಕ್ಷಯಾಹ್ವಯಾ ॥೧೧॥

---

ಆ ಪುತ್ರರಲ್ಲಿ ಮೊದಲನೆಯವನ ಹೆಸರು ವೃಷಘ್ನವೆಂದೂ, ಎರಡನೆಯವನು ಮನಸ್ಸೌಖ್ಯನೆಂದೂ, ಮೂರನೆಯವನು ಸ್ತೋಕಕೃಷ್ಣನೆಂದೂ, ನಾಲ್ಕನೆಯವನು ಶ್ರೀದಾಮಾ ಎಂದೂ ಹೆಸರನ್ನು ಪಡೆದವರಾಗಿದ್ದರು. ಇದಲ್ಲದೆ ಮಾನವಿಗೆ ಕೃಷ್ಣಭಕ್ತೆಯರಾದ ಇಬ್ಬರು ಹೆಣ್ಣುಮಕ್ಕಳಿದ್ದರು. ॥೭॥

ಆ ಹೆಣ್ಣುಮಕ್ಕಳಲ್ಲಿ ಮೊದಲನೆಯವಳು ರಾಧಿಕೆ ಎಂಬವಳು, ಕಿರಿಯವಳು ಯಮತಾ ಎಂಬ ಹೆಸರುಳ್ಳವಳೂ ಆಗಿದ್ದರು. ಅವರಿಬ್ಬರೂ ಅತ್ಯಂತ ಬುದ್ಧಿಶಕ್ತಿಯಿಂದ ಕೂಡಿದವರಾಗಿದ್ದರು. ಅದರಲ್ಲಿಯೂ ರಾಧಿಕೆಯು ಶ್ರೀಹರಿಗೆ ಸರ್ವದಾ ಪ್ರಾಣಪ್ರಿಯಳಾಗಿದ್ದಳು. ॥೮॥

ರಾಧಿಕೆಯು ಭಾದ್ರಪದ ಶುದ್ಧ ಅಷ್ಟಮಿಯಲ್ಲಿ ಭಾನುವಾರ ರಾತ್ರಿ ಪರಾಹ್ಣ ಕಾಲದಲ್ಲಿ ಜ್ಯೇಷ್ಠಾನಕ್ಷತ್ರದ ನಾಲ್ಕನೆಯ ಪಾದದಲ್ಲಿ ಜನಿಸಿದಳು. ॥೯॥

ಎಲೈ ಕೀರಶ್ರೇಷ್ಠನೇ, ಅತ್ಯದ್ಭುತವೂ, ಅತಿಶಯವಾದ ಆನಂದಕ್ಕೆ ಕಾರಣವೂ ಆದ ಆ ರಾಧಿಕೆಯ ಭಾಗ್ಯವನ್ನು ಎಷ್ಟೆಂದು ಹೇಳಲಿ? ಅದನ್ನು ವರ್ಣಿಸಿ ಮುಗಿಸಲು ಬ್ರಹ್ಮಾದಿದೇವತೆಗಳೂ ತಿಳಿಯದವರಾಗಿರುತ್ತಾರೆ! ॥೧೦॥

ಬಳಿಕ ಸದ್ಗುಣ ಸಂಪನ್ನನಾದ ವೃಷಭಾನುವು ರೋಹಿಣೀನಕ್ಷತ್ರದಿಂದಲೂ ಮತ್ತು ಕನ್ಯಾಲಗ್ನದಿಂದಲೂ ಕೂಡಿದ ಅಕ್ಷಯತದಿಗೆ ಎಂದು ಪ್ರಸಿದ್ಧಿಯಾದ

**ರೋಹಿಣೀ ಸ್ವರ್ಕ್ಷೆ ಸಂಪೂರ್ಣಾ ಜಾಯಾಲಗ್ನ ಶುಭಾವಹಾ।**
**ಪಾರಿಬರ್ಹಾದಿಕಂ ದತ್ವಾ ವಸ್ತ್ರಮನ್ನಂ ಸಮೃದ್ಧಿಮತ್ ||೧೨||**

|| ಕೀರ ಉವಾಚ ||

**ಶ್ರೀಕೃಷ್ಣಸ್ಯಾನ್ವಯಂ ಬ್ರೂಹಿ ಪುಣ್ಯಾತ್ಪುಣ್ಯತರಂ ಹಿ ಮೇ।**
**ಯಸ್ಯ ಸ್ಮರಣತೋ ಯಾಂತಿ ಪಾಪಾ ಅಪಿ ಶುಭಾಂಗಗತಿಂ ||೧೩||**

|| ಭೃಂಗಾಧಿಪ ಉವಾಚ ||

**ನ ನಿತ್ಯಸ್ಯಾತ್ಮನೋ ಜನ್ಮ ನ ಚ ಕರ್ಮ ಕುಲಂ ಕ್ರಿಯಾ।**
**ತಥಾಽಪಿ ವ್ಯಕ್ತಿಮಾಪನ್ನೋ ಭವೇದ್ಧಿ ಭಗವಾನ್ ಸ್ವಯಂ ||೧೪||**

**ವ್ಯಕ್ತಿದ್ವಾರಾ ತ್ವನೇಕಾತ್ಮಾ ಸ್ವಯಂನ್ವೈ ತತ್ಸ್ವರೂಪಧೃಕ್।**
**ಸ್ವಯಂ ಪಿತಾ ಸ್ವಯಂ ಮಾತಾ ಸ್ವಯಮೇವ ಕುಲಾಕರಃ ||೧೫||**

---

ವೈಶಾಖ ಶುದ್ಧ ತೃತೀಯೆಯ ದಿವಸದಲ್ಲಿ ತನ್ನ ಪುತ್ರಿಯ ವಿವಾಹವನ್ನು ನೆರವೇರಿಸಿದನು. ಆವನು ವಧೂವರರಿಗೆ ಉಡುಗೆರೆ(ಬಳುವಳಿ)ಯನ್ನೂ ಕೊಟ್ಟು ಬ್ರಾಹ್ಮಣರಿಗೆ ವಸ್ತ್ರದಾನ ಮತ್ತು ಅನ್ನದಾನವನ್ನೂ ಸಮೃದ್ಧಿಯಾಗಿ ಮಾಡಿದನು. ||೧೧-೧೨||

ಕೀರವು ಹೇಳಿತು –ಓ ಭೃಂಗರಾಜನೇ, ಯಾವ ಶ್ರೀಕೃಷ್ಣನ ಸ್ಮರಣ ಮಾತ್ರದಿಂದ ಪಾಪಿಷ್ಠರೂ ಸಹ ಸದ್ಗತಿಯನ್ನು ಹೊಂದುವರೋ ಅಂಥಾ ಪುಣ್ಯಕರವಾದ ಶ್ರೀಕೃಷ್ಣನ ವಂಶಾವಳಿಯನ್ನು ಹೇಳುವವನಾಗು. ||೧೩||

ಭೃಂಗಾಧಿಪನು ಹೇಳಿದನು— ಎಲೈ ಕೀರವೇ, ನಿತ್ಯಾತ್ಮಸ್ವರೂಪನಾದ ಭಗವಂತನಿಗೆ ಜನ್ಮವೂ, ಕರ್ಮಾನುಷ್ಠಾನವೂ, ವಂಶವೂ ಕ್ರಿಯೆಯೂ ಇವು ಯಾವುವೂ ವಸ್ತುತಃ ಇರುವುದಿಲ್ಲ. ಆದರೂ ದುಷ್ಟಸಂಹಾರಕನೂ ಶಿಷ್ಟಪರಿಪಾಲಕನೂ ಆದ ಆ ಭಗವಂತನು ಕರ್ಮಾಧೀನವಾಗಿ ಅಲ್ಲದೆ ತನ್ನ ಇಚ್ಛೆಯಿಂದ ಲೋಕಾನುಗ್ರಹಕ್ಕಾಗಿ ದೇಹಾದಿಗಳನ್ನು ಧರಿಸುವವನಾಗುತ್ತಾನೆ. ||೧೪||

ದೇಹವನ್ನು ಧರಿಸಿ ಅವತಾರ ಮಾಡುವುದರ ಮೂಲಕ ಆ ಪರಮಾತ್ಮನು ಅನೇಕ ರೂಪಗಳಿಂದ ಕಾಣಿಸಿಕೊಳ್ಳುವವನಾದರೂ ವಸ್ತುತಃ ಅವನು ತನ್ನ ಸ್ವೇಚ್ಛೆಯಿಂದ ದೇಹವನ್ನು ಹೊಂದಿರುವನೇ ಹೊರತು ಯಾವ ಪುಣ್ಯಪಾಪ

ನಿಭಾತಿ ತತ್ಸ್ವರೂಪೇಣ ಪರಮಾತ್ಮಾ ಸನಾತನಃ ।
ತಥಾಽಪಿ ಕಥಯಾಮ್ಯೇತತ್ತುಭ್ಯಂ ಶ್ರದ್ಧಾಲವೇ ದ್ವಿಜ ॥೧೬॥

ಅನನ್ಯ ಶರಣೇಭ್ಯೋ ಹಿ ರಹಸ್ಯಂ ನೈವ ಗೋಪ್ಯತೇ ।
ಶೃಣುಷ್ವಾವಹಿತಃ ಕೀರ ಸುಗೋಪ್ಯಮಪಿ ತದ್ವದೇ ॥೧೭॥

ಆಭೀರಭಾನುರ್ಗೋಪೇಶೋ ವಸತಿಸ್ಮ ಮಹಾವನೇ ।
ತತ್ಪುತ್ರಶ್ಚಂದ್ರಸುರಭಿಸ್ತಸ್ಯಾಸೀತ್ಸುಶ್ರವಾ ಮಹಾನ್ ॥೧೮॥

ಕಾಲಮೇದುಃ ಸುತಸ್ತಸ್ಯ ಕಾಲಮೇದೋಃ ಸುತಾ ದಶ ।
ಜಯಸೇನೋ ಜಯಬಲೋ ಜಯಕೀರ್ತಿರ್ಯಶೋಧನಃ ॥೧೯॥

ಕಂಠಭಾನುರ್ಮಹಾಬುದ್ಧಿರ್ಮಾನಮೇರುರ್ಮನೋರಥಃ ।
ವರಾಂಗದಶ್ಚಿತ್ರಸೇನಸ್ತಸ್ಯ ಪುತ್ರಾ ಭವನ್ನವ ॥೨೦॥

---

ಕರ್ಮಗಳಿಂದಲೂ ದೇಹವನ್ನು ಹೊಂದಿದವನಲ್ಲ. ಅವನೇ ಪಿತೃಸ್ವರೂಪನೂ, ಮಾತೃಸ್ವರೂಪನೂ ವಂಶಭೂಷಣನೂ ಆಗಿರುವನು. ॥೧೫॥

ಎಲೈ ಪಕ್ಷಿಯೇ, ಈ ಶ್ರೀಕೃಷ್ಣನ ವಂಶಕಥೆಯು ಅತಿ ಗೋಪ್ಯವಾದುದಾದರೂ ಸಹ ಶ್ರದ್ಧಾಯುಕ್ತನಾದ ನಿನಗೆ ಇದನ್ನು ಹೇಳುವೆನು. ಏಕೆಂದರೆ, ಆ ಶ್ರೀಹರಿಯನ್ನೇ ಅನನ್ಯ ಶರಣರಾಗಿ ಯಾರು ಭಜಿಸುವರೋ ಅವರ ವಿಷಯದಲ್ಲಿ ರಹಸ್ಯವಿಷಯವನ್ನೂ ಗುಪ್ತವಾಗಿ ಇಡಲಾಗುವುದಿಲ್ಲ. ಎಲೈ ಕೀರವೇ, ಈ ವಿಷಯವು ಗೋಪ್ಯವಾದುದಾದರೂ ನಿನಗೆ ಅದನ್ನು ಹೇಳುವೆನು. ಸಾವಧಾನವಾಗಿ ಕೇಳುವವನಾಗು. ॥೧೬-೧೭॥

ಪೂರ್ವಕಾಲದಲ್ಲಿ ಒಂದು ದೊಡ್ಡದಾದ ಅರಣ್ಯದಲ್ಲಿ ಗೊಲ್ಲರ ವಂಶಕ್ಕೆ ಸೂರ್ಯನಂತೆ ಇರುವ ಒಬ್ಬಾನೊಬ್ಬ ಗೋಪಾಲಕಶ್ರೇಷ್ಠನು ವಾಸಮಾಡುತ್ತಿದ್ದನು. ಆ ಆಭೀರಭಾನುವಿಗೆ ಚಂದ್ರಸುರಭಿ ಎಂಬ ಮಗನಿದ್ದನು. ಆ ಚಂದ್ರಸುರಭಿಗೆ ಹೆಸರುಳ್ಳ ಮಗನಿದ್ದನು. ॥೧೮॥

ಸುಶ್ರವಸ್ಸಿಗೆ ಕಾಲಮೇದುವೆಂಬ ಪುತ್ರನೂ, ಕಾಲಮೇದುವಿಗೆ, ಜಯಸೇನ, ಜಯಬಲ, ಜಯಕೀರ್ತಿ, ಯಶೋಧನ, ಕಂಠಭಾನು, ಮಹಾಬುದ್ಧಿ, ಮಾನಮೇರು, ಮನೋರಥ, ವರಾಂಗದ ಮತ್ತು ಚಿತ್ರಸೇನ ಎಂಬ ಹತ್ತುಮಂದಿ ಮಕ್ಕಳಿದ್ದರು. ಅವರಲ್ಲಿ ಚಿತ್ರಸೇನನೆಂಬುವನಿಗೆ ಒಂಬತ್ತುಮಂದಿ ಮಕ್ಕಳಿದ್ದರು. ॥೧೯-೨೦॥

ಸುನಂದಶ್ಚೋಽಪನಂದಶ್ಚ ಮಹಾನಂದೋಽಪನಂದನಃ ।
ಕುಲನಂದೋ ಬಂಧುನಂದಃ ಕೇಲಿನಂದೋಽಥ ಸಪ್ತಮಃ ॥೨೦॥

ಅಷ್ಟಮಃ ಪ್ರಾಣನಂದಶ್ಚ ನಂದೋಽಯಂ ಪರಮೋ ಮಹಾನ್ ।
ತಸ್ಯ ಪತ್ನೀ ಯಶೋದಾ ಚ ಮಹಾಭಾಗ್ಯವತೀ ಶುಭಾ ॥೨೨॥

ತಸ್ಯಾಶ್ಚ ಭಕ್ತಿಭಾವೇನ ಭಗವಾನಭವತ್ಸ್ವಯಮ್ ।
ವ್ಯಕ್ತಾನಾಂ ವ್ಯಕ್ತಿಮಾಪನ್ನೋ ನಿತ್ಯಾನಾಂ ನಿತ್ಯದರ್ಶಕಃ ॥೨೩॥

ಅನೇಕರೂಪರೂಪೋಽಸೌ ಸುರೂಪಶ್ಚ ಸನಾತನಃ ।
ಶ್ರೀಕೃಷ್ಣಃ ಕರುಣಾಸಿಂಧುಸ್ತ್ವಧೀರಃ ಸರ್ವಶಕ್ತಿಧೃಕ್ ॥೨೪॥

ವ್ರಜೇ ವ್ರಜೇ ವಿನೋದೀ ಚ ವಿಪಿನೇ ವಿಪಿನೇ ಸುಹೃತ್ ।
ವೈಕುಂಠೇಽಕುಂಠರೂಪೋಽಸೌ ಜಲಶಾಯೀ ಜಲೇ ಸದಾ ॥೨೫॥

---

ಆ ಒಂಬತ್ತುಮಂದಿ ಮಕ್ಕಳಲ್ಲಿ ಅರು ಜನರು ಕ್ರಮವಾಗಿ ಸುನಂದ, ಉಪನಂದ, ಮಹಾನಂದ, ನಂದವ, ಕುಲನಂದ, ಬಂಧುನಂದ ಎಂದು ಹೆಸರುಳ್ಳವ ರಾಗಿಯೂ, ಏಳನೆಯವನು ಕೇಲಿನಂದನೆಂದೂ ಎಂಟನೆಯವನು ಪ್ರಾಣನಂದನೆಂಬ ಹೆಸರುಳ್ಳವನಾಗಿಯೂ ಇದ್ದರು. ಇವರಲ್ಲದೆ ನಂದನೆಂಬುವನು ಮುಖ್ಯನಾಗಿದ್ದನು. ||೨೧||

ಆ ನಂದನಿಗೆ ಮಹಾಭಾಗ್ಯವತಿಯಾದ ಯಶೋದೆಯೆಂಬ ಪತ್ನಿಯಿದ್ದಳು. ಯಶೋದೆಗೆ ಶ್ರೀಹರಿಯಲ್ಲಿರುವ ಭಕ್ತಿಯಿಂದ ಭಗವಂತನು ಅವಳಲ್ಲಿ ಜನ್ಮವನ್ನು ತಾಳಿದನು. ||೨೨||

ಆ ಶ್ರೀಕೃಷ್ಣನು ಜನ್ಮವನ್ನು ತಾಳಿದವರಿಗೆಲ್ಲರಿಗೂ ಜನ್ಮವನ್ನು ಹೊಂದಿದವ ನಂತೆ ಕಾಣುವನು. ಜರಾಮರಣಗಳಿಲ್ಲದೇ ನಿತ್ಯರಾಗಿರುವ ಯೋಗಿಗಳಿಗೆ ನಿತ್ಯಸಂದರ್ಶನವನ್ನು ದಯಪಾಲಿಸುವವನೂ, ಅನೇಕ ರೂಪಗಳನ್ನು ಧರಿಸು ವವನೂ, ಸುಂದರವಾದ ರೂಪವುಳ್ಳವನೂ, ಚಿರಂತನನೂ ಕರುಣಾಸಮುದ್ರನೂ, ನಿಗ್ರಹಾನುಗ್ರಹ ಶಕ್ತಿಯುಳ್ಳವನೂ, ಪ್ರತಿಯೊಂದು ಗೋಷ್ಠದಲ್ಲಿಯೂ ಮತ್ತು ಪ್ರತಿಯೊಂದು ಕಾನನದಲ್ಲಿಯೂ ವಿನೋದಗಳನ್ನು ಅನುಭವಿಸುವವನೂ, ವೈಕುಂಠ ದಲ್ಲಿ ಸದಾ ನೆಲಸಿರುವವನೂ ಮತ್ತು ಸದಾ ಜಲಶಾಯಿಯೂ ಆಗಿರುತ್ತಾನೆ. ||೨೩-೨೪-೨೫||

ಸೃಷ್ಟಿರಿಚ್ಛಾಕೃತಾ ಯಸ್ಯ ಸರ್ವಲೀಲಾಕರೋ ಹರಿಃ ।
ಅನಾವಿರಾವಿಃ ಕುತ್ರಾಪಿ ನ ವ್ರಜೇದಹಿತಃ ಕ್ವಚಿತ್ ॥೨೬॥

ಯೇ ಯೇ ಚ ಸಖಿಭಿಃ ಸಾರ್ಧಂ ನಂದಯಂತೇ ವ್ರಜೌಕಸಃ ।
ಕ್ರೀಡಂತೇ ವಿಪಿನೇ ಗಾವಶ್ಚಾರಯಂತೋ ವನಾಂತರೇ ॥೨೭॥

ತಥಾ ವನೇ ವ್ರಜಸ್ತ್ರೀಭಿಃ ಕೋಟಿಭಿಶ್ಚ ವ್ರಜೌಕಸಃ ।
ಕ್ರೀಡಂತೇ ಬಹುಧಾ ನಿತ್ಯಂ ಕ್ರೀಡಂತೇ ರಾಸಲೀಲಯಾ ॥೨೮॥

ತತ್ರ ಕುಂಜನಿಕುಂಜೇಷು ರಾಧಯಾ ಸಹಿತಃ ಪ್ರಭುಃ ।
ರಾಧಾ ಚ ನಾಯಿಕಾ ಭಾವೈರಾನಂದಯತಿ ವಲ್ಲಭಂ ॥೨೯॥

ಸಂಭೋಗೇ ಯೋಗಕಾಲೇ ಚ ಜಾಯಂತೇ ಚ ಪೃಥಕ್ಪೃಥಕ್ ।
ಸಖ್ಯೇ ಸಖ್ಯಸ್ತಥಾ ಸರ್ವಾಃ ಮಯಾ ಪೂರ್ವಂ ನಿವೇದಿತಾಃ ॥೩೦॥

---

ಶ್ರೀಕೃಷ್ಣನ ಸ್ನೇಹಿತರಾದ ಯಾವ ಗೋಪಾಲರಿದ್ದರೋ ಅವರೆಲ್ಲರೂ ಅವರವರ ಸ್ನೇಹಿತರೊಂದಿಗೆ ಅರಣ್ಯದಲ್ಲಿ ಆಟವಾಡುವವರಾಗಿಯೂ, ಗೋವುಗಳನ್ನು ಮೇಯಿಸುವವರಾಗಿಯೂ ಆನಂದತುಂದಿಲರಾಗುತ್ತಿದ್ದರು. ಹಾಗೆಯೇ ಕೋಟ್ಯಾಂತರ ಸಂಖ್ಯಾಕರಾದ ಅವರು ತಮ್ಮ ತಮ್ಮ ಸ್ತ್ರೀಯರೊಂದಿಗೆ ನಾನಾವಿಧವಾಗಿ ಕ್ರೀಡಿಸುವರು. ಮತ್ತು ರಾಸಕ್ರೀಡೆಯಿಂದ ಆನಂದವನ್ನು ಹೊಂದುವರು. ||೨೭-೨೮||

ಶ್ರೀಕೃಷ್ಣನು ಆ ಅರಣ್ಯದಲ್ಲಿ ಚಿಕ್ಕ ಚಿಕ್ಕ ಲತಾಕುಂಜಗಳಲ್ಲಿ ರಾಧೆಯೊಂದಿಗೆ ಕ್ರೀಡಿಸುವನು. ರಾಧೆಯೂ ಸಹ ಸ್ತ್ರೀಸಹಜವಾದ ಶೃಂಗಾರಗಳಿಂದ ಪ್ರಿಯತಮನನ್ನು ಆನಂದಗೊಳಿಸುವಳು. ||೨೯||

ಎಲೈ ಕೀರನೇ, ನಾನು ಈ ಹಿಂದೆ ಹೇಳಿರುವ ಸಖಿಯರೆಲ್ಲರೂ, ಸಂಭೋಗ ಕಾಲದಲ್ಲಿಯೂ, ರಾಸಕ್ರಿಡೆಯಲ್ಲಿಯೂ ಮತ್ತು ವಿಯೋಗ ಕಾಲದಲ್ಲಿಯೂ ಬೇರೆ ಬೇರೆಯವರಾಗಿ ಸ್ನೇಹದಲ್ಲಿ ಆಗುತ್ತಾರೆ. ||೩೦||

**ನಿತ್ಯಂ ಕ್ರೀಡಾನಿಕುಂಜೇಷು ಕದಾಚಿದ್ವಿಚರನ್ಮಹೀಂ ।**
**ಅನಂತಲೀಲಾಽಸ್ಯ ಹರೇಸ್ತ್ರಿಧಾ ಲೀಲಾಽಸ್ತಿ ನಿತ್ಯದಾ ॥೩೧॥**

|| ಕೀರ ಉವಾಚ ||

**ಸಖಾಯ ಕತಿ ಕೃಷ್ಣಸ್ಯ ತೇಷಾಂ ನಾಮಾನಿ ವಾ ಪುನಃ ।**
**ಬ್ರೂಹಿ ಮೇ ಶ್ರೋತುಮಿಚ್ಛಾಮಿ ತ್ವತ್ತೋಽಹಂ ಮಧುಪಾಧಿಪ॥೩೨॥**

|| ಭೃಂಗ ಉವಾಚ ||

**ಕೋಟಿಸಂಖ್ಯಾಃ ಸಖಾಯಸ್ತು ತೇಷಾಂ ಮುಖ್ಯಾಃ ಹರೇಃ ಪ್ರಿಯಾಃ।**
**ಶತೈಕ ಸಂಖ್ಯಯಾ ಖ್ಯಾತಾ ನಾಮಾನ್ಯೇಷಾಂ ವದಾಮಿ ತೇ ॥೩೩॥**

**ವೃಷವೃಧ್ನಃ ಮನಸ್ಸೌಖ್ಯಃ ಸ್ತೋಕಕೃಷ್ಣಸ್ತಥಾಪರಃ ।**
**ಶ್ರೀದಾಮಾ ವೃಷಭಾನೋಶ್ಚ ಪುತ್ರಾಶ್ಚತ್ವಾರ ಏವ ಚ ॥೩೪॥**

---

ಆ ಶ್ರೀಕೃಷ್ಣನು, ಸದಾ ಕ್ರೀಡಾನಿಕುಂಜಗಳಲ್ಲಿ ಸಂಚರಿಸುವವನೂ ಮತ್ತು ಒಂದಾನೊಂದು ಬಾರಿ ಇತರ ಭೂಭಾಗದಲ್ಲಿ ಸಂಚರಿಸುವವನೂ ಆಗುತ್ತಾನೆ. ಈ ರೀತಿಯಲ್ಲಿ ಆ ಹರಿಗೆ ನಿತ್ಯಸೌಖ್ಯವನ್ನುಂಟುಮಾಡುವ ಲೀಲೆಯು ಮೂರು ವಿಧವಾಗಿರುತ್ತದೆ. ||೩೧||

ಕೀರವು ಹೇಳಿತು.—ಓ ಭೃಂಗಾಧಿಪತಿಯೇ, ಶ್ರೀಕೃಷ್ಣನಿಗೆ ಎಷ್ಟು ಮಂದಿ ಸ್ನೇಹಿತರಿರುವರು? ಮತ್ತು ಅವರ ನಾಮಧೇಯಗಳೇನು? ಎಂಬುದನ್ನು ನಿನ್ನಿಂದ ಕೇಳಬಯಸುತ್ತೇನೆ. ಆದುದರಿಂದ ಈ ವಿಷಯವನ್ನು ಹೇಳುವವನಾಗು. ||೩೨||

ಶ್ರೀಕೃಷ್ಣನಿಗೆ ಒಂದುಕೋಟಿ ಸಂಖ್ಯಾತರಾದ ಮಿತ್ರರಿರುವರು. ಅವರಲ್ಲಿ ನೂರೊಂದು ಮಂದಿ ಪ್ರಧಾನರೂ ಪ್ರಸಿದ್ಧಿಯನ್ನು ಪಡೆದವರೂ ಮತ್ತು ಹರಿಗೆ ಅತ್ಯಂತ ಪ್ರಿಯರಾಗಿಯೂ ಇರುವರು. ಅವರ ನಾಮಧೇಯಗಳನ್ನು ಹೇಳುವೆನು ಕೇಳು. ಎಂದು ಭೃಂಗಾಧಿಪತಿಯು ಹೇಳಲು ಮೊದಲುಮಾಡಿತು. ||೩೩||

ವೃಷಭಾನುವಿನ ಮಿತ್ರರಾದ ವೃಷಧ್ವನು, ನಮಸ್ಸೌಖ್ಯ, ಸ್ತೋಕಕೃಷ್ಣ ಮತ್ತು ಶ್ರೀದಾಮ ಎಂಬ ನಾಲ್ವರು ಗೋಪಾಲಕರು ಶ್ರೀಕೃಷ್ಣನ ಮಿತ್ರರಾಗಿದ್ದರು. ||೩೪||

ಅನಂತಭದ್ರೋ ವೃಷಭ ಓಜಸ್ವೀ ಚ ವರೂಥಕಃ ।
ದೇವಭದ್ರೋ ವಿನೋದಾಖ್ಯಃ ಸುಬಲಶ್ಚಾರ್ಜುನೋಽಪರಃ ॥೩೫॥

ಅಥ ತೇ ಕಥಯಿಷ್ಯಾಮಿ ಕಾಮುಕಂದೋ ಮರುತ್ಸಹಃ ।
ಪ್ರಾಣಭಾನುಃ ಕ್ಷಮಿಾರೋತ್ಸೋ ವಿಧೃತಿಃ ಶ್ಯಾಮಸಂಗಮಃ ॥೩೬॥

ವಾರಿಜಾಕ್ಷೋ ಹಂಸಗತಿಃ ಕಾಲಕಂಧೋ ಮಸೀಹರಃ ।
ವಿನೇತಾ ವಸುಬಾಹುಶ್ಚ ಬೃಹದ್ಬಾಹುರಥಾ ಪರಃ ॥೩೭॥

ಕೇಲಿಃ ಸುಕೇಲಿಃ ಸುಭಗೋ ಬಲೀ ಚ ಲಯ ಏವಚ ।
ಮಾರಕೇಲಿಃ ಕಲೋತ್ತಾರಃ ಕಲಭಾಷೀ ಕಲಸ್ವನಃ ॥೩೮॥

ಶೀತರಶ್ಮಿರ್ವಿಧುರ್ಭಾನುಃ ಭಾವಿತೋ ಭಾವಿ(ವ)ನೋ ಭವಃ ।
ರತಿಪ್ರೀತೋ ವೀರಸೇನೋ ಮಂಜುಬುದ್ಧಿರ್ಬಲಾನುಗಃ ॥೩೯॥

ಕೀರ್ತಿಸಿಂಧುರ್ಮಾಲ್ಯದಶ್ಚ ಚೇತನಶ್ಚತುರಾನನಃ ।
ರೇಷೋ ಪರೇಶೋ ರೇತಾಖ್ಯೋ ಮಾನಮೇರುಃ ಪರಾಂಜನಃ॥೪೦॥

---

ಇವರಲ್ಲದೆ ಅನಂತಭದ್ರ, ವೃಷಭ, ಓಜಸ್ವೀ, ವರೂಥಕ, ದೇವಭದ್ರ, ವಿನೋದ, ಸುಬಲ, ಅರ್ಜುನ ಎಂಬುವರೂ ಸಹ ಶ್ರೀಕೃಷ್ಣನ ಸ್ನೇಹಿತರಾಗಿದ್ದರು. ||೩೫||

ಎಲೈ ಕೀರನೇ, ಇನ್ನುಳಿದ ಸ್ನೇಹಿತರ ಹೆಸರುಗಳನ್ನು ಹೇಳುವೆನು. ಕಾಮಕಂದ, ಮರುತ್ಸಹ, ಪ್ರಾಣಭಾನು, ಕ್ಷಮಿಾರೋತ್ಸ, ವಿಧೃತಿ, ಶ್ಯಾಮಸಂಗಮ, ||೩೬||

ವಾರಿಜಾಕ್ಷ, ಹಂಸಗತಿ, ಕಾಲಕಂಧ, ಮಸೀಹರ, ವಿನೇತಾ, ವಸುಬಾಹು, ಬೃಹದ್ಬಾಹು, ಕೇಲಿ, ಸುಕೇಲಿ, ಸುಭಗ, ಲಯ, ಮಾರಕೇಲಿ, ಕಲೋತ್ತಾರ, ಕಲಭಾಷೀ, ಕಲಸ್ವನ, ||೩೭-೩೮||

ಶೀತರಶ್ಮಿ, ವಿಧು, ಭಾನು, ಭಾವಿತ, ಭಾವಿ(ವ)ನ, ಭವ, ರತಿಪ್ರೀತ, ವೀರಸೇನ, ಮಂಜುಬುದ್ಧಿ, ಬಲಾನುಗ, ಕೀರ್ತಿಸಿಂಧು, ಮಾಲ್ಯದ, ಚೇತನ, ಚತುರಾನನ, ರೇಷ, ಪರೇಶ, ರೇತಾಖ್ಯ, ಮಾನಮೇರು, ಪರಾಂಜನ, ||೩೯-೪೦||

ಪಾವನೋ ಮದನಾಕಾಂತಃ ಕುಂಕುಮಃ ಕಮಲಾಕರಃ ।
ಶತೇಜ್ಯಃ ಶತಶಕ್ತಿಶ್ಚ ಶತಾನಂದಾ ಯಶೋಧನಃ ॥೪೧॥

ಸಂತೋಷಃ ಶಂಕರಃ ಸಾಧುಃ ಶಾಂತಿಭದ್ರಃ ಸಮೋ ನರಃ ।
ದೇವಭದ್ರಸ್ತು ಭದ್ರಾಶ್ವಃ ಸುದೇವಃ ಸುಖಸಾಗರಃ ॥೪೨॥

ಏವಂ ಪರಶುರಾಮಶ್ಚ ರಜನೀಕರ ಏವಚ ।
ಶ್ರೀಭದ್ರೋ ಭಾಸುರಃ ಶ್ರೀದಃ ಶಾಲಿಭದ್ರೋಽ ಗದಃ ಪರಃ ॥೪೩॥

ನರೋ ನಾರಾಯಣಶ್ಚಾನ್ಯೋಽಮಲಶ್ಚಾತಿಸುಖಸ್ತಥಾ ।
ಸಂಜಯೋಽ ಜಿತ ಸಂಜ್ಞಶ್ಚ ಕೃಷ್ಣಸ್ಯಾಸನ್ಸಖಿಪ್ರಿಯಾಃ ॥೪೪॥

ಕ್ರೀಡಂತೇ ಹರಿಣಾ ನಿತ್ಯಂ ವನೇ ಸಂಚಾರಯಂತಿ ಗಾಃ ।
ನ ತೇ ನಶ್ಯಂತಿ ಲೋಕಾ ವೈ ವಯಃ ಪರಿಣತಿರ್ನ ಹಿ ॥೪೫॥

ಇತಿ ತೇ ಕಥಿತೋ ಬ್ರಹ್ಮನ್ ಸಂವಾದಃ ಕೀರಭೃಂಗಯೋಃ ।
ನಿತ್ಯಂ ರೂಪಮಿದಂ ವಿಷ್ಣೋಃ ಸದಾ ಕ್ರೀಡಾಪರಾಯಣಂ ॥೪೬॥

---

ಪಾವನ, ಮದನಾಕಾಂತ, ಕುಂಕುಮ, ಕಮಲಾಕರ, ಶತೇಜ್ಯ, ಶತಶಕ್ತಿ, ಶತಾನಂದ, ಯಶೋಧನ, ಸಂತೋಷ, ಶಂಕರ, ಸಾಧು, ಶಾಂತಿಭದ್ರ, ಸಮ, ನರ, ದೇವಭದ್ರ, ಭದ್ರಾಶ್ವ, ಸುದೇವ, ಸುಖಸಾಗರ, ಪರಶುರಾಮ, ರಜನೀಕರ, ಶ್ರೀಭದ್ರ, ಭಾಸುರ, ಶ್ರೀದ, ಶಾಲಿಭದ್ರ, ಗದ, ॥೪೧-೪೨-೪೩॥

ನರ, ನಾರಾಯಣ, ಅಮಲ, ಅತಿಸುಖ, ಸಂಜಯ, ಅಜಿತಸಂಜ್ಞ ಎಂಬ ನೂರೊಂದು ಮಂದಿ ಶ್ರೀಕೃಷ್ಣನ ಪ್ರಿಯಸ್ನೇಹಿತರಾಗಿದ್ದರು. ॥೪೪॥

ಮೇಲೆ ಹೇಳಿದ ಗೋಪಾಲಕರು ನಿತ್ಯವೂ ಶ್ರೀಕೃಷ್ಣನೊಂದಿಗೆ ಕ್ರೀಡಿಸುತ್ತಿದ್ದರು. ಮತ್ತು ಗೋವುಗಳನ್ನು ಮೇಯಿಸುತ್ತಿದ್ದರು. ಅವರಿಗೆ ಮರಣವೇ ಇಲ್ಲ. ಏಕೆಂದರೆ ಅವರಿಗೆ ವಯಃಪರಿಣಾಮವೇ ಎಂದರೆ ವಾರ್ಧಕ್ಯವೇ ಇಲ್ಲವು. ॥೪೫॥

ಎಲೈ ಬ್ರಹ್ಮನೇ, ಈ ರೀತಿಯಲ್ಲಿ ಕೀರ ಮತ್ತು ಭೃಂಗಾಧಿಪತಿ ಇವರುಗಳ ಮಧ್ಯೆ ನಡೆದ ಸಂವಾದವು ಹೇಳಲ್ಪಟ್ಟಿತು. ಲೀಲಾಮಯನಾದ ಶ್ರೀಕೃಷ್ಣನ

|| ಬ್ರಹ್ಮಾ ಉವಾಚ ||

**ಕಸ್ತ್ವಂ ಸಮಾಗತೋಽಸ್ಯತ್ರ ಮಹಾಭ್ರಮರ ರೂಪಧೃಕ್ ।**
**ಸಮಾಖ್ಯಾಹಿ ಸ್ವರೂಪಂ ತನ್ಮಮೋಪರಿ ದಯಾಂ ಕುರು ॥೪೭॥**

**ಇದಂ ತತ್ವಮಹೋ ವಿದ್ವನ್ನ ತ್ವಂ ಮಧುಪರೂಪವಾನ್ ।**
**ಯಥಾ ತಥಮಥೋ ಸತ್ಯಂ ಬ್ರೂಹಿ ತ್ವಂ ಮಯಿ ಚೇತ್ಕೃಪಾ ॥೪೮॥**

|| ಭೃಂಗರಾಜ ಉವಾಚ ||

**ಬ್ರಹ್ಮನ್ನಿದಂ ಮಮ ವಪುರ್ನ ಹಿ ದೃಷ್ಟಂ ಹಿ ಕೇನ ಚಿತ್ ।**
**ನ ಮತ್ಸ್ವರೂಪಂ ಕೇನಾಪಿ ಸಮ್ಯಕ್ ಜ್ಞಾತಂ ಕದಾಚನ ॥೪೯॥**

|| ಬ್ರಹ್ಮೋವಾಚ ||

**ಇತ್ಯುಕ್ತ್ವಾಽಂತರ್ಹಿತೋ ಭೃಂಗಸ್ತತೋಽಹಂ ವಿಸ್ಮಿತೋಽಭವಂ ।**
**ಅಹಂ ತಸ್ಮೈ ನಮಸ್ಕೃತ್ಯ ಸ್ಥಿತಸ್ತತ್ರಾಸನೋಪರಿ ॥೫೦॥**

---

ಈ ರೂಪವು ಸದಾ ಕ್ರೀಡೆಯಲ್ಲಿ ಆಸಕ್ತವಾದುದಾಗಿರುತ್ತದೆ. ಇದೇ ವಿಷ್ಣುವಿನ ನಿತ್ಯವಾದ ಇನ್ನೊಂದು ರೂಪವೂ ಆಗಿರುವುದು. ||೪೬||

ಬ್ರಹ್ಮನು ಹೇಳಿದನು--ಓ ಭೃಂಗಾಧಿಪನೇ, ಮಹತ್ತಾದ ಭ್ರಮರ ರೂಪವನ್ನು ಧರಿಸಿ ಇಲ್ಲಿಗೆ ಬಂದಿರುವ ನೀನು ಯಾರು? ನಿನ್ನ ನಿಜವಾದಸ್ವರೂಪವು ಯಾವುದು? ನನ್ನಲ್ಲಿ ದಯವಿಟ್ಟು ಹೇಳುವವನಾಗು. ||೪೭||

ಓ ಜ್ಞಾನಿಯಾದ ಭೃಂಗರಾಜನೇ, ನೀನು ವಾಸ್ತವಿಕವಾಗಿ ಭೃಂಗರೂಪ ಉಳ್ಳವನಲ್ಲ. ನಿನ್ನ ಈ ಭೃಂಗರೂಪವು ಸಹಜವಾದುದಲ್ಲ. ಇದು ಸತ್ಯವು. ಆದುದರಿಂದ ನೀನು ನನ್ನಲ್ಲಿ ಕೃಪೆಯುಳ್ಳವನಾದರೆ ನಿನ್ನ ಯಥಾರ್ಥವಾದ ಸ್ವರೂಪವನ್ನು ಹೇಳುವವನಾಗು. ||೪೮||

ಭೃಂಗರಾಜನು ಹೇಳಿದನು—ಎಲೈ ಬ್ರಹ್ಮನೇ, ನಾನು ಧರಿಸಿರುವ ಈ ಭೃಂಗಶರೀರವನ್ನು ಇದುವರೆಗೆ ಯಾರೂ ನೋಡಿರುವುದಿಲ್ಲವು. ಮತ್ತು ನನ್ನ ಯಥಾರ್ಥವಾದ ಸ್ವರೂಪವನ್ನು ಇದುವರೆಗೆ ಯಾರೂ ತಿಳಿದವರಿಲ್ಲವು. ||೪೯||

ಬ್ರಹ್ಮನು ಹೇಳಿದನು -- ಎಲೈ ನಾರದಮಹರ್ಷಿಯೇ, ಹೀಗೆಂದು ಹೇಳಿ ಆ ಭೃಂಗವು ಅಂತರ್ಧಾನವನ್ನೈದಿತು. ಬಳಿಕ ನಾನು ಆಶ್ಚರ್ಯಗೊಂಡವನಾಗಿ

**ಧ್ಯಾನವಾನಸ್ಮಿ ಸುಚಿರಂ ದ್ರಷ್ಟುಂ ಸರ್ವಮಶೇಷತಃ ।**
**ತತೋ ವರ್ಷ ಸಹಸ್ರಾಂತೇ ದೃಷ್ಟೋ ನಾರಾಯಣೋ ಮಯಾ ॥೫೧॥**

**ತದಾಜ್ಞಾತೋಽಸೃಜಂ ಲೋಕಾನ್ಯಥಾಪೂರ್ವಮವಸ್ಥಿತಾನ್ ।**
**ಅನುಗ್ರಹಾನ್ಮಹಾವಿಷ್ಣೋ ರಪರಂ ಕಥಿತಂ ಸುತ ॥೫೨॥**

|| ನಾರದ ಉವಾಚ ||

**ಇತಿ ಶ್ರುತಂ ಮೇ ಋಷಯೋ ಭವದ್ಭ್ಯೋ ವಿನಿವೇದಿತಂ ।**
**ಯಥೋಕ್ತಂ ಬ್ರಹ್ಮಣಾ ಮಹ್ಯಂ ಪುರಾವೃತ್ತಮಿದಂ ಮಹತ್ ॥೫೩॥**

**ಯದಾಸೀದದ್ಭುತತಮಂ ಕನ್ಯಾರೂಪಸ್ಯ ಮೇ ಮಹತ್ ।**
**ವೃಂದಾವನೇ ಭಗವತಾ ದರ್ಶಿತಂ ತದ್ವದಾಮಿ ವಃ ॥೫೪॥**

---

ಆ ಭೃಂಗಾಧಿಪನನ್ನು ನಮಸ್ಕರಿಸಿ ಅಲ್ಲಿಯೇ ಆಸನದ ಮೇಲೆ ಕುಳಿತುಕೊಂಡೆನು. ||೫೦||

ಈ ವೃತ್ತಾಂತವನ್ನು ಕೂಲಂಕಷವಾಗಿ ತಿಳಿದುಕೊಳ್ಳುವುದಕ್ಕೋಸ್ಕರ ಬಹುಕಾಲ ಧ್ಯಾನಾಸಕ್ತನಾದೆನು. ಹೀಗೆ ಸಹಸ್ರ ವರ್ಷಗಳು ಕಳೆಯಲು ಬಳಿಕ ಶ್ರೀಮನ್ನಾರಾಯಣನನ್ನು ನೋಡಿದೆನು. ||೫೧||

ತರುವಾಯ ಶ್ರೀಮನ್ನಾರಾಯಣನ ಅನುಗ್ರಹದಿಂದ ಈ ಲೋಕಗಳನ್ನು ಯುಗಾಂತರದಲ್ಲಿ ಹೇಗೆ ಇದ್ದುವೋ, ಅದರಂತೆಯೇ ಸೃಷ್ಟಿಸಿದೆನು. ಎಲೈ ಪುತ್ರನೇ, ಆ ಮಹಾವಿಷ್ಣುವಿನ ಅನುಗ್ರಹದಿಂದ ಈ ವಿಷಯವನ್ನು ಹೇಳಿರುವೆನು. ||೫೨||

ನಾರದನು ಹೇಳಿದನು—ಎಲೈ ಋಷಿಗಳೇ, ಈ ರೀತಿಯಲ್ಲಿ ಹಿಂದೆ ನಡೆದ ಮಹತ್ತಾದ ಈ ವಿಷಯವನ್ನು ಬ್ರಹ್ಮನು ನನಗೆ ಹೇಳಿದನು. ಅದನ್ನು ನಿಮಗೆ ಯಥೋಕ್ತವಾಗಿ ಹೇಳಿರುವೆನು. ||೫೩||

ಕನ್ಯಾರೂಪವನ್ನು ಧರಿಸಿದ ನನಗೆ ವೃಂದಾವನದಲ್ಲಿ ಯಾವ ಅದ್ಭುತವಾದ ವಿಷಯವು ಪ್ರದರ್ಶಿಸಲ್ಪಟ್ಟಿತೋ ಅದನ್ನು ನಿಮಗೆ ಈಗ ಹೇಳುವೆನು. ||೫೪||

**ಕೃಪಾ ಭಗವತೋ ಭವೇದ್ಯದಿ ತದೀಯ ಪಾದಾಂಬುಜ**
**ದ್ವಯಸ್ಯ ಹಿ ಸಮರ್ಚಯಾ ಹರಿಕಥಾ ಸಮಾಕರ್ಣನೈಃ ।**
**ತಥಾಽಸ್ಯ ಸುಲಭಂ ನ ಕಿಂ ಭವತಿ ಸಾಧು ಸಂಗಸ್ತಥಾ**
**ಕರೋತಿ ದುರಿತಾಪಹೃತ್ಸಫಲಮೇವ ಜನ್ಮಾಖಿಲಂ ॥೫೫॥**

**ಇತಿ ಶ್ರೀಸಕಲಪುರಾಣ ಸಾರಭೂತೇ ಆದಿಪುರಾಣೇ ವೈಯಾಸಿಕೇ ನಾರದಶೌನಕಸಂವಾದೇ ದ್ವಾದಶೋಽಧ್ಯಾಯಃ**

---

ಪರಮಕಾರುಣಿಕನಾದ ಭಗವಂತನ ಪಾದಕಮಲಗಳ ಸೇವನೆ, ಅರ್ಚನೆ, ಮತ್ತು ಕಥಾಶ್ರವಣಗಳಿಂದಲೂ ಅವನ ಕೃಪೆಗೆ ಪಾತ್ರನಾದ ಮನುಷ್ಯನಿಗೆ ಸತ್ಪುರುಷರ ಸಹವಾಸವು ಸುಖವಾಗಿ ಲಭಿಸುವುದಿಲ್ಲವೇ ? ಲಭಿಸಿಯೇ ಲಭಿಸುವುದು. ಸಕಲ ಪಾಪಗಳನ್ನು ನಾಶಮಾಡುವ ಸಾಮರ್ಥ್ಯವುಳ್ಳ ಸತ್ಸಹವಾಸವು ಮನುಜನ ಜನ್ಮವನ್ನು ಸಾರ್ಥಕಗೊಳಿಸುವುದು. ॥೫೫॥

ಇಲ್ಲಿಗೆ ಸಕಲಪುರಾಣಗಳಸಾರಭೂತವಾದ ಆದಿಪುರಾಣದಲ್ಲಿ ನಾರದಶೌನಕ ಸಂವಾದದಲ್ಲಿ ಹನ್ನೆರಡನೆಯ ಅಧ್ಯಾಯವು ಸಮಾಪ್ತವಾಯಿತು.



|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ತ್ರಯೋದಶೋಽಧ್ಯಾಯಃ ||

### ಹದಿಮೂರನೆಯ ಅಧ್ಯಾಯವು

|| ನಾರದ ಉವಾಚ ||

**ಮಹತ್ಕೌತೂಹಲೇನೈವ ಆಜಗಾಮ ಸ್ವಯಂ ಪ್ರಭುಃ ।**
**ಮಹದತ್ಯದ್ಭುತಂ ರೂಪಂ ಯತ್ಪ್ರದಿಷ್ಟಂ ಹ್ಯಹರ್ನಿಶಂ ॥೧॥**

**ನ ಸ್ಮರಂತಿ ತನುಂ ಸ್ವಾಂ ತು ಗೋಪ್ಯೋ ರಸ ವಿಮೋಹಿತಾಃ ।**
**ದೃಷ್ಟ್ವಾ ಸಂಮೋಹಿತಸ್ತತ್ರ ಕನ್ಯಾರೂಪೋಽಹಮದ್ಭುತಂ ॥೨॥**

**ನ ಮೇ ದೇಹಮತಿಸ್ಫೂರ್ತಿರಾಸೀ ತ್ತತ್ರ ದ್ವಿಜೋತ್ತಮಾಃ ।**
**ತಮಪಶ್ಯಂ ವ್ರಜೇ ಶ್ಯಾಮಂ ಕಾಮಂ ಕಂಜ ವಿಲೋಚನಂ ॥೩॥**

---

ನಾರದನು ಹೇಳಿದನು — ಸ್ತ್ರೀವೇಷಧಾರಿಯಾದ ನಾನು ಶ್ರೀಕೃಷ್ಣನ ಸಾನ್ನಿಧ್ಯವನ್ನು ಕುರಿತು ತೆರಳಲು ಪ್ರಭುವಾದ ಶ್ರೀಕೃಷ್ಣನು ಅತ್ಯಂತ ಕುತೂಹಲದಿಂದ ನನ್ನ ಸಮೀಪವನ್ನು ಕುರಿತು ಮುಂದೆ ಬಂದನು. ಅವನ ರೂಪವು ಸರ್ವದಾ ಮಹತ್ತರವಾದುದೂ ಮತ್ತು ಅದ್ಭುತವಾದುದೂ, ಆಗಿರುತ್ತದೆ. ||೧||

ಶ್ರೀ ಕೃಷ್ಣನು ಅಹೋರಾತ್ರಿಯೂ ಯಾವ ರೂಪವನ್ನು ಅಲ್ಲಿ ಪ್ರದರ್ಶಿಸುತ್ತಿದ್ದನೋ ಆ ಅದ್ಭುತರೂಪವನ್ನು ನೋಡಿ ಗೋಪಿಕಾಸ್ತ್ರೀಯರು ಶೃಂಗಾರರಸದ ಆಧಿಕ್ಯದಿಂದ ಮುಗ್ಧರಾಗಿ ತಮ್ಮ ಶರೀರವನ್ನು ಮರೆತವರಾದರು. ಎಲೈ ಋಷಿಗಳೇ, ಶ್ರೀಹರಿಯ ಆ ಅದ್ಭುತವಾದ ರೂಪವನ್ನು ನೋಡಿ ಕನ್ಯಾರೂಪವನ್ನು ಧರಿಸಿದ ನಾನೂ ಆರೂಪದಿಂದ ಮೋಹಗೊಂಡವನಾದೆನು. ಹೀಗೆ ಮುಗ್ಧನಾದ ನನಗೆ ನನ್ನ ದೇಹವಿಷಯಕವಾದ ಜ್ಞಾನವೇ ಸ್ಫುರಿಸಲಿಲ್ಲ. ಎಂದರೆ ನಾನು ಸ್ತ್ರೀವೇಷಧಾರಿಯು

ಮೋಚನಂ ಸರ್ವತಾ(ಪಾ)ಪಾನಾಂ ಸ್ಮರಣಾತ್ಪಾಪಿ ನಾಮುಷಿ ।
ನ ತಚ್ಚಿತ್ರಂ ದ್ವಿಜಾಶ್ಚಿತ್ತಮವಶಂ ಕೃಷ್ಣದರ್ಶನಾತ್ ॥೪॥

ಭವತೀಹ ಭೃಶಂ ಗೋಪಗೋಪೀಭಿಃ ಸಹ ಕಿಂ ಪುನಃ ।
ಐರಾವತೀ ಶತಜ್ಯೋತ್ಸ್ನಾ ಸ್ವಕಾನ್ತ್ಯಾ ಚ ತಿರಸ್ಕೃತಾ ॥೫॥

ತಾಭಿಃ ಸಮಂ ಮುಕುಂದೇನ ಕ್ರೀಡಂತೀಭಿಃ ಪರಸ್ಪರಂ ।
ಕಾಚಿತ್ಸಹೈವ ಕೃಷ್ಣೇನ ಗಾಯಂತೀ ಮಧುರಸ್ವರಂ ॥೬॥

ಕಾಚಿದಾಲಿಂಗನಂ ತಸ್ಯ ಕುರ್ವತೀ ಪ್ರೇಮವಿಹ್ವಲಾ ।
ಕಾಚಿಚ್ಚಾನಿಮಿಷೈರ್ನೇತ್ರೈಃ ಪಶ್ಯಂತೀ ವದನಾಂಬುಜಂ ॥೭॥

ಕಾಚಿತ್ಕರಾಭ್ಯಾಂ ಚ ಕರೌ ಕೃಷ್ಣಸ್ಯ ಸಮಯೋಜಯತ್ ।
ನೃತ್ಯಗೀತ ವಿನೋದೈಶ್ಚ ಕಾಚಿತ್ಕೃಷ್ಣ ಮರೀರಮತ್ ॥೮॥

---

ಎಂಬ ವಿಷಯವೇ ನನಗೆ ಸ್ಫುರಿಸಲಿಲ್ಲ. ನಾನು ಗೋಪಿಕಾಸ್ತ್ರೀಯರ ಮಧ್ಯದಲ್ಲಿರುವ ಶ್ಯಾಮಾಂಗನೂ, ಮನೋಹರನೂ, ಕಮಲಾಕ್ಷನೂ ಸ್ಮರಣಮಾತ್ರದಿಂದಲೇ ಪಾಪಿಷ್ಠರ ಸಕಲ ಸಂಕಟಗಳನ್ನೂ ನಿವಾರಿಸುವವನೂ ಆದ ಶ್ರೀಹರಿಯನ್ನು ನೋಡಿದವನಾದೆನು. ಎಲೈ ದ್ವಿಜಶ್ರೇಷ್ಠರೇ, ಶ್ರೀಕೃಷ್ಣನ ಸಂದರ್ಶನದಿಂದ ಮನಸ್ಸು ವಿವಶವಾಗುವುದು. ಇದು ಆಶ್ಚರ್ಯವಲ್ಲವು. ||೨-೩-೪||

ಶ್ರೀಕೃಷ್ಣನು ಗೋಪಗೋಪಿಯರೊಂದಿಗೆ ಸದಾ ಇರುವನು. ಐರಾವತಿ, ಶತಜ್ಯೋತ್ಸ್ನಾ ಎಂಬ ಗೋಪಿಯರೂ ಸಹ ಶ್ರೀಕೃಷ್ಣಕಾಂತಿಯಿಂದ ತಿರಸ್ಕರಿಸಲ್ಪಟ್ಟಿರುತ್ತಾರೆ. ಈ ರೀತಿಯಲ್ಲಿ ಕೃಷ್ಣನೊಂದಿಗೆ ಪರಸ್ಪರವಾಗಿ ಕ್ರೀಡಿಸುತ್ತಿರುವ ಆ ಗೋಪಿಯರಲ್ಲಿ ಒಬ್ಬಳು ಕೃಷ್ಣನೊಂದಿಗೆ ಮಧುರಸ್ವರದಿಂದ ಗಾನಮಾಡುವಳು. ಒಬ್ಬಳು ಪ್ರೇಮಭರಿತಳಾಗಿ ಅವನನ್ನು ಆಲಿಂಗಿಸುವಳು. ಮತ್ತೊಬ್ಬಳು ನಿಮೇಷವಿಲ್ಲದಿರುವ ನೇತ್ರಗಳಿಂದ (ಕಣ್ಣುಗಳ ರೆಪ್ಪೆಗಳನ್ನು ಮುಚ್ಚದೆ) ಶ್ರೀಕೃಷ್ಣನ ಮುಖಾರವಿಂದವನ್ನು ನೋಡುವವಳೂ, ಆಗಿರುತ್ತಾಳೆ. ||೫-೬-೭||

ಒಬ್ಬಳು ತನ್ನ ಎರಡು ಕೈಗಳನ್ನು ಕೃಷ್ಣನ ಕೈಗಳೊಂದಿಗೆ ಸೇರಿಸುವಳು. ಒಬ್ಬಳು ನೃತ್ಯ, ಗೀತ ಮತ್ತು ವಿನೋದಗಳಿಂದ ಕೃಷ್ಣನನ್ನು ರಮಿಸುವಳು. ಆ ಗೋಪಿಯರ ವಿಲಾಸಯುಕ್ತವಾದ ಪಾದನ್ಯಾಸಗಳಿಂದಲೂ, ಗೆಜ್ಜೆಗಳ ಶಬ್ದ

ಪದನ್ಯಾಸ ವಿಲಾಸೈಶ್ಚ ಕಿಂಕಿಣೀ ನಾಂ ಸ್ವರೈಸ್ತಥಾ ।
ಚರಾಣಾಮುಚರತ್ವಂ ಚ ಸ್ಥಾವರಾಣಾಂ ಚ ವೈ ಗತಿಃ ॥೯॥

ಆಸೀತ್ತಚ್ಚಿತ್ರ ಮುಗ್ಧಾನಾಂ ರಾಸರಾಗ ವಿತಾನತಃ ।
ನಾನಾವಾದಿತ್ರ ಘೋಷೈಶ್ಚ ರಸನಾನಾಂ ಚ ನಿಸ್ವನೈಃ ॥೧೦॥

ನಾಂತೋ ಹ್ಯಸ್ಯ ವಿಲಾಸಸ್ಯ ಗಮ್ಯತೇ ವಿಬುಧೈರಪಿ ।
ವಲಯಾನಾಂ ನೂಪುರಾಣಾಂನಿನಾದಃ ಪರಮೋ ಮಹಾನ್ ॥೧೧॥

ವಿಲೋಕ್ಯಾದ್ಭುತಮೇತನ್ಮೇ ವಿಸ್ಮಯಾತಿಶಯೋಽಭವತ್ ।
ಕಿಮೇತದದ್ಭುತತಮಂ ಕಿಂವಾಽಽನಂದೋ ಮಹೋತ್ತಮಃ ॥೧೨॥

ಅಹೋ ಕಥಂ ಮಯಾ ದೃಷ್ಟಂ ಕಿಂ ಮಯಾ ಚರಿತಂ ಶುಭಂ ।
ಇತಿ ಮನ್ಮಾನಸಂ ಜ್ಞಾತ್ವಾ ನಂದಿನೀ ಹರಿಮಾನಸಾ ॥೧೩॥

---

ದಿಂದಲೂ, ರಾಸಕ್ರೀಡೆಗೆ ಅನುಗುಣವಾದ ರಾಗವಿಸ್ತಾರಗಳಿಂದಲೂ, ನಾನಾವಿಧವಾದ ವಾದ್ಯಘೋಷಗಳಿಂದಲೂ, ರಶನೆಗಳ (ಗೆಜ್ಜೆಡಾಬು ಉಡ್ಯಾಣ) ಶಬ್ದಗಳಿಂದಲೂ, ಚರಪದಾರ್ಥಗಳಿಗೆ ಅಚರತ್ವವೂ, ಸ್ಥಾವರಪದಾರ್ಥಗಳಿಗೆ ಚರತ್ವವೂ ಉಂಟಾಯಿತು! ಎಂದರೆ ಪ್ರಾಣಿಗಳು ಆನಂದಾತಿಶಯದಿಂದ ನಿಶ್ಚಲವಾದುವುಗಳಾಗಿಯೂ, ಸ್ಥಾವರ ಎಂದರೆ ಮರ, ಗಿಡ ಮುಂತಾದ ಅಚರವಸ್ತುಗಳು ಚಲಿಸುವುವೂ ಆದುವು. ||೮-೯-೧೦||

ಜ್ಞಾನಿಗಳೂ ಸಹ ಈ ವಿಲಾಸದ ಅಂತವನ್ನು ತಿಳಿಯಲಾರದವರಾಗಿದ್ದರು. ಕೈಬಳೆಗಳು ಮತ್ತು ಕಾಲಂದುಗೆ ಇವುಗಳ ಶಬ್ದವು ಅತ್ಯದ್ಭುತವಾದುದೂ ಮತ್ತು ಮಹತ್ತರವಾದುದೂ ಆಗಿದ್ದಿತು. ಈ ಅದ್ಭುತ ವ್ಯಾಪಾರವನ್ನು ನೋಡಿ ನನಗೆ ಅತಿಶಯವಾದ ಆಶ್ಚರ್ಯವುಂಟಾಯಿತು. ಈ ದೃಶ್ಯವು ಎಂತಹ ಆಶ್ಚರ್ಯವನ್ನುಂಟು ಮಾಡುತ್ತಿರುವುದು. ಮತ್ತು ಎಂತಹ ನಿರತಿಶಯವಾದ ಆನಂದವುಂಟಾಗುತ್ತಿರುವುದು. ಈ ದೃಶ್ಯವನ್ನು ನಾನು ಆಕಸ್ಮಿಕವಾಗಿ ನೋಡಿದೆನು. ಇದನ್ನು ನೋಡಲು ನಾನು ಎಂತಹ ಪುಣ್ಯಕರ್ಮವಾಚರಿಸಿರಬಹುದು? ||೧೧-೧೨||

ಹೀಗೆಂದು ನಾನು ಮನಸ್ಸಿನಲ್ಲಿ ಯೋಚಿಸಲು ನನ್ನ ಮನಸ್ಸಿನ ಇಂಗಿತವನ್ನು ತಿಳಿದುಕೊಂಡು ಹರಿಯಲ್ಲಿಯೇ ಮನಸ್ಸುಳ್ಳ ನಂದಿನಿಯೆಂಬ ಗೋಪಿಕೆಯು

**ಉವಾಚ ವಚನಂ ಸತ್ಯಂ ಶೃಣು ಕನ್ಯೇ ವಚೋ ಮಮ ।**
**ಯಥಾವತ್ಕಥಯಾಮ್ಯದ್ಯ ಸೌಹಾರ್ದಸ್ನೇಹಯಂತ್ರಿತಾ ॥೧೪॥**

**ತ್ವಯಾಽಹಂ ಪ್ರೇಷಿತಾ ಬಾಲೇ ಶ್ರೀಕೃಷ್ಣಾಯ ನಿವೇದಿತಂ ।**
**ಸ ಶ್ರುತ್ವಾ ತ್ವತ್ಸಮಾಚಾರಮಾಜಗಾಮ ತವಾಂತಿಕಂ ॥೧೫॥**

**ತಂ ವಿಲೋಕಯ ಚಕ್ಷುರ್ಭ್ಯಾಂ ಯೋಽಯಂ ಮಧುಸುಚಕ್ಷುಷಾಂ ॥೧೬॥**

**ಇತಿ ತಸ್ಯಾಂ ಕಥಯಂತ್ಯಾಂ ಶ್ರೀಕೃಷ್ಣೋ ಭಗವಾನ್ ಸ್ವಯಂ ।**
**ತ್ಯಕ್ತ್ವಾ ಗೋಪೀಂ ನಾತಿದೂರೇ ಮತ್ಸಮೀಪಮುಪಾಗಮತ್ ॥೧೭॥**

|| ನಾರದ ಉವಾಚ ||

**ಉವಾಚ ಮಾಮಾಗತಾಽಸಿ ಕುತಃ ಕಸ್ಯಾಽಸಿ ಶೋಭನೇ ।**
**ವಿಸ್ಮಿತಾಽಸಿ ಕಥಂ ಭೀರು ಕಿಂ ತೇ ದೃಷ್ಟಮಿಹಾದ್ಭುತಂ ॥೧೮॥**

---

ನನ್ನನ್ನು ಕುರಿತು ಹೀಗೆಂದು ಹೇಳಿದಳು. ಎಲೈ ಕನ್ಯೆಯೇ, ನಾನು ಹೇಳುವ ಸತ್ಯವಾದ ವಚನವನ್ನು ಕೇಳುವವಳಾಗು. ||೧೩||

ನಾನು ನಿನ್ನಲ್ಲಿ ಸ್ನೇಹಭಾವನೆಯುಳ್ಳವಳಾಗಿ ನೀನು ಯೋಚಿಸಿದ ವಿಷಯವನ್ನು ಯಥಾವತ್ತಾಗಿ ಹೇಳುವೆನು. ||೧೪||

ಎಲೈ ಬಾಲಿಕೆಯೇ, ನಿನ್ನ ಆಗಮನವನ್ನು ನಿವೇದಿಸುವುದಕ್ಕೋಸ್ಕರ ನಿನ್ನಿಂದ ಕಳುಹಿಸಲ್ಪಟ್ಟ ನಾನು ಶ್ರೀಕೃಷ್ಣನ ಸಮೀಪವನ್ನು ಪಡೆದು ನಿನ್ನ ಆಗಮನವನ್ನು ತಿಳಿಸಿದೆನು. ಅದನ್ನು ಕೇಳಿ ಶ್ರೀಕೃಷ್ಣನು ನಿನ್ನ ಸಮೀಪವನ್ನು ಕುರಿತು ಬಂದಿರುವನು. ನೇತ್ರಮನೋಹರನಾದ ಅವನನ್ನು ನಿನ್ನ ಎರಡು ಕಣ್ಣುಗಳಿಂದಲೂ ಚೆನ್ನಾಗಿ ನೋಡುವವಳಾಗು. ||೧೫||

ನಂದಿನಿಯು ಹೀಗೆಂದು ಹೇಳುತ್ತಿರಲು, ಭಗವಂತನಾದ ಶ್ರೀಕೃಷ್ಣನು ಗೋಪಿಕೆಯರನ್ನು ಸ್ವಲ್ಪದೂರದಲ್ಲಿ ಬಿಟ್ಟು ನನ್ನ ಸಮಾಪಕ್ಕೆ ಬಂದವನಾದನು.||೧೭||

ಮತ್ತು ನನ್ನನ್ನು ಕುರಿತು ಹೀಗೆಂದು ಹೇಳಿದನು. ಎಲೌ ಕನ್ಯೆಯೇ, ನೀನು ಎಲ್ಲಿಂದ ಬಂದವಳಾಗಿರುತ್ತೀಯೆ ? ನೀನು ಇಲ್ಲಿ ನೋಡಿದ ಅದ್ಭುತ ನೋಟವೇನು ? ||೧೮||

ಏವಂ ತಸ್ಯ ವಚಃ ಶ್ರುತ್ವಾ ನ ಶಶಾಕಾವಲೋಕಿತುಂ ।
ಕೃತ್ವಾ ಮುಖಮಧೋ ಹ್ಯೂಚೇ ಕಿಂ ವದಾಮಿ ತವಾಗ್ರತಃ ॥೧೯॥

ತ್ವಂ ಮೇ ಪ್ರಾಣಪತಿಃ ಸಮ್ಯಗ್ಗತಿಸ್ತ್ವಂ ಮಮ ಜೀವನಂ ।
ನಾನ್ಯಂ ಸ್ಮರಾಮಿ ಮನಸಾ ವಚಸಾ ನ ವದಾಮಿ ಚ ॥೨೦॥

ತ್ವತ್ಸಮೀಪೇ ಕದಾ ಸ್ಥಾಸ್ಯ ಇತಿ ಮೇ ಪ್ರಾರ್ಥನಂ ಪರಂ ।
ನ ಯಾಮಿ ಕರ್ಹಿ ಕುತ್ರಾಪಿ ತ್ಯಕ್ತ್ವಾತ್ವಾಂ ಹಿ ಪ್ರಿಯೋತ್ತಮ ॥೨೧॥

ಪ್ರಾಣೇಶಾದ್ಯ ಮಮ ಪ್ರಾಣಾಸ್ತ್ವದಾಯತ್ತಾ ಮಹಾಪ್ರಭೋ ।
ಕೋ ಜೀವತಿ ವಿನಾ ವಿಷ್ಣುಂ ಸ ವಿಷ್ಣುಸ್ತೇನ ಸಂಭವಃ ॥೨೨॥

ತೇಷಾಂ ಧಿಗ್ಜೀವಿತಂ ಲೋಕೇ ಯೇಷಾಂ ತ್ವಯ್ಯಚಲಾ ರತಿಃ ।
ನ ಭವೇದಿಹ ವಿಶ್ವೇಶ ಗೋಪಿಕಾವೃಂದ ಮಂಡನ ॥೨೩॥

---

ಶ್ರೀಕೃಷ್ಣನು ನನ್ನನ್ನು ಹೀಗೆಂದು ಪ್ರಶ್ನಿಸಲು, ಅವನ ಮಾತನ್ನು ಕೇಳಿ ನಾನು ಅವನ ಕಡೆಗೆ ನೋಡಲು ಸಮರ್ಥನಾಗದೇ ಮುಖವನ್ನು ಕೆಳಗೆ ತಗ್ಗಿಸಿ ಹೀಗೆಂದು ಹೇಳಿದೆನು ! ಓ ಪ್ರಭುವೇ, ನನ್ನ ಈ ಅವಸ್ಥೆಯನ್ನು ನಿನ್ನ ಮುಂದೆ ಏನೆಂದು ಹೇಳಲಿ ? ॥೧೯॥

ನೀನೇ ನನ್ನ ಪ್ರಾಣಪತಿಯು. ನೀನೇ ನನಗೆ ಗತಿಯು ಮತ್ತು ನಿನ್ನಿಂದಲೇ ನನ್ನ ಜೀವಿಕೆಯು ಇರುತ್ತದೆ. ನಿನ್ನನ್ನು ಬಿಟ್ಟು ಬೇರೆ ಯಾರನ್ನೂ ಮನಸ್ಸಿನಿಂದಲೂ ಸ್ಮರಿಸುವುದಿಲ್ಲ. ವಚನದಿಂದ ಉಚ್ಚರಿಸುವುದೂ ಇಲ್ಲ. ॥೨೦॥

ಓ ಪ್ರಿಯನೇ, ನಾನು ಯಾವಾಗಲೂ ನಿನ್ನ ಸಮೀಪದಲ್ಲಿಯೇ ಇರುವೆನು. ಎಂಬುದೇ ನನ್ನ ಪ್ರಾರ್ಥನೆಯಾಗಿರುತ್ತದೆ. ನಿನ್ನನ್ನು ಬಿಟ್ಟು ಯಾವಾಗಲೂ ಎಲ್ಲಿಗೂ ಹೋಗಲಾರೆನು. ॥೨೧॥

ಓ ಪ್ರಾಣೇಶನೇ, ಈಗ ನನ್ನ ಪ್ರಾಣಗಳು ನಿನ್ನ ಅಧೀನದಲ್ಲಿಯೇ ಇರುತ್ತವೆ. ಯಾವ ದೇವನಿಂದ ಸಕಲ ಭೂತಗಳ ಉತ್ಪತ್ತಿಯೂ ಆಗಿರುವುದೋ ಆವನೇ ವಿಷ್ಣುವು. ಆ ವಿಷ್ಣುವಿನ ಸಹಾಯವಿಲ್ಲದೇ ಯಾವನು ತಾನೇ ಜೀವಿಸಬಲ್ಲನು ? ॥೨೨॥

ಓ ಗೋಪಿಕಾಸ್ತ್ರೀಯರ ಸಮೂಹವನ್ನು ಅಲಂಕರಿಸುವ ಜಗತ್ಪ್ರಭುವೇ,

ಯೈರ್ನ ದೃಷ್ಟಾ ತವ ಕ್ರೀಡಾ ವ್ರೀಡಾ ತೇಷಾಂ ಕುಲೇಷ್ವಪಿ ।
ವರಂ ರಾಜಪ್ರಿಯಾಭ್ಯೋಽಪಿ ಚಾಂಡಾಲೀ ತವ ಸೇವಿಕಾ ॥೨೪॥

ಅಹೋ ನಾಥ ಕೃಪಾಸಿಂಧೋ ಮಮ ಪ್ರಾಣಾಸ್ತ್ವದಾಶ್ರಯಾಃ ।
ವೃಂದಾವನವಿನೋದಾಂಸ್ತೇ ದ್ರಷ್ಟುಮಿಚ್ಛಾಮಿ ಮಾನದ ॥೨೫॥

ಯದ್ಯಹಂ ತ್ವಾಂ ನ ಪಶ್ಯೇಯಂ ಚಕ್ಷುರ್ಭ್ಯಾಂ ಪ್ರಾಣವಲ್ಲಭ ।
ತದಾ ಮಮ ವಿಲೀಯೇತ ಇಯಂ ಪ್ರಾಣಾನ್ವಿನಾ ತನುಃ ॥೨೬॥

ನಾಗ್ನೇರ್ಜ್ಯೋತಿಸ್ತಥಾ ಭಾನೋಃ ಪ್ರಭಾ ಕಾಂತಿರ್ವಿಧೋರ್ನ ಚ ।
ಏತಾವತ್ಕಲ್ಪಪರ್ಯಂತಂ ವಂಚಿತೋಽಸ್ಮಿ ದಯಾನಿಧೇ ॥೨೭॥

---

ಯಾವ ಮನುಜರಿಗೆ ನಿನ್ನಲ್ಲಿ ನಿಶ್ಚಲವಾದ ಭಕ್ತಿಯು ಇರುವುದಿಲ್ಲವೋ ಅಂಥವರ ಜೀವಿಕೆಗೆ ಧಿಕ್ಕಾರವಿರಲಿ ! ॥೨೩॥

ಯಾರು ನಿನ್ನ ಕ್ರೀಡೆಯನ್ನೂ ಮತ್ತು ವಿಲಾಸವನ್ನೂ ನೋಡುವುದಿಲ್ಲವೋ ಅವರ ವಂಶಕ್ಕೇ ಧಿಕ್ಕಾರವು! ಲೋಕದಲ್ಲಿ ರಾಜನ ಪ್ರಿಯತಮೆಯರಿಗಿಂತಲೂ, ನಿನ್ನನ್ನು ಸೇವಿಸುವ ಚಂಡಾಲಸ್ತ್ರೀಯೇ ಶ್ರೇಷ್ಠಳಾಗಿರುವಳು. ಅವಳೇ ಪುಣ್ಯ ಶಾಲಿನಿಯು. ॥೨೪॥

ಓ ದಯಾನಿಧಿಯಾದ ಪ್ರಭುವೇ, ನನ್ನ ಪ್ರಾಣಗಳು ನಿನ್ನನ್ನೇ ಆಶ್ರಯಿಸಿ ರುತ್ತವೆ. ನೀನು ವೃಂದಾವನದಲ್ಲಿ ಗೋಪಿಕಾಸ್ತ್ರೀಯರೊಂದಿಗೆ ಕ್ರೀಡಿಸುವಾಗ ಪ್ರದರ್ಶಿಸುವ ವಿನೋದಗಳನ್ನು ನಾನು ನೋಡಲಪೇಕ್ಷಿಸುವೆನು. ॥೨೫॥

ಓ ಪ್ರಾಣಪ್ರಿಯನೇ, ಈ ನೇತ್ರಗಳಿಂದ ನಾನು ನಿನ್ನನ್ನು ನೋಡದಿದ್ದಲ್ಲಿ ಸಚೇತನವಾದ ನನ್ನ ಈ ಶರೀರವು ವ್ಯರ್ಥವಾಗಿ ಪರಿಣಮಿಸುವುದು. ॥೨೬॥

ಅಗ್ನಿಯ ಪ್ರಕಾಶವೂ, ಸೂರ್ಯನ ಪ್ರಭೆಯೂ ಮತ್ತು ಚಂದ್ರನ ಕಾಂತಿಯೂ ಇವು ಯಾವುವೂ ನಿನ್ನ ಶರೀರಕಾಂತಿಗೆ ಸದೃಶವಾದವುಗಳಲ್ಲ. ಆದುದರಿಂದ ಅಂತಹ ನಿನ್ನನ್ನು ಈ ಕಲ್ಪದವರೆಗೂ ನೋಡದಿದ್ದ ನಾನು ವಂಚಿತನಾಗಿದ್ದೆನು ! ॥೨೭॥

ಕಾಠಿನ್ಯಮನುಭೂತಂ ತೇ ಕೃಪಾಂ ಕುರು ಮಯಿ ಪ್ರಭೋ ।
ಇತಿ ಮದ್ಗದಿತಂ ಶ್ರುತ್ವಾ ಕೃಪಾಲುರ್ಭಗವಾನ್ಪ್ರಭುಃ ॥೨೮॥

ವಿಚಾರ್ಯ ದೇಯಮೇತಸ್ಯೈ ತತಶ್ಚಾಂತರಧೀಯತ ।
ಗೋಪೀಭಿಃ ಸಹಿತಸ್ತಾಂ ತು ಸಖೀಂ ತ್ಯಕ್ತ್ವಾ ಮಮಾಂತಿಕೇ ॥೨೯॥

ಅಂತರ್ಹಿತೇ ಭಗವತಿ ಜಾತಾ ವಿಕಲಿತಾ ಭೃಶಂ ।
ರುರೋದೋಚ್ಚೈಃ ಸ್ವರೈರ್ಬಾಲಾ ಮೃಗಶಾವವಿಲೋಚನಾ ॥೩೦॥

ಪತಿತಾ ಭುವಿ ಭಾವೇನ ಹಾನಾಥ ಇತಿ ವಾದಿನೀ ।
ವಿಮೂರ್ಛಿತೋऽಹಂ ತತ್ರೈವ ನ ಸಸ್ಮಾರ ತನುಂ ತದಾ ॥೩೧॥

ವಿಲೋಕ್ಯ ಸಾ ಸಖೀಂತಾಂ ತು ತಾದೃಶೀಂ ಪತಿ ವಿಹ್ವಲಾಂ ।
ಸಮುತ್ಥಾಪ್ಯ ಸ್ವಬಾಹುಭ್ಯಾಂ ಊಚ ಮಾಂ ಮಧುರಂ ವಚಃ ॥೩೨॥

---

ಇದುವರೆಗೂ ನೀನು ನನಗೆ ನಿನ್ನ ರೂಪವನ್ನು ತೋರಿಸಲಿಲ್ಲವಾದುದರಿಂದ ನನ್ನಲ್ಲಿ ನಿನಗಿರುವ ಕಾಠಿಣ್ಯಸ್ವಭಾವವನ್ನು ಚೆನ್ನಾಗಿ ಅರಿತೆನು. ಓ ಪ್ರಭುವೇ, ಇನ್ನಾದರೂ ನನ್ನಲ್ಲಿ ದಯೆಯುಳ್ಳವನಾಗು. ಹೀಗೆಂದು ಹೇಳಿದ ನನ್ನ ವಚನವನ್ನು ಕೇಳಿ ದಯಾಶಾಲಿಯಾದ ಪ್ರಭುವು, ಈ ಕನ್ನಿಕೆಯು ಯಾರೆಂಬುದನ್ನು ಪರಿಶೀಲಿಸಿ ಇವಳಿಗೆ ನನ್ನ ವಿನೋದಗಳನ್ನು ಪ್ರದರ್ಶಿಸಬೇಕು ಎಂದು ಆಲೋಚಿಸಿ, ಆನಂದಿ ಎಂಬ ದೂತಿಕೆಯನ್ನು ನನ್ನ ಸಮೀಪದಲ್ಲಿರಿಸಿ ಇತರ ಗೋಪಿಕಾಸ್ತ್ರೀಯರೊಂದಿಗೆ ಅಂತರ್ಧಾನವನ್ನೈದಿದನು. ||೨೮-೨೯||

ಭಗವಂತನು ಅಂತರ್ಧಾನವನ್ನು ಹೊಂದುತ್ತಿರಲು, ಹರಿಣಶಿಶುವಿನ ನೇತ್ರಗಳಂತೆ ಚಪಲವಾದ ನೇತ್ರಗಳುಳ್ಳ ಬಾಲಿಕೆಯಾದ ನಾನು ಹರಿಯ ವಿಯೋಗದಿಂದ ವ್ಯಥಿತಳಾಗಿ ಗಟ್ಟಿಯಾದ ಸ್ವರದಿಂದ ರೋದನ ಮಾಡಿದೆನು. ಮತ್ತು ಹಾನಾಥ ಎಂಬೀ ಮುಂತಾದ ಆರ್ತನಾದಗಳನ್ನು ಮಾಡುತ್ತಾ ಅವನಲ್ಲಿರುವ ಭಕ್ತಿಯ ಆಧಿಕ್ಯದಿಂದ ದೇಹದ ಪರಿವೆಯಿಲ್ಲದವಳಾಗಿ ಭೂಮಿಯಲ್ಲಿ ಬಿದ್ದೆನು. ಹೀಗೆ ಅಲ್ಲಿಯೇ ಮೂರ್ಛೆಗೊಂಡ ನಾನು ನನ್ನ ದೇಹವನ್ನು ಸ್ಮರಿಸಲಿಲ್ಲ. ಎಂದರೆ ದೇಹದಮೇಲಿನ ಪರಿವೆಯೇ ನನಗೆ ಇರಲಿಲ್ಲ. ||೩೦-೩೧||

ಈ ರೀತಿಯಲ್ಲಿ, ಪತಿವಿಯೋಗದಿಂದ ದುಃಖಿತಳೂ ಮತ್ತು ಮೂರ್ಛಾವಸ್ಥೆ

**ಕಿಮಿತಿ ತ್ವಂ ವಿಸ್ಮಿತಾಽಸಿ ದರ್ಶಯಿಷ್ಯೇ ತ್ವಹಂ ಹರಿಮ್ ।**
**ರಹೋ ವಿಹಾರಿಣಂ ಕಾಂತೇ ಸ್ವಕಾಂತಾ ವಶವರ್ತಿನಂ ॥೩೩॥**

|| ಶೌನಕ ಉವಾಚ ||

**ಕೇಯಂ ಸಖೀ ಕಿಂ ನಾಮಾಸ್ಯಾಃ ಕಿಂ ಕರ್ಮ ತನ್ನಿವೇದಯ ।**
**ಯಾಂ ತ್ಯಕ್ತ್ವಾಽಂತರ್ಹಿತಃ ಕೃಷ್ಣೋ ಗೋಪೀನಾಂ ಪ್ರಾಣವಲ್ಲಭಃ ॥೩೪॥**

**ಸಖೀಯಂ ನಂದಿನೀ ನಾಮ್ನಾ ದೂತೀ ಕರ್ಮಣಿ ಯೋಜಿತಾ ।**
**ನಿತ್ಯಂ ಸನ್ನಿಹಿತಾ ವಿಷ್ಣೋಃ ಪರಮಾನಂದವರ್ಧಿನೀ ॥೩೫॥**

|| ನಾರದ ಉವಾಚ ||

**ದೂತೀನಾಂ ಲಕ್ಷಣಂ ತುಭ್ಯಂ ವದಾಮ್ಯದ್ಯ ದ್ವಿಜೋತ್ತಮ ।**
**ಶೃಣುಷ್ವಾವಹಿತೋ ಭೂತ್ವಾ ರಹಸ್ಯಂ ಪರಮಾದ್ಭುತಂ ॥೩೬॥**

---

ಯನ್ನು ಹೊಂದಿದವಳೂ ಆದ ನನ್ನನ್ನು ನೋಡಿ, ನನ್ನ ಸಮೀಪದಲ್ಲಿದ್ದ ನಂದಿಕೆ ಎಂಬ ದೂತಿಯು ತನ್ನ ಎರಡು ತೋಳುಗಳಿಂದಲೂ ನನ್ನನ್ನು ಮೇಲ ಕ್ಕೆತ್ತಿ ಮುಂದೆ ಹೇಳುವಂತೆ ಮಧುರವಾದ ವಚನವನ್ನು ಹೇಳಿದಳು. ||೩೨||

ಎಲೌ ಬಾಲಿಕೆಯೇ, ನೀನು ಏತಕ್ಕೋಸ್ಕರ ಈ ರೀತಿಯಾಗಿ ಆಶ್ಚರ್ಯ ವನ್ನು ಹೊಂದಿದವಳಾಗಿರುತ್ತಿ. ಪ್ರಿಯತಮೆಯರಾದ ಗೋಪಿಕಾಸ್ತ್ರೀಯರೊಂದಿಗೆ ಇರುವವನೂ, ರಹಸ್ಯವಾಗಿ ವಿಹರಿಸುವವನೂ ಆದ ಆ ಹರಿಯನ್ನು ನಾನು ನಿನಗೆ ತೋರಿಸುವೆನು. ||೩೩||

ಶೌನಕನು ಹೇಳಿದನು ಓ ನಾರದಮುನಿಯೇ, ಶ್ರೀಕೃಷ್ಣನು ಕನ್ಯಾರೂಪಿ ಯಾದ ನಿನ್ನ ಸಮೀಪದಲ್ಲಿ ಯಾವ ಸಖಿಯನ್ನು ಬಿಟ್ಟು ಅಂತರ್ಧಾನವನ್ನೈದಿ ದನೋ ಆ ಸಖಿಯು ಯಾರಾಗಿರುವಳು ? ಅವಳ ನಾಮಧೇಯವೇನು ? ಮತ್ತು ಅವಳ ಕೆಲಸವೇನು ? ಎಂಬುದನ್ನು ತಿಳಿಸುವವನಾಗು. ||೩೪||

ನಾರದನು ಹೇಳಿದನು—ಎಲೈ ಶೌನಕಮಹರ್ಷಿಯೇ, ಆ ಸಖಿಯು ನಂದಿನಿ ಎಂಬ ಹೆಸರನ್ನು ಹೊಂದಿರುವವಳು. ಅವಳು ದೂತಿಯ ಕೆಲಸದಲ್ಲಿ ನಿಯಮಿಸಲ್ಪ ಟ್ಟವಳಾಗಿ ಸದಾ ವಿಷ್ಣುಸಾನ್ನಿಧ್ಯದಲ್ಲಿರುವವಳೂ ಮತ್ತು ವಿಷ್ಣುವನ್ನು ಆನಂದ ಪಡಿಸುವವಳೂ ಆಗಿರುತ್ತಾಳೆ. ||೩೫||

**ಸುವೇಷತಾ ದುಃಖಸಹಿಷ್ಣುತಾ ಚ**
**ಸುಶೀಲತಾ ಕೋಮಲವಾಕ್ಯತಾ ಚ ।**
**ಸನ್ಮಂತ್ರಿತಾಽಽಚ್ಛಾದಿತ ಮಂತ್ರತಾ ಚ**
**ಛಂದಾನುವೃತ್ತಿತ್ವಮಲಕ್ಷ್ಯತಾ ಚ** ॥೩೭॥

**ಗಾಢಾನುರಾಗವಚನಂ ವಚನಸ್ಯ ಸಿದ್ಧಿಃ ।**
**ಕರ್ಮೇತಿ ಷೋಡಶವಿಧಂ ಕಥಯಂತಿ ದೂತ್ಯಾಃ** ॥೩೮॥

---

ಎಲೈ ದ್ವಿಜಶ್ರೇಷ್ಠನೇ, ದೂತಿಕೆಯರ ಲಕ್ಷಣವನ್ನು ಈಗ ನಿನಗೆ ಹೇಳು ವೆನು. ರಹಸ್ಯವೂ, ಅದ್ಭುತವೂ ಆದ ಇದನ್ನು ಸಾವಧಾನನಾಗಿ ಕೇಳುವವನಾಗು. ॥೩೬॥

ಈ ಮುಂದೆ ಹೇಳುವ ಹದಿನಾರು ವಿಧವಾದ ಲಕ್ಷಣಗಳು ದೂತಿಯಲ್ಲಿ ಇರು ತ್ತವೆಯೆಂದು, ದೂತಿಯ ಲಕ್ಷಣಗಳನ್ನು ತಿಳಿದ ಪ್ರಾಜ್ಞರು ಹೇಳುತ್ತಾರೆ. ಅವು ಯಾವುವೆಂದರೆ––ಮನೋಹರವಾದ ಉಡುಪನ್ನು ಧರಿಸುವಿಕೆ-ದುಃಖಸಹನೆ-ಒಳ್ಳೆಯ ನಡತೆ-ಒಡೆಯನ ಮನಸ್ಸನ್ನು ನೋಯಿಸದೆ ಮೃದುವಾದ ಮಾತುಗಳನ್ನಾಡುವಿಕೆ-ಶ್ರೇಯಸ್ಕರವಾದ ಸಲಹೆ- ಆಲೋಚನೆಗಳನ್ನು ಹೇಳುತ್ತಿರುವುದು-ತನ್ನ ಪ್ರಭುವಿನ ಆಲೋಚನೆಗಳನ್ನು ಬಹಿರಂಗಪಡಿಸದೆ ಗುಟ್ಟಾಗಿರುವಂತೆ ಕಾಪಾಡಿಕೊಂಡಿರುವುದು-ಯಾವಾಗಲೂ ಸೌಹಾರ್ದದಿಂದ ಇರುವಿಕೆ-ಯಜಮಾನನ ಇಂಗಿತವನ್ನು ತಿಳಿದು ಅದಕ್ಕನುಗುಣವಾಗಿ ವರ್ತಿಸುವಿಕೆ-ಕೋಪಗೊಳ್ಳದೇ ಇರುವಿಕೆ, ಯಜಮಾನನ ಕಾರ್ಯಗಳಲ್ಲಿ ಉತ್ಸಾಹಭಂಗವಾಗದಂತೆ ಆಲೋಚನೆ, ಮಾತು, ನಡತೆಗಳಿಂದ ಪ್ರೋತ್ಸಾಹವನ್ನುಂಟುಮಾಡುವಿಕೆ-ಆತನ ಗುಣಗಳನ್ನು ಪ್ರಶಂಸಿಸುವಿಕೆ-ಬಲ, ಪರಾ ಕ್ರಮ ಮುಂತಾದುವುಗಳನ್ನು ಹೊಗಳುವಿಕೆ-ಸದಾ ಪ್ರಭುವನ್ನು ಪ್ರೀತಿಸುವಿಕೆ-ಯಜಮಾನನು ಆಯಾಸಗೊಳ್ಳಲು ಅವನನ್ನು ಉಪಚರಿಸುತ್ತಾ ಆನಂದಗೊಳಿಸು ವಿಕೆ-ತಾನು ದುಃಖಿತಳಾಗದೆ ಸರ್ವದಾ ಸಂತುಷ್ಟಳಾಗಿರುವುದು-ಗಾಢವಾದ ಮತ್ತು ಅನುರಾಗಯುಕ್ತವಾದ ಮಾತುಗಳನ್ನು ಆಡುವಿಕೆ-ಮತ್ತು ಯಜಮಾನನ ವಚನ ವನ್ನು ಕಾರ್ಯರೂಪಕ್ಕೆ ತರುವುದು. ಈ ಹದಿನಾರೂ ದೂತಿಯ ಲಕ್ಷಣಗಳಾಗಿರುವು ವೆಂದು ಪ್ರಾಜ್ಞರು ಹೇಳುತ್ತಾರೆ. ॥೩೭-೩೮॥

**ಸಮಂ ವಿಂಶತಿ ಕರ್ಮಾಣಿ ದೂತೀನಾಂ ಗದಿತಾನಿ ಚ**
**ಸಾಹಚರ್ಯಂ ಮಯ್ಯೈವೋಕ್ತಂ ರಾಧಾಮಾಧವಯೋಃ ಸದಾ ।**
**ತಸ್ಯಾಃ ಸರ್ವಾಣಿ ಕರ್ಮಾಣಿ ಸಂತಿ ತಾನಿ ವದಾಮಿ ತೇ ॥೩೯॥**

**ಪ್ರೋತ್ಸಾಹನಂ ಚಾರ್ಥನಿವೇದನಂ ಚ**
**ಗುಣಪ್ರಶಂಸಾ ನಿತರಾಂ ಪ್ರತೀತಿಃ ।**
**ತತ್ರಾತಿರಾಗಾಭಿನಿವೇದನಂ ಚ**
**ಕಥಾಕಲಾನಾಂ ಕಥನಂ ದ್ವಯೋಶ್ಚ ॥೪೦॥**

**ಶೌರ್ಯಪ್ರಕಾಶೋ ಬಹುಮಿತ್ರತಾ ಚ**
**ಸುವೇಷತಾ ದುಃಖಸಹಿಷ್ಣುತಾ ಚ ।**
**ಮಿತೋಕ್ತಿತಾ ಮಂತ್ರನಿಗೂಢತಾ ಚ**
**ಸುಸೌಖ್ಯವಾರ್ತಾ ಚ ಸ್ವತಂತ್ರತಾ ಚ ॥೪೧॥**

---

ಇವಲ್ಲದೆ ದೂತಿಯರು ಸಾಧಿಸಬೇಕಾಗುವ ಇಪ್ಪತ್ತು ವಿಧವಾದ ಕಾರ್ಯಗಳೂ ಹೇಳಲ್ಪಟ್ಟಿವೆ. ರಾಧಾಮಾಧವರು ಒಬ್ಬರನ್ನೊಬ್ಬರು ಆಗಲದೇ ಸರ್ವದಾ ಒಟ್ಟುಗೂಡಿ ಇರುವರೆಂದು ಹಿಂದೆಯೇ ಹೇಳಿರುವೆನು. ಕೃಷ್ಣನ ಸನ್ನಿಧಾನದಲ್ಲಿ ಇರುವ ಸಖಿಯು ಮಾಡುವ ಕಾರ್ಯಗಳು ಅನೇಕವಿರುವುವು. ಅವುಗಳನ್ನು ಹೇಳುವೆನು. ॥೩೯॥

ಆರಾಧಾಮಾಧವರಿಗೆ ಅವರ ಕಾರ್ಯದಲ್ಲಿ ಉತ್ಸಾಹವನ್ನುಂಟುಮಾಡುವುದು, ಮಾಡಬೇಕಾದ ಕಾರ್ಯಗಳನ್ನು ಸಕಾಲದಲ್ಲಿ ಅರಿಕೆ ಮಾಡುವುದು, ಅವರ ಗುಣಗಳನ್ನು ಶ್ಲಾಘಿಸುವುದು, ಹೆಚ್ಚಾಗಿ ನಂಬಿಕೆಯಿಂದಿರುವುದು, ಪರಸ್ಪರವಾಗಿರುವ ಮೇಲಾದ ಪ್ರೇಮ, ಆಸಕ್ತಿಗಳನ್ನು ತಿಳಿಯಿಸುತ್ತಿರುವುದು, ವಿನೋದಕರವಾದ ಒಳ್ಳೆಯ ಕಥೆಗಳನ್ನು ಬೇಕಾದಾಗ ಹೇಳುವುದು, ಅವರಲ್ಲಿರುವ ಧೈರ್ಯಸ್ಥೈರ್ಯಗಳನ್ನು ಪ್ರಕಟಗೊಳಿಸುತ್ತಿರುವುದು, ಅನೇಕರಾದ ಹಿತೈಷಿಗಳಾದ ಸ್ನೇಹಿತರನ್ನು ಸಂಪಾದಿಸಿಕೊಂಡಿರುವುದು, ಕಾಲಕ್ಕೆ ತಕ್ಕಂತೆ ವೇಷಭಾಷೆಗಳಲ್ಲಿ ಕುಶಲನಾಗಿರುವುದು, ಅನಿರೀಕ್ಷಿತವಾಗಿ ದುಃಖಕರವಾದ ಪ್ರಸಂಗಗಳು ಒದಗಿದರೆ ಅವನ್ನು ಸಹಿಸಿ ಮುಂದುವರಿಯುವುದು, ಆಲೋಚನೆಗಳನ್ನು ಪ್ರಕಟಪಡಿಸದೆ ಇರುವುದು, ಸುಖದ ಸುದ್ದಿಗಳನ್ನು ತಿಳಿಸುತ್ತಿರುವುದು, ಪರಾಧೀನವಲ್ಲದ ವಿವೇಕಸ್ವಾತಂತ್ರ್ಯದಿಂದ ಕೂಡಿ ನಡೆದುಕೊಳ್ಳು

ರೂಪಜ್ಞತಾ ಕಾಲನಿವೇದಿತಾ ಚ
ದೇಶಜ್ಞತಾ ವಾ ಸಹಜಜ್ಞತಾ ಚ ।
ಸರ್ವತ್ರ ಕರ್ಮಣ್ಯತಿವಿಜ್ಞತಾ ಚ
ದೋಷಾಕರಾಚ್ಛಾದನಕಾರ್ಯಪಟ್ವೇ ॥೪೨॥

ಶುಭೋದಯಾಖ್ಯಾಪನಶೀಲತಾ ಚ
ಸೌಂದರ್ಯಶಂಸಾ ಮಿಥುನೋಕ್ತಮಂತ್ರಿತಾ ।
ಮೃದೂಕ್ತಿತಾ ಚಾರ್ಥನಿನಾದವೇದಿತಾ
ವಿವೇಕವಿಜ್ಞಾನಕಥಾಪ್ರಶಂಸಾ ॥೪೩॥

ಸರ್ವತ್ರಗತ್ವಾಽಭಿ ನಿವೇದಿತಾ ಚ
ಪ್ರೋಕ್ತಾ ಹಿ ದೂತ್ಯಾಚರಣೇ ಸುಯೋಗ್ಯಾ ।
ಅನೇಕವಿಜ್ಞಾನವಚೋಭಿರಂಜಸಾ
ವಿಯೋಜಯಂತೀ ಪುರುಷಂ ಸ್ತ್ರಿಯಂ ಚ ॥೪೪॥

---

ತ್ತಿರುವುದು, ಇದೇ ಮುಂತಾದ ಸೇವಕರಲ್ಲೂ ಸ್ನೇಹಿತರಲ್ಲೂ ಇರಬೇಕಾದ, ಗುಣಗಳಿಂದ ಕೂಡಿ ಸಹಾಯಮಾಡುತ್ತಿರಬೇಕು. ॥೪೦-೪೧॥

ಆಕಾರ, ಇಂಗಿತಗಳನ್ನು ತಿಳಿಯುವಿಕೆ, ತಕ್ಕ ಸ್ಥಳವನ್ನೂ, ಕಾರ್ಯಸಾಧನೆಗೆ ಅನುಕೂಲವಾದ ಸ್ವಭಾವವನ್ನೂ ತಿಳಿಯುವಿಕೆ, ಎಲ್ಲ ಕೆಲಸಗಳ ನಿರ್ವಾಹದಲ್ಲೂ ಬೇಕಾದ ಹೆಚ್ಚಾದ ಬುದ್ಧಿಕುಶಲತೆಯು, ದೋಷಗಳನ್ನು ಅತಿಕ್ರಮಿಸಿ ಅಥವಾ ಮುಚ್ಚಿ ಕಾರ್ಯನಿರ್ವಾಹ ಮಾಡುವ ಸಾಮರ್ಥ್ಯವೂ, ॥೪೨॥

ಮುಂದೆ ಒದಗುವ ಒಳ್ಳೆಯ ಫಲವನ್ನು ಊಹಿಸಿ ತಿಳಿದು ಹೇಳುವಿಕೆಯು, ಮನೋಹರವಾದ ಗುಣಗಳನ್ನು ಶ್ಲಾಘಿಸುವುದು, ದಾಂಪತ್ಯಕ್ಕೆ ಅನುಕೂಲವಾದ ಆಲೋಚನೆ, ಸಲಹೆಗಳನ್ನು ಹೇಳುವ ನಿಪುಣತೆಯು, ಮೃದುವಾಗಿ ಮಾತನಾಡುವಿಕೆ, ಪ್ರಯೋಜನದ ಸುಳಿವನ್ನು ತಿಳಿಯುವಿಕೆ, ವಿವೇಚನೆಯಿಂದ ಪೂರ್ಣಜ್ಞಾನವನ್ನು ಉಪಯೋಗಿಸುವ ರೀತಿಯನ್ನು ವರ್ಣಿಸುವಿಕೆ, ॥೪೩॥

ಆವಶ್ಯಕವಾದ ಎಲ್ಲ ಕಡೆಗಳಿಗೂ ಹೋಗಿ ಮುಂದಾಗಿ ಮಾಡಬೇಕಾದುದನ್ನು ತಿಳಿದು ಹೇಳುವುದು, ಈ ಗುಣಶಕ್ತಿಗಳನ್ನು ಹೊಂದಿರುವವಳು ದೂತಿಯ ಕಾರ್ಯನಿರ್ವಾಹದಲ್ಲಿ ತಕ್ಕವಳೆನಿಸುತ್ತಾಳೆ. ನಾನಾಬಗೆಯ ತಿಳಿವಳಿಕೆ, ಅನುಭವಗಳಿಂದ

**ಏತ್ತೈರ್ದೂತೀಗುಣೈರ್ಯುಕ್ತಾ ರಾಧಾಮಾಧವಯೋಃ ಸಖೀ ।**
**ಮಾಮುವಾಚ ತಥಾ ರೂಪಾಮತಿ ಪ್ರಣಯಸಂಯುತಾ ॥೪೫॥**

**ಕಥಂ ಖಿನ್ನಾಽಸಿ ವಾಮೋರು ದ್ರಕ್ಷ್ಯಸಿ ತ್ವಮಿಹಾದ್ಭುತಂ ।**
**ಮಯಾ ಸಹ ಚಲತ್ವದ್ಯ ದರ್ಶಯಾಮಿ ಜನಾರ್ದನಂ ॥೪೬॥**

**ತದ್ರೂಪಂ ಮೇ ಪ್ರಿಯತಮಂ ರಾಧಯಾ ಸಹ ವರ್ತಿ ಯತ್ ।**
**ಸಾಽತಿಪ್ರಾಣಪ್ರಿಯಾಽಷ್ಟಾಭಿಃ ಸಖೀಭಿಃ ಸಹಿತಾ ಸ್ಥಿತಾ ॥೪೭॥**

**ಯಸ್ಯಾ ಗುಣಾಕೃಷ್ಟಚಿತ್ತಃ ಕೃಷ್ಣಃ ಸಾಧ್ವೀವಶಃ ಸ್ಥಿತಃ ।**
**ಕುಂಜಪುಂಜಗತಾ ಕ್ರೀಡಾ ನವವ್ರೀಡಾ ವಿರಾಜತೇ ॥೪೮॥**

---

ಕೂಡಿದ ಮಾತಿನಿಂದ ಸ್ತ್ರೀಪುರುಷರನ್ನು ಕೂಡಿಸುವುದರಲ್ಲೂ, ಆವಶ್ಯಕವಾದಾಗ ವಿಘಟಿಸುವುದರಲ್ಲೂ ದೂತಿಯು ಸಮರ್ಥಳಾಗಿರಬೇಕು. ॥೪೪॥

ಆರಾಧಾಮಾಧವರ ಸಖಿಯು, ಮೇಲೆ ಹೇಳಿದ ದೂತಿಕೆಯಲ್ಲಿರಬೇಕಾದ ಗುಣಗಳಿಂದ ಯುಕ್ತಳಾಗಿದ್ದಳು. ಶ್ರೀಕೃಷ್ಣನ ವಿಯೋಗದಿಂದ ಖಿನ್ನಳಾದ ನನ್ನನ್ನು ಕುರಿತು ನಂದಿಸಿಯು ನನ್ನಲ್ಲಿ ವಿಶ್ವಾಸವುಳ್ಳವಳಾಗಿ ಹೀಗೆಂದು ಹೇಳಿದಳು. ॥೪೫॥

ಎಲೌ ವಾಮೋರುವೇ, ನೀನು ಏತಕ್ಕೋಸ್ಕರ ಖಿನ್ನಳಾಗಿರುವೆ? ನೀನು ಇಲ್ಲಿಯೇ ಈಗಲೇ ಅದ್ಭುತವನ್ನು ನೋಡುವೆ! ನನ್ನೊಂದಿಗೆ ಬರುವವಳಾಗು. ಆ ಜನಾರ್ದನನನ್ನು ತೋರಿಸುವೆನು. ॥೪೬॥

ರಾಧೆಯಿಂದ ಕೂಡಿರುವ ಆ ಕೃಷ್ಣನ ಮನೋಹರವಾದ ರೂಪವು ನನಗೆ ಅತ್ಯಂತ ಪ್ರೀತಿಪಾತ್ರವಾಗಿರುತ್ತದೆ. ಆ ರಾಧಿಕೆಯು ಪ್ರಾಣಪ್ರಿಯರಾದ ಎಂಟುಮಂದಿ ಸಖಿಯರಿಂದ ಯುಕ್ತಳಾಗಿರುವಳು. ॥೪೭॥

ಆ ರಾಧಿಕೆಯ ಸುಗುಣಗಳಿಂದ ಆಕರ್ಷಿಸಲ್ಪಟ್ಟ ಮನಸ್ಸುಳ್ಳ ಶ್ರೀಕೃಷ್ಣನೂ ಸಹ ಆ ಸ್ತ್ರೀಗೆ ಅಧೀನನಾಗಿರುವನು. ರಾಧೆಯು ಲತಾಗುಲ್ಮಗಳ ಮಧ್ಯದಲ್ಲಿ ಕ್ರೀಡಿಸುವವಳಾಗಿ, ಸ್ತ್ರೀಸಹಜವಾದ ನೂತನ ಲಜ್ಜೆಯಿಂದ ಯುಕ್ತಳಾಗಿ, ವಿರಾಜಿಸುತ್ತಿರುವಳು. ಮಾನವೇ ಧನವಾಗಿ ಉಳ್ಳ ಆ ಸ್ತ್ರೀಯು ಎಂದಿಗೂ ತನ್ನ ಮಾನಮರ್ಯಾದೆಯ ಕ್ರಮವನ್ನು ಕಳೆದುಕೊಳ್ಳುವುದಿಲ್ಲ. ॥೪೮॥

**ಮಾನಿನೀ ಮಾನಮಾತ್ಮೀಯಂ ನ ಜಹಾತಿ ಕಥಂಚನ ।**
**ಯಸ್ಯೈಶ್ವರ್ಯವಶಾಃ ಸರ್ವೇ ಬ್ರಹ್ಮವಿಷ್ಣುಪುರೋಗಮಾಃ ॥೪೯॥**

**ಈಶ್ವರಾ ಅಪಿ ಕಥ್ಯಂತೇ ಸ ಈಶೋ ರಾಧಿಕಾವಶಃ ।**
**ಯದ್ಭಿಯಾ ವಾತಿ ವಾತಶ್ಚ ಭಾನುಸ್ತಪತಿ ಯದ್ಭಿಯಾ ॥೫೦॥**

**ಇಂದ್ರಶ್ಚಂದ್ರಸ್ತಥಾ ಕಾಲಃ ಸ್ವೇ ಸ್ವೇ ಕಾರ್ಯೇ ಚರಂತಿ ಹಿ ।**
**ಸ ಏವ ಪರಮೋ ವಿಷ್ಣುಃ ಶ್ರೀಕೃಷ್ಣಾಖ್ಯೋ ವಶೋಽಭವತ್ ॥೫೧॥**

**ರಾಧಿಕಾಂ ತ್ವಾಮುಥೋ ಗತ್ವಾ ದರ್ಶಯಿಷ್ಯೇ ಧ್ರುವಂ ವನೇ ।**
**ನಾವಲೋಕಯಿತುಂ ಶಕ್ತೋ ಪುಂಸ್ತ್ವೇನ ಪುರುಷರ್ಷಭಃ ॥೫೨॥**

**ಅತಸ್ತವಾಧಿಕಾರೋಽಸ್ತಿ ಸ್ತ್ರೀರೂಪಸ್ಯ ವರಾನನೇ ।**

---

ಬ್ರಹ್ಮಾ ವಿಷ್ಣು ಮಹೇಶ್ವರರೇ ಮೊದಲಾದ ದೇವತೆಗಳು ಸ್ವತಂತ್ರರಾದರೂ ಸಹ ಯಾವ ಶ್ರೀಕೃಷ್ಣನ ಪ್ರಭುಶಕ್ತಿಗೆ ಅಧೀನರಾಗಿರುವರೆಂದು ಹೇಳಲ್ಪಟ್ಟಿರುವರೋ ಆ ಪ್ರಭುವಾದ ಕೃಷ್ಣನು ರಾಧೆಗೆ ಅಧೀನನಾಗಿರುವನು. ॥೪೯॥

ಯಾವ ದೇವನ ಭೀತಿಯಿಂದ ವಾಯುವು ಬೀಸುತ್ತಿರುವುದೋ, ಯಾವನ ಹೆದರಿಕೆಯಿಂದ ಸೂರ್ಯನು ಪ್ರಕಾಶವನ್ನು ಕೊಡುವವನಾಗಿರುವನೋ ಮತ್ತು ಯಾವ ದೇವನ ಭೀತಿಯಿಂದ ಇಂದ್ರ, ಚಂದ್ರ, ಕಾಲ ಮುಂತಾದವರು ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾಗಿರುವರೋ ಅಂತಹ ನಿತ್ಯನೂ ಶ್ರೀ ಕೃಷ್ಣಾವತಾರವನ್ನು ಧರಿಸಿದವನೂ ಆದ ಸಾಕ್ಷಾನ್ಮಹಾವಿಷ್ಣುವು ,ಆ ರಾಧಿಕೆಯ ಅಧೀನನಾಗಿರುವನು. ॥೫೦-೫೧॥

ಎಲೌ ಬಾಲಿಕೆಯೇ, ವೃಂದಾವನಕ್ಕೆ ಹೋಗಿ ನಿನಗೆ ಅಂತಹ ರಾಧಿಕೆಯ ದರ್ಶನವನ್ನು ಮಾಡಿಸುವೆನು! ಎಲೌ ಸುಮುಖಿಯೇ, ವೃಂದಾವನದಲ್ಲಿ ರಾಧೆಯೊಂದಿಗೆ ಕ್ರೀಡಾತತ್ಪರನಾದ ಪುರುಷಶ್ರೇಷ್ಠನಾದ ಶ್ರೀಕೃಷ್ಣನನ್ನು ನೋಡಲು ಪುರುಷನಿಂದ ಸಾಧ್ಯವಿಲ್ಲವು. ಆದುದರಿಂದ ಸ್ತ್ರೀರೂಪವುಳ್ಳ ನಿನಗೆ ಅವನನ್ನು ನೋಡಲು ಅಧಿಕಾರವಿರುವುದು. ಅದು ಸಾಧ್ಯವೂ ಆಗುವುದು. ॥೫೨॥

ತವೋಪರಿ ಕೃಪಾತ್ಯಂತಂ ಶ್ರೀಕೃಷ್ಣಸ್ಯ ವಿರಾಜತೇ ॥೫೩॥

ಕದಾಚಿದ್ದರ್ಶಯೇತ್ ತ್ವಾಂ ವೈ ಲೀಲಾಮಾತ್ಮಾನಮೇವ ಸಃ ।
ಮಾಮುಕ್ತ್ವಾಽಂತರ್ಹಿತಃ ಕೃಷ್ಣಸ್ತ್ವನೇತಾಮಾನಯಾಂತಿ ಮೇ ॥೫೪॥

ಅಸ್ಮಿನ್ ಭುವಃ ಸ್ಥಲೇ ದೂತಿ ಕನ್ಯೇಯಂ ಮತ್ಪ್ರಿಯಾ ಯತಃ ।
ಏನಾಂ ಸಂದರ್ಶಯಿಷ್ಯಾಮಿ ರಾಧಿಕಾಂ ಪ್ರಾಣವಲ್ಲಭಾಂ ॥೫೫॥

ಮಮ ಪ್ರೇಮಧನಾಂ ನಾರೀಂ ಲಲಿತಾಂ ಜೀವಿತಾಧಿಕಾಂ ।
ಮಯಿ ಪ್ರೇಮಮಯೀಂ ದೇವೀಂ ಯುವರಾಜವಿಲಾಸಿನೀಂ ॥೫೬॥

ಸ್ವಜನ್ಮಭೂಷಿತೋತ್ತುಂಗವೃಷಭಾನುಕುಲಸ್ಥಿತಿಮ್ ।
ಪರಾವಿದ್ಯಾಂ ಪರಾಂ ಶಕ್ತಿಂ ರಾಸಕ್ರೀಡಾದಿಕಾರಿಣೀಂ ॥೫೭॥
ಹ್ಲಾದಿನೀಂ ಮೇ ಪ್ರಿಯತಮಾಂ ದರ್ಶಯಿಷ್ಯೇ ಸಖಿ ಪ್ರಿಯಾಂ ।

---

ಎಲೈ ಕನ್ಯೆಯೇ, ಆ ಶ್ರೀಕೃಷ್ಣನು ನಿನ್ನಲ್ಲಿ ಅತ್ಯಂತ ದಯೆಯುಳ್ಳವನಾಗಿರುವನು. ಆದುದರಿಂದ ನಿನಗೆ ಅವನ ಲೀಲೆಯನ್ನು ತೋರಿಸುವೆನು. ಮತ್ತು ಅವನೂ ಸಹ ಸ್ವತಃ ತನ್ನ ಲೀಲೆಯನ್ನೂ ಮತ್ತು ತನ್ನ ಲೀಲಾಮಾನುಷವಿಗ್ರಹವನ್ನೂ ನಿನಗೆ ಸಂದರ್ಶಿಸುವನು. ॥೫೩॥

ಶ್ರೀಕೃಷ್ಣನು ಅಂತರ್ಧಾನವಾಗುವ ಸಮಯದಲ್ಲಿ ನನಗೆ ಹೀಗೆಂದು ಹೇಳಿ ಅಂತರ್ಧಾನವನ್ನು ಹೊಂದಿರುವನು. ಅದೇನೆಂದರೆ–ಎಲೌ ದೂತಿಯೇ, ಭೂಮಂಡಲದಲ್ಲಿ ಈ ಕನ್ಯೆಯು ನನಗೆ ಅತ್ಯಂತ ಪ್ರೀತಿಪಾತ್ರಳಾಗಿರುತ್ತಾಳೆ. ಆದುದರಿಂದ ಇವಳನ್ನು ನಾನಿದ್ದಲ್ಲಿಗೆ ಕರೆದುಕೊಂಡು ಬರುವವಳಾಗು. ॥೫೪॥

ಪ್ರಾಣಪ್ರಿಯೆಯೂ, ಪ್ರೇಮವೆಂಬ ಧನವುಳ್ಳವಳೂ, ಸುಕುಮಾರಳೂ ನನಗೆ ಪ್ರಾಣಕ್ಕಿಂತಲೂ ಅಧಿಕಳೂ ಆದ ಆ ರಾಧಿಕೆಯನ್ನು ಈ ಕನ್ಯೆಗೆ ತೋರಿಸುವೆನು. ॥೫೫॥

ಎಲೌ ಸಖಿಯೇ, ನನ್ನಲ್ಲಿ ಅತ್ಯಂತ ಪ್ರೇಮವುಳ್ಳವಳೂ, ಯುವರಾಜನಾದ ನನ್ನೊಂದಿಗೆ ಸುಖವನ್ನನುಭವಿಸುವವಳೂ, ತನ್ನ ಜನ್ಮದಿಂದ ವೃಷಭಾನುವಿನ ಕುಲವನ್ನು ಅಲಂಕರಿಸಿರುವವಳೂ, ವಾಸ್ತವಸ್ವರೂಪದಲ್ಲಿ ಸಚ್ಚಿದಾನಂದರೂಪಳಾದುದರಿಂದ ಬ್ರಹ್ಮವಿದ್ಯಾಸ್ವರೂಪಳೂ, ಅಪರಿಚ್ಛಿನ್ನಶಕ್ತಿಸ್ವರೂಪಳೂ, ಈಗ ಈ ರೂಪದಲ್ಲಿ

ಏತತ್ಕಥಿತವಾನ್ ಸುಭ್ರು ಭಗವಾನ್ ಭಕ್ತವತ್ಸಲಃ ॥೫೮॥

ಅತಶ್ಚಲ ಮಯಾ ಸಾರ್ಧಂ ದರ್ಶಯಾಮಿ ಜನಾರ್ದನಂ ।
ಇತ್ಯಾಶ್ರುತ್ಯ ಪ್ರಚಲಿತಾ ಸಖ್ಯಾ ಸಹ ವರಾಂಗನಾ ॥೫೯॥

ಸಮುಲ್ಲಂಘ್ಯ ಕಿಯದ್ದೂರಂ ತತೋಽಪಶ್ಯಮಿ(ಮ್ಮ)ಹಾದ್ಭುತಂ ।
ತೇಜಃಪುಂಜಮತಿಶ್ರೇಷ್ಠ ಮಿಷ್ಟಮೇವಾವಲೋಕಿತಂ ॥೬೦॥

ಸಖೀಸಮಾಜಸುಖದಂ ಶ್ರೀಕೃಷ್ಣಾನಂದವರ್ಧನಂ ।
ಮಹಾಕಲ್ಪತರುಂ ನಾಮ್ನಾ ಹೇಮಭೂಮಿ ಸಮುದ್ಭವಮ್ ॥೬೧॥

ಸರ್ವತ್ರ ಕಾಂಚನೀ ಭೂಮಿರ್ನಾನಾರತ್ನಾಭಿಮಂಡಿತಾ ।
ಶರೀರಕಾಂತ್ಯಾ ಮಾನಿನ್ಯಾ ಆದರ್ಶಮಿವ ನಿರ್ಮಲಂ ॥೬೨॥
ಭೂತಲಂ ಯತ್ರ ವಸತೀ ರಾಧಾಮಾಧವಯೋಃ ಶುಭಾ ।

---

ರಾಸಕ್ರೀಡೆಯನ್ನು ಮಾಡುವವಳೂ ಸದಾ ನನ್ನನ್ನು ಸಂತೋಷಗೊಳಿಸುವವಳೂ ಮತ್ತು ಪ್ರೇಯಸಿಯೂ ಆದ ದೇವಿಯನ್ನು ಈ ಕನ್ಯೆಗೆ ತೋರಿಸುವೆನು. ॥೫೬-೫೭॥

ಎಲೌ ಸುಭ್ರುವೇ, ಭಕ್ತವತ್ಸಲನೂ, ಭಗವಂತನೂ ಆದ ಶ್ರೀಕೃಷ್ಣನು ಹೀಗೆಂದು ಹೇಳಿರುವನು. ॥೫೮॥

ಆದುದರಿಂದ ನನ್ನೊಂದಿಗೆ ಬರುವವಳಾಗು. ನಿನಗೆ ಆ ಜನಾರ್ದನನನ್ನು ತೋರಿಸುವೆನು. ಆ ದೂತಿಯು ನನಗೆ ಹೀಗೆಂದು ಆಶ್ವಾಸನವನ್ನು ಕೊಟ್ಟು ಸಖಿಯಾದ ನನ್ನೊಂದಿಗೆ ಹೊರಟಳು. ॥೫೯॥

ಬಳಿಕ ಸ್ವಲ್ಪದೂರವನ್ನು ಅತಿಕ್ರಮಿಸಿ ಅನಂತರದಲ್ಲಿ ಅದ್ಭುತವೂ ಪವಿತ್ರವೂ ಮತ್ತು ನನಗೆ ನೋಡಲು ಇಷ್ಟವಾದುದೂ ಆದ ಒಂದಾನೊಂದು ತೇಜಃಸಮೂಹವನ್ನು ನೋಡಿದೆನು. ॥೬೦॥

ಸಖೀಸಮಾಜಕ್ಕೆ ಸುಖವನ್ನುಂಟುಮಾಡುವುದೂ ಶ್ರೀಕೃಷ್ಣನ ಆನಂದವನ್ನು ವೃದ್ಧಿಗೊಳಿಸತಕ್ಕದ್ದೂ, ಆದ, ಸುವರ್ಣಭೂಮಿಯಲ್ಲಿ ಹುಟ್ಟಿದ, ಮಹಾಕಲ್ಪತರುವನ್ನೇ ನೋಡಿದೆನು. ॥೬೧॥

ಎಲ್ಲೆಡೆಯಲ್ಲಿಯೂ ನಾನಾವಿಧವಾದ ರತ್ನಗಳಿಂದ ಅಲಂಕರಿಸಲ್ಪಟ್ಟ ಸ್ವರ್ಣಮಯವಾದ ಆ ಭೂಮಿಯು ಕಂಗೊಳಿಸುತ್ತಿತ್ತು. ಆ ರಾಧಾಕೃಷ್ಣರ ಶರೀರಕಾಂತಿ

**ಅನಂತಲೀಲಾಭರಿತೌ ಶ್ರೀರಾಧಾಮಾಧವೌ ಸುಖಂ ॥೬೩॥**

**ಕ್ರೀಡೇತೇ ನಿತ್ಯಮೇವಾತೋ ಮುದಂ ಯಾತಿ ಸಖೀಜನಾಃ ।**
**ಸದಾ ವಿಹಾರೀ ಕೃಷ್ಣಸ್ತು ಶ್ರೀರಾಧಾ ಪ್ರೇಮಯಂತ್ರಿತಃ ॥೬೪॥**

**ಕ್ರೀಡನ್ನ ವೇದ ಚಾತ್ಮಾನಂ ಪ್ರಿಯಯಾ ರಾಧಯಾ ಚಿರಂ ।**
**ಹಾವಭಾವವತೀಭಿಶ್ಚ ನಾರೀಮಂಡಲಕಾಂತಿಭಿಃ ॥೬೫॥**

**ಸ್ತ್ರೀನಾಯಿಕಾಂ ಚಾತಿತರಾಂ ಸುಖಯತ್ವೇವ ಯಾ ಚ ಭೂಃ ।**
**ಕುಂಜಪುಂಜವಿನೋದೈಶ್ಚ ರತಿರಾಗಪಯೋನಿಧಿಂ ॥೬೬॥**

**ಕಿಶೋರ್ಯಾ ರಾಧಯಾ ಸಾರ್ಧಂ ಹರಿಂ ಸಂದರ್ಶಯೇ ಸತೀಂ ।**
**ಕಥಯಾಮಿ ಹ್ಯನುಷ್ಠೇಯಂ ಯತ್ರ ಗಂತುಃ ಶುಚಿಸ್ಮಿತೇ ॥೬೭॥**

---

ಯಿಂದ ಆ ಭೂತಲವು ಕನ್ನಡಿಯಂತೆ ಅತಿ ನಿರ್ಮಲವಾಗಿ ಕಾಣಿಸುತ್ತಿದ್ದಿತು. ಅಂತಹ ಭೂಮಿಯು ಆ ರಾಧಾಮಾಧವರ ವಾಸಸ್ಥಳವಾಗಿದ್ದಿತು. ॥೬೨॥

ಅನೇಕ ವಿಧವಾದ ಲೀಲೆಗಳಲ್ಲಿ ಆಸಕ್ತರಾದ ರಾಧಾಮಾಧವರು ಸರ್ವದಾ ಕ್ರೀಡಾಸಕ್ತರಾಗಿರುವರು. ಆದರಿಂದ ಸಖೀಜನರೂ ಹರ್ಷವನ್ನು ಹೊಂದುತ್ತಾರೆ. ರಾಧೆಯ ಪ್ರೇಮಪಾಶಕ್ಕೆ ಕಟ್ಟುಬಿದ್ದ ಶ್ರೀಕೃಷ್ಣನು ಯಾವಾಗಲೂ ಪ್ರೇಯಸಿಯಾದ ರಾಧೆಯೊಂದಿಗೂ ಮತ್ತು ಶೃಂಗಾರರಸದ ಸುಖಾನುಭಾವಕವಾದ ಹಾವಭಾವಗಳನ್ನು ಪ್ರದರ್ಶಿಸುವ ಮತ್ತು ಕಾಂತಿಯನ್ನು ಬೀರುವ ಇನ್ನಿತರ ಸ್ತ್ರೀಯರೊಂದಿಗೆ ಸಹ ದೀರ್ಘಕಾಲದ ಪರ್ಯಂತವಾಗಿ ಕ್ರೀಡಿಸುವವನಾಗಿ ತನ್ನ ನಿಜರೂಪವನ್ನೇ ತಿಳಿಯಲಿಲ್ಲ. ॥೬೩-೬೪-೬೫॥

ರಾಧಾಮಾಧವರ ಕ್ರೀಡಾಸ್ಥಾನವಾದ ಯಾವ ಭೂಮಿಯಿರುವುದೋ ಆ ಭೂಪ್ರದೇಶವು ಅನುರಾಗಕ್ಕೆ ಸಮುದ್ರಸ್ಥಾನಾಪನ್ನಳಾದ, ಸ್ತ್ರೀಯರಲ್ಲಿ ಶ್ರೇಷ್ಠಳಾದ ನಾಯಿಕೆಯಾದ ರಾಧಿಕೆಯನ್ನು ಲತಾಮಂಟಪಗಳಿಂದ ಕೂಡಿ ಗುಲ್ಮಗಳಲ್ಲಿ ಉಂಟಾಗತಕ್ಕ ವಿನೋದಗಳಿಂದ ಸಂತೋಷಗೊಳಿಸಲಿ. ॥೬೬॥

ಶುಭ್ರವಾದ ಮಂದಹಾಸವುಳ್ಳ ಕನ್ಯೆಯೇ, ಬಾಲಿಕೆಯಾದ ರಾಧೆಯೊಂದಿಗೆ ಇರುವ ಆ ಶ್ರೀಕೃಷ್ಣನನ್ನು ನಿನಗೆ ತೋರಿಸುವೆನು. ಅವನಿರುವ ಪ್ರದೇಶಕ್ಕೆ ಹೋಗ ಬಯಸುವ ನಿನಗೆ ತಕ್ಕ ಉಪಾಯವನ್ನು ಹೇಳುವೆನು. ಮತ್ತು ಅಲ್ಲಿಗೆ ಹೋದವರು ಮಾಡಬೇಕಾದ ಕಾರ್ಯವನ್ನೂ ತಿಳಿಸುವೆನು. ॥೬೭॥

ದುಷ್ಪ್ರೇಕ್ಷಣೀಯಾ ಸರ್ವೇಷಾಂ ಭೂತಾನಾಂ ಗಹನಾ ಗತಿಃ ।
ಬಲೀಯಸೀ ಪ್ರಭೋರಿಚ್ಛಾ ನಾಪಮಾರ್ಷ್ಟುಂ ಹಿ ಶಕ್ಯತೇ ॥೬೮॥

ರಹೋ ವಿಶೇಷಸಮಯೇ ಪ್ರವೇಶಃ ಸ್ಯಾತ್ತದಿಚ್ಛಯಾ ।
ಇತ್ಯಾಶಸ್ಯ ಸಖೀ ಕನ್ಯಾಮಾಜಗಾಮಾಂತಿಕೇ ತಯೋಃ ॥೬೯॥

ರಾಧಾಮಾಧವಯೋರಾಶು ನಂದಿನೀ ಪ್ರೇಮಸಂಗತಾ ।
ಚಿರಂ ವಿಲೋಕ್ಯ ವದನಂ ತಯೋಃ ಸಂಕ್ರೀಡಮಾನಯೋಃ ॥೭೦॥

ಮೌನಮಾಶ್ರಿತ್ಯ ಸರ್ವಜ್ಞಾ ಲೇಭೇ ಸುಖಮನುತ್ತಮಮ್ ।
ತತ್ಸುಖಂ ವೇತ್ತಿ ಸಾ ನಿತ್ಯಂ ನಂದಿನೀ ಹಿ ತಯೋಃ ಪ್ರಿಯಾ ॥೭೧॥

ಶಕ್ಯತೇ ನ ಹಿ ತತ್ ದ್ರಷ್ಟುಂ ಬ್ರಹ್ಮರುದ್ರಾದಿಕೈರಪಿ ।
ವಿಲೋಕ್ಯ ಸುಚಿರಂ ಕ್ರೀಡಾಸ್ತಯೋಃ ಸಾ ರಮಮಾಣಯೋಃ॥೭೨॥
ಪಶ್ಚಾತ್ಸಾ ಕಥಯಾಮಾಸ ಕನ್ಯಾಯಾಃ ಸುಖದಾಗಮಂ ।

---

ಭಕ್ತರಿಗೆ ಪ್ರಾಪ್ಯಸ್ಥಾನವಾದ ಶ್ರೀಕೃಷ್ಣಸಾನ್ನಿಧ್ಯವನ್ನು ಪಡೆದು ನೋಡಲು ಸರ್ವರಿಗೂ ಅತಿಸುಲಭವಲ್ಲವು. ಅಲ್ಲದೆ ಅದು ಕಷ್ಟ ಸಾಧ್ಯವಾಗಿರುತ್ತದೆ. ಪ್ರಭುವಿನ ಬಲವತ್ತರವಾದ ಇಚ್ಛೆಯನ್ನು ಯಾರುತಾನೇ ನಿರೋಧಿಸಲು ಮೀರಲು ಸಮರ್ಥರಿರುವರು ? ||೬೮-೬೯||

ಅವನ ಇಚ್ಛೆಯೊಂದಿದ್ದರೆ ಕಾಲಾಂತರದಲ್ಲಿ ಅವನ ಸಾನ್ನಿಧ್ಯವನ್ನು ಗುಟ್ಟಾಗಿ ಪಡೆಯಲು ಸಾಧ್ಯವಾದೀತು. ನಂದಿನಿಯು ಹೀಗೆಂದು ಹೇಳಿ ಪ್ರೇಮಭರಿತಳಾಗಿ ಶೀಘ್ರದಲ್ಲಿ ರಾಧಾಮಾಧವರ ಸಮೀಪವನ್ನು ಪಡೆದು, ಬಳಿಕ ಪರಸ್ಪರವಾಗಿ ಕ್ರೀಡಿಸುತ್ತಿರುವ ಅವರಿಬ್ಬರ ಮುಖವನ್ನು ನೋಡಿ ಮೌನವನ್ನು ತಾಳಿ ನಿರತಿಶಯವಾದ ಸುಖವನ್ನು ಅನುಭವಿಸಿದಳು. ||೬೯-೭೦||

ರಾಧಾಮಾಧವರ ಮುಖದರ್ಶನದಿಂದ ಉಂಟಾದ ಆ ನಿತ್ಯಸುಖದ ಸವಿಯನ್ನು ಅವರಿಗೆ ಪ್ರಿಯಳಾದ ನಂದಿನಿಯೇ ತಿಳಿದುಕೊಳ್ಳಲು ತಕ್ಕವಳಾಗಿರುತ್ತಾಳೆ. ಆ ಸುಖವನ್ನು ವರ್ಣಿಸಲು ಬ್ರಹ್ಮ, ರುದ್ರ ಮುಂತಾದ ದೇವತೆಗಳೂ ಸಹ ಅಸಮರ್ಥರಾಗಿರುವರು. ||೭೧||

ಅನ್ಯೋನ್ಯವಾಗಿ ರಮಿಸುವ ಅವರಿಬ್ಬರ ಕ್ರೀಡೆಗಳನ್ನು ಬಹುಕಾಲದವರೆಗೆ

ಹರೇರ್ಮಾಯಯಾ ಸಮಾನೀತಾ ಕನ್ಯಾ ಪ್ರಣಯಿನೀ ತವ ॥೭೩॥
ಆಗತಾ ಸಾ ಮಯಾ ಸಾರ್ಧಂ ಸುದೂರೇಽಸ್ತಿ ವ್ಯವಸ್ಥಿತಾ ।
ಯಾಂ ನಿಕ್ಷಿಪ್ಯ ಮಯಿ ಪ್ರೇಷ್ಠಾಮನ್ಯಸ್ಥಾನಂ ಗತೋ ಭವಾನ್॥೭೪॥
ತವಾಜ್ಞಯಾ ಸಮಾನೀತಾ ಕಿಂಕರೋಮಿ ವದ ಪ್ರಭೋ ।
ಭಗವಾಂಸ್ತಾಮುವಾಚೇದಂ ಧನ್ಯಾಽಸಿ ತ್ವಂ ಮಮಾನುಗಾ ॥೭೫॥
ಆನೀಯ ದರ್ಶಯೇಮಾಂ ತ್ವಂ ಶ್ರೀರಾಧಾಮಾನಮುತ್ತಮಂ ।
ನಿಕುಂಜ ಮಂದಿರೇ ರಾಧಾ ತಿಷ್ಠತ್ಯತ್ರ ವಿಲಾಸಿನೀ ॥೭೬॥
ಮಾನಿನೀ ಮಾನ ಮಾಸಾದ್ಯ ರಸರೂಪಂ ಮನೋರಮಂ ।

---

ನಿರೀಕ್ಷಿಸಿ ಬಳಿಕ ನಂದಿನಿಯು ಕನ್ನಿಕೆಯಾದ ನನ್ನ ಆಗಮನವನ್ನು ಅವರಿಗೆ ತಿಳಿಸಿದಳು. ||೭೨||

ಓ ಹರಿಯೇ, ಯಾವ ಕನ್ನಿಕೆಯನ್ನು ನೀನು ನನ್ನೊಂದಿಗೆ ಬಿಟ್ಟು ಬೇರೆಯ ಕಡೆಗೆ ಹೋಗಿದ್ದೆಯೋ ನಿನ್ನ, ಮಾಯಾಶಕ್ತಿಯಿಂದ ಕರೆಸಲ್ಪಟ್ಟ ಮತ್ತು ನಿನಗೆ ವಿಶ್ವಾಸಪಾತ್ರಳಾದ ಆ ಕನ್ನಿಕೆಯು ನನ್ನೊಂದಿಗೆ ಇಲ್ಲಿಗೆ ಬಂದಿರುವಳಾಗಿರುತ್ತಾಳೆ. ಅವಳು ಇಲ್ಲಿಗೆ ಸ್ವಲ್ಪ ದೂರದಲ್ಲಿ ನಿಂತಿರುವಳು. ||೭೩-೭೪||

ಓ ಪ್ರಭುವೇ, ನಿನ್ನ ಆಜ್ಞಾನುಸಾರವಾಗಿ ಆ ಕನ್ನಿಕೆಯನ್ನು ಇಲ್ಲಿಗೆ ಕರೆತಂದಿರುತ್ತೇನೆ. ಇನ್ನು ಮುಂದೆ ಮಾಡಬೇಕಾದುದನ್ನು ಆಜ್ಞಾಪಿಸುವವನಾಗು. ನಂದಿನಿಯು ಹೀಗೆಂದು ಬಿನ್ನವಿಸಲು ಭಗವಂತನಾದ ಶ್ರೀಕೃಷ್ಣನು ಅವಳನ್ನು ಕುರಿತು ಹೀಗೆಂದು ಹೇಳಿದನು. ಎಲೌ ದೂತಿಯೇ, ನನ್ನ ಆಜ್ಞೆಯನ್ನು ಪರಿಪಾಲಿಸಿದ ನೀನು ಧನ್ಯಳಾಗಿರುತ್ತೀಯೆ. ನೀನು ಆ ಕನ್ಯೆಯನ್ನು ಇಲ್ಲಿಗೆ ಕರೆತಂದು ಅವಳಿಗೆ ರಾಧೆಯು ಪ್ರಣಯಕೋಪವನ್ನು ತೋರಿಸುವವಳಾಗು. ||೭೫||

ಮಾನಿನಿಯಾದ ರಾಧೆಯು ಶೃಂಗಾರರಸಸ್ವರೂಪವೂ ಹೃದಯಂಗಮವೂ ಆದ ಸ್ತ್ರೀ ಸಹಜವಾದ ಪ್ರಣಯಕೋಪವನ್ನು ತಾಳಿ ಈ ಲತಾಗುಲ್ಮದಲ್ಲಿ ನಿಂತಿರುವಳು. ||೭೬||

ನಿಕುಂಜ ತರುಮಾಸಾದ್ಯ ಸ್ಥಾಸ್ಯೇಽಹ ಮಧುನಾ ಸಖಿ ॥೭೭॥

ಉಭಯೋರಂತರಂ ದೂರೇ ದೂತಿ ತ್ವಂ ತು ತಯಾ ಸಹ ।
ಆಯಾಹಿ ಯಾಹಿ ವಾಕ್ಯಾನಿ ವದ ರಾಧಾಂ ತಥೈವಚ ॥೭೮॥

ವಿನಯಂ ಮೇ ಪ್ರಿಯಾ ಮಾನಂ ಕನ್ಯಾಯೈ ತ್ವಂ ಪ್ರದರ್ಶಯ ।
ಇತ್ಯುಕ್ತಾ(ತ್ವ) ನಂದಿನೀ ನೇತುಂ ಗತಾ ಕನ್ಯಾ ವರಾನನೇ ॥೭೯॥

ಆನೀಯ ದರ್ಶಯಾಮಾಸ ನಿಕುಂಜಭವನಂ ಮಹತ್ ।
ಚಾಮೀಕರಮಯೀ ಭೂಮಿರ್ವಸ್ತ್ರರತ್ನ ವಿಭೂಷಿತಾ ॥೮೦॥

ನಾನಾಮಣಿಗಣೋಪೇತಂ ತತ್ರಾಸ್ತೇ ಮಂದಿರಂ ಪರಂ ।
ಚಿತ್ರಮುದ್ಧೃತ ಸೋಪಾನಂ ವಿತಾನ ಶಯನಾಶನೈಃ ॥೮೧॥
ವಿರಾಜಿತಂ ತತ್ರತತ್ರ ಸರೋವರ ಸಮನ್ವಿತಂ ।

---

ಎಲೌ ಸಖಿಯೇ, ನಾನು ಈ ಲತಾಗುಲ್ಮದ ಸಮೀಪದಲ್ಲಿರುವ ವೃಕ್ಷದ ಸಮೀಪವನ್ನು ಹೊಂದಿ ಅಲ್ಲಿ ನಿಂತಿರುತ್ತೇನೆ. ನೀನು ಆ ಕನ್ನಿಕೆಯೊಂದಿಗೆ ನಮ್ಮಿಬ್ಬರ ನಡುವೆ ಬರುವವಳಾಗು ಮತ್ತು ಅವಳೊಂದಿಗೆ ಮಾತನಾಡುವವಳಾಗು. ರಾಧೆಯನ್ನೂ ಅವಳ ಪ್ರಣಯಕೋಪವನ್ನೂ ಮತ್ತು ನನ್ನ ವಿನಯವನ್ನೂ ಆ ಕನ್ಯೆಗೆ ತೋರಿಸುವವಳಾಗು. ||೭೭-೭೮||

ಎಲೌ ಸುಮುಖಿಯೇ, ಶ್ರೀಕೃಷ್ಣನು ಹೀಗೆಂದು ಹೇಳಲು, ನಂದಿನಿಯು ಆ ಕನ್ನಿಕೆಯನ್ನು ಕರೆತರಲು ಹೋದಳು. ಸ್ವಲ್ಪ ಕಾಲವಾದ ಬಳಿಕ ಅವಳನ್ನು ಕರೆತಂದು ದೊಡ್ಡದಾದ ಲತಾಗೃಹವನ್ನು ತೋರಿಸಿದಳು. ||೭೯||

ಅಲ್ಲಿ ನೋಡಲು ಅಲ್ಲಿಯ ಭೂಪ್ರದೇಶವು ಸ್ವರ್ಣಮಯವಾದುದಾಗಿಯೂ ಅಮೂಲ್ಯವಾದ ವಸ್ತುಗಳಿಂದಲೂ ಮುತ್ತು ರತ್ನಗಳಿಂದಲೂ ಅಲಂಕರಿಸಲ್ಪಟ್ಟಿದ್ದಿತು. ಆ ಭೂಮಿಯಲ್ಲಿ ನಾನಾವಿಧವಾದ ಇಂದ್ರನೀಲಮಣಿಯೇ ಮೊದಲಾದ ರತ್ನಗಳ ಸಮುದಾಯದಿಂದ ಕೂಡಿದ ಕ್ರೀಡಾಮಂದಿರವು ಇದ್ದಿತು. ||೮೦||

ಆ ಕ್ರೀಡಾಮಂದಿರವು ವಿಚಿತ್ರವಾದುದಾಗಿಯೂ ಆಶ್ಚರ್ಯಕಾರಕವಾದ ಮೆಟ್ಟಿಲುಗಳಿಂದ ಕೂಡಿದುದೂ, ಮೇಲುಕಟ್ಟು ಹಾಸಿಗೆ ಭಕ್ಷ್ಯಭೋಜ್ಯಾದಿಗಳಿಂದ ಕೂಡಿರುವುದೂ ಆಗಿದ್ದಿತು. ಸಮೀಪದಲ್ಲಿಯೇ ಅಲ್ಲಲ್ಲಿ ಸರೋವರಗಳೂ ಇದ್ದುವು. ||೮೧||

ಸುಗಂಧಿ ನೀರಸಂ ಸಿಕ್ತಂ ಕೃಷ್ಣಾಗುರುಸುಧೂಪಿತಮ್ ||೮೨||

ಹಂಸಕಾರಂಡವಾಕೀರ್ಣಂ ಕಲಕೋಕಿಲ ಕೂಜಿತಮ್ ।
ಶೀತಮಂದಸುಗಂಧೇನ ವಾಯುನಾ ಪರಿವೀಜಿತಂ ||೮೩||

ಆರಾಮೋಪವನಾಮೋದಮತ್ತಭ್ರಮರನಾದಿತಂ ।
ಸುಗಂಧಿ ನೀರಸಂ ಸಿಕ್ತಂ ಸರ್ವಲೋಕಮನೋಹರಂ ||೮೪||

ಮನೋರಮಂ ವರಸ್ತ್ರೀಣಾಂ ನಯನಾನಂದವರ್ಧನಂ ।
ಷಡೂರ್ಮಿರಹಿತಂ ಶಾಂತಮನಿತ್ಯದ್ರವ್ಯವರ್ಜಿತಂ ||೮೫||

ತನ್ಮಧ್ಯೇ ರಾಧಿಕಾಂ ದೇವೀಂ ಸರ್ವಲಕ್ಷಣಸಂಯುತಾಂ ।
ಭಾಸಯಂತೀಂ ವನಂ ಸರ್ವಂ ಸ್ವಾಂಗಕಾಂತ್ಯಾ ವರಾನನಾಮ್||೮೬||

ಅನೇಕಹಾವಭಾವಾದಿ ದ್ಯೋತಯಂತೀಂ ವನೇಶ್ವರೀಮ್ ।
ಸರ್ವವಿಶ್ವೇಶಭಾವೇನ ಮಾನಿತಾಂ ಮೃಗಲೋಚನಾಂ ||೮೭||

---

ಆ ಮಂದಿರವು ಸುಗಂಧಪುಷ್ಪಗಳ ಮಕರಂದದಿಂದ ಸುವಾಸಿತವಾದುದೂ, ಶೀತಲವಾದುದೂ, ಕೃಷ್ಣಾಗುರುವೆಂಬ (ಪರಿಮಳದ್ರವ್ಯವಿಶೇಷ) ಧೂಪದಿಂದ ವಾಸಿತವಾದದ್ದಾಗಿಯೂ ಹಂಸ, ಕಾರಂಡವ ಮುಂತಾದ ಪಕ್ಷಿಗಳಿಂದ ವ್ಯಾಪ್ತವಾದದ್ದೂ, ಅವ್ಯಕ್ತಮಧುರಸ್ವರದಿಂದ ಕೂಡಿರುವ ಕೋಕಿಲೆಗಳ ಶಬ್ದವುಳ್ಳದ್ದಾಗಿಯೂ, ಶೀತವಾಗಿಯೂ, ಮಂದವಾಗಿಯೂ, ಸುಗಂಧಯುಕ್ತವಾಗಿಯೂ ಇರುವ ವಾಯುವಿನಿಂದ ಎಲ್ಲೆಡೆಯಲ್ಲಿಯೂ, ವ್ಯಾಪ್ತವಾದದ್ದಾಗಿಯೂ ಇದ್ದಿತು. ||೮೨-೮೩||

ಇದಲ್ಲದೇ ಆ ಮಂದಿರವು ಚಿಕ್ಕ ಚಿಕ್ಕ ಉದ್ಯಾನವನಗಳಲ್ಲಿ ವಿಹರಿಸುವುದರಿಂದ ಉಂಟಾದ ಆನಂದದಿಂದ ಮದವಿಶಿಷ್ಟವಾದ ಭ್ರಮರಗಳಿಂದ ಶಬ್ದಾಯಮಾನವಾದುದಾಗಿಯೂ, ಶೀತಲವಾದುದಾಗಿಯೂ, ಪ್ರೇಕ್ಷಕರ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವುದಾಗಿಯೂ, ಶ್ರೇಷ್ಠರಾದ ಸ್ತ್ರೀಯರಿಗೆ ನೇತ್ರಾನಂದವನ್ನುಂಟುಮಾಡುವುದಾಗಿಯೂ, ||೮೪-೮೫||

ಇರುವ ಅಂತಹ ಕ್ರೀಡಾಮಂದಿರದ ಮಧ್ಯದಲ್ಲಿ ಸಕಲಲಕ್ಷಣಸಂಪನ್ನಳೂ, ತನ್ನ ದೇಹಕಾಂತಿಯಿಂದ ಸರ್ವವನವನ್ನು ಪ್ರಕಾಶಪಡಿಸುವವಳೂ, ನಾನಾವಿಧವಾದ ಹಾವಭಾವಗಳಿಂದ ಪ್ರಕಾಶಮಾನಳೂ, ಸಾಕ್ಷಾದ್ವನದೇವತೆಯಂತಿರುವವಳೂ, ಸಕಲ

ಕಲಸ್ವನಾಂ ಕಲಗೀತಾಮುವಲೋಕ್ಯ ಶುಚಿಸ್ಮಿತಾಂ ।
ನ ಭೂತಲೇ ತತ್ಸದೃಶೀ ಮಾನವೀ ನೃಪಸಂಭವಾ ॥೮೮॥

ದೇವಾನಾಮಸುರಾಣಾಂ ಚ ನಾಗಾನಾಂ ಚಾಪಿ ಕನ್ಯಕಾ ।
ಗಂಧರ್ವಾಣಾಂ ತಥಾಽನ್ಯೇಷಾಂ ರಾಧಾಯಾಶ್ಚೋಪಮಾಮಿಯಾತ್ ॥೮೯॥

ಮಹಾಮಾನವತೀಂ ದೃಷ್ಟ್ವಾ ಕನ್ಯಾ ಸಾ ವಿಸ್ಮಿತಾಽಭವತ್ ।
ವನೇಶ್ವರೀಂ ನಮಸ್ಕೃತ್ಯ ವಿಲೋಕ್ಯ ಚ ಪುನಃ ಪುನಃ ॥೯೦॥

ಬದ್ಧಾಂಜಲಿರುವಾಚೇದಂ ರಾಧಿಕಾಂ ಸ್ನೇಹಯಂತ್ರಿತಾ ।
ತ್ವಂ ಮೇ ರಾಧೇಶ್ವರೀ ಮಾತಾ ಸರ್ವೇಶ ಪ್ರಾಣವಲ್ಲಭಾ ॥೯೧॥

ಸ್ವಭಾವಗುಣಧೈರ್ಯೇಣ ಶ್ರೀಕೃಷ್ಣೇನ ವಶೀಕೃತಾ ।
ನ ತ್ವಾದೃಶೀ ಪ್ರಣಯಿನೀ ತ್ರೈಲೋಕ್ಯೇಽಪಿ ವಿಲೋಕ್ಯತೇ ॥೯೨॥

---

ಲೋಕಗಳಿಗೂ ಸ್ವಾಮಿನಿಯೆಂಬ ಭಾವದಿಂದ ಪ್ರಣಯಕೋಪವನ್ನು ಪ್ರದರ್ಶಿಸುವವಳೂ, ಹರಿಣಾಕ್ಷಿಯೂ, ಅವ್ಯಕ್ತಮಧುರವಾದ ಧ್ವನಿಯುಳ್ಳವಳೂ, ಶುಭ್ರವಾದ ಮಂದಹಾಸವುಳ್ಳವಳೂ ಆದ ದೇವಿಯಾದ ರಾಧಿಕೆಯನ್ನು ನೋಡಿದೆನು. ಈ ಭೂತಲದಲ್ಲಿ ರಾಧೆಗೆ ಸದೃಶಳಾದ ಮನುಜಸ್ತ್ರೀಯು ರಾಜಕುಲದಲ್ಲಿಯೂ ಜನಿಸುವುದು ದುರ್ಲಭವು. ॥೮೬-೮೭-೮೮॥

ದೇವಕನ್ಯೆಯಾಗಲೀ, ಅಸುರಕನ್ಯೆಯಾಗಲೀ, ಗಂಧರ್ವಕನ್ಯೆಯಾಗಲೀ, ಅಥವಾ ಇನ್ನಿತರ ಕನ್ಯೆಯಾಗಲೀ, ಯಾವಳೂ ರಾಧೆಯು ಸಾದೃಶ್ಯವನ್ನು ಹೊಂದಲಾರಳು. ॥೮೯॥

ಮಹಾಮಾನಶಾಲಿಯಾದ ರಾಧೆಯನ್ನು ನೋಡಿ ಆ ಕನ್ನಿಕೆಯು ಅತ್ಯಾಶ್ಚರ್ಯದಿಂದ ಕೂಡಿದವಳಾದಳು. ಮತ್ತು ಆ ವನೇಶ್ವರಿಯನ್ನು ನಮಸ್ಕರಿಸಿ ಮತ್ತೆ ಅವಲೋಕಿಸಿ ಭಕ್ತಿಗೆ ಕಟ್ಟುಬಿದ್ದವಳಾಗಿ ಕೈಗಳನ್ನು ಜೋಡಿಸಿ ಆ ರಾಧೆಯನ್ನು ಕುರಿತು ಹೀಗೆಂದು ಹೇಳಿದಳು. ॥೯೦॥

ಓ ರಾಧಾದೇವಿಯೇ, ಸರ್ವರಿಗೂ ಪ್ರಭುವಾದ ಶ್ರೀಕೃಷ್ಣನ ಪ್ರಾಣಪ್ರಿಯಳಾದ ನೀನು ನನ್ನ ಮಾತೆಯಾಗಿರುವೆ. · ನೀನು ನಿನ್ನ ಸ್ವಭಾವ ಗುಣ ಧೈರ್ಯಗಳಿಂದ ಶ್ರೀಕೃಷ್ಣನಿಂದ ವಶೀಕೃತಳಾಗಿರುವೆ. ನಿನ್ನಂತಹ ಸ್ತ್ರೀಯು ಮೂರು ಲೋಕಗಳಲ್ಲಿಯೂ ಕಾಣಿಸಲಾರಳು. ॥೯೨॥

ತವಾಧೀನಂ ಜೀವಿತಂ ಮೇ ತ್ವಮೇವಾತಿ ಪ್ರಿಯಾ ಹರೇಃ ।
ಮಮ ಭಾಗ್ಯಪ್ರಯೋಗೇ (ನ) ಚ ಚಕ್ಷುರ್ಭ್ಯಾಮವಲೋಕ್ಯಸೇ॥೯೩॥

ಯತ್ರ ಬ್ರಹ್ಮಾದಯೋ ದೇವಾಃ ಪ್ರವಿಶಂತಿ ನ ವೈ ಕ್ವಚಿತ್ ।
ಅನ್ಯೇಷಾಮತ್ರ ಕಾ ವಾರ್ತಾ ಮಮ ಭಾಗ್ಯಾತ್ಪ್ರವೇಶನಮ್ ॥೯೪॥

ಯದಿ ಮೇ ಕೋಟಿರಸನಾ ಭವಂತಿ ಸ್ತವನಕ್ಷಮಾಃ ।
ನ ತ್ವಾಂ ವರ್ಣಯಿತುಂ ಶಕ್ತಾಃ ತೇ ಗುಣಾನ್ವೇತ್ತಿ ಮಾಧವಃ ॥೯೫॥

ಯಸ್ಯಾ ಗುಣಗಣೈಃ ಕೃಷ್ಣಃ ಸರ್ವೇಶೋಽಪಿ ವಶೀಕೃತಃ ।
ಅತಸ್ತೇ ಶರಣಂ ಪ್ರಾಪ್ತಾ ಮಮೋಪರಿ ಕೃಪಾಂ ಕುರು ॥೯೬॥

---

ಓ ರಾಧೆಯೇ, ನನ್ನ ಜೀವಿಕೆಯೇ ನಿನ್ನ ಆಧೀನವಾಗಿರುತ್ತದೆ. ನೀನೇ ಹರಿಗೆ ಪ್ರಿಯಳಾಗಿರುತ್ತೀಯೆ. ನನ್ನ ಪುಣ್ಯವಿಶೇಷದಿಂದಲೇ ನಿನ್ನನ್ನು ಈ ಕಣ್ಣುಗಳಿಂದ ನೋಡುತ್ತಿರುವೆನು. ॥೯೩॥

ಯಾವ ಪ್ರದೇಶವನ್ನು ಪ್ರವೇಶಿಸಲು ಬ್ರಹ್ಮಾದಿ ದೇವತೆಗಳೂ ಅಸಮರ್ಥರಾಗಿರುವರೋ, ಅಂಥಾ ಈ ಪ್ರದೇಶವನ್ನು ಪ್ರವೇಶಿಸಲು ಇನ್ನಿತರರು ಹೇಗೆ ತಾನೆ ಸಮರ್ಥರಾದಾರು ? ಆದರೂ ನಾನು ಮಾತ್ರ ನನ್ನ ಪುಣ್ಯವಿಶೇಷದಿಂದಲೇ ಈ ಪ್ರದೇಶವನ್ನು ಪ್ರವೇಶಿಸಿರುವೆನು. ॥೯೪॥

ನಿನ್ನ ಗುಣಗಳನ್ನು ಸ್ತೋತ್ರಮಾಡಲು ನನಗೆ ಕೋಟಿ ನಾಲಗೆಗಳಿದ್ದರೂ ನಾನು ಅವುಗಳನ್ನು ಸ್ತುತಿಸಲು ಅಸಮರ್ಥಳೇ ಆಗುತ್ತಿದ್ದೇನು ! ಸರ್ವೇಶನಾದ ಕೃಷ್ಣನೂ ಸಹ ಯಾವ ನಿನ್ನ ಗುಣಗಳಿಂದ ವಶೀಕೃತನಾಗಿರುವನೋ ಆ ನಿನ್ನ ಗುಣಗಳನ್ನು ಲಕ್ಷ್ಮೀಪತಿಯಾದ ಅವನೇ ವರ್ಣಿಸಲು ಸಮರ್ಥನಿರುವನು. ॥೯೫॥

ಆದುದರಿಂದ ನಾನು ನಿನಗೆ ಶರಣಾಗತಳಾಗಿದ್ದೇನೆ. ನನ್ನಲ್ಲಿ ದಯೆಯನ್ನಿಡುವವಳಾಗು. ನೀನು ವಿಷ್ಣುವಿಗೆ ಪ್ರಾಣಪ್ರಿಯಳಾಗಿರುತ್ತೀಯೆ. ಸಾಕ್ಷಾದ್ವಿಷ್ಣುವೇ ನಿನ್ನ ಅಧೀನನಾಗಿರುವನು. ಆ ಮಾಧವನು ಕ್ಷಣಕಾಲವೂ ನಿನ್ನ ಸಮೀಪದಿಂದ ಅಗಲುವುದಿಲ್ಲ. ಇದುವರೆಗೆ ನಿನ್ನಂತೆ ಶ್ರೀಕೃಷ್ಣನನ್ನು ವಶಪಡಿಸಿಕೊಂಡಿರುವವರು ಯಾರೂ ಇರುವುದಿಲ್ಲ. ಆದುದರಿಂದ ನೀನು ಭಾಗ್ಯಶಾಲಿನಿಯಾಗಿರುತ್ತೀಯೆ. ॥೯೬-೯೭॥

**ಅತಿಪ್ರಾಣಪ್ರಿಯಾ ವಿಷ್ಣೋಸ್ತ್ವದಾಯತ್ತಃ ಸ್ವಯಂ ಹರಿಃ ।**
**ಕ್ಷಣಮಾತ್ರಂ ತ್ವತ್ಸಮೀಪಾನ್ನಾಪಸರ್ಪತಿ ಮಾಧವಃ ॥೯೭॥**

**ನ ಕೇನಾಪಿ ಜಿತಃ ಕೃಷ್ಣಸ್ತವ ಭಾಗ್ಯಂ ಮನೋರಮಮ್ ।**
**ನಾಪಶ್ಯಂ ತತ್ರ ವಿಶ್ವೇಶಂ ಸಖೀ ಮಾಂಚೇ ಕ್ವ ಮೇ ಪ್ರಿಯಃ ॥೯೮॥**

**ಸ ಏವಾಸ್ಯಾಃ ಸಮೀಪೇ ಚೇದ್ಭವೇತ್ಪಶ್ಯಾಮಿ ಸಾಂಪ್ರತಂ ।**
**ತಥಾ ಕುರು ಪವಿತ್ರಾಂಗಿ ಹ್ಯನಯೋಃ ಸಂಗಮೋ ಯಥಾ ॥೯೯॥**

**ಶ್ರುತ್ವಾಽಥ ನಂದಿನೀವಾಕ್ಯಂ ಕನ್ಯಾಮೂಚೇ ಪುನರ್ವಚಃ ।**
**ಕುಂಜಾಂತರೇ ಪ್ರವಿಶ್ಯಾಽಽವಾಂ ರಾಧಿಕಾ ಪ್ರಾಣವಲ್ಲಭಾಮ್ ॥೧೦೦॥**

**ನಮಸ್ಕೃತ್ಯ ತತೋ ರಾಧಾಂ ಚಲಿತೇ ತ್ವರಯಾ ಚ ತೇ ।**
**ತಾದೃಶೇ ಕುಂಜಭವನೇ ದದೃಶಾತೇ ಹರಿಂ ಪ್ರಿಯಮ್ ॥೧೦೧॥**

---

ಹೀಗೆ ಬಹುಕಾಲವು ಕಳೆದರೂ ವಿಶ್ವೇಶನಾದ ಶ್ರೀಕೃಷ್ಣನನ್ನು ಅಲ್ಲಿ ನೋಡಲಿಲ್ಲವು. ಆದುದರಿಂದ ನನ್ನ ಸಖಿಯನ್ನು ಕುರಿತು ಪ್ರಿಯನಾದ ಶ್ರೀಕೃಷ್ಣನು ಎಲ್ಲಿರುವನು? ಎಂದು ಕೇಳಿದೆನು. ಆ ಶ್ರೀಕೃಷ್ಣನು ರಾಧೆಯ ಸಮೀಪದಲ್ಲಿಯೇ ಇದ್ದಿದ್ದರೆ ಈಗ ಅವನನ್ನು ನೋಡುತ್ತಿದ್ದೆನು. ॥೯೮॥

ಆದುದರಿಂದ ಎಲೌ ಶೋಭನಾಂಗಿಯೇ, ರಾಧಾಮಾಧವರ ಸಂಗಮವಾಗುವಂತೆ ಮಾಡುವವಳಾಗು. ॥೯೯॥

ಕನ್ನಿಕೆಯು ಹೀಗೆಂದು ಹೇಳಲು, ಅದನ್ನು ಕೇಳಿ ನಂದಿನಿಯು ಕನ್ನಿಕೆಯನ್ನು ಕುರಿತು ಪುನಃ ಹೀಗೆಂದು ಹೇಳಿದಳು. ಎಲೌ ಕನ್ಯೆಯೇ, ನಾವಿಬ್ಬರೂ ರಾಧೆಯ ಪ್ರಾಣಪ್ರಿಯನಾದ ಶ್ರೀಕೃಷ್ಣನನ್ನು ನೋಡಲು ಇನ್ನೊಂದು ಲತಾ ಮಂದಿರವನ್ನು ಕುರಿತು ಹೋಗೋಣ. ॥೧೦೦॥

ತರುವಾಯ ನಾವಿಬ್ಬರೂ ಆ ರಾಧೆಯನ್ನು ನಮಸ್ಕರಿಸಿ, ತ್ವರೆಯಿಂದ ಹೋಗುವವರಾಗಿ ಲತಾಗುಲ್ಮದ ಮಂದಿರದಲ್ಲಿ ಪ್ರಿಯನಾದ ಶ್ರೀಹರಿಯನ್ನು ನೋಡಿದೆವು. ಹರಿಯು ಮುಂದೆ ಹೇಳುವ ರೀತಿಯಲ್ಲಿ ಕಂಗೊಳಿಸುತ್ತಿದ್ದನು ॥೧೦೧॥

ದರ್ಶನೀಯತರಂ ಶ್ಯಾಮಂ ಕಿಶೋರಮತುಲೋಪಮಂ ।
ಶಿಖಿಪಿಚ್ಛಾವತಂಸಂ ಚ ಸುಷ್ಠು ಪೀತಾಂಬರಾವೃತಂ ॥೧೦೨॥

ಪೂರ್ಣಚಂದ್ರಮುಖಂ ಕೃಷ್ಣಕಾಯಂ ಕಂಜವಿಲೋಚನಂ ।
ಸುಚಾರುತಿಲಕಂ ಚಾರುಕುಂಡಲದ್ವಯಮಂಡಿತಂ ॥೧೦೩॥

ಸುಕಪೋಲಂ ಸುನಾಸಂ ಚ ವಿಲೋಲಾಕ್ಷಂ ಚ ಸುಭ್ರುವಮ್ ।
ಸುಕಂಠವರಮಾಲಾಭಿಃ ಶೋಭಮಾನಂ ಮಹಾದ್ಭುತಂ ॥೧೦೪॥

ವನಮಾಲಾಭಿನೀತಾಂಗಂ ಸುಗಂಧಿದ್ರವ್ಯಸಂಪ್ಲುತಂ ।
ಕೋಟಿಕೌಶೇಯವಸನಂ ವಸನೋಪರಿ ಮಂಡಿತಂ ॥೧೦೫॥

ನೂಪುರೈಃ ಕಟಕೈರ್ಭ್ರಾಂತಂ ಮುದ್ರಿಕಾಂಗುಲಿಮಂಡಿತಂ ।
ಸುಸ್ಮಿತೇನಾವಲೋಕೇನ ಸುಖಯಂತಂ ಸಖೀಜನಂ ॥೧೦೬॥

---

ಆ ಹರಿಯು, ಅವಶ್ಯವಾಗಿ ದರ್ಶನಯೋಗ್ಯನೂ, ಕಪ್ಪುಬಣ್ಣವುಳ್ಳವನೂ, ಬಾಲಕನೂ, ಅನನ್ಯಸದೃಶನೂ, ನವಿಲುಗರಿಗಳನ್ನೇ ಕರ್ಣಾಲಂಕಾರವನ್ನಾಗಿ ಮಾಡಿಕೊಂಡಿರುವವನೂ, ಥಳಥಳಿಸುವ ಪೀತಾಂಬರವಸ್ತ್ರವನ್ನು ಧರಿಸಿರುವವನೂ, ಪೂರ್ಣಚಂದ್ರನಂತೆ ಮುಖವುಳ್ಳವನೂ ಶ್ಯಾಮಲವರ್ಣವಾದ ದೇಹವುಳ್ಳವನೂ, ಕಮಲದಂತೆ ಕಣ್ಣುಳ್ಳವನೂ, ಮನೋಹರವಾದ ತಿಲಕವನ್ನು ಧರಿಸಿದವನೂ, ಕಾಂತಿಯುಕ್ತವಾದ ಎರಡು ಕರ್ಣಕುಂಡಲಗಳನ್ನು ಧರಿಸಿದವನೂ ಆಗಿದ್ದನು. ಆ ಶ್ರೀಹರಿಯನ್ನು ನೋಡಿದವು. ॥೧೦೨-೧೦೩॥

ಮತ್ತು ಆ ಶ್ರೀಹರಿಯು, ನಯವಾಗಿಯೂ, ಕಾಂತಿಯುಕ್ತವಾಗಿಯೂ ಇರುವ ಕಪೋಲಗಳನ್ನು ಮತ್ತು ನಾಸಾಪುಟವನ್ನು ಹೊಂದಿದವನಾಗಿಯೂ, ಚಪಲಾಕ್ಷನೂ, ಸುಂದರವಾದ ಹುಬ್ಬುಗಳುಳ್ಳವನೂ, ಸುಂದರವಾದ ಕಂಠದಲ್ಲಿ ಧರಿಸಿರುವ ವನಮಾಲಿಕೆಗಳಿಂದ ಶೋಭಿಸುವವನೂ, ಅತ್ಯದ್ಭುತನೂ, ವನಮಾಲೆಗಳಿಂದ ಸುತ್ತುವರಿಯಲ್ಪಟ್ಟ ದೇಹವುಳ್ಳವನೂ, ಪರಿಮಳದ್ರವ್ಯಗಳಿಂದ ಲಿಪ್ತನೂ, ಕೋಟಿಸಂಖ್ಯಾಕವಾದ ಪೀತಾಂಬರವಸ್ತ್ರಗಳನ್ನು ಧರಿಸಿರುವವನೂ, ಆ ವಸನಗಳ ಮೇಲೆ ಪುನಃ ಅಲಂಕೃತನೂ, ಕೈಕಡಗಗಳುಳ್ಳವನೂ, ಅಂಗುಲೀಯಕವನ್ನು (ಉಂಗುರವನ್ನು) ಧರಿಸಿರುವವನೂ, ಶುಭ್ರವಾದ ಮಂದಹಾಸದಿಂದ ಯುಕ್ತವಾದ ನೋಟ

**ದೃಷ್ಟ್ವಾ ತಂ ನಂದಿನೀ ಪ್ರಾಹ ಕುಂಜಸ್ಥಂ ರಾಧಿಕಾಂ ವಿನಾ ।**
**ಕಥಂ ಪ್ರಾಣಪ್ರಿಯಾಂ ಕೃಷ್ಣ ತ್ಯಕ್ತ್ವಾ ಭಿನ್ನೋಽದ್ಯ ವರ್ತಸೇ ॥೧೦೭॥**

**ಕ್ಷಣಂ ನ ಸ್ಥೀಯತೇಽನ್ಯತ್ರ ವಿನಾ ತಾಂ ಪ್ರಾಣವಲ್ಲಭಾಂ ।**
**ಸಾ ನಾತ್ರ ದೃಶ್ಯತೇ ನಾಥ ಕಿಮಿದಂ ಕಾರಣಂ ವದ ॥೧೦೮॥**

॥ ನಾರದ ಉವಾಚ ॥

**ಇತ್ಯಾಕರ್ಣ್ಯ ಸಖೀವಾಕ್ಯಂ ಭಗವಾನಾಹ ತಾಂ ಪುನಃ ।**
**ಮನಸಾ ಕರ್ಮಣಾ ವಾಚಾ ನಾಚರೇಯಂ ತದಪ್ರಿಯಂ ॥೧೦೯॥**

**ನ ವೇದ್ಮಿ ಕಾರಣಂ ತಸ್ಯಾಃ ಭಿನ್ನತಾಯಾ ಮನೋರಮೇ ।**
**ಶ್ರೀಲಾಂಛಿತಮನುಪ್ರಾಯಂ ಕ್ಷಣೇ ಕೋಪಃ ಕ್ಷಣೇ ಕೃಪಾ ॥೧೧೦॥**

---

ದಿಂದ ತನ್ನ ಸಖೀಜನರನ್ನು ಆನಂದಗೊಳಿಸುವವನೂ ಆಗಿದ್ದನು. ಅಂತಹ ಶ್ರೀಹರಿಯನ್ನು ನಾವು ನೋಡಿದೆವು. ॥೧೦೪-೧೦೫-೧೦೬॥

ಈ ರೀತಿಯಲ್ಲಿ ಕಂಗೊಳಿಸುತ್ತಲಿರುವ ಆ ಶ್ರೀಕೃಷ್ಣನನ್ನು ನೋಡಿ ನಂದಿನಿಯು ಹೀಗೆಂದು ಹೇಳಿದಳು.—ಓ ಪ್ರಭುವಾದ ಕೃಷ್ಣನೇ, ಕ್ರೀಡಾಮಂದಿರದಲ್ಲಿರುವ ನಿನ್ನ ಪ್ರಾಣವಲ್ಲಭೆಯಾದ ರಾಧಿಕೆಯನ್ನು ಅಗಲಿ ನೀನು ಒಬ್ಬಂಟಿಗನಾಗಿ ಇಲ್ಲಿ ಹೇಗೆ ಇರುತ್ತೀಯೆ? ॥೧೦೭॥

ಓ ನಾಥನೇ, ನೀನು ಪ್ರಾಣಪ್ರಿಯೆಯಾದ ರಾಧೆಯನ್ನು ಬಿಟ್ಟು ಕ್ಷಣಕಾಲವೂ ಇರಲಾರೆ. ಆದರೆ ಇಲ್ಲಿ ರಾಧೆಯು ಕಾಣಿಸುವುದಿಲ್ಲ. ಇದಕ್ಕೆ ಕಾರಣವೇನು? ಅದನ್ನು ಹೇಳುವವನಾಗು. ॥೧೦೮॥

ನಾರದನು ಹೇಳಿದನು—ಸಖಿಯಾದ ನಂದಿನಿಯು ಹೇಳಿದ ಮಾತನ್ನು ಕೇಳಿ ಕೃಷ್ಣನು ಅವಳನ್ನು ಕುರಿತು ಹೀಗೆಂದು ಹೇಳಿದನು. ಎಲೌ ಸಖಿಯೇ, ಮನಸ್ಸಿನಿಂದಲೂ, ಕರ್ಮದಿಂದಲೂ, ಮಾತಿನಿಂದಲೂ ರಾಧೆಗೆ ಅಪ್ರಿಯವನ್ನು ಎಂದಿಗೂ ಆಚರಿಸಲಾರೆನು. ಆದರೆ ಅವಳು ನನ್ನನ್ನು ಅಗಲಿರುವುದರ ಕಾರಣವನ್ನು ನಾನು ತಿಳಿಯಲಾರೆನು. ॥೧೦೯॥

ನಾನಾವಿಧವಾದ ಲೀಲೆಗಳಲ್ಲಿ ಆಸಕ್ತನಾದ ನಾನು ಎಂದಿಗೂ ರಾಧೆಯನ್ನಗಲಿ ಇರುವುದಿಲ್ಲ. ಎಲೌ ಸುಮುಖಿಯೇ, ರಾಧೆಯ ಪ್ರೇಮಪುರಃಸರವಾದ ಕೋಪ

ವಿಚಿತ್ರವಿಭ್ರಮಾಸಕ್ತೋ ನ ವಿಭಕ್ತಃ ಕದಾಚನ ।
ತತ್ಪ್ರೇಮಕೋಪಕೇಲಿಭ್ಯಾಂ ನಾಹಂ ವ್ಯಗ್ರಃ ಶುಭಾನನೇ ॥೧೧೧॥

ತಸ್ಯೈ ಯಾ ರೋಚತೇ ಕೇಲಿಃ ಸಾ ಮಾಂ ಸುಖಯತೇಽನಿಶಂ ।
ನ ದುಃಖಾಯ ಕುತೋ ರುಷ್ಟಾ ಪ್ರಿಯಾ ಮೇ ವರ್ತತೇಽನಿಶಂ ॥೧೧೨॥

ಗಚ್ಛಾಶು ಕನ್ಯಯಾ ಸಾರ್ಧಂ ತತ್ರ ಗತ್ವಾ ನಿವೇದಯ ।
ಮದ್ವಾರ್ತಾಂ ಪುನರಾಗತ್ಯ ಅಪರಾಧಂ ಪ್ರಕಾಶಯ ॥೧೧೩॥

ತಾಂ ಪೃಚ್ಛ ಸ್ವಾಗ್ರಹೇಣೈವ ತತ್ಪ್ರಿಯಾಂ ರಾಧಿಕಾಂ ಸಖೀಂ ।
ಕಥಂ ಸ್ಥಿತಾ ನಿಕುಂಜೇಽಸ್ಮಿನ್ ಹರಿಂ ಪ್ರಾಣಪ್ರಿಯಂ ವಿನಾ ॥೧೧೪॥

ಇತ್ಯಾದಿ ಮಧುರಾಲಾಪೈರಾಪ್ರಚ್ಛ ತ್ವಮನಾಕುಲಾ ।
ಪೃಷ್ಟಾ ಮಾಂ ಕಿಂ ವದೇತ್ಕಾಂತಾ ಮಮೈಕಾ ಪ್ರಾಣವಲ್ಲಭಾ ॥೧೧೫॥

---

ದಿಂದಲೂ ಮತ್ತು ಕ್ರೀಡೆಯಿಂದಲೂ ನಾನು ಎಂದಿಗೂ ಭಿನ್ನನಾಗುವುದಿಲ್ಲ. ॥೧೧೦-೧೧೧॥

ಅವಳಿಗೆ ಯಾವ ಕ್ರೀಡೆಯು ಇಷ್ಟವಾಗಿರುವುದೋ ಅದು ನನ್ನನ್ನು ಸುಖಿಯನ್ನಾಗಿ ಮಾಡುವುದು. ಆ ವರ್ತನೆಯು ಎಂದಿಗೂ ನನಗೆ ದುಃಖವನ್ನುಂಟು ಮಾಡಲಾರದು. ಆದರೂ ನನ್ನ ಪ್ರಿಯತಮೆಯು ಏತಕ್ಕೆ ಕೋಪಗೊಂಡಿರುವಳೋ ತಿಳಿಯದವನಾಗಿದ್ದೇನೆ. ॥೧೧೨॥

ಎಲೌ ಸಖಿಯೇ, ನೀನು ಈ ಕನ್ಯೆಯೊಂದಿಗೆ ಶೀಘ್ರವಾಗಿ ಹೋಗಿ, ನನ್ನ ವಾರ್ತೆಯನ್ನು ರಾಧೆಗೆ ತಿಳಿಸು. ಮತ್ತು ನನ್ನಿಂದುಂಟಾಗಿರಬಹುದಾದ ಅಪರಾಧವನ್ನು ಅವಳ ಮೂಲಕ ತಿಳಿದು ಪುನಃ ಹಿಂತಿರುಗಿ ನನಗೆ ಅದನ್ನು ತಿಳಿಸುವವಳಾಗು. ॥೧೧೩॥

ನಿನ್ನ ಪ್ರಿಯಳೂ ಮತ್ತು ಸಖಿಯೂ ಆದ ರಾಧಿಕೆಯನ್ನು ಕುರಿತು ಆಗ್ರಹದಿಂದ ಹೀಗೆಂದು ಕೇಳುವವಳಾಗು. ಅದೇನೆಂದರೆ, ಪ್ರಾಣಪ್ರಿಯನಾದ ಹರಿಯನ್ನಗಲಿ ಈ ಕ್ರೀಡಾಗೃಹದಲ್ಲಿ ನೀನು ಹೇಗೆ ಇರುವೆ? ॥೧೧೪॥

ಇವೇ ಮೊದಲಾದ ಮಧುರವಾಕ್ಯಗಳೊಂದಿಗೆ ಅಪರಾಧ ಕಾರಣವನ್ನು ಕೇಳುವವಳಾಗು. ಮತ್ತು ನೀನು ಹೀಗೆಂದು ಪ್ರಶ್ನಿಸಲು, ನನ್ನ ಪ್ರಾಣಪ್ರಿಯೆಯಾದ ಅವಳು ಯಾವ ಉತ್ತರವನ್ನು ನುಡಿಯುವಳೋ ಅದನ್ನು ನನಗೆ ಹೇಳುವವಳಾಗು. ॥೧೧೫॥

ದೂತೀವಿಹಿತವಾಕ್ಯೈಶ್ಚ ಸಮಾರಾಧಯ ಮೇ ಪ್ರಿಯಾಂ ।
ಅಹಂ ಚೇತ್ ತತ್ರ ಗಚ್ಛಾಮಿ ಮಾನಂ ಚಾಧಿಕತಾಂ ವ್ರಜೇತ್ ॥೧೧೬॥

ಪತಿಃ ಪ್ರಾಣಪ್ರಿಯಃ ಸ್ತ್ರೀಣಾಂ ಪತ್ಯೌ ಮನೋ ವಿರಾಜತೇ ।
ಕಥಮನ್ಯತ್ರ ಕುರ್ವಂತಿ ಪತಿಪ್ರಾಣಾಃ ಪತಿವ್ರತಾಃ ॥೧೧೭॥

ಅತೋ ಯಾಹ್ಯನಯಾ ಸಾರ್ಧಂ ಕನ್ಯಯಾ ಸಹ ನಂದಿನಿ ।
ತಾಂಬೂಲಕುಸುಮಾದೀನಿ ಗೃಹೀತ್ವಾ ಗಂಧಭಾಜನಮ್ ॥೧೧೮॥

ದತ್ವಾ ಚ ವಚನಚಾತುರ್ಯಾದ್ಧೃತ್ವಾ ಚಾಗಚ್ಛ ಮಾಂ ಪ್ರತಿ ।
ಸುಪ್ರಸನ್ನಾಂ ಪ್ರಿಯಾಂ ಜ್ಞಾತ್ವಾ ಗಮಿಷ್ಯೇ ದಯಿತಾಂ ಪ್ರತಿ ॥೧೧೯॥

ಅನಾರಾಧ್ಯ ಪ್ರಿಯಾಂ ಗಚ್ಛನ್ಪತಿರ್ಲಾಘವಮಾಪ್ನುಯಾತ್ ॥೧೨೦॥

---

ದೂತಿಯು ಹೇಳಬೇಕಾದ ಪ್ರಿಯವಾದ ವಾಕ್ಯಗಳಿಂದ ನನ್ನ ಪ್ರಿಯತಮೆಯನ್ನು ಸಮಾಧಾನಗೊಳಿಸುವವಳಾಗು. ನಾನೇ ಅವಳಿದ್ದಲ್ಲಿಗೆ ಹೋದವನಾದರೆ ಅವಳ ಕೋಪವು ಮತ್ತಷ್ಟು ಅಧಿಕವಾಗಬಹುದು. ॥೧೧೬॥

ಏಕೆಂದರೆ, ಸ್ತ್ರೀಯರಿಗೆ ಪತಿಯೇ ಪ್ರಾಣಕ್ಕಿಂತಲೂ ಪ್ರಿಯನಾಗಿರುವನು. ಪತಿಯ ವಿಷಯದಲ್ಲಿ ಸ್ತ್ರೀಯರ ಕೋಪವು ಶೋಭಿಸುವುದು. ಪತಿಯೇ ಪ್ರಾಣವಾಗಿ ಉಳ್ಳವರೂ, ಪತಿವ್ರತೆಯರೂ ಆದ ಸ್ತ್ರೀಯರು ಪತಿಯನ್ನು ಬಿಟ್ಟು ಇತರರಲ್ಲಿ ಹೇಗೆ ತಾನೇ ಕೋಪಗೊಳ್ಳುವರು ? ॥೧೧೭॥

ಆದುದರಿಂದ ಎಲೌ ನಂದಿನಿಯೇ, ನೀನು ಈ ಕನ್ಯೆಯೊಂದಿಗೆ ತಾಂಬೂಲ, ಪುಷ್ಪ ಮುಂತಾದುವುಗಳನ್ನೂ ಮತ್ತು ಗಂಧದ ಪಾತ್ರೆಯನ್ನೂ ತೆಗೆದುಕೊಂಡು ರಾಧೆಯ ಸಮೀಪಕ್ಕೆ ಹೋಗುವವಳಾಗು. ॥೧೧೮॥

ತಾಂಬೂಲ ಪುಷ್ಪಾದಿಗಳನ್ನು ಅವಳಿಗೆ ಸಮರ್ಪಿಸಿ, ನಿನ್ನ ವಚನಚಾತುರ್ಯದಿಂದ ಅವಳ ಕೋಪದ ಕಾರಣವನ್ನು ತಿಳಿದುಕೊಂಡು ಹಿಂತಿರುಗಿ ಬರುವವಳಾಗು. ಪ್ರೇಯಸಿಯು ಪ್ರಸನ್ನವದನೆಯಾದ ಸಮಯವನ್ನು ತಿಳಿದು ಅವಳಿದ್ದೆಡೆಗೆ ಹೋಗುವೆನು. ॥೧೧೯॥

ಪ್ರಿಯತಮೆಯನ್ನು ಸಂತೋಷಗೊಳಿಸದೆ ಅವಳಿದ್ದಲ್ಲಿಗೆ ಹೋಗುವ ಪತಿಯು ಲಾಘವವನ್ನು ಹೊಂದುತ್ತಾನೆ. ॥೧೨೦॥

ಇತಿ ವಚನ ವಿನೋದಂ ಕೃಷ್ಣದೇವಸ್ಯ ಶ್ರುತ್ವಾ
ಮಧುರ ಮಿದಮಮೋಘಂ ನಂದಿನೀ ವಾಕ್ಯಮಾಹ ।
ಕಿಮಹಮುಪನಯೇಯಂ ದೇಹಿ ನಾಥಾದ್ಯ ವಸ್ತು
ತವ ಸಖಿ ಪುರತೋಽಹಂ ಯಾಮಿ ರಾಧಾ ಸಮೀಪಂ ॥೧೨೧॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯ್ಯಾಸಿಕೇ
ನಾರದ ಶೌನಕ ಸಂವಾದೇ ರಾಧಿಕಾಮಾನೋ
ನಾಮ ತ್ರಯೋದಶೋಽಧ್ಯಾಯಃ

---

ಶ್ರೀ ಕೃಷ್ಣನ ಈರೀತಿಯಾದ ವಿನೋದ ವಚನವನ್ನು ಕೇಳಿ, ನಂದಿನಿಯು, ಮಧುರವೂ, ಅಮೋಘವೂ ಆದ ಈ ವಾಕ್ಯವನ್ನು ಹೇಳಿದಳು. ಓ ನಾಥನೇ, ರಾಧೆಯ ಸಮೀಪವನ್ನು ಕುರಿತು ತೆರಳಲು ನಾನು ಯಾವ ಯಾವ ವಸ್ತುಗಳನ್ನು ತೆಗೆದುಕೊಂಡು ಹೋಗಬೇಕಾಗುವುದೋ ಆ ವಸ್ತುಗಳನ್ನು ಕೊಡುವವನಾಗು. ಅವುಗಳನ್ನು ತೆಗೆದುಕೊಂಡು, ನಿನ್ನ ಸಖಿಯಾದ ರಾಧೆಯ ಸಮೀಪವನ್ನೈದುವೆನು. ॥೧೨೧॥

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ನಾರದ ಶೌನಕಸಂವಾದದಲ್ಲಿ ರಾಧೆಯ ಮಾನವನ್ನು ತಿಳಿಸುವ ಹದಿಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ



## || ಚತುರ್ದಶೋಽಧ್ಯಾಯಃ ||

### ಹದಿನಾಲ್ಕನೆಯ ಅಧ್ಯಾಯವು

|| ನಾರದ ಉವಾಚ ||

**ತತೋ ಹರಿರ್ದದೌ ತಸ್ಯೈ ತಾಂಬೂಲಂ ಕುಸುಮಾದಿ ಚ ।**
**ಗಂಧಭಾಜನಮುತ್ಕೃಷ್ಟಂ ದರ್ಶನೀಯತಮಂ ಶುಚಿ ॥೧॥**

**ನೀತ್ವಾ ತತಃ ಪ್ರಚಲಿತಾ ನಂದಿನೀ ಕನ್ಯಯಾ ಸಮಂ ।**
**ಸಮಾಯಯೌ ನಿಕುಂಜಾಂತೇ ರಾಧಿಕಾಂ ಕೃಷ್ಣವಲ್ಲಭಾಂ ॥೨॥**

**ಆಗತ್ಯ ವಿನಯೇನೋಚ್ಚೈರೂಚೇ ಕೃಷ್ಣವಚಾಂಸಿ ತಾಂ ।**
**ಕಿಮರ್ಥಮತ್ರ ಭವನೇ ಸ್ಥಿತಾಽಸ್ಯೇಕಾಕಿನೀ ವನೇ ॥೩॥**

ತರುವಾಯ ಹರಿಯು ನಂದಿನಿಗೆ, ತಾಂಬೂಲವನ್ನೂ, ಪುಷ್ಪಾದಿಗಳನ್ನೂ, ಮತ್ತು ಶ್ರೇಷ್ಠವಾಗಿಯೂ, ಸುಂದರವೂ ಎತ್ತರವೂ ಆಗಿ ಇರುವ ಗಂಧದ ಪಾತ್ರೆಯನ್ನೂ ಕೊಟ್ಟನು. ||೧||

ಬಳಿಕ ನಂದಿನಿಯು, ತಾಂಬೂಲಾದಿಗಳನ್ನು ತೆಗೆದುಕೊಂಡು ಆ ಕನ್ನಿಕೆಯೊಡನೆ ಲತಾಗುಲ್ಮದ ಬಳಿ ಇರುವ ಕೃಷ್ಣವಲ್ಲಭೆಯಾದ ರಾಧೆಯ ಸಮಿಾಪವನ್ನು ಕುರಿತು ತೆರಳಿದಳು. ||೨||

ತರುವಾಯ ರಾಧೆಯ ಸಮೀಪಕ್ಕೆ ಬಂದವಳಾಗಿ ಅವಳನ್ನು ಕುರಿತು ವಿನಯದಿಂದಲೂ ಮತ್ತು ಉಚ್ಚಸ್ವರದಿಂದಲೂ ಹೀಗೆಂದು ಹೇಳಿದಳು. ಎಲೌ ಸುಮುಖಿಯೇ, ಉದ್ಯಾನವನದಲ್ಲಿರುವ ಈ ಕ್ರೀಡಾಮಂದಿರದಲ್ಲಿ ಏಕಾಕಿನಿಯಾಗಿ ಏತ

ಮಯಾ ನ ಶಕ್ಯತೇ ದ್ರಷ್ಟುಂ ವಿಚ್ಛೇದ ಉಭಯೋರಪಿ ।
ಪ್ರಾಣಪ್ರಿಯಾಂ ವಿನಾ ತಂ ತು ತ್ವಾಂ ವಿನಾ ಪ್ರಾಣವಲ್ಲಭಂ(ಭಾಂ) ॥೪॥

ನ ಚಾಽನಭಿಜ್ಞೋಽಯಮಸ್ತಿ ನಾಗರಸ್ತವ ವಲ್ಲಭಃ ।
ತವಾರ್ಥಂ ಗೋಪವೇಷೇಣ ಕ್ರೀಡತೇ ವಿಪಿನೇ ಮಹಾನ್ ॥೫॥

ಸ ಏವಾಽತಿತರಾಂ ದೀನಾಂ ಕುರ್ವನ್ನಾತಿ ವಿರಾಜತೇ ।
ಮಾನಿನೀ ಮಾನಮೇವಾತ್ರ ಕುರ್ವತೀ ಪರಿಶೋಭತೇ ॥೬॥

ಯದಿ ಸ್ಯಾನ್ನಾಯಕೋ ಮಾನೀ ನಾನ್ಯಥಾಽಸೌ ನಿರರ್ಥಕಃ ।
ಮಾನಿನೀ ಪಟುತಾಮೇತಿ ಪತ್ಯೌ ಮಾನಂ ಪ್ರಕುರ್ವತಿ ॥೭॥

ಗುಣರಾಶಿ ಪ್ರಿಯಾಽತ್ಯಂತಂ ಸಾ ತ್ವಂ ನಾನ್ಯಾ ಕದಾಚನ ।
ಕಿಮತ್ರ ಕಾರಣಂ ಕಾಂತೇ ವೃಥಾ ಮಾನೋ ನ ರಾಜತೇ ॥೮॥

---

ಕ್ಕೋಸ್ಕರ ನಿಂತಿರುವೆ? ನಿಮ್ಮಿಬ್ಬರ ಪರಸ್ಪರ ವಿಯೋಗವನ್ನು ನಾನು ನೋಡ ಲಾರೆನು. ಪ್ರಾಣವಲ್ಲಭೆಯಾದ ನಿನ್ನನ್ನು ಆಗಲಿರುವ ಶ್ರೀಕೃಷ್ಣನನ್ನು ಮತ್ತು ಪ್ರಾಣಪ್ರಿಯನಾದ ಕೃಷ್ಣನನ್ನು ಆಗಲಿರುವ ನಿನ್ನನ್ನೂ ನೋಡಲಾರೆನು. ||೩-೪||

ನಿನ್ನ ಪ್ರಿಯತಮನು ತಿಳಿವಳಿಕೆಯಿಲ್ಲದ ಗ್ರಾಮ್ಯಪುರುಷನಾಗಿರದೆ ನಾಗರಿಕ ನಾಗಿರುವನು. ಆದರೂ ನಿನಗೋಸ್ಕರವಾಗಿ ಗೋಪಾಲನ ವೇಷವನ್ನು ತಾಳಿ ಈ ಮಹತ್ತಾದ ವನದಲ್ಲಿ ಕ್ರೀಡಿಸುತ್ತಿರುವನು. ಈಗ ನಿನಗಾಗಿ ಶ್ರೀಕೃಷ್ಣನೇ ಅತಿ ಯಾದ ದೈನ್ಯಾವಸ್ಥೆಯನ್ನು ಹೊಂದಿ ವಿರಾಜಿಸುತ್ತಿರುವನು. ||೫||

ಪತಿಯು ಕುಪಿತನಾದರೆ ಅವನಲ್ಲಿ ಕೋಪಗೊಳ್ಳುವ ಸ್ತ್ರೀಯು ಶೋಭಿ ಸುವಳು. ಹಾಗಿಲ್ಲದೆ ನಿಷ್ಕಾರಣವಾಗಿ ಉಂಟಾಗುವ ಕೋಪವು ನಿರರ್ಥಕವಾಗು ವುದು. ಪತಿಯು ಕೋಪಿಷ್ಠನಾದರೆ ಸ್ತ್ರೀಯೂ ಕೋಪಗೊಳ್ಳುವುದು ಸಹಜವಾಗಿರು ತ್ತದೆ. ||೬-೭||

ಕೃಷ್ಣನ ಪ್ರಾಣಪ್ರಿಯಳಾದ ನೀನು, ಸೌಶೀಲ್ಯಾದಿ ಸದ್ಗುಣಗಳಿಂದ ಯುಕ್ತ ಳಾಗಿರುವೆಯಲ್ಲದೆ ಗುಣಹೀನೆಯಲ್ಲ. ಆದರೂ ಈಗ ನಿನ್ನ ಕೋಪಕ್ಕೆ ಕಾರಣ ವೇನು? ವ್ಯರ್ಥವಾದ ಕೋಪವು ಶೋಭಿಸಲಾರದು. ||೮||

ಕಿಮದ್ಯ ಮೌನಮಾಶ್ರಿತ್ಯ ಸ್ಥಿತಾಽಸೀತ್ಯುತ್ತರಂ ವದ ।
ತ್ವಮಾಕರ್ಣಯ ಮದ್ವಾಕ್ಯಂ ತಾಂಬೂಲಂ ಪುಷ್ಪಚಂದನಂ ॥೯॥

ಗೃಹಾಣ ಹರಿಣಾ ದತ್ತಂ ಪ್ರೀತ್ಯಾಽಹಂ ಪ್ರೇಷಿತಾಽಸ್ಮಿ ಭೋಃ ।
ಇತ್ಯಾಕರ್ಣ್ಯ ತತಃ ಪ್ರಾಹ ಸಖೀಂ ರಾಧಾ ವರಾಂಗನಾ ॥೧೦॥

ದೇಹೇ ನ ಕೇವಲಾ ಶ್ರೇಷ್ಠಾ ಮನಸ್ಯಪಿ ವಿರಾಜಿತಾಃ ।
ಭವಂತಿ ಯೋಷಿತಃ ಶಶ್ವತ್ಪರಚಿತ್ತಹರಾಸ್ತಥಾ ॥೧೧॥

ಯದಿ ತಾಸಾಂ ವಶೇ ಯಾತಿ ಕಿಂ ಕರಿಷ್ಯತಿ ಮಾದೃಶೀಂ ।
ನ ಜಾನೇ ಕ್ವ ಗತಃ ಕಾಂತೋ ಮಾಂ ತ್ಯಕ್ತ್ವಾಽತ್ರ ವನಾಂತರೇ ॥೧೨॥

ಕಿತವಃ ಕುರುತೇ ಧಾರ್ಷ್ಟ್ಯಂ ತ್ವನ್ಮುಖೇನ ವರಾನನೇ ।
ಯದಿ ಶುದ್ಧಂ ಮನಸ್ತಸ್ಯ ಸ್ವಯಂ ಕಿಮಿತಿ ನಾಗತಃ ॥೧೩॥

---

ನೀನು ಈಗ ಮೌನವನ್ನು ತಾಳಿ ಇರಲು ಕಾರಣವೇನು? ಇದಕ್ಕೆ ಉತ್ತರವನ್ನು ಹೇಳು. ಮತ್ತು ನನ್ನ ವಚನವನ್ನು ಲಾಲಿಸುವವಳಾಗು. ಹರಿಯು ನಿನಗೋಸ್ಕರ ಕಳುಹಿಸಿಕೊಟ್ಟ ಈ ತಾಂಬೂಲವನ್ನೂ ಪುಷ್ಪಗಳನ್ನೂ ಮತ್ತು ಚಂದನವನ್ನೂ ಸ್ವೀಕರಿಸುವವಳಾಗು. ಎಲೌ ಸುಮುಖಿಯೇ, ಶ್ರೀಕೃಷ್ಣನಿಂದ ನಾನು ಪ್ರೀತಿಯಿಂದ ಕಳುಹಿಸಲ್ಪಟ್ಟವಳಾಗಿರುತ್ತೇನೆ. ಹೀಗೆಂದು ಹೇಳಿದ ನಂದಿನಿಯ ಮಾತನ್ನು ಕೇಳಿ, ಉತ್ತಮಸ್ತ್ರೀಯಾದ ರಾಧಿಕೆಯು ತನ್ನ ಸಖಿಯನ್ನು ಕುರಿತು ಹೀಗೆಂದು ಹೇಳಿದಳು. ॥೯-೧೦-೧೧॥

ಸ್ತ್ರೀಯರು ದೇಹದಲ್ಲಿ ಮಾತ್ರವಲ್ಲದೆ ಮನಸ್ಸಿನಲ್ಲಿಯೂ ಶುದ್ಧರಾಗಿರುತ್ತಾರೆ ಇಂತಹ ಸ್ತ್ರೀಯರು ಸರ್ವದಾ ಪರರ ಮನಸ್ಸನ್ನು ಸೂರೆಗೊಳ್ಳುವವರಾಗಿರುತ್ತಾರೆ. ಕೃಷ್ಣನು ಅಂತಹ ಸ್ತ್ರೀಯರಿಗೆ ಅಧೀನನಾಗಿದ್ದಲ್ಲಿ ನನ್ನಂತವಳನ್ನು ಬಿಡದೆ ಮತ್ತೇನನ್ನು ತಾನೇ ಮಾಡುವನು? ನನ್ನ ಕಾಂತನು ನನ್ನನ್ನು ಬಿಟ್ಟು ಎಲ್ಲಿಗೆ ಹೋಗಿರುವನೋ ತಿಳಿಯಲಾರೆನು. ॥೧೨॥

ಧೂರ್ತನಾದ ಅವನು ನಿನ್ನ ಮೂಲಕ ಧಾರ್ಷ್ಟ್ಯವನ್ನು ಪ್ರಕಟಪಡಿಸುತ್ತಾನೆ! ಅವನ ಅಂತಃಕರಣವು ಶುದ್ಧವಾಗಿದ್ದುದೇ ಆದರೆ ಅವನು ತಾನಾಗಿಯೇ ಇಲ್ಲಿಗೆ ಏತಕ್ಕಾಗಿ ಬರಲಿಲ್ಲ? ॥೧೩॥

ಪರಂ ಜಾನೇಽತ್ರ ಚಾತುರ್ಯಂ ಕುತ್ರಾಪ್ಯಭಿರತೋಽನ್ಯತಃ ।
ಆದೌ ಚ ಸಖಿ ಹೃತ್ವಾ ಗಾಂ ವಿನಯೋ ನ ವಿರಾಜತೇ ॥೧೪॥

ಕಿಮರ್ಥಂ ಮಾನಿನೀಚಿತ್ತಂ ಚೋರಯನ್ನಾಭಿಗಚ್ಛತಿ
ತ್ವರಾ ಗಚ್ಛಾನಯಾ ಸಾರ್ಧಂ ಸಖ್ಯಾ ಸಹ ಯಥಾಽಽಗತಾ ।
ಕಥಯ್ಯೈತದ್ವ ಚ ಸ್ತಸ್ಮೈ ಯದಾನೀತಂ ನಯಸ್ವ ತತ್ ॥೧೫॥

॥ ನಾರದ ಉವಾಚ ॥

ಇತ್ಯಾಕರ್ಣ್ಯ ಸಖೀ ವಾಕ್ಯಂ ರಾಧಿಕಾಯಾಸ್ತ್ವರಾಽನ್ವಿತಾ ।
ಉವಾಚ ದತ್ವಾ ಹರಯೇ ತಾಂಬೂಲಂ ಪುಷ್ಪಚಂದನಂ ॥೧೬॥

ರಾಧಯೋಕ್ತಂ ಮಮ ಪ್ರಾಣಪ್ರಿಯೋಽಸ್ತ್ಯನ್ಯಾಪ್ರಿಯೋಽಭವತ್ ।
ಮಾಮಾಶ್ರಿತ್ಯ ನಿಕುಂಜೇಽಸ್ಮಿನ್ ಸ್ಥಿತೋ ರಾಧಾಂ ವಿಹಾಯ ಹಿ ॥೧೭॥

---

ಅವನ ಅನಿರ್ವಚನೀಯವಾದ ಚಾತುರ್ಯವನ್ನು ನಾನು ತಿಳಿದಿರುವೆನು. ಅವನು ಯಾವಳೋ ಅನ್ಯಸ್ತ್ರೀಯಲ್ಲಿ ಆಸಕ್ತನಾಗಿರುವನು! ಎಲೌ ಸಖಿಯೇ, ಮೊದಲು ಮಾತನಾಡದೆ ಬಳಿಕ ವಿನಯವನ್ನು ತೋರಿಸಿದರೆ ಅದು ಶೋಭಿಸ ಲಾರದು. ॥೧೪॥

ಸ್ತ್ರೀಯಳ ಚಿತ್ತವನ್ನು ಸೆಳೆಯುವವನಾಗಿ ಏತಕ್ಕೆ ಅವನು ನಾನಿದ್ದೆಡೆಗೆ ಬರುವುದಿಲ್ಲವೋ ತಿಳಿಯಲಾರದವಳಾಗಿದ್ದೇನೆ. ನೀನು ಶೀಘ್ರವಾಗಿ ಈ ಸಖಿಯೊಂ ದಿಗೆ ಹೋಗಿ ಅವನಿಗೆ ನಾನು ನಿನ್ನೊಡನೆ ಈಗ ಹೇಳಿರುವ ಈ ವಚನವನ್ನು ತಿಳಿಸುವವಳಾಗು. ಮತ್ತು ನೀನು ಅವನ ಸಮೀಪದಿಂದ ಬರುವಾಗ ತಂದಿರುವ ತಾಂಬೂಲಾದಿಗಳನ್ನೂ ತೆಗೆದುಕೊಂಡು ಹೋಗು. ॥೧೫॥

ಸಖಿಯಾದ ನಂದಿನಿಯು, ರಾಧಿಕೆಯ ವಚನವನ್ನು ಕೇಳಿ, ಕೃಷ್ಣನ ಸನ್ನಿಧಿ ಯನ್ನು ಪಡೆದು, ತಾನು ತಂದ ತಾಂಬೂಲವನ್ನೂ ಮತ್ತು ಪುಷ್ಪ ಚಂದನಗಳನ್ನೂ ಕೊಟ್ಟು, ಅವನನ್ನು ಕುರಿತು ಹೀಗೆಂದು ಹೇಳಿದಳು. ಓ ಹರಿಯೇ, ನನ್ನ ಪ್ರಾಣ ಪ್ರಿಯನಾದ ಕೃಷ್ಣನು ಅನ್ಯಸ್ತ್ರೀಯಲ್ಲಿ ಆಸಕ್ತನಾಗಿರುವನು! ಎಂದು ಹೇಳಿದಳು. ॥೧೬॥

ಅವಳು ಹೀಗೆಂದು ಹೇಳಲು ಕೃಷ್ಣನು ನಿನ್ನನ್ನು ಆಗಲಿ, ಆ ಲತಾಗುಲ್ಮ ದಲ್ಲಿ ನನ್ನನ್ನು ಆಶ್ರಯಿಸಿದ್ದನು ಎಂದು ನಾನು ಉತ್ತರವಿತ್ತೆನು. ॥೧೭॥

ಇತ್ಯುಕ್ತ್ವಾ ರಾಧಿಕಾ ಕಾಂತಾ ಬಹುಧಾ ತೋಷಿತಾ ಮಯಾ ।
ನ ಜಹಾತಿ ನಿಜಂ ಮಾನಂ ತ್ವಯಿ ಕಿಂಚಿತ್ಕೃತಾಗಸಿ ॥೧೮॥

ನ ತಯಾ ಸದೃಶೀ ಕಾಂತಾ ರಾಧಿಕಾ ಯಾಽತಿ ವಿಶ್ರುತಾ ।
ತಾಂ ತ್ಯಕ್ತ್ವಾ ತ್ವನ್ಯಸಂಸ್ನೇಹಸ್ತ್ವನ್ಯೈವ ಗುಣಹೀನತಾ ॥೧೯॥

ಸತ್ಯಂ ಬ್ರೂಹಿ ನಿಜಾಗಸ್ತ್ವಂ ಯುತೋಽಸಿ ಶ್ರೇಷ್ಠ ನಾಯಕಃ ।
ನ ಚ ಸಾಮಾನ್ಯಗುಣವಾಂಸ್ತ್ವಮುತ ಸರ್ವಸಂಮತಃ ॥೨೦॥

ಸತ್ಕಾಂತಾಲಕ್ಷಣಂ ಯಾತಿ ಪ್ರಿಯಾ ಪ್ರಾಣಸಖೀ ಸತೀ ।
ಕಥಂ ತವ ನಿಕುಂಜೇಽಸ್ಮಿನ್ಪ್ರವೇಶಸ್ತಾಂ ವಿನಾಽಭವತ್ ॥೨೧॥

ನಾಪರಾಧ್ಯಸಿ ಚೇತ್ಸಾರ್ಧಂ ಮಯಾ ನಾಗಮ್ಯತೇ ಕಥಂ ।
ವಿಚಾರ್ಯತೇ ಮಯಾ ಪ್ರೀತಿಗ್ಲಾನಿಸ್ತಸ್ಯಾ ಮನಸ್ಯಪಿ ॥೨೨॥

---

ನಾನು ಹೀಗೆಂದು ಹೇಳಿ ನಾನಾವಿಧವಾಗಿ ಅವಳನ್ನು ಸಂತೋಷಗೊಳಿಸಿದೆನು. ಆದರೂ ಅವಳು ಸ್ವಲ್ಪವಾದ ಅಪರಾಧವನ್ನು ಗೈದ ನಿನ್ನ ಮೇಲಿನ ಕೋಪವನ್ನು ಬಿಡುವುದಿಲ್ಲ. ॥೧೮॥

ರಾಧೆಗೆ ಸದೃಶಳಾದ ಸ್ತ್ರೀಯು ಬೇರೊಬ್ಬಳಿರುವುದಿಲ್ಲ. ಹೀಗಿರುವಲ್ಲಿ ಅವಳನ್ನು ಬಿಟ್ಟು ಬೇರೆಯವಳನ್ನು ಪ್ರೀತಿಸುವುದು ಗುಣಹಾನಿಯಿಂದ ಕೂಡಿದ ಶುದ್ಧ ಮೂರ್ಖತನವಾಗಿರುತ್ತದೆ. ॥೧೯॥

ನೀನು ಸಾಮಾನ್ಯಜನರಲ್ಲಿರುವ ಗುಣಗಳಿಂದ ಯುಕ್ತನಾಗಿರದೆ, ಶ್ರೇಷ್ಠನಾದ ನಾಯಕನೆನಿಸಿಕೊಂಡಿರುತ್ತೀಯೆ. ಆದುದರಿಂದ ನೀನು ಮಾಡಿರುವ ನಿಜವಾದ ಅಪರಾಧವನ್ನು ಹೇಳುವವನಾಗು. ॥೨೦॥

ನಿನ್ನ ಪ್ರಾಣಸಖಿಯೂ, ಪತಿವ್ರತೆಯೂ ಆದ ರಾಧೆಯು ಉತ್ತಮವಾದ ಸ್ತ್ರೀಯರ ಲಕ್ಷಣವನ್ನು ಹೊಂದಿರುತ್ತಾಳೆ. ಹೀಗಿರುವಲ್ಲಿ ಅವಳನ್ನು ಬಿಟ್ಟು ನೀನೊಬ್ಬನೇ ಈ ಲತಾ ಗುಲ್ಮವನ್ನು ಏಕೆ ಪ್ರವೇಶಿಸಿದೆ? ಆದನ್ನು ಹೇಳುವವನಾಗು. ॥೨೧॥

**ನಗ್ಲಾನೇ ರೌಷಧಂ ಕಿಂಚಿತ್ಪ್ರತೀತೀರ್ನೋಽಪಜಾಯತೇ ।**
**ತಸ್ಮಾತ್ಕಿಮತ್ರ ಕರ್ತವ್ಯಂ ವದಸ್ವಾದ್ಯ ಮನೋರಮ ॥೨೩॥**

॥ ನಾರದ ಉವಾಚ ॥

**ಕಾಽಸ್ತ್ಯತ್ರ ಮೇಽಪರಾ ಪತ್ನೀ ಪ್ರಿಯಾಽನ್ಯೈತಾಂ ವಿನಾ ಪ್ರಿಯಾಂ ।**
**ತ್ವಮೇವ ಪಶ್ಯ ಕುಂಜೇಽಸ್ಮಿನ್ವರ್ತಸೇ ನ್ಯಾಯಸಂಯುತಾ ॥೨೪॥**

**ಸಾಽಪಿ ತ್ವಯೈವಾನೀತಾಽತ್ರ ತವಾತ್ರಾ ವಿದಿತಂ ಕ್ವಚಿತ್ ।**
**ಇಯಂ ಸ ಕೌತುಕಾ ಕನ್ಯಾ ನಿತ್ಯಮುತ್ಕಂಠಿತಾ ಸತೀ ॥೨೫॥**

**ನಿಷ್ಕಾಮಾ ತವ ಸಂಗೇನ ವಿಚರಂತೀ ವನೇ ಸ್ಫುಟಂ ।**
**ಇದಮಾವೇದ್ಯತಾಮಸ್ಯೈ ಪುನರ್ಗತ್ವಾ ವರಾನನೇ ॥೨೬॥**

---

ನೀನು ನಿರಪರಾಧಿಯೇ ಆಗಿದ್ದರೆ ನನ್ನೊಂದಿಗೆ ರಾಧೆಯು ಇರುವಲ್ಲಿಗೆ ಏಕೆ ಬರುವುದಿಲ್ಲ? ಅವಳ ಮನಸ್ಸಿನಲ್ಲಿ ಪ್ರೀತಿಯೂ ಮತ್ತು ವಿಷಾದವೂ ಇರುವುವೆಂದು ತಿಳಿಯುತ್ತೇನೆ. ಆದರೆ ಆ ವಿಷಾದಕ್ಕೆ ಅನುಗುಣವಾದ ಔಷಧವನ್ನು ನಾನು ತಿಳಿಯಲಾರದವಳಾಗಿದ್ದೇನೆ. ಆದುದರಿಂದ ಇನ್ನು ಮುಂದೆ ಏನನ್ನು ಮಾಡಬೇಕೆಂಬುದನ್ನು ಹೇಳುವವನಾಗು. ॥೨೨-೨೩॥

ನಾರದನು ಹೇಳಿದನು. ನಂದಿನಿಯು ಹೀಗೆಂದು ಹೇಳಲು ಕೃಷ್ಣನು ಅವಳನ್ನು ಕುರಿತು ಮುಂದೆ ಹೇಳುವಂತೆ ಹೇಳಿದನು. ಎಲೌ ನಂದಿನಿಯೇ, ಪ್ರೇಯಸಿಯಾದ ರಾಧೆಯನ್ನು ಬಿಟ್ಟು ನನಗೆ ಪ್ರಿಯಳಾದ ಬೇರೊಬ್ಬ ಪತ್ನಿಯು ಯಾವಳು ತಾನೆ ಇರುವಳು? ಈ ವಿಷಯವನ್ನು ಈ ಲತಾಗೃಹವಲ್ಲಿರುವ ನೀನೇ ನ್ಯಾಯದೃಷ್ಟಿಯಿಂದ ವಿಚಾರಿಸುವವಳಾಗು. ॥೨೪॥

ನಿನ್ನೊಂದಿಗಿರುವ ಆ ಕನ್ಯೆಯನ್ನು ನೀನೇ ಇಲ್ಲಿಗೆ ಕರೆತಂದಿರುವೆ. ಈ ವಿಷಯದಲ್ಲಿ ನಿನಗೆ ತಿಳಿಯದಿರುವುದು ಯಾವುದೂ ಇರುವುದಿಲ್ಲ. ಈ ಕನ್ಯೆಯೂ ಸಹ ನನ್ನನ್ನು ನೋಡುವುದಕ್ಕೋಸ್ಕರ ಅನವರತವೂ ಉತ್ಸಾಹ ಭರಿತಳಾಗಿ ಬೇರೆ ಯಾವ ಅಪೇಕ್ಷೆಯೂ ಇಲ್ಲದವಳಾಗಿ ನನ್ನಲ್ಲಿ ಪ್ರೀತಿಯುಳ್ಳವಳಾಗಿ ನಿನ್ನೊಂದಿಗೆ ಈ ವನದಲ್ಲಿ ಸಂಚರಿಸುತ್ತಿರುವಳು. ॥೨೫॥

ಎಲೌ ಸುಮುಖಿಯೇ, ಪುನಃ ರಾಧೆಯ ಸಮೀಪವನ್ನು ಪಡೆದು ಮುಂದೆ ಹೇಳುವ ಈ ವಿಷಯವನ್ನು ಅವಳಿಗೆ ತಿಳಿಸುವವಳಾಗು. ॥೨೬॥

ಮಮಾತಿ ಪರಮಾ ಕಾಂತಾ ತ್ವತ್ತೋ ನಾಸ್ತೀಹ ಕಾಚನ ।
ಕನ್ಯಾ ತ್ವತ್ಸದೃಶೀ ಕಾಂತಾ ವರ್ತತೇ ಭುವನತ್ರಯೇ ॥೨೭॥

ನ ತೇ ವಯಃ ಪರಿಣತಿರ್ನರೂಪ ಬಲಸಂಕ್ಷಯಃ ।
ಮಯೀಹ ಸಂಗತಾ ಕಾಂತಾ ಕಲವಾಕ್ಯಪರಾಯಣಾ ॥೨೮॥

ಯದ್ಯಹಂ ಕ್ಷಣಮಾತ್ರಂ ಹಿ ತ್ವತ್ತೋಽನುವಿರತೋ ಭವಂ ।
ನ ಮೇ ಪ್ರಾಣಾಃ ಪ್ರಹೃಷ್ಯಂತಿ ಪ್ರಿಯೇ ಪ್ರಾಗಸಮಾಧೃತಾಃ ॥೨೯॥

ತ್ವದಾಯತ್ತಂ ಮನೋ ಮೇಽಸ್ತಿ ತ್ವದಾಯತ್ತೋಽಸ್ಮಿ ಸರ್ವದಾ ।
ಅಧೀನೋಽಹಂ ಮೀನವನ್ನ ತ್ವಾಂ ಚ ತ್ಯಕ್ತುಮಿಹೋತ್ಸಹೇ ॥೩೦॥

---

ನೀನೇ ನನಗೆ ಅಂತರಂಗ ಭೂತಳಾದ ಪತ್ನಿಯಾಗಿರುವೆ. ನಿನಗಿಂತಲೂ ಅನ್ಯಳಾದ ಅಧಿಕ ಪ್ರಿಯತಮೆಯು ನನಗಿರುವುದಿಲ್ಲ. ನಿನಗೆ ಸದೃಶಳಾದ ಕನ್ಯೆಯು ಲೋಕತ್ರಯದಲ್ಲಿಯೂ ಇರುವುದಿಲ್ಲ. ॥೨೭॥

ನಿನಗೆ ವಯಃ ಪರಿಣಾಮವು ಎಂದರೆ ವಾರ್ಧಕ್ಯಾವಸ್ಥೆಯು ಇರುವುದಿಲ್ಲ. ಹಾಗೆಯೇ ನಿನ್ನ ರೂಪ ಮತ್ತು ಬಲಗಳಿಗೆ ಕಡಿಮೆಯೂ ಇರುವುದಿಲ್ಲ. ಅವ್ಯಕ್ತ ಮಧುರವಾದ ವಚನಗಳನ್ನಾಡುವುದರಲ್ಲಿ ಆಸಕ್ತಳಾದ ನೀನು ನನ್ನಲ್ಲಿಯೇ ಆಸಕ್ತಳಾಗಿರುವೆ ! ॥೨೮॥

ಎಲೌ ಪ್ರೇಯಸಿಯೇ, ಕ್ಷಣಕಾಲ ಪರ್ಯಂತ ನಾನು ನಿನ್ನಿಂದ ವಿಯುಕ್ತನಾದವನಾದರೆ, ಹಿಂದೆ ಎಂದೂ ನಿನ್ನನ್ನಗಲಿರದೇ ಇರುವ ನನ್ನ ಪ್ರಾಣಗಳು ಎಂದಿಗೂ ಸಂತೋಷವನ್ನು ಹೊಂದಲಾರವು. ॥೨೯॥

ನನ್ನ ಮನಸ್ಸೇ ನಿನಗೆ ಆಧೀನವಾದುದಾಗಿರುತ್ತದೆ. ಮತ್ತು ನಾನೂ ಸಹ ನಿನಗೆ ಆಧೀನನಾಗಿರುವೆನು. ನೀರಿಗೆ ಅಧೀನವಾದ ಮೀನು ಹೇಗೆ ನೀರನ್ನು ಬಿಟ್ಟಿರಲಾರದೋ ಆದರಂತೆ ನಿನಗೇ ಆಧೀನನಾಗಿರುವ ನಾನು ನಿನ್ನನ್ನಗಲಿ ಇರಲು ಅಪೇಕ್ಷಿಸುವುದಿಲ್ಲ. ॥೩೦॥

ಯಾವದ್ವಾರಿಣಿ ವರ್ತೇತ ತಾವಜ್ಜಲಚರೋ ಭವೇತ್ ।
ತತಶ್ಚೇದ್ಭಿನ್ನತಾಮೇತಿ ನ ಜೀವತಿ ಕಥಂಚನ ॥೩೧॥

ತಥಾ ಮೇ ಜೀವಿತಂ ರಾಧಾ ವಲ್ಲವೀ ಪ್ರಾಣವಲ್ಲಭಾ ।
ಕಿಮುಪಂ ವರ್ಣಯೇ ತಸ್ಯಾಃ ಗುಣಾರ್ ಗುಣಮಹೋದಧೇಃ ॥೩೨॥

ಸೈವಾತ್ರ ಜೀವನಂ ಸತ್ಯಂ ಉರಗಸ್ಯ ಮಣಿರ್ಯಥಾ ।
ನ ಮೇ ಕೈತವವೃತ್ತಿಶ್ಚ ಏಕರೂಪೋಽಸ್ಮಿ ಸರ್ವತಃ ॥೩೩॥

ಅನೇಕರೂಪಶ್ಚೈವಾಸ್ಮಿ ಮತ್ತೋ ಭಿನ್ನಂ ನ ಕಿಂಚನ ।
ಸರ್ವೇಶ್ವರೋಽಹ ಮತ್ರೈವ ರಾಧಿಕಾ ಪ್ರಾಣವಲ್ಲಭಃ ॥೩೪॥

ಸಂತಿ ರೂಪಾಣ್ಯನೇಕಾನಿ ದೃಶ್ಯೇ ದೃಷ್ಟೋಽಸ್ಮಿ ಚಂದ್ರವತ್ ।
ಅತ್ರೈವಾಹಂ ಪುಮಾನೇಕಃ ಕೇವಲೋಽಗಮ್ಯ ಈಶ್ವರಃ ॥೩೫॥
ಸ್ತ್ರೀತ್ವೇ ತು ಸಾ ತು ರಾಧೈವ ತಸ್ಯಾಃ ಸಖ್ಯಶ್ಚರಂತಿ ಹಿ ।

---

ಜಲಚರಪ್ರಾಣಿಯು ನೀರಿನಲ್ಲಿ ಇರುವವರೆಗೆ ಜೀವಿಸಿರುತ್ತದೆ. ನೀರಿನಿಂದ ಹೊರಗೆ ಬಂದರೆ ಅದು ಎಂದಿಗೂ ಜೀವಿಸಲಾರದು. ||೩೧||

ಅದರಂತೆಯೇ ಗೋಪಸ್ತ್ರೀಯಾದ ರಾಧೆಯೇ ನನ್ನ ಪ್ರಾಣವಾಗಿರುವಳು ಗುಣಗಳಿಗೆ ಸಮುದ್ರದಂತೆ ಇರುವ ಅವಳ ಗುಣಗಳನ್ನು ನಾನು ಏನೆಂದು ವರ್ಣಿಸಲಿ ? ಸರ್ಪಕ್ಕೆ ಮಣಿಯು ಹೇಗೆ ಜೀವಿತವಾಗಿರುವುದೋ ಅದರಂತೆ ಅವಳೇ ನನ್ನ ಜೀವಿಕೆಯಾಗಿರುವಳು. ||೩೨||

ನನ್ನಲ್ಲಿ ಕಪಟಾಚರಣೆಯು ಇರುವುದಿಲ್ಲ. ನಾನು ಎಲ್ಲೆಲ್ಲಿಯೂ ಏಕರೂಪನಾಗಿಯೂ ಮತ್ತು ಅನೇಕ ರೂಪವುಳ್ಳವನಾಗಿಯೂ ಇರುವೆನು. ನನಗಿಂತ ಬೇರೆಯಾದ ಮತ್ತೊಂದು ವಸ್ತುವೇ ಇರುವುದಿಲ್ಲ. ನಾನೇ ಈ ಸಕಲ ಪ್ರಪಂಚದ ಈಶ್ವರನಾಗಿ ಇರುತ್ತೇನೆ ಎಂದರ್ಥವು. ||೩೩||

ನಾನು ಇಲ್ಲಿಯೇ ಇರುವವನಾಗಿ ಸರ್ವರಿಗೂ ಪ್ರಭುವಾಗಿಯೂ, ರಾಧೆಯ ಪ್ರಾಣವಲ್ಲಭನಾಗಿಯೂ ಇರುವೆನು. ಈ ದೃಶ್ಯವಾದ ಪ್ರಪಂಚದಲ್ಲಿ ಜಲಾದಿ ಉಪಾಧಿ ಭೇದದಿಂದ ಹೇಗೆ ಚಂದ್ರನು ಅನೇಕ ರೂಪವುಳ್ಳವನಾಗಿ ತೋರುವನೋ ಅದರಂತೆ ನನಗೂ ಸಹ ಅನೇಕವಾದ ರೂಪಗಳು ತೋರುತ್ತಿರುವುವು. ||೩೪||

ಪುರುಷರೂಪಧಾರಿಯಾದ ನಾನು ಒಬ್ಬನೇ ಸಕಲ ಲೋಕಗಳಿಗೂ

ನ ಕಸ್ಯಾಚ್ಚಿದಹಂ ಪ್ರೇಷ್ಠೋ ನ ತು ಚಾನ್ಯಸ್ಯ ಪ್ರೇಯಸೀ ॥೩೬॥

ಆವಯೋರಿಹ ಸರ್ವತ್ರ ಕ್ರೀಡಾ ನಿತ್ಯಂ ವಿರಾಜತೇ ।
ಕಸ್ಮಾನ್ಮಾನೋ ವಿಧೇಯೋಽತ್ರ ಯತೋಽಹಂ ತ್ವಿತರಾಪ್ರಿಯಃ॥೩೭॥

ಆಗಚ್ಛ ಕುಂಜಭವನಂ ಸಮಾಹೂಯ ಸಖೀಜನಾನ್ ।
ಅಹಂ ಚೇನ್ನಾ(ವ)ಭಿಗಚ್ಛಾಮಿ ತದಾ ಮಾನಾಧಿಕಂ ಪ್ರಿಯೇ ॥೩೮॥

ಏವಮೇವ ಪುನರ್ಗತ್ವಾ ಸಖಿ ಸರ್ವಂ ನಿವೇದಯ ।
ಅಹಮೇವ ತತೋ ಗತ್ವಾ ತೋಷಯಿಷ್ಯೇ ಸುಯುಕ್ತಿಭಿಃ ॥೩೯॥

ಇತ್ಯಾಶ್ರುತ್ಯ ಸಖೀ ಕೃಷ್ಣಮುಖಾದ್ವಚನಮುತ್ತಮಂ ।
ಪುನರಾಗತ್ಯ ತಾಂ ರಾಧಾಮುವಾಚೇದಂ ಸುಯತ್ನತಃ ॥೪೦॥

---

ಪ್ರಭುವಾಗಿ ಇದ್ದುಕೊಂಡು, ಇಲ್ಲಿಯೂ ಉಪಲಬ್ಧನಾಗಿರುವೆನು. ನಾನೇ ಸ್ತ್ರೀರೂಪವನ್ನು ಧರಿಸಿ ರಾಧೆಯ ಸ್ವರೂಪನಾಗಿರುವೆನು. ಮತ್ತು ಅವಳ ಸಮೀಪದಲ್ಲಿ ಸಂಚರಿಸುವ ಆ ಸಖಿಯರ ರೂಪವೂ ನನ್ನದೇ ಆಗಿರುತ್ತದೆ. ರಾಧೆಗೊಬ್ಬಳಿಗಲ್ಲದೆ ನಾನು ಮತ್ತಾರಿಗೂ ಪ್ರಿಯತಮನಾಗಿರುವುದಿಲ್ಲ. ರಾಧೆಯೂ ಸಹ ನನಗಲ್ಲದೆ ಮತ್ತಾರಿಗೂ ಪ್ರೇಯಸಿಯಾಗಿರುವುದಿಲ್ಲ. ॥೩೫-೩೬॥

ಎಲ್ಲೆಡೆಯಲ್ಲಿಯೂ ನಮ್ಮೀರ್ವರ ಕ್ರೀಡೆಯು ನಿತ್ಯವಾಗಿ ವಿರಾಜಿಸುತ್ತಲಿರುವುದು. ಅವಳಿಗಿಂತ ಇತರರಲ್ಲಿ ನಾನು ಪ್ರಿಯನಾಗಿರುವುದಿಲ್ಲ. ಆದುದರಿಂದ ಈಗ ಏತಕ್ಕೋಸ್ಕರ ಕೋಪಿಸಬೇಕು ? ॥೩೭॥

ಎಲೌ ಪ್ರಿಯೆಯೇ, ನಿನ್ನ ಸಖಿಯರೊಂದಿಗೆ ಕ್ರೀಡಾಭವನಕ್ಕೆ ಬರುವವಳಾಗು. ನಾನು ಅಲ್ಲಿಗೆ ಬರದಿದ್ದಲ್ಲಿ,ಅಥವಾ ನಾನೇ ಅಲ್ಲಿಗೆ ಬಂದರೂ, ಆಗ ನಿನ್ನ ಕೋಪವು ಇನ್ನೂ ಅಧಿಕವಾಗಬಹುದು ಅದು ಯುಕ್ತವಾದುದೂ ಆಗಿರುತ್ತದೆ. ॥೩೮॥

ಎಲೌ ಸಖಿಯೇ, ನೀನು ಈ ನನ್ನ ವಚನಗಳನ್ನು ಹೀಗೆಯೇ ರಾಧೆಗೆ ತಿಳಿಸುವವಳಾಗು. ಬಳಿಕ ನಾನೇ ಅಲ್ಲಿಗೆ ಹೋಗಿ ಸುಲಭವಾದ ಉಪಾಯಗಳಿಂದ ಆವಳನ್ನು ಸಂತೋಷಗೊಳಿಸುವೆನು. ॥೩೯॥

ಸಖಿಯಾದ ನಂದಿನಿಯು, ಶ್ರೀಕೃಷ್ಣನ ಮುಖದಿಂದ ಹೊರಬಿದ್ದ ಈ ಮನೋಹರವಾದ ವಚನವನ್ನು ಕೇಳಿ, ಪುನಃ ರಾಧೆಯ ಬಳಿಗೆ ಬಂದು ಕೃಷ್ಣನ ವಚನಗಳನ್ನು ತನ್ನ ಚಾತುರ್ಯದಿಂದ ಅವಳಿಗೆ ಹೀಗೆಂದು ಹೇಳಿದಳು. ॥೪೦॥

ಕಾಂತೇ ಕಾಂತಪ್ರಿಯಾಽಸಿ ತ್ವಂ ವೃಥಾ ಮಾನರತಿಸ್ತವ ।
ನಾಯಕೋ(ಕೇ) ಗುಣರಾಶೌ ಚ ಶ್ರೀಕೃಷ್ಣೇ ಪ್ರೇಮಸಾಗರೇ ॥೪೧॥

ರಾಧಾ ರಾಧೇತಿ ರಾಧೇತಿ ಪರಂ ಮಂತ್ರಮುಪಾಸತೇ ।
ನಿವಿಷ್ಟಃ ಕುಂಜಭವನೇ ಏಕಾಕೀ ತವ ವಲ್ಲಭಃ ॥೪೨॥

ಕಾಂಚಿನ್ನ ಚಿಂತಯತ್ಯನ್ಯಾಂ ವಾಚಾ ನ ವದತಿ ಸ್ಫುಟಂ ।
ನ ತತ್ರ ಕುರುತೇ ಕರ್ಮ ತ್ವವಶಃ ಕೇವಲಂ ಪರಂ ॥೪೩॥

ತ್ವದರ್ಥಂ ಕುರುತೇ ಶಯ್ಯಾಮುದ್ಭೃತಾಂ ಕುಸುಮೋತ್ತರಾಮ್ ।
ಈಶಾನಾಮೀಶ್ವರಃ ಕಾಂತೇ ಯದ್ವಶೇ ಭುವನತ್ರಯಮ್ ॥೪೪॥

ಲೋಕಪಾಲಾ ವಿರಿಂಚಾದ್ಯಾ ಯಸ್ಯಾದೇಶಾನುವರ್ತಿನಃ ।
ಸ ಏವ ಪರಮಃ ಸಾಕ್ಷಾದಧೀನಸ್ತೇ ವಶೀಕೃತಃ ॥೪೫॥

---

ಎಲೌ ಮಾನಿನಿಯೇ, ನೀನು ನಿನ್ನ ವಲ್ಲಭನಿಗೆ ಪ್ರಿಯಳಾಗಿರುತ್ತೀಯೆ. ಗುಣಗಣಗರಿಷ್ಠನೂ, ಪ್ರೇಮಕ್ಕೆ ಸಾಗರದೋಪಾದಿಯಲ್ಲಿರುವವನೂ, ನಾಯಕನೂ ಆದ ಶ್ರೀಕೃಷ್ಣನಲ್ಲಿ ನಿನ್ನ ಕೋಪಾಸಕ್ತಿಯು ವ್ಯರ್ಥವಾದುದಾಗಿರುವುದು. ॥೪೧॥

ನಿನ್ನ ಪ್ರಿಯತಮನು ಲತಾಗೃಹದಲ್ಲಿ ಕುಳಿತುಕೊಂಡಿರುವವನಾಗಿ, ಅನವರತವೂ ರಾಧಾ, ರಾಧಾ, ರಾಧಾ ಎಂಬ ಮಂತ್ರವನ್ನು ಜಪಿಸುತ್ತಿರುವನು. ॥೪೨॥

ನಿನ್ನನ್ನು ಬಿಟ್ಟು ಬೇರೆ ಯಾವಳನ್ನೂ ಅವನು ಚಿಂತಿಸುತ್ತಿಲ್ಲವು. ಮತ್ತು ಸ್ಪಷ್ಟವಾಗಿ ಮಾತನಾಡಲೂ ಅವನು ಅಸಮರ್ಥನಾಗಿರುವನು. ನಿನ್ನ ಧ್ಯಾನದಲ್ಲಿಯೇ ಮಗ್ನನಾಗಿ ದೇಹದ ಮೇಲಿನ ಪರಿವೆಯೇ ಇಲ್ಲದವನಾಗಿ ಯಾವ ಕಾರ್ಯಾಂತರವನ್ನೂ ಸರಿಯಾಗಿ ಆಚರಿಸುತ್ತಿಲ್ಲವು. ॥೪೩॥

ಎಲೌ ಕಾಂತೆಯೇ, ಯಾವನು ಇಂದ್ರಾದಿ ಲೋಕಾಧಿಪತಿಗಳಿಗೂ ಪ್ರಭುವಾಗಿರುವನೋ ಮತ್ತು ಲೋಕತ್ರಯಗಳೂ ಸಹ ಯಾವನ ಅಧೀನದಲ್ಲಿರುವುವೋ, ಆ ಶ್ರೀಹರಿಯು ನಿನಗೋಸ್ಕರ ಶ್ರೇಷ್ಠವಾದ ವನಕುಸುಮಗಳಿಂದ ಮೃದುವಾದ ಹಾಸಿಗೆಯನ್ನು ರಚಿಸುತ್ತಲಿರುವನು. ॥೪೪॥

ಲೋಕಪಾಲಕರಾದ ಬ್ರಹ್ಮಾದಿದೇವತೆಗಳೂ ಸಹ ಯಾವನ ಆಜ್ಞಾನುಸಾರವಾಗಿ ವರ್ತಿಸುತ್ತಲಿರುವರೋ ಆ ಸಾಕ್ಷಾನ್ಮಹಾವಿಷ್ಣುವೇ ನಿನಗೆ ಅಧೀನನಾಗಿರುವನು. ಹೀಗೆ ನೀನು ಅವನನ್ನು ನಿನ್ನ ವಶಪಡಿಸಿಕೊಂಡಿರುವೆ ! ॥೪೫॥

ನ ಜಹಾತಿ ತವಾಸಂಗಂ ಕ್ಷಣಮಾತ್ರಂ ಕದಾಚನ ।
ತವಾರ್ಥೇ ಕುಸುಮಾನಾಂ ಹಿ ಸಂಚಯಂ ಕರ್ತುಮುದ್ಯತಃ ॥೪೬॥

ಕುಂಜಾಂತರಗತಃ ಕೃಷ್ಣಸ್ತಸ್ಮಿನ್ಮಾನೋ ವಿ(ನ)ರಾಜತೇ ।
ಕುಸುಮಾನಿ ಸುಗಂಧೀನಿ ಸಂಚಿತಾನಿ ವರಾನನೇ ॥೪೭॥

ತತ್ಪಾರ್ಶ್ವೇ ಚಲನಂ ಶ್ರೇಯಃ ತವ ಮಾನೋ ನ ಶೋಭನಃ ।
ಉಭಯೋಃ ಸಂಗಮೋ ರಾಧೇ ತಸ್ಮಾತ್ತು ಪರಮಂ ಸುಖಮ್ ॥೪೮॥

ಅಪಾಸ್ಯ ಮಾನಮಧುನಾ ವ್ರಜ ತ್ವಂ ಪ್ರಿಯಸನ್ನಿಧೌ ।
ಅಥವಾಽಽಹೂಯ ತಂ ಚೈವ ಕಾಂತಂ ಪ್ರಾಣಪ್ರಿಯಂ ತಥಾ ॥೪೯॥

ತೇನಾತಿ ಪ್ರೇಮಸಂಭಾರೈಃ ಪ್ರೇಷಿತಾಽಸ್ಮಿ ತವಾಂತಿಕಂ ।
ಆನೇತುಂ ತ್ವಾಂ ವರಾರೋಹೇ ದೇಹಿ ನಾಽಮ ಪ್ರಿಯಂ ಪ್ರಿಯೇ ॥೫೦॥

---

ಶ್ರೀಕೃಷ್ಣನು ಎಂದಿಗೂ ನಿನ್ನ ಸಹವಾಸವನ್ನು ಬಿಟ್ಟು ಇರಲಾರನು. ಅವನು ನಿನಗೋಸ್ಕರವೇ ಕುಸುಮಗಳನ್ನು ಸಂಗ್ರಹಿಸಲು ಉದ್ಯುಕ್ತನಾಗಿರುವನು. ||೪೬||

ಎಲೌ ಶೋಭನಾಂಗಿಯೇ, ಕೃಷ್ಣನು ಬೇರೊಂದು ಲತಾಗೃಹದಲ್ಲಿ ಶೋಕಾಕುಲಿತನಾಗಿ ನಿನಗೋಸ್ಕರ ಸುಗಂಧಯುಕ್ತವಾದ ಹೂವುಗಳನ್ನು ಸಂಗ್ರಹಿಸಿರುವನು. ||೪೭||

ಎಲೌ ರಾಧೆಯೇ, ಶ್ರೀಕೃಷ್ಣನ ಸಮೀಪದಲ್ಲಿರುವುದೇ ನಿನಗೆ ಶ್ರೇಯಸ್ಕರವು. ನಿನ್ನ ಕೋಪವು ಯುಕ್ತವಾದುದಲ್ಲ. ನಿಮ್ಮಿಬ್ಬರ ಸಂಗಮವೇ ಶೋಭೆಯನ್ನುಂಟು ಮಾಡುತ್ತದೆ. ಅದರಿಂದಲೇ ಉತ್ಕೃಷ್ಟವಾದ ಸುಖವೂ ಲಭಿಸುವುದಾಗಿರುತ್ತದೆ. ||೪೮||

ಇನ್ನಾದರೂ ಕೋಪವನ್ನು ತ್ಯಜಿಸಿ ಪ್ರಿಯನಿರುವಲ್ಲಿಗೆ ತೆರಳುವವಳಾಗು. ಅಥವಾ ಅವನನ್ನು ಇಲ್ಲಿಗೇ ಕರೆತರಿಸಿ ಅವನೊಂದಿಗೆ ಸೇರುವವಳಾಗು. ||೪೯||

ನನ್ನಲ್ಲಿರುವ ಅಗಾಧವಾದ ಪ್ರೇಮಾತಿಶಯದಿಂದ ನಿನ್ನನ್ನು ಕರೆತರಲು ನಿನ್ನ ಬಳಿಗೆ ನನ್ನನ್ನು ಕಳುಹಿಸಿರುವನು. ಎಲೌ ಪ್ರಿಯೇ, ಕೃಷ್ಣನ ವಿಷಯದಲ್ಲಿ ಪ್ರಿಯವಾದ ಒಂದು ವಚನವನ್ನು ಹೇಳುವವಳಾಗು. ||೫೦||

ರಾಧೇ ದಗ್ಧಾ ರೂಪವತೀ ತ್ಯಜ ಮಾನಂ ಸುರಾಂಗನಾ ।
ರಸಾಕೃಷ್ಟಃ ಸ ವೈ ಕೃಷ್ಣಸ್ತವ ತ್ರೈಲೋಕ್ಯಸುಂದರಃ ॥೫೧॥

ವೃಂದಾವನೇ ನಿಕುಂಜೇಷು ಪ್ರೇಮಪ್ರಸರ ಸಂಯುತಃ ।
ವಿಚರತ್ಯನಿಶಂ ಕೃಷ್ಣೋ ನಾನಾರಸ ವಿಚಕ್ಷಣಃ ॥೫೨॥

ಶ್ರುತ್ವೈತದ್ವಚನಂ ರಾಧಾ ಸರ್ವೇಷಾಂ ಸುಮನೋರಮಮ್ ।
ತಾಮುವಾಚ ಸಖೀಂ ರಾಧಾ ಸತ್ಯಂ ಕಾಂತಃ ಸ ಮೇ ಪ್ರಿಯಃ ॥೫೩॥

ನಷ್ಟೋ ಮಮಾತ್ರ ಸಂದೇಹೋ ಗತೋ ಮಾನೋ ವಿನಾಶತಾಂ ।
ಸಾ ಸ್ತ್ರೀ ನಿತ್ಯಂ ಭವೇತ್ಕಾಂತಾ ಭರ್ತುರ್ಭಾವಾನುಸಾರಿಣೀ ॥೫೪॥

ಯಾಸ್ಯಾಮ್ಯಹಂ ಕೃಷ್ಣಮಯಿ ಭಾತಿ ಸಕ್ತಂ ಜಗತ್ಪ್ರಿಯಂ ।
ತಥಾಽಪಿ ಮಾನಂ ಯತ್ಕುರ್ವೇ ಶ್ರೋತುಂ ತದ್ವಚನಂ ರಹಃ ॥೫೫॥

---

ಸೌಂದರ್ಯವತಿಯಾದ ಸ್ತ್ರೀಯು ತನ್ನ ರೂಪದಿಂದಲೇ ನಾಶವನ್ನೈದುವಳು. ಆದುದರಿಂದ ಸೌಂದರ್ಯವತಿಯಾಗಿರುವೆನೆಂಬ ಹೆಮ್ಮೆಯಿಂದ ಕೋಪಗೊಳ್ಳುವಳಾಗಬೇಡ. ನಿನ್ನ ಕೋಪವನ್ನು ತ್ಯಜಿಸುವವಳಾಗು. ತ್ರಿಲೋಕ ಸುಂದರನಾದ ಶ್ರೀಕೃಷ್ಣನು ನಿನ್ನಲ್ಲಿರುವ ಅನುರಾಗದಿಂದ ವಿವಶನಾಗಿರುವನು. ॥೫೧॥

ನಾನಾ ವಿಧವಾದ ಶೃಂಗಾರಾದಿರಸಗಳ ಅನುಭವದಲ್ಲಿ ನಿಪುಣನಾದ ಆ ಶ್ರೀಕೃಷ್ಣನು ನಿನ್ನಲ್ಲಿರುವ ಪ್ರೇಮಸುಧಾಧಾರೆಯಿಂದ ಯುಕ್ತನಾಗಿ ಅನವರತವೂ ವೃಂದಾವನದಲ್ಲಿರುವ ಕ್ರೀಡಾಮಂದಿರಗಳಲ್ಲಿ ಸಂಚರಿಸುತ್ತಿರುವನು. ॥೫೨॥

ಸಕಲರಿಗೂ ಮನೋಹರವಾದ ನಂದಿನಿಯ ವಚನವನ್ನು ಕೇಳಿ ರಾಧೆಯು, ಅವಳನ್ನು ಕುರಿತು ಹೀಗೆಂದು ಹೇಳಿದಳು. –ಎಲೌ ಸಖಿಯೇ, ಮನೋಹರನಾದ ಶ್ರೀಕೃಷ್ಣನು ನಿಜವಾಗಿಯೂ ನನಗೆ ಪ್ರಿಯನಾಗಿರುವನು. ಈ ವಿಷಯದಲ್ಲಿ ನನಗಿದ್ದ ಸಂಶಯವು ಈಗ ದೂರವಾಯಿತು. ಮತ್ತು ನನ್ನ ಕೋಪವೂ ಸಹ ನಾಶವನ್ನು ಹೊಂದಿತು. ॥೫೩॥

ಯಾವ ಸ್ತ್ರೀಯು ತನ್ನ ಪತಿಯ ಅಭಿಪ್ರಾಯವನ್ನನುಸರಿಸಿ ವರ್ತಿಸುವಳೋ ಆ ಸ್ತ್ರೀಯೇ ನಿಜವಾದ ಪತ್ನಿಯಾಗಿರುವಳು. ಎಲೌ ಸಖಿಯೇ, ಯಾವ ಶ್ರೀಕೃಷ್ಣ

**ಗತ್ವಾ ತ್ವಯಾಽಪಿ ತತ್ಪಾರ್ಶ್ವೇ ವ್ಯಕ್ತವ್ಯಂ ಚ ತವ ಪ್ರಿಯಾ ।**
**ಮಾನಂ ತ್ಯಜತಿ ಗೋವಿಂದ ತ್ವದಾಸಕ್ತಾ ಚ ಸಾ ಪ್ರಭೋ ॥೫೬॥**

**ನಾಯಂ ಕಾಮಿಪ್ರಿಯಃ ಕೃಷ್ಣಃ ಸ್ವಾಮೀ ಸರ್ವೇಶ್ವರೋ ಮಹಾನ್ ।**
**ಸ್ರಷ್ಟಾ ಪಾಲಯಿತಾ ಹಂತಾ ಕೋಟಿಬ್ರಹ್ಮಾಂಡ ನಾಯಕಃ ॥೫೭॥**

**ತವಾಸೌ ಪ್ರಿಯಕೃದ್ರಾಧಾಽನುರಾಗ ಪರಮೋತ್ಸವಾ ।**
**ಸಾ ತ್ವಾಂ ಭೃಶಂ ಚಿಂತಯತಿ ತ್ವತ್ಪಾರ್ಶ್ವಂ ಗಂತುಮಿಚ್ಛತಿ ॥೫೮॥**

**ಮಾನಂ ತ್ಯಕ್ತ್ವಾ ಮದ್ವಚನಾಲ್ಲಾಘವಂ ಸಾ ಕಥಂ ವ್ರಜೇತ್ ।**
**ವಿನಾಽಽಹೂತಾ ಗಚ್ಛತೀ ಚೇಲ್ಲಘುತಾ ಭವತಿ ಧ್ರುವಮ್ ॥೫೯॥**

---

ನಲ್ಲಿ ಈ ಸಕಲ ಜಗತ್ತೂ ಪ್ರಕಾಶಿಸುತ್ತಿರುವುದೋ ಆ ಶ್ರೀಕೃಷ್ಣನಿರುವ ಸ್ಥಳಕ್ಕೆ ನಾನು ಹೋಗುವೆನು. ಆದರೂ ನಾನು ಏತಕ್ಕೆ ಕೋಪಗೊಂಡಿರುವೆನೆಂದರೆ, ಶ್ರೀಕೃಷ್ಣನಿಗೆ ನನ್ನ ವಿಷಯದಲ್ಲಿರುವ ಮನೋಭಾವನೆಯನ್ನು ಅವನ ಏಕಾಂತದಲ್ಲಿ ತಿಳಿದು ಕೊಳ್ಳಬೇಕೆಂಬ ಬಲವಾದ ಇಚ್ಛೆಯು ನನಗಿರುವುದು. ||೫೪-೫೫||

ಎಲೌ ಸಖಿಯೇ, ನೀನು ಅವನಿದ್ದಲ್ಲಿಗೆ ಹೋಗಿ ಹೀಗೆಂದು ಹೇಳುವವ ಳಾಗು. ಓ ಪ್ರಭುವಾದ ಗೋವಿಂದನೇ, ನಿನ್ನ ಪ್ರಿಯತಮೆಯು ಕೋಪವನ್ನು ತೊರೆದು ನಿನ್ನಲ್ಲಿಯೇ ಆಸಕ್ತಳಾಗಿರುತ್ತಾಳೆ. ||೫೬||

ಸಕಲ ಲೋಕಗಳ ನಿಯಾಮಕನೂ, ಕೋಟಿಬ್ರಹ್ಮಾಂಡಗಳ ಪ್ರಭುವೂ, ಲೋಕಗಳ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕಾರಣನೂ ಆದ ಆ ಶ್ರೀಕೃಷ್ಣನು ಕಾಮಿಗ ಳಾದ ಜನರಿಗೆ ಪ್ರಿಯನಾಗಿರುವುದಿಲ್ಲ. ||೫೭||

ಓ ಶ್ರೀಹರಿಯೇ, ಸದಾ ನಿನಗೆ ಪ್ರಿಯವನ್ನು ಎಣಿಸುವ ರಾಧೆಯು ನಿನ್ನಲ್ಲಿ ರುವ ಅನುರಾಗದಿಂದ ಅತ್ಯಂತ ಹರ್ಷವುಳ್ಳವಳಾಗಿದ್ದಾಳೆ. ಅನವರತವೂ ನಿನ್ನನ್ನೇ ಧ್ಯಾನಿಸುವವಳಾಗಿ ನೀನಿದ್ದೆಡೆಗೆ ಬರಲು ಇಚ್ಛಿಸುತ್ತಿರುವಳು. ||೫೮||

ಆದುದರಿಂದ, ನನ್ನ ವಚನದಿಂದ ರಾಧೆಯಲ್ಲಿರುವ ನಿನ್ನ ಕೋಪವನ್ನು ತ್ಯಜಿಸು. ಅವಳು ನೀನಿದ್ದಲ್ಲಿಗೆ ತಾನೇ ಬರುವವಳಾದರೆ ಲಾಘವವನ್ನು ಹೇಗೆ ತಾನೇ ಹೊಂದದಿರುವಳು? ನಿನ್ನಿಂದ ಆಹ್ವಾನಿಸಲ್ಪಟ್ಟವಳಾಗಿ ಇಲ್ಲಿಗೆ ಅವಳು ಬಂದರೆ ಆಗ ಲಾಘವವನ್ನು ಹೊಂದುವವಳಾಗುವುದಿಲ್ಲವು. ಹಾಗಾಗದಿದ್ದರೆ, ||೫೯||

**ತಸ್ಯಾಃ ಸಖೀ ಸಮಾಜೇ ತು ಜಾಯತೇ ಚೋಪಹಾಸನಾ ।**
**ತಸ್ಯಾ ಅಪಿ ಹಿ ಮಾಧುರ್ಯೇ ನ ಭವೇತ್ಪ್ರಿಯ ಸಂಗಮೇ ॥೬೦॥**

**ಸಮ್ಮುಖೇ ನಾನುನೀತಾಽಸಿ ವೃಥಾ ಮಾನಂ ಕರೋಷಿ ಚ ।**
**ವಿನಾ ಸಖಿ ಪ್ರಿಯೇಣಾಲಂ ತ್ವಂ ವೈ ಗುಣಗಣಾಲಯಾ ॥೬೧॥**

॥ ನಾರದ ಉವಾಚ ॥

**ಶ್ರುತ್ವೇತ್ಥಂ ರಾಧಿಕಾವಾಚಃ ನಂದಿನೀ ಕನ್ಯಯಾ ಸಹ ।**
**ಯಯೌ ಶ್ರೀಕೃಷ್ಣಪಾರ್ಶ್ವಂ ಸಾ ತಮುವಾಚ ಪ್ರಿಯಂ ವಚಃ ॥೬೨॥**

॥ ನಂದಿನ್ಯುವಾಚ ॥

**ಅನುನೇತುಂ ಗತಾ ರಾಧಾಂ ನ ಮಾನಂ ತ್ಯಜತಿ ಪ್ರಿಯಾ ।**
**ಉಕ್ತಾ ಮಯಾ ಸಾ ಬಹುಶೋ ನ ಸಾಽಽಯಾತಿ ಕಥಂಚನ ॥೬೩॥**

---

ಸಖಿಯರ ಸಮಾಜದಲ್ಲಿ ಅವಳಿಗೆ ಅಪಹಾಸ್ಯವುಂಟಾಗುವುದು. ಆ ಅಪಹಾಸ್ಯವೂ ನಿನಗೆ ಇಷ್ಟವಾದುದಾದರೆ, ಪ್ರಿಯತಮೆಯ ಸಂಗವನ್ನು ಮಾಡಬೇಡ. ||೬೦||

ನನ್ನ ಸಮೀಪದಲ್ಲಿರುವಾಗ ಅವನನ್ನು ನಾನು ಅನುಸರಿಸಲಿಲ್ಲ ಮತ್ತು ವ್ಯರ್ಥವಾಗಿ ಈಗ ಕೋಪಗೊಂಡಿರುವೆ. ಎಲೌ ಸಖಿಯೇ, ನನ್ನ ಪ್ರಿಯನನ್ನು ಬಿಟ್ಟು ನಾನು ಒಂದು ಕ್ಷಣಮಾತ್ರವೂ ಇರಲಾರೆನು. ಆದುದರಿಂದ ಆ ಶ್ರೀಕೃಷ್ಣನು ನನ್ನೊಂದಿಗೆ ಸೇರುವಂತೆ ಮಾಡುವವಳಾಗು. ನೀನು ಸದ್ಗುಣಗಳಿಗೆ ಆಲಯದಂತೆ ಇರುವೆ. ನಾನು ಅವನನ್ನು ಬಿಟ್ಟು ಇರುವುದು ಸಾಕೆನ್ನಿಸಿದೆ ! ||೬೧||

ನಾರದನು ಹೇಳಿದನು--ನಂದಿನಿಯು ರಾಧಿಕೆಯ ಈ ವಿಧವಾದ ಮಾತುಗಳನ್ನು ಕೇಳಿ ಕನ್ನಿಕೆಯ ರೂಪವನ್ನು ತಾಳಿದ ನನ್ನೊಂದಿಗೆ ಶ್ರೀಕೃಷ್ಣನ ಸಮೀಪವನ್ನು ಪಡೆದು ಅವನನ್ನು ಕುರಿತು ಪ್ರಿಯವಾದ ಮಾತುಗಳಿಂದ ಹೀಗೆಂದು ಹೇಳಿದಳು. ||೬೨||

ಎಲೈ ಶ್ರೀಕೃಷ್ಣನೇ, ರಾಧಿಕೆಯನ್ನು ಸಮಾಧಾನ ಪಡಿಸಲು ಹೋಗಿದ್ದೆನು. ಆದರೆ ನಿನ್ನ ಪ್ರಿಯೆಯು ತನ್ನ ಕೋಪವನ್ನು ಬಿಡುವುದಿಲ್ಲವು. ಬಹಳ ವಿಧಗಳಿಂದ

ತ್ವಮೇವ ತತ್ರ ಗಚ್ಛಸ್ವ ಮಯಾ ಸಾರ್ಧಂ ಸುರೇಶ್ವರ ।
ಅನುನೀಯಾಂಕಮಾರೋಪ್ಯ ವಿಲಸಸ್ವ ತಯಾ ಸಹ ।೬೪॥

ಮಮ ವಾಕ್ಯಂ ನ ಶುಶ್ರಾವ ಹಾಸ್ಯೇನ ಮಧುಸೂದನ ।
ನ ಮಾನಂ ತೇ ಪ್ರಿಯಾ ತ್ಯಕ್ತ್ವಾ ಇಹಾಯಾಸ್ಯತಿ ಮಾಧವ ॥೬೫॥

ಅತೋ ಗತ್ವಾ ತತ್ಸಮೀಪಂ ನಿಕುಂಜಭವನಂ ಹರೇ ।
ನಾನಾವಿನೋದೈಃ ಕ್ರೀಡಿತ್ವಾ ದ್ವಯೋರ್ದೇಹಿ ಮಹಾಸುಖಂ ॥೬೬॥

ಸಮಯೋಽಯಂ ವಿಭೋ ಪ್ರೇಷ್ಠಃ ಪ್ರೇಯಸ್ಯನುನಯೇ ಶುಭಃ ।
ಪ್ರವಿಶ್ಯ ಕುಂಜಭವನಂ ಕುರುಷ್ವ ಸ್ಮರಸಂಗಮಂ ॥೬೭॥

ಕ್ರೀಡಾಂ ಹಿ ಯುವಯೋರ್ದೃಷ್ಟ್ವಾ ಮನೋಽಸ್ಮಾಕಂ ಪ್ರಸೀದತಿ ।
ಇಯಂ ಚ ಕನ್ಯಾ ಯುವಯೋರ್ವಿಲಾಸಂ ದ್ರಷ್ಟುಮಾಗತಾ ॥೬೮॥

---

ಅವಳನ್ನು ಸಮಾಧಾನಗೊಳಿಸಿದರೂ ಅವಳೇ ನಿನ್ನ ಸಮೀಪಕ್ಕೆ ಬರುವವಳಾಗಿಲ್ಲವು. ||೬೩||

ಆದುದರಿಂದ ಓ ದೇವೇಶನೇ, ನೀನೇ ನನ್ನೊಂದಿಗೆ ಅವಳ ಸಮೀಪವನ್ನು ಕುರಿತು ಹೋಗುವವನಾಗು. ಮತ್ತು ಅವಳನ್ನು ಸಮಾಧಾನಪಡಿಸಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ಅವಳೊಂದಿಗೆ ವಿಲಾಸಸುಖವನ್ನು ಅನುಭವಿಸುವವನಾಗು. ||೬೪||

ಓ ಮಧುಸೂದನನೇ, ನಿನ್ನ ಪ್ರಿಯತಮೆಯು ನನ್ನ ವಚನವನ್ನು ಲಾಲಿಸದೆ ಹಾಸ್ಯವೆಂದು ತಿಳಿದು ತಿರಸ್ಕರಿಸಿದಳು. ಕೋಪವನ್ನು ತ್ಯಜಿಸಿ ಅವಳು ನಿನ್ನ ಸಮೀಪಕ್ಕೆ ಬರಲು ಒಡಂಬಡುವುದಿಲ್ಲ. ||೬೫||

ಆದುದರಿಂದ ಓ ಹರಿಯೇ, ನೀನು ಕ್ರೀಡಾಮಂದಿರದಲ್ಲಿ ಅವಳ ಸಮೀಪವನ್ನು ಪಡೆದು ಅನೇಕ ವಿಧವಾದ ವಿನೋದಗಳಿಂದ ಅವಳೊಂದಿಗೆ ಕ್ರೀಡಿಸಿ ಪ್ರೇಕ್ಷಕರಾದ ನಮ್ಮಿಬ್ಬರಿಗೂ ನಿರತಿಶಯವಾದ ಆನಂದವನ್ನುಂಟುಮಾಡುವವನಾಗು. ||೬೬||

ಪ್ರೀತಿಪಾತ್ರಳನ್ನು ಸಮಾಧಾನಗೊಳಿಸಲು ಈ ಸಮಯವು ತಕ್ಕುದಾಗಿ ಉತ್ತಮವಾಗಿದೆ. ಆದುದರಿಂದ ಓ ಕೃಷ್ಣನೇ, ಆ ಲತಾಮಂಟಪವನ್ನು ನೀನು ಪಡೆದು ರಾಧೆಯನ್ನು ರತಿಕೇಳಿಯಲ್ಲಿ ಸಂತೋಷಪಡಿಸು. ||೬೭||

ನಿಮ್ಮೀರ್ವರ ಕ್ರೀಡೆಯನ್ನು ನೋಡಿ ನಮ್ಮ ಮನಸ್ಸು ಪ್ರಸನ್ನವಾಗುವುದು. ಈ ಕನ್ಯೆಯೂ ಸಹ ನಿಮ್ಮೀರ್ವರ ವಿಲಾಸವನ್ನು ನೋಡಲು ಇಲ್ಲಿಗೆ ಬಂದಿರುತ್ತಾಳೆ. ||೬೮||

**ಏತಾವತ್ಕಾಲಂ ಮಾನೇನ ವ್ರಜ ಕೃಷ್ಣ ಪ್ರಿಯಾಂತಿಕಂ ।**
**ಭಿನ್ನೌ ದೃಷ್ಟ್ವಾ ಯುವಾಂ ಪ್ರಾಣಾ ಮಮ ಯಾಂತಿ ವಿನಾಶತಾಂ ॥೬೯॥**

**ನಿತ್ಯಲೀಲಾಂ ಚ ಯುವಯೋರಿಹಾಹಂ ಕನ್ಯಯಾ ಸಹ ।**
**ಯಥಾ ಪಶ್ಯಾಮಿ ಭಗವನ್ ಚಿರಂ ಮಾಭವತು ಪ್ರಭೋ ॥೭೦॥**

|| ನಾರದ ಉವಾಚ ||

**ಶ್ರುತ್ವೇತ್ಥಂ ನಂದಿನೀ ವಾಕ್ಯಮುವಾಚ ಭಗವಾನ್ ಸ ತಾಮ್ ।**
**ಉತ್ಕಂಠಿತೋಽಹಂ ಚ ಭೃಶಂ ಯಾಮಿ ತತ್ರ ತ್ವಯಾ ಸಹ ॥೭೧॥**

|| ಶ್ರೀಕೃಷ್ಣ ಉವಾಚ ||

**ಧನ್ಯಾಽಸಿ ನಂದಿನೀ ನಿತ್ಯಂ ನಾತುರಾ ತ್ವಂ ಕದಾಽಭವಃ ।**
**ಇಯಂ ಚ ಕನ್ಯಾ ಮೇ ದ್ರಷ್ಟುಂ ರಹಸ್ಯಮಭಿಕಾಂಕ್ಷತಿ ॥೭೨॥**

---

ಓ ಕೃಷ್ಣನೇ, ಕೋಪವನ್ನು ಸಾಕುಮಾಡಿ ಪ್ರಿಯೆಯ ಸಮೀಪವನ್ನು ಸೇರುವವನಾಗು. ಒಬ್ಬರನ್ನೊಬ್ಬರು ಅಗಲಿರುವ ನಿಮ್ಮಿಬ್ಬರನ್ನು ನೋಡಿ ನನ್ನ ಪ್ರಾಣಗಳೇ ನಾಶವಾಗುವಂತಿವೆ! ||೬೯||

ಓ ಪ್ರಭುವೇ, ಈ ಕನ್ಯೆಯೊಂದಿಗೆ ಕ್ರೀಡಾಮಂದಿರದಲ್ಲಿ ನಿಮ್ಮಿಬ್ಬರ ಲೀಲೆಯನ್ನು ನೋಡುವಂತೆ ಮಾಡುವವನಾಗು. ವಿಳಂಬಮಾಡಬೇಡ. ||೭೦||

ನಾರದನು ಹೇಳಿದನು—ಭಗವಂತನಾದ ಶ್ರೀಕೃಷ್ಣನು ನಂದಿನಿಯ ಈ ಪ್ರಕಾರವಾದ ವಚನವನ್ನು ಕೇಳಿದವನಾಗಿ ಅವಳನ್ನು ಕುರಿತು ಹೀಗೆಂದು ಹೇಳಿದನು. ಎಲೌ ನಂದಿನಿಯೇ, ನಾನೂ ಸಹ ಪ್ರಿಯೆಯಾದ ರಾಧಿಕೆಯನ್ನು ನೋಡಲು ಉತ್ಸುಕನಾಗಿರುವೆನು. ಆದುದರಿಂದ ನಿನ್ನೊಂದಿಗೆ ಅವಳಿರುವ ಸ್ಥಳಕ್ಕೆ ಬರುವೆನು. ||೭೧||

ಶ್ರೀಕೃಷ್ಣನು ಹೇಳಿದನು -ಎಲೌ ನಂದಿನಿಯೇ, ನೀನು ಧನ್ಯಳಾಗಿರುತ್ತೀಯೆ. ನೀನು ಯಾವಾಗತಾನೆ ನಮ್ಮನ್ನು ನೋಡಲು ಆತುರಳಾಗಿರಲಿಲ್ಲ. (ಸದಾ ನಮ್ಮನ್ನು ನೋಡಲು ಆತುರಳಾಗಿರುತ್ತೀಯೆ) ನಿನ್ನೊಂದಿಗಿರುವ ಈ ಕನ್ಯೆಯೂ ಸಹ ನನ್ನ ರಹಸ್ಯಲೀಲೆಯನ್ನು ನೋಡಲು ಅಪೇಕ್ಷಿಸುವವಳಾಗಿರುತ್ತಾಳೆ. ||೭೨||

ತಸ್ಮಾದಸ್ಯೈ ಸುಖಂ ದೇಯಂ ವಿನೋದಂ ಮಮ ಪಶ್ಯತು ।
ಗಚ್ಛಾನಯಾ ಸಹ ಬ್ರೂಹಿ ರಾಧಾ ಮಾಗಚ್ಛತಿ ಪ್ರಿಯಃ ॥೭೩॥

ಅನಂತರಂ ಹಿ ಭವತೀ ನ ಮಾನಂ ಕರ್ತುಮರ್ಹಸಿ ।
ಮನೋಽನಿಶಂ ಕೃತಃ ಕಾಂತೇ ರಸಭಂಗಕರೋ ಧ್ರುವಮ್ ॥೭೪॥

॥ ನಂದಿನ್ಯುವಾಚ ॥

ಗಚ್ಛಾಮಿ ರಾಧಿಕಾ ಪಾರ್ಶ್ವ ಮಾಗಂತವ್ಯಂ ತ್ವಯಾ ಲಘು ।
ಕರ್ತವ್ಯಾ ಕನ್ಯಕಾ ಕಾಂಕ್ಷಾ ಅಕರ್ತವ್ಯೋ ಹ್ಯನಾದರಃ ॥೭೫॥

ಪಶ್ಯೇ ರಹಸ್ಯಂ ಯುವಯೋರ್ಯತೋಽಹಂ ಸಹಚಾರಿಣೀ ।
ಸಹೈವ ಗಮನೇ ರಾಧಾಽಯಾಚತೇತಿ ಮಮಾಗ್ರಹಾತ್ ॥೭೬॥

---

ಆದುದರಿಂದ ಇವಳಿಗೂ ಆನಂದವನ್ನುಂಟುಮಾಡಬೇಕು. ಇವಳು ನನ್ನ ವಿನೋದವನ್ನು ನೋಡುವವಳಾಗಲಿ. ನೀನು ಈ ಕನ್ನಿಕೆಯೊಂದಿಗೆ ರಾಧೆಯಿದ್ದಲ್ಲಿಗೆ ಹೋಗಿ ಹೀಗೆಂದು ಹೇಳುವವಳಾಗು. ಎಲೌ ಸಖಿಯೇ, ನಿನ್ನ ಪ್ರಿಯತಮನು ಈಗಲೇ ಬರುವನು. ಅವನು ಇಲ್ಲಿಗೆ ಬಂದ ತರುವಾಯವೂ ಕೋಪಗೊಂಡಿರುವುದು ನಿನಗೆ ತರವಲ್ಲವು. ಎಲೌ ಕಾಂತೆಯೇ, ಇದುವರೆಗೆ ಅನೇಕಬಾರಿನೀನು ಶೃಂಗಾರ ರಸಕ್ಕೆ ಭಂಗವನ್ನುಂಟುಮಾಡುವಂತೆ ಕೋಪಿಸಿಕೊಂಡಿರುತ್ತೀಯೆ. ॥೭೩-೭೪॥

ನಂದಿನಿಯು ಹೇಳಿದಳು — ಓ ಪ್ರಭುವೇ, ನಿನ್ನ ಆಜ್ಞಾನುಸಾರವಾಗಿ ನಾನು ರಾಧಿಕೆಯ ಸಮೀಪವನ್ನು ಕುರಿತು ತೆರಳುತ್ತೇನೆ. ನೀನೂ ಸಹ ಜಾಗ್ರತೆಯಾಗಿ ಬರುವವನಾಗು. ಈ ಕನ್ನಿಕೆಯ ಮನೋರಥವನ್ನು ಪೂರ್ಣಗೊಳಿಸಬೇಕು. ಈ ವಿಷಯದಲ್ಲಿ ಅನಾದರವು ಮಾಡತಕ್ಕದ್ದಲ್ಲವು. ॥೭೫॥

ನಾನು ನಿಮ್ಮಿರ್ವರ ಸಹಚಾರಿಣಿಯಾದುದರಿಂದ ನಿಮ್ಮಿರ್ವರ ರಹಸ್ಯ ಕೇಳಿಯನ್ನೂ ನೋಡುವೆನು. ನಿನ್ನನ್ನು ಜೊತೆಯಲ್ಲಿ ಕರೆದುಕೊಂಡೇ ಬರಬೇಕೆಂದು ರಾಧೆಯ ಆಗ್ರಹವಾಗಿರುವುದು. ॥೭೬॥

**ತತೋಽನಯಾ ಮಯಾ ಸಾರ್ಧಂ ತತ್ರ ವೈ ಗಚ್ಛ ಮಾ ಚಿರಂ ।**
**ಏಕಾಕಿನಸ್ತೇ ಗಮನಮನೌಚಿತ್ಯಕರಂ ಪರಂ ॥೭೭॥**

|| ನಾರದ ಉವಾಚ ||

**ಇತ್ಯುದೀರಿತಮಾಕರ್ಣ್ಯ ಪ್ರಸ್ಥಿತಃ ಸ ತಯಾ ಸಹ ।**
**ಗತೋ ರಾಧಾ ಸಕಾಶಂ ಸ ಮಾನಿನೀ ಮಾನಮತ್ಯಜತ್ ॥೭೮॥**

**ನಾನಾವಿನೋದ ಲೀಲಾಭಿಃ ಚಿಕ್ರೀಡೇ ಸಾ ವೃಷಾರ್ಕಜಾ ।**
**ಆದೃತೋ ಭಗವಾನ್ ಕೃಷ್ಣಸ್ತಯಾಽಭಿಮತಯಾ ಸಹ ॥೭೯॥**

**ಕೃತ್ವಾ ಪ್ರಣಾಮಂ ಬಹುಶಸ್ತದೋವಾಚ ತು ಕನ್ಯಕಾ ।**
**ದೃಷ್ಟ್ವಾಽದ್ಭುತಂ ರಹಸ್ಯಂ ಸಾ ಪರಂ ವಿಸ್ಮಯಮಾಗತಾ ॥೮೦॥**

---

ಆದುದರಿಂದ ನೀನು ನನ್ನೊಂದಿಗೇ ಜಾಗ್ರತೆಯಾಗಿ ಬರುವವನಾಗು. ನೀನು ಏಕಾಕಿಯಾಗಿ ಅಲ್ಲಿಗೆ ಹೋಗುವುದು ಉಚಿತವಾಗಿರುವುದಿಲ್ಲವು. ||೭೭||

ನಾರದನು ಹೇಳಿದನು—ನಂದಿನಿಯ ಈ ಮಾತನ್ನು ಕೇಳಿ ಕೃಷ್ಣನು ಅವಳೊಂದಿಗೆ ರಾಧೆಯ ಸಮೀಪವನ್ನು ಕುರಿತು ಹೋದನು. ತನ್ನ ಬಳಿಗೆ ಬಂದ ಶ್ರೀಕೃಷ್ಣನನ್ನು ನೋಡಿ ಪ್ರಣಯ ಕೋಪವನ್ನು ತಾಳಿದ್ದ ರಾಧೆಯು ತನ್ನ ಕೋಪವನ್ನು ತ್ಯಜಿಸಿದಳು ! ||೭೮||

ವೃಷಭಾನುವಿನ ಪುತ್ರಿಯಾದ ರಾಧೆಯು ತನ್ನ ಪ್ರಿಯತಮನೊಂದಿಗೆ ನಾನಾ ವಿಧವಾದ ಲೀಲೆಗಳಿಂದ ಕ್ರೀಡಿಸಿದಳು. ಶ್ರೀಕೃಷ್ಣನೂ ಸಹ ಸಂತುಷ್ಟಳಾದ ಅವಳೊಂದಿಗೆ ವಿಹರಿಸಿದನು. ||೭೯||

ಹೀಗಿರುತ್ತಿರಲು ಈ ಅದ್ಭುತವಾದ ರಹಸ್ಯಕೇಳಿಯನ್ನು ನೋಡಿ ಆ ಕನ್ನಿಕೆಯು ಅತ್ಯಂತ ಆಶ್ಚರ್ಯಗೊಂಡವಳಾಗಿ, ರಾಧಾಕೃಷ್ಣರನ್ನು ಅನೇಕಬಾರಿ ನಮಸ್ಕರಿಸಿ ಹೀಗೆಂದು ಹೇಳಿದಳು. ||೮೦||

ಧನ್ಯಾ ಪ್ರಿಯಾ ತೇ ಶ್ರೀಕೃಷ್ಣ ಯಯಾ ತ್ವಂ ರಮಸೇಽನಿಶಂ ।
ಕೃತಾಂಜಲಿರ್ವಿಷಯಿವಾಕ್‌ದೃಷ್ಟ್ವಾ ತು ಪರಮಾನ್ಭುತಂ ॥೮೧॥

ತ್ವಮೇವ ಪ್ರಾಣನಾಥೋ ಮೇ ತ್ಯಕ್ತುಂ ಶಕ್ನೋಮ್ಯಹಂ ಕಥಂ ।
ಯಥಾ ವಿನೋದಂ ಲೀಲಾಂ ತೇ ಪಶ್ಯೇಯಂ ಭುವನೋತ್ತಮಾಂ ॥೮೨॥

ನಿಕುಂಜೇ ವನಮಧ್ಯೇ ಚ ತತ್ರ ತತ್ರ ಸ್ಥಿತಾ ಹ್ಯಹಂ ।
ಯದ್ದ್ರಷ್ಟುಂ ಮುನಯೋ ನಿತ್ಯಂ ತಪಂತಿ ಪರಮಂ ತಪಃ ॥೮೩॥

ಅಧುನಾಽಪಿ ನ ತೇ ದ್ರಷ್ಟುಂ ಶಕ್ತಾ ಹಿ ಬಹುಜನ್ಮಭಿಃ ।
ದೃಷ್ಟಂ ಪರಂ ಕೌತುಕಂ ಮೇ ತವ ನಾಥ ಪ್ರಸಾದತಃ ॥೮೪॥

ಧನ್ಯಾಽಹಂ ತೇ ಕೃಪಾ ಜಾತಾ ಯನ್ಮಮೋಪರಿ ಮಾಧವ ।
ಪೂರ್ವಜನ್ಮಾರ್ಜಿತಂ ಪಾಪಂ ಸಮೂಲಮಧುನಾ ಹತಮ್ ॥೮೫॥

---

ಆ ಕನ್ನಿಕೆಯು ಅಂಜಲಿಬದ್ಧಳಾಗಿ ಓ ಶ್ರೀಕೃಷ್ಣನೇ, ಯಾವ ಸಖಿಯೊಂದಿಗೆ ನೀನು ರಮಿಸುವೆಯೋ ಪ್ರಿಯತಮೆಯಾದ ಆ ರಾಧೆಯು ಕೃತಕೃತ್ಯಳಾಗಿರುವಳು. ||೮೧||

ನೀನೇ ನನ್ನ ಪ್ರಾಣಪತಿಯಾಗಿರುವೆ. ನಿನ್ನನ್ನು ಅಗಲಿ ನಾನು ಹೇಗೆ ತಾನೇ ಇರಲಿ? ನಿನ್ನನ್ನು ಅಗಲಿದರೆ ಲತಾಮಂದಿರಗಳಲ್ಲಿಯೂ, ಅಲ್ಲಲ್ಲಿ ಅರಣ್ಯಮಧ್ಯದಲ್ಲಿಯೂ ಇರುವವಳಾಗಿ ನಾನು ಲೋಕಾತೀತವಾದ ನಿನ್ನ ಲೀಲಾವಿನೋದಗಳನ್ನು ಹೇಗೆತಾನೇ ನೋಡುವೆನು? ||೮೨||

ಓ ಪ್ರಭುವೇ, ಯಾವ ನಿನ್ನ ಅದ್ಭುತವಾದ ವಿನೋದವನ್ನು ನೋಡಲು ಮುನಿಗಳು ನಿರಂತರವೂ ಕಠಿಣವಾದ ತಪಸ್ಸನ್ನು ಆಚರಿಸುವವರಾಗಿ ಅನೇಕ ಜನ್ಮಗಳನ್ನು ಹೊಂದಿದವರಾದರೂ, ಇದುವರೆಗೂ ನಿನ್ನನ್ನು ನೋಡಲು ಸಮರ್ಥರಾಗಲಿಲ್ಲವೋ ಅಂತಹ ವಿನೋದವನ್ನು ನಾನು ನಿನ್ನ ಅನುಗ್ರಹದಿಂದ ನೋಡಿದವಳಾಗಿರುತ್ತೇನೆ! ||೮೩-೮೪||

ಓ ಮಾಧವನೇ, ಯಾವ ಕಾರಣದಿಂದ ನನ್ನಲ್ಲಿ ನಿನಗೆ ಕೃಪೆಯು ಉಂಟಾಯಿತೋ ಅದರಿಂದ ನಾನು ಧನ್ಯಳಾಗಿರುತ್ತೇನೆ. ಹಿಂದಿನ ಅನೇಕ ಜನ್ಮಗಳಲ್ಲಿ ಗಳಿಸಿರುವ ನನ್ನ ಪಾಪಗಳು ಮೂಲಸಹಿತವಾಗಿ ನಾಶಹೊಂದಿದುವು. ||೮೫||

**ಯದ್ರಹಸ್ಯಮುದ್ಭೃತಂ ತೇ ಭವತ್ಪ್ರಣಯಗೋಚರಮ್ ।**
**ಯಾಚೇ ವರಂ ಪರಂ ತ್ವತ್ತಃ ಕಿಮನ್ಯಂ ಪುಣ್ಯಮುತ್ತಮಂ ॥೮೬॥**

**ತೇಷಾಂ ಕಾಲೋ ವೃಥಾ ಯಾತಿ ತ್ವಾಂ ಭಜಂತಿ ನ ಯೇ ವಿಭೋ ।**
**ಸಂಸ್ಮರಂತಿ ಮಹಾಂತೋಽಪಿ ಪ್ರೇರಿತಾ ನಿಜಕರ್ಮಭಿಃ ॥೮೭॥**

**ಕೃಷ್ಣಕಾಂತ ಕರುಣಾಕರ ಕರ್ಮಸಮೂಹಕೃಂತನ ।**
**ಶ್ರೀಧರವಿಷ್ಣೋ ವಿಶ್ವಭಾವನ ಪರಮೇಶ್ವರ ಪರಾತ್ಮನ್ ॥೮೮॥**

**ಮೇ ಜನುರ್ಭವತು ಗುಲ್ಮಲತಾಸು ಪ್ರಾಣನಾಥ ಇದಮೇವ ಸಮೀಹೇ ।**
**ಕಿಂತಪಃ ಕಿಮಿಹ ಧರ್ಮಸಮೂಹಃ ಕಿಂ ಕೃತಂ ಹಿ ಧನದಾನಮನಂತಂ॥೮೯॥**
**ಕಿಂ ಪರೋಪಕೃತಿ ರನ್ಯಜನೌ ಮೇ ಯೇನ ದೃಷ್ಟಮಿದಮೇವ ರಹಸ್ಯಮ್**
**ಹೇವಿಭೋ ಚಿರಮಿಹ ಭ್ರಮಿತೋ ಗಾಂ ಪರ್ಯಟನ್ ಸಕಲಲೋಕ**
**ಮಶೇಷಂ ॥೯೦॥**

---

ರಹಸ್ಯವಾದ ನಿನ್ನ ಈ ಪ್ರಣಯಕೇಳಿಯ ಸಂದರ್ಶನವು ಯಾವುದಿದೆಯೋ ಅದಕ್ಕಿಂತಲೂ ಉತ್ತಮವಾದ ಬೇರೆಯ ಪುಣ್ಯವು ಯಾವುದುತಾನೇ ಇರುತ್ತದೆ? ಇದಕ್ಕಿಂತಲೂ ಬೇರೆ ಯಾವ ವರವನ್ನು ನಾನು ನಿನ್ನಲ್ಲಿ ಪ್ರಾರ್ಥಿಸಲಿ? ॥೮೬॥

ಓ ವಿಭುವೇ, ಪುಣ್ಯಶಾಲಿಗಳಾದರೂ ಸಹ ಪ್ರಾರಬ್ಧಕರ್ಮಗಳಿಂದ ಪ್ರೇರಿಸಿ ಸಲ್ಪಟ್ಟವರಾಗಿ ಯಾರು ನಿನ್ನನ್ನು ಭಜಿಸುವುದಿಲ್ಲವೋ ಮತ್ತು ಸ್ಮರಿಸುವುದಿಲ್ಲವೋ ಅವರ ಜೀವಿತಕಾಲವು ವ್ಯರ್ಥವಾಗಿ ಅತಿಕ್ರಮಿಸುತ್ತಿರುವುದು. ॥೮೭॥

ಓ ಪ್ರಾಣನಾಥ, ದುಷ್ಟಶಿಕ್ಷಕ, ಕಾಂತ, ಕರುಣಾಕರ, ಪಾಪಕರ್ಮನಾಶಕ, ಲಕ್ಷ್ಮೀಧರ, ವಿಷ್ಣುವೇ, ಜಗತ್ತನ್ನು ನಿನ್ನಲ್ಲಿ ಐಕ್ಯವಾಗುವಂತೆ ಮಾಡುವವನೇ, ಪರಮೇಶ್ವರನೇ, ಶ್ರೇಷ್ಠನೇ, ನನಗೆ ಗುಲ್ಮಲತಾದಿಗಳ ಜನ್ಮ ಉಂಟಾದರೂ ನಿನ್ನ ಈ ಕೇಳಿಯನ್ನು ನೋಡಬಯಸುವೆನು! ನಾನು ಮಾಡಿದ್ದ ತಪಸ್ಸು ಪುಣ್ಯಕರ್ಮಗಳಿಂದಲೂ, ಧನದಾನಾದಿಗಳಿಂದಲೂ ಇಂತಹ ಪ್ರಯೋಜನವನ್ನು ಪಡೆದೆನು. ॥೮೮-೮೯॥

ಓ ದೇವನೇ, ನಾನು ಈಗ ನಿನ್ನ ರಹಸ್ಯಕೇಳಿಯನ್ನು ನೋಡಿದೆನಾದುದರಿಂದ ಪೂರ್ವಜನ್ಮದಲ್ಲಿ ಯಾವ ಮಹತ್ತರವಾದ ಪುಣ್ಯವನ್ನು ಮಾಡಿದ್ದೆನು! ಓ ವಿಭುವೇ, ಸಕಲ ಲೋಕಗಳಿಗೂ ಪ್ರಭುವಾದ ನಿನ್ನನ್ನು ಸಂದರ್ಶಿಸುವುದಕ್ಕೋಸ್ಕರ ಭೂಮಿಯಲ್ಲಿ ಸಂಚರಿಸುವವಳಾಗಿ ಎಲ್ಲೆಲ್ಲೂ ತಿರುಗುತ್ತಿದ್ದೆನು. ॥೯೦॥

ಏತಮೇವ ಸುಖಸಿಂಧುಮನಂತಂ ನಾವಲೋಕಿತಮಹೋ ಕ್ವಚಿದೇವ ।
ನಿತ್ಯಮೇವ ನಿಯತಾ ತವ ಲೀಲಾ ರಾಧಿಕಾರಸಗತಸ್ಯ ನ ದೃಷ್ಟಾ ॥೯೧॥

ಯಾಚೇ ವಿಷ್ಣೋ ದೇಹಿ ಮೇ ಜನ್ಮ ಯತ್ರ
ಸ್ಥಿತ್ವಾಲೀಲಾಂ ನಿತ್ಯಮೇವಾನುದೃಶ್ಯೇ ।
ವೃಂದಾರಣ್ಯೇ ಕಾಂತಭೂಮಿಪ್ರದೇಶೇ
ಯಂ ದೃಷ್ಟ್ವಾಽಹಂ ಯಾಮಿ ಮೋದಂ ತ್ವಪಾರಮ್ ॥೯೨॥

॥ ಶ್ರೀ ಕನ್ಯೋವಾಚ ॥

ದೃಷ್ಟಂ ರಹಸ್ಯಮೇತನ್ಮೇ ಭಗವನ್ನದ್ಭುತಂ ಪರಂ ।
ರಾಸಕ್ರೀಡಾ ಸ್ಥಲಂಚಾಪಿ ವ್ರಜಲೀಲಾಂ ಪ್ರದರ್ಶಯ ॥೯೩॥

---

ಈ ಪ್ರಕಾರವಾದ ಅಪಾರವಾದ ಸುಖವನ್ನು ಎಲ್ಲಿಯೂ ಅನುಭವಿಸಲಿಲ್ಲವು. ಈ ಅರಣ್ಯದಲ್ಲಿ ಕ್ಷಣಕಾಲ ಉಂಟಾಗಿರುವ ರಾಧಿಕಾಸಕ್ತನಾದ ನಿನ್ನ ಲೀಲೆಯದರ್ಶನದಿಂದುಂಟಾಗುವ ಸುಖವು, ಕೋಟಿಕಲ್ಪಗಳಲ್ಲಿ ಅನುಭವಿಸಿದ ಸುಖಗಳಿಗಿಂತಲೂ ಅತಿಶಯವಾದುದಾಗಿರುತ್ತದೆ! ॥೯೧॥

ಓ ವಿಷ್ಣುವೇ, ಯಾವ ಮನೋಹರವಾದ ಭೂಪ್ರದೇಶವುಳ್ಳ ವೃಂದಾವನದಲ್ಲಿ ಇರುವವಳಾಗಿ ನಿರಂತರವೂ ನಿನ್ನ ಲೀಲೆಗಳನ್ನು ।ನೋಡುವವಳಾಗಿ ಅಪಾರ ಸಂತೋಷವನ್ನು ಹೊಂದುವೆನೋ ಅಂತಹ, ವೃಂದಾವನದಲ್ಲಿ ನನಗೆ ಜನ್ಮವನ್ನು ದಯಪಾಲಿಸು ಎಂದು ನಿನ್ನನ್ನು ಪ್ರಾರ್ಥಿಸುವೆನು. ॥೯೨॥

ಶ್ರೀ ಕನ್ನಿಕೆಯು ಹೇಳಿದಳು — ಓ ಭಗವಂತನಾದ ಶ್ರೀಕೃಷ್ಣನೇ ನಿನ್ನ ಈ ಅದ್ಭುತವಾದ ರಹಸ್ಯ ಕೇಳಿಯನ್ನು ನೋಡಿದೆನು. ರಾಸಕ್ರೀಡೆಯನ್ನು ಆಡಿದ ಸ್ಥಳವನ್ನೂ, ಮತ್ತು ವ್ರಜಲೀಲೆಯನ್ನೂ ತೋರಿಸುವವನಾಗು. (ವ್ರಜ ಎಂದರೆ ಹಸುಗಳ ಕೊಟ್ಟಿಗೆ ಎಂದರ್ಥವು. ವ್ರಜಲೀಲೆ ಎಂದರೆ ಹಸುವಿದ ಕರೆವಟ್ಟಿಯಲ್ಲಿ ಕೃಷ್ಣನು ಪ್ರದರ್ಶಿಸಿದ ನಾನಾವಿಧವಾದ ಲೀಲೆಯು ಎಂದರ್ಥವು.) ॥೯೩॥

ಓ ಅಜ್ಞಾನನಾಶಕನಾದ ಶ್ರೀಕೃಷ್ಣನೇ, ನಿರಂತರವಾಗಿ ಇರುವ ನಿನ್ನ ಆ ವ್ರಜ ಲೀಲೆಯನ್ನು ನನಗೆ ತೋರಿಸುವವನಾಗು. ಓ ವಿಷ್ಣುವೇ, ನನಗೆ ಕನ್ಯಾರೂಪವು ಇರುವುದರಿಂದ ನಿನ್ನ ದರ್ಶನಕ್ಕೆ ಅನಧಿಕಾರಿಣಿಯಾಗಿರುತ್ತೇನೆ. ಅನ್ಯಥಾ ದರ್ಶನಾಧಿ

**ನಿತ್ಯಾಶ್ಚೇದ್ವ್ರ(ಜ್ಞವ್ರ)ಜಲೀಲಾಸ್ತೇ ಮಹ್ಯಂ ದರ್ಶಯ ನಾರದ ।**
**ಕನ್ಯಾರೂಪೇಣ ತೇ ವಿಷ್ಣೋ ದರ್ಶನಾಧಿಕೃತಂ ಮಮ ॥೯೪॥**

**ನ ವೈ ದರ್ಶನಯೋಗ್ಯತ್ವಂ ಕುರ್ಯಾಂ ಕಿಂ ವದ ಮೇ ಪ್ರಭೋ॥೯೫॥**

|| ಕಿಶೋರ ಉವಾಚ ||

**ಶ್ರೂಯತಾಂ ಕರಣೀಯಂ ಯದ್ಯಥಾವತ್ಕಥಯಾಮಿ ತೇ ।**
**ಇತೋ ಮಧುವನೇ ರಮ್ಯಾ ಗಂಗಾ ಶ್ರೀಕೃಷ್ಣಸಂಜ್ಞಿತಾ ॥೯೬॥**

**ತತ್ರ ಸ್ನಾನೇನ ಪುಂಸ್ತ್ವಂ ಸ್ಯಾ ತ್ಕನ್ಯಾರೂಪಸ್ಯ ತೇಽನಘ ।**
**ಪುಂಸ್ತ್ವೇ ಜಾತೇ ತತಸ್ತುಭ್ಯಂ ದರ್ಶಯಿಷ್ಯೇ ವ್ರಜೋತ್ಸವಂ ॥೯೭॥**

|| ನಾರದ ಉವಾಚ ||

**ಇತ್ಯುಕ್ತೇ ತು ಸಮಾಗಮ್ಯ ಗಂಗಾಂ ಶ್ರೀಕೃಷ್ಣಸಂಜ್ಞಿತಾಂ ।**
**ಸ್ನಾತ್ವಾ ಪೀತ್ವಾ ಪಯಸ್ತಸ್ಯಾಃ ಪುಂಸ್ತ್ವಂ ಪ್ರಾಪ್ತಸ್ತದೈವ ಹಿ ॥೯೮॥**

---

ಕಾರವೇ ಇರುವುದಿಲ್ಲ. ಓ ಪ್ರಭುವಾದ ಶ್ರೀಕೃಷ್ಣನೇ, ನಾನು ಈಗ ಏನನ್ನು ಮಾಡಲಿ? ||೯೪-೯೫||

ಬಾಲಕನಾದ ಶ್ರೀಕೃಷ್ಣನು ಹೇಳಿದನು --ಎಲೈ ನಾರದನೇ, ನಿನಗೆ ಪ್ರಾಪ್ತವಾಗಿರುವ ಕನ್ಯಾರೂಪವನ್ನು ಹೋಗಲಾಡಿಸಲು ಉಪಾಯಭೂತವಾದ ನಿನ್ನ ಕರ್ತವ್ಯವನ್ನು ಯಥಾವತ್ತಾಗಿ ತಿಳಿಸುವೆನು, ಕೇಳುವವನಾಗು. ಇಲ್ಲಿಂದ ಸ್ವಲ್ಪ ದೂರದಲ್ಲಿರುವ ಮಧುವನದಲ್ಲಿ ಶ್ರೀಕೃಷ್ಣನೆಂಬ ಹೆಸರುಳ್ಳ ರಮಣೀಯವಾದ ಗಂಗಾನದಿಯು ಪ್ರವಹಿಸುತ್ತಲಿರುವುದು. ಅಲ್ಲಿ ಸ್ನಾನಮಾಡುವುದರಿಂದ ನಿನಗೆ ಪ್ರಾಪ್ತವಾಗಿರುವ ಈ ಕನ್ಯಾರೂಪವು ಹೋಗಿ ಪುನಃ ಪುಂರೂಪವು ಉಂಟಾಗುವುದು. ಪುಂರೂಪವು ಉಂಟಾದ ಬಳಿಕ ನಿನಗೆ ನನ್ನ ವ್ರಜೋತ್ಸವವನ್ನು ಪ್ರದರ್ಶಿಸುವೆನು! ||೯೬-೯೭||

ನಾರದನು ಹೇಳಿದನು — ಶ್ರೀಕೃಷ್ಣನು ಹೀಗೆಂದು ಹೇಳಲು ಕನ್ಯಾರೂಪಧಾರಿಯಾದ ನಾನು ಶ್ರೀಕೃಷ್ಣನೆಂಬ ಹೆಸರುಳ್ಳ ಗಂಗಾನದಿಯಲ್ಲಿ ಸ್ನಾನಮಾಡಿ ಅದರ ಉದಕವನ್ನು ಕುಡಿದ ಕೂಡಲೇ ಪುಂರೂಪವನ್ನು ಹೊಂದಿದೆನು. ||೯೮||

**ಅಪಶ್ಯಮುದ್ಭೃತಂ ತತ್ರ ಧ್ಯಾತ್ಮಾನಂ ಪುಂಸ್ತ್ವಮಾಗತಂ ।**
**ಲಬ್ಧ್ವಾ ಮನೋರಥಾನ್ಸರ್ವಾನ್ವ್ರಜಂ ದ್ರಷ್ಟುಂ ಮಥಾಯಯೌ ॥೯೯॥**

**ನಾರದೇನ ಸ್ವರೂಪೇಣ ಸಾನಂದಃ ಪರಮೋತ್ಸುಕಃ ।**
**ತಂ ಸಾಯಂತನವೇಲಾಯಾಂ ಪ್ರವಿಷ್ಟೋ ವ್ರಜಮಂಡಲಮ್ ॥೧೦೦॥**

**ದದರ್ಶಾಥ ಸಮಾಯಾಂತಂ ಗೋಪೈರ್ಗೋಭಿರಧೋಕ್ಷಜಂ ।**
**ವಯಸ್ಯೈರನುಗಾಯದ್ಭಿಃ ಕೀರ್ತಿಂ ಪರಮಪಾವನೀಂ ॥೧೦೧॥**

**ಅಥೋ ವ್ರಜಾದ್ವಿನಿಃ ಸೃತ್ಯ ಗೋಪ್ಯಃ ಸರ್ವಾ ದಿದೃಕ್ಷವಃ ।**
**ಮಾತರಶ್ಚ ಯಶೋದಾದ್ಯಾಃ ಕೃಷ್ಣರಾಮೌ ಸುತಾನಪಿ ॥೧೦೨॥**

**ರಾಮಕೃಷ್ಣೌ ಚ ಸರ್ವೇಶೌ ಗೋಪವೇಷ ವಿಭೂಷಿತೌ ।**
**ಚಾರಯಿತ್ವಾ ವನೇ ಗಾಶ್ಚ ವ್ರಜಮೇಭಿಶ್ಚ ಜಗ್ಮತುಃ ॥೧೦೩॥**

---

ಎಲೈ ಋಷಿಗಳೇ, ಈ ಪ್ರಕಾರವಾಗಿ ಗಂಗಾಸ್ನಾನದಿಂದ ಪುಂಸ್ತ್ವವನ್ನು ಪಡೆದು ನನ್ನ ಸ್ವರೂಪವನ್ನು ನೋಡಿ ಅತ್ಯಾಶ್ಚರ್ಯಗೊಂಡೆನು. ಈ ರೀತಿಯಲ್ಲಿ ಸಕಲ ಇಷ್ಟಾರ್ಥಗಳನ್ನು ಪಡೆದು ಬಳಿಕ ವ್ರಜಲೀಲೆಯನ್ನು ನೋಡಲು ಬಂದೆನು. ಅತ್ಯಂತ ಉತ್ಸಾಹಶಾಲಿಯಾಗಿಯೂ, ಆನಂದಭರಿತನಾಗಿಯೂ ಸ್ವಾಭಾವಿಕ ನಾರದ ಸ್ವರೂಪದಿಂದಲೇ ಸಾಯಂಕಾಲದ ವ್ರಜಗಳ ಸಮುದಾಯಗಳನ್ನು ಪ್ರವೇಶಿಸಿದೆನು. ॥೯೯-೧೦೦॥

ತರುವಾಯ ಗೋಪಾಲರೊಂದಿಗೂ ಪರಮ ಪವಿತ್ರವಾದ ಕೀರ್ತಿಯನ್ನು ಗಾನಮಾಡುವ ತನ್ನ ಸ್ನೇಹಿತರಿಂದಲೂ ಕೂಡಿದವನಾಗಿ ಬರುತ್ತಿದ್ದ ಶ್ರೀಕೃಷ್ಣನನ್ನು ನೋಡಿದೆನು. ॥೧೦೧॥

ಅನಂತರದಲ್ಲಿ ಸಕಲ ಗೋಪಿಕಾಸ್ತ್ರೀಯರೂ, ವ್ರಜದಿಂದ ಹೊರಕ್ಕೆ ಬಂದು ಆ ರಾಮಕೃಷ್ಣರನ್ನು ನೋಡಲು ಅಪೇಕ್ಷೆಪಟ್ಟರು. ಮತ್ತು ತಾಯಂದಿರಾದ ಯಶೋದೆಯೇ ಮೊದಲಾದವರು ಬಾಲಕರಾದ ರಾಮಕೃಷ್ಣರನ್ನು ನೋಡಲು ಇಚ್ಛೆಯುಳ್ಳವರಾದರು. ಇದಕ್ಕಾಗಿ ಅವರ ಆಗಮನವನ್ನೇ ನಿರೀಕ್ಷಿಸುತ್ತಲಿದ್ದರು. ॥೧೦೨॥

ಸರ್ವೇಶ್ವರರಾದ ರಾಮಕೃಷ್ಣರು ಗೊಲ್ಲರ ವೇಷದಿಂದ ಅಲಂಕೃತರಾಗಿ ಅರಣ್ಯದಲ್ಲಿ ಗೋವುಗಳನ್ನು ಮೇಯಿಸಿ, ಬಳಿಕ ಅವುಗಳೊಂದಿಗೆ ಗೋಷ್ಠವನ್ನು ಕುರಿತು ಬಂದವರಾದರು. ॥೧೦೩॥

**ಗೌರಶ್ಯಾಮೌ ನೃಣಾಂ ಶ್ರೇಷ್ಠೌ ಸರ್ವವಿಶ್ವೇಶವಂದಿತೌ ।**
**ಅನಂತಲೀಲಾಽಭಿರತೌ ಗೋಪವೇಷಧರಾವಪಿ ॥೧೦೪॥**

**ನಿತ್ಯಂ ಕ್ರೀಡತಿ ಗೋಪೀಭಿಃ ವ್ರಜಪತ್ನೀಭಿರಾತ್ಮವಾನ್ ।**
**ಆಲೋಕ್ಯ ವನಿತಾಃ ಸರ್ವಾಃ ಪ್ರೀತಾಃ ಶ್ರೀಕೃಷ್ಣದರ್ಶನೇ ॥೧೦೫॥**

**ನೀರಾಜನವಿಧಿಂ ಕೃತ್ವಾ ವ್ರಜಂ ನಿನ್ಯುರ್ವ್ರಜೇಶ್ವರಂ ।**
**ವ್ರಜೇಶ್ವರೀ ಗೃಹಂ ರಮ್ಯಂ ವ್ರಜಸ್ತ್ರೀಭಿರಥಾಗಮತ್ ॥೧೦೬॥**

**ನಾರದೋಽಪಿ ತದಾ ಪ್ರಾಪ ವ್ರಜೇಶಸದನಂ ಮಹತ್ ।**
**ತಂ ದೃಷ್ಟ್ವಾಽಽಯಾಂತಮುತ್ಥಾಯ ಭಗವಾನ್ ಪ್ರಯತಾಂಜಲಿಃ ॥೧೦೭॥**

**ಉವಾಚ ವಚನಂ ಚಾರು ಶುಭಾಯಾತಂ ಮಹಾಮುನೇ ।**
**ಅದ್ಯ ನೋ ಜನ್ಮಸಾಫಲ್ಯಮದ್ಯ ನಃ ಪರಮಂ ತಪಃ ॥೧೦೮॥**

---

ಪುರುಷಶ್ರೇಷ್ಠರಾದ ಆ ರಾಮಕೃಷ್ಣರು ಇಂದ್ರಾದಿ ಲೋಕಪಾಲಕರಿಂದ ನಮಸ್ಕರಿಸಲ್ಪಡುವವರಾಗಿಯೂ, ನಾನಾ ವಿಧವಾದ ಬಾಲಲೀಲೆಗಳಲ್ಲಿ ನಿರತರಾಗಿ, ಗೋಪಾಲಕರ ವೇಷವನ್ನು ಧರಿಸಿದವರಾಗಿ ಇದ್ದರು. ॥೧೦೪॥

ಕೃಷ್ಣನು ಸಂತೋಷಪರವಶನಾಗಿ ಗೋಪಪತ್ನಿಯರಾದ ಗೋಪಿಕಾಸ್ತ್ರೀಯರೊಂದಿಗೆ ನಿರಂತರವೂ ಕ್ರೀಡಿಸುತ್ತಲೇ ಇರುವನು. ಸಕಲ ವನಿತೆಯರೂ ಸಹ ಶ್ರೀಕೃಷ್ಣನನ್ನು ನೋಡಿ ಅವನ ದರ್ಶನದಿಂದ ಸಂತೋಷಗೊಂಡವರಾಗಿ, ಅವನಿಗೆ ಆರತಿಯನ್ನು ಬೆಳಗಿ ವ್ರಜೇಶ್ವರನಾದ ಅವನನ್ನು ವ್ರಜಕ್ಕೆ ಕರೆದುಕೊಂಡುಹೋದರು. ಬಳಿಕ ವ್ರಜೇಶ್ವರಿಯಾದ ಗೋಪಿಯೂ ಕೂಡ ಇತರ ಗೋಪಿಕಾಸ್ತ್ರೀಯರೊಂದಿಗೆ ರಮ್ಯವಾದ ತನ್ನ ಗೃಹವನ್ನು ಕುರಿತು ತೆರಳಿದಳು. ॥೧೦೫-೧೦೬॥

ಆಗ ನಾರದನೂ ಕೂಡ ಪೂಜ್ಯವಾದ ಆ ವ್ರಜೇಶನ ಮನೆಯನ್ನು ಕುರಿತು ಹೊರಟನು. ತನ್ನ ಆಲಯವನ್ನು ಕುರಿತು ಬಂದ ಆ ನಾರದನನ್ನು ನೋಡಿ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣನು ಅಂಜಲಿಬದ್ಧನಾಗಿ ಅವನನ್ನು ಕುರಿತು ಹೀಗೆಂದು ಹೇಳಿದನು—ಓ ಮಹಾತಪಸ್ವಿಯೇ, ನಿನಗೆ ಸುಖಾಗಮನವಾಗಲಿ. ಈ ದಿವಸ ನಮ್ಮ ಜನ್ಮವು ಸಾರ್ಥಕವಾಯಿತು ! ಈ ದಿವಸವೇ ನಮ್ಮ ತಪೋನುಷ್ಠಾನವು ಸಫಲವಾಯಿತು ! ಪೂರ್ವಜನ್ಮದಲ್ಲಿ ಸಂಚಿತವಾದ ಪುಣ್ಯಕರ್ಮಗಳ ದೆಸೆ

ಪೂರ್ವಪುಣ್ಯಸಮೂಹೇನ ಲಬ್ಧಂ ವೈ ದರ್ಶನಂ ತವ ।
ಗೋಪರಾಜಗೃಹಂ ಧನ್ಯಂ ಯನ್ನಿವಿಷ್ಟೋ ಮಹಾಮುನಿಃ ॥೧೦೯॥

ಧನ್ಯಂ ಗೃಹಂ ಗೃಹಸ್ಥಾನಾಂ ಸರ್ವತೀರ್ಥಕರಂ ಮಹತ್ ।
ಸಾಧುಭಿರ್ಯತ್ಸಮಾಯಾತಂ ತವ ಪಾದೋರುಪಂಕಜಂ ॥೧೧೦॥

ಪಿತರಸ್ತದ್ಗೃಹಂ ಯಾಂತಿ ಪ್ರಸನ್ನಾಃ ಸರ್ವದೇವತಾಃ ।
ಭವಂತಿ ನಿಯತಂ ತತ್ರ ಯತ್ರ ಗಚ್ಛಂತಿ ಸಾಧವಃ ॥೧೧೧॥

ಯೇಷಾಂ ಪಾದೋದಕಂ ತೀರ್ಥಂ ತೀರ್ಥಾನಾಮಪಿ ಪಾವನಂ ।
ನ ಪತಂತಿ ಗೃಹೇ ಯತ್ರ ಶ್ಮಶಾನಮಿವ ತದ್ಗೃಹಂ ॥೧೧೨॥

ನ ವಿಷ್ಣುಕೀರ್ತನಂ ಯತ್ರ ನ ಚ ಭಾಗವತಾ ಜನಾಃ ।
ತದ್ಗೃಹಂ ಕ್ರೋಷ್ಟುಸದನಂ ತದ್ಗೃಹಸ್ಥಜನಿರ್ವೃಥಾ ॥೧೧೩॥

---

ಯಿಂದಲೇ ಮಹಾಮುನಿಯಾದ ನಿನ್ನ ದರ್ಶನವು ನಮಗೆ ಲಭಿಸಿರುತ್ತದೆ. ತಪಸ್ವಿಯಾದ ನೀನು ಯಾವ ಕಾರಣದಿಂದ ಗೋಪರಾಜನಾದ ನನ್ನ ಮನೆಯನ್ನು ಪಡೆದವನಾಗಿರುವೆಯೋ ಆದರಿಂದ ನನ್ನ ಗೃಹವು ಪವಿತ್ರಮಾಡಲ್ಪಟ್ಟಿತು. ॥೧೦೭-೧೦೮-೧೦೯॥

ಬ್ರಹ್ಮಚರ್ಯಾದಿವರ್ಣಾಶ್ರಮಿಗಳಿಗೆ ಉಪಕಾರವನ್ನು ಮಾಡುವ ಪೂಜ್ಯವಾದ ಗೃಹಸ್ಥಾಶ್ರಮಿಗಳ ಗೃಹವು ಸತ್ಪುರುಷರ ಸಮಾಗಮದಿಂದ ಪವಿತ್ರೀಕರಿಸಲ್ಪಡುತ್ತದೆ. ಈಗಲಾದರೋ ನಿನ್ನ ಪಾದಸರೋರುಹದ ವಿನ್ಯಾಸದಿಂದ ನನ್ನ ಆಲಯವು ಪವಿತ್ರವಾದುದಾಗಿ ಮಾಡಲ್ಪಟ್ಟಿರುತ್ತದೆ. ॥೧೧೦॥

ಯಾವ ಮನೆಗೆ ನಿರಂತರವೂ ಸತ್ಪುರುಷರು ಆಗಮಿಸುವರೋ ಆ ಮನೆಗೆ ಪಿತೃದೇವತೆಗಳು ಆಗಮಿಸುವರು. ಮತ್ತು ಸಕಲ ದೇವತೆಗಳೂ ಕೂಡ ಪ್ರಸನ್ನರಾಗಿರುತ್ತಾರೆ. ॥೧೧೧॥

ಯಾವ ಮನೆಯಲ್ಲಿ ಸಕಲ ತೀರ್ಥಗಳಿಗೂ ಪವಿತ್ರವಾದ ಸತ್ಪುರುಷರ ಪಾದತೀರ್ಥವು ಬೀಳುವುದಿಲ್ಲವೋ ಆ ಮನೆಯು ಸ್ಮಶಾನದಂತೆ ಇರುವುದು. ॥೧೧೨॥

ಯಾವ ಗೃಹದಲ್ಲಿ ವಿಷ್ಣುಕೀರ್ತನವು ನೆರವೇರುವುದಿಲ್ಲವೋ ಮತ್ತು ಯಾವ ಗೃಹದಲ್ಲಿ ಭಗವದ್ಭಕ್ತರು ಇರುವುದಿಲ್ಲವೋ ಆ ಮನೆಯು ನರಿಯ ಮನೆಯಂತೆಯೇ

ಧನ್ಯಂ ತತ್ಸದನಂ ಶ್ರೇಷ್ಠಂ ಯತ್ರಾಯಾಂತಿ ಭವದ್ವಿಧಾಃ ।
ಯೇ ಸ್ವಪಾದೋದಕೇನೈವ ಪಾವಯಂತಿ ಗೃಹಾಂಗಣಂ ॥೧೧೪॥

ಮುನೇ ಲೋಕೇ ಶುಭಂ ಸರ್ವಂ ಯತಃ ಪರ್ಯಟನಂ ತವ ।
ವಿಶೇಷೇಣ ಪವಿತ್ರಂ ಮೇ ಗೃಹಮಾಗಮನಾತ್ತವ ॥೧೧೫॥

ಧನ್ಯೋ ನಂದಃ ಪಿತಾ ಮೇಽದ್ಯ ಯಶೋದಾ ಜನನೀ ತಥಾ ।
ಧನ್ಯೋಽಹಂ ಪಾವಿತಾಃ ಸರ್ವೇ ಮುನೇರಾಗಮನೇನ ತೇ ॥೧೧೬॥

ತಥಾಽಪಿ ಪೃಚ್ಛೇ ತ್ವಾಮದ್ಯ ಯದಾಗಮನ ಕಾರಣಮ್ ।
ಅಹಂ ತವಾಜ್ಞಾ ಕರಣಾತ್ಕೃತಾರ್ಥಃ ಸ್ಯಾನ್ನ ಸಂಶಯಃ ॥೧೧೭॥

---

ಇರುವುದು. ಆ ಗೃಹದಲ್ಲಿ ವಾಸಿಸುವ ಜನರ ಜನ್ಮವು ವ್ಯರ್ಥವಾದುದಾಗಿರುತ್ತದೆ. ॥೧೧೩॥

ನಿಮ್ಮಂತಹ ಸತ್ಪುರುಷರು ಯಾವ ಮನೆಯನ್ನು ಕುರಿತು ಬಂದವರಾಗಿ ತಮ್ಮ ಪಾದೋದಕದಿಂದ ಮನೆಯ ಅಂಗಳವನ್ನು ಪವಿತ್ರವಾದುದನ್ನಾಗಿ ಮಾಡುವರೋ ಆ ಮನೆಯೇ ಸಾರ್ಥಕವಾದುದಾಗಿರುತ್ತದೆ. ॥೧೧೪॥

ಎಲೈ ಮುನಿಯೇ, ನೀನು ಲೋಕಗಳನ್ನು ಸಂಚರಿಸುವವನಾದುದರಿಂದ ನಿನ್ನಿಂದ ಲೋಕದ ಸಕಲ ಪದಾರ್ಥಗಳೂ ಪವಿತ್ರೀಕರಿಸಲ್ಪಟ್ಟಿವೆ. ಆದರಲ್ಲಿಯೂ ನೀನು ನನ್ನ ಮನೆಗೆ ಆಗಮಿಸಿರುವುದರಿಂದ ನನ್ನ ಮನೆಯು ವಿಶೇಷವಾಗಿ ಪವಿತ್ರವಾಗಿರುತ್ತದೆ. ॥೧೧೫॥

ಓ ಮುನಿಯೇ, ನಿನ್ನ ಆಗಮನದಿಂದ ನನ್ನ ತಂದೆಯಾದ ನಂದನೂ ಮತ್ತು ಜನನಿಯಾದ ಯಶೋದಾದೇವಿಯೂ ಧನ್ಯರಾಗಿರುತ್ತಾರೆ. ನಾನೂ ಈ ದಿವಸ ಕೃತಕೃತ್ಯನಾಗಿರುವೆನು! ಸರ್ವರೂ ನಿನ್ನ ಆಗಮನದಿಂದ ಪವಿತ್ರಿತರಾಗಿರುವರು. ॥೧೧೬॥

ಆದರೂ ಕೂಡ ನಿನ್ನ ಆಗಮನ ಕಾರಣವನ್ನು ಕೇಳಬಯಸುತ್ತೇನೆ. ಏಕೆಂದರೆ ನಾನು ನಿನ್ನ ಆಜ್ಞೆಯನ್ನು ಪರಿಪಾಲಿಸುವುದರ ಮೂಲಕ ಕೃತಾರ್ಥನಾಗುವೆನು. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ॥೧೧೭॥

**ಯಥಾ ವ್ರಜಾಧಿರಾಜೋಽಹಂ ನಿವಸಾಮ್ಯತ್ರ ಯೇನ ಚ ।**
**ತದ್ರಹಸ್ಯಂ ಮಯಾ ವಾಚ್ಯ ಮನುರಾಗೋ ಯತಸ್ತ್ವಯಿ ॥೧೧೮॥**

**ಜಾನಂತಿ ನೈತದ್ಗೋಪ್ಯಂ ಮೇ ಗೋಪಾ ನಂದಾದಯಸ್ತಥಾ ।**
**ಗೋಪ್ಯೋ ರಹಸ್ಯಂ ಬಾಲಾಶ್ಚ ಮದನುಗ್ರಹಣಂ ವಿನಾ ॥೧೧೯॥**

|| ನಾರದ ಉವಾಚ ||

**ನಿಶಮ್ಯೇತ್ಥಂ ಭಗವತೋ ವಚನಂ ಚಾಹಮಬ್ರವಮ್ ।**
**ಆನಂದಬಾಷ್ಪಕಲಯಾ ವಾಚಾ ಗದ್ಗದಯಾ ಭೃಶಂ ॥೧೨೦॥**

**ನಂದಾಲಯೇ ಯಾ ಲೀಲಾಸ್ತೇ ಕೃಷ್ಣ ವೃಂದಾವನೇ ಗಿರೌ ।**
**ವದತಾಂ ಶೃಣ್ವತಾಂ ಗೇಹೇ ರತಿಂ ಛಿಂದಂತಿ ಯಾ ನೃಣಾಂ ॥೧೨೧॥**

---

ನಾನು ಯಾವ ರೀತಿಯಿಂದ ಗೋಪಾಲಕನಾದೆನು ಮತ್ತು ಯಾವ ಕಾರಣದಿಂದ ಇಲ್ಲಿ ನೆಲಸಿರುವೆನು ಎಂಬ ಈ ಗುಪ್ತವಿಷಯವನ್ನು ನಿನ್ನಲ್ಲಿ ನನಗಿರುವ ಪ್ರೀತಿಯಿಂದ ನಿನಗೆ ಹೇಳುವುದು ನನ್ನ ಕರ್ತವ್ಯವು. ||೧೧೮||

ನನ್ನ ವ್ರಜಕ್ರೀಡೆಯನ್ನೂ ಮತ್ತು ಇನ್ನಿತರ ನಾನಾ ವಿಧವಾದ ಕ್ರೀಡೆಗಳನ್ನೂ ನಿನಗೆ ಹೇಳುವೆನು. ಗುಪ್ತವಾದ ಈ ವಿಷಯವನ್ನು ನಂದಾದಿಗಳಾಗಲೀ ಗೋಪಿಕಾಸ್ತ್ರೀಯರಾಗಲೀ ಗೋಪಾಲಕರೇ ಆಗಲೀ ಯಾರೂ ಸಹ ನನ್ನ ಅನುಗ್ರಹವಿಲ್ಲದೇ ತಿಳಿಯಲಾರರು. ||೧೧೯||

ನಾರದನು ಹೇಳಿದನು—ಎಲೈ ಋಷಿಗಳೇ, ಭಗವಂತನಾದ ಶ್ರೀಕೃಷ್ಣನ ಈ ಪ್ರಕಾರವಾದ ಮಾತುಗಳನ್ನು ಕೇಳಿ ಆನಂದಬಾಷ್ಪಗಳನ್ನು ಸುರಿಸುತ್ತಾ ಗದ್ಗದಸ್ವರದಿಂದ ಅವನನ್ನು ಕುರಿತು ಹೀಗೆಂದು ಹೇಳಿದೆನು. ||೧೨೦||

ಓ ಕೃಷ್ಣನೇ, ಜನರು ನಿನ್ನ ಯಾವ ಲೀಲೆಗಳನ್ನು ತಮ್ಮ ಗೃಹಗಳಲ್ಲಿ ಹೇಳುವುದರಿಂದ ಮತ್ತು ಶ್ರವಣಮಾಡುವುದರಿಂದ ಅವರ ದುಃಖಗಳೆಲ್ಲವೂ ನಾಶವಾಗುವುವೋ, ನಂದನ ಗೃಹದಲ್ಲಿಯೂ, ವೃಂದಾವನದಲ್ಲಿಯೂ ಮತ್ತು ಗೋವರ್ಧನ ಪರ್ವತದಲ್ಲಿಯೂ ಪ್ರದರ್ಶಿಸಿದ, ವಿಷಯಾಸಕ್ತಿಯನ್ನು ನಾಶಮಾಡಿ ವಿವೇಕವನ್ನುಂಟುಮಾಡುವ, ನಿನ್ನ ಆ ಲೀಲೆಗಳನ್ನು ನನಗೆ ಹೇಳುವವನಾಗು. ||೧೨೧||

ಬಾಲ್ಯ ಕೌಮಾರಪೌಗಂಡವಯಸ್ಸು ಚ ಕೃತಾಸ್ತ್ವಯಾ ।
ಅನೇಕವಿಸ್ತಾರತಯಾ ವದ ಮೇ ತ್ವಂ ಪ್ರಿಯೋ ಯತಃ ॥೧೨॥

ಅಜನಸ್ಯ ಚ ತೇ ಜನ್ಮ ನಾಶಾಯೋ ತ್ಪಥಗಾಮಿನಾಂ ।
ಕ್ಷೇಮಾಯ ಸರ್ವಲೋಕಸ್ಯ ಕರ್ತುಂ ಕರ್ಮಾಣಿ ಚೈವಹಿ ॥೧೩॥

ಯಥೈವ ಸೋಽಬ್ಧಿರ್ಮಥಿತೋ ಲಭ್ಯತೇಽಥ ಸುಧಾ ಯಥಾ ।
ಸಂಸೇವ್ಯಮಾನೋ ಭಕ್ತೈಸ್ತ್ವಂ ಜ್ಞಾಯಸೇ ನಾನ್ಯಥಾ ಕ್ವಚಿತ್॥೧೪॥

ನ ತೇ ಕಶ್ಚಿದ್ವಿಕಾರೋಽಸ್ತಿ ಸೃಜತಃ ರಕ್ಷತೋಽಪಿ ವಾ ।
ಲೋಕಾನ್ ಸಂಹರತಶ್ಚೈವ ನಿರ್ಗುಣೋಽಸಿ ಯತೋ ವಿಭೋ ॥೧೫॥

ಸಗುಣತ್ವಂ ರಾಗಯೋಗಾತ್ ಸ್ಫಟಿಕಸ್ಯೇವ ತೇ ಸ್ಮೃತಮ್ ।
ಸಾ ಜ್ಯೋತಿರ್ಜ್ಯೋತಿಷಾಂ ವಾರಿ ಪ್ರತಿಬಿಂಬಾ ಯಥಾ ಭವೇತ್॥೧೬॥

---

ಓ ಕೃಷ್ಣನೇ, ನೀನು ನನಗೆ ಪ್ರಿಯನಾಗಿರುವುದರಿಂದ ನಿನ್ನ ಬಾಲ್ಯ ಕೌಮಾರ ಮತ್ತು ಯೌವನಾವಸ್ಥೆಗಳಲ್ಲಿ ಪ್ರದರ್ಶಿಸಿದ ಲೀಲೆಗಳನ್ನು ವಿಸ್ತಾರವಾಗಿ ಹೇಳುವವನಾಗು. ||೧೨||

ವರ್ಣಾಶ್ರಮಧರ್ಮದಲ್ಲಿ ನಿರತರಾಗದೆ ದುರ್ಮಾರ್ಗಪ್ರವರ್ತಕರಾದವರನ್ನು ಸಂಹರಿಸಲೂ ಮತ್ತು ವರ್ಣಾಶ್ರಮಧರ್ಮಗಳನ್ನು ಅನುಷ್ಠಾನಕ್ಕೆ ತರುವುದಕ್ಕೋಸ್ಕರವೂ, ಸರ್ವಪ್ರಜೆಗಳ ಕ್ಷೇಮಕ್ಕೆ ಅಮಾನುಷನಾದ ನೀನು ಈ ಲೋಕದಲ್ಲಿ ಅವತರಿಸುವವನಾಗಿರುವೆ. ||೧೩||

ಕ್ಷೀರಸಮುದ್ರವನ್ನು ಮಥನಮಾಡುವುದರಿಂದ ಹೇಗೆ ಅಮೃತವು ಲಭಿಸುವುದೋ ಅದರಂತೆ ನಿರಂತರವೂ ನಿನ್ನನ್ನು ಭಜಿಸುವ ಭಕ್ತರೇ ನಿನ್ನ ಸ್ವರೂಪವನ್ನು ತಿಳಿದುಕೊಳ್ಳುವರು. ಅನ್ಯಥಾ ಎಂದಿಗೂ ನೀನು ಅಗೋಚರನಾಗಿರುವೆ. ||೧೪||

ಓ ವಿಭುವೇ, ನೀನು ನಿರ್ಗುಣನಾದುದರಿಂದ ಲೋಕಗಳ ಉತ್ಪತ್ತಿ, ಸ್ಥಿತಿ, ಲಯಗಳನ್ನುಂಟುಮಾಡುವ ನಿನಗೆ ಯಾವ ವಿಧವಾದ ವಿಕಾರವೂ ಇರುವುದಿಲ್ಲವು. ||೧೫||

ಜಪಾಕುಸುಮದ ಸಾನ್ನಿಧ್ಯದಿಂದ ಸ್ಫಟಿಕವು ಹೇಗೆ ರಕ್ತವರ್ಣವುಳ್ಳದ್ದಾಗಿ ತೋರುವುದೋ, ಅದರಂತೆ ನೀನೂ ಸಹ ಅವಿದ್ಯೆಯ ಸಾನ್ನಿಧ್ಯದಿಂದ ಸಗುಣನಾ

**ಆತ್ಮಾ ತ್ವಂ ಸರ್ವಭೂತೇಷು ಮಧ್ಯವರ್ತೀ ಕ್ವಚಿತ್ ಸ್ಥಿತಃ ।**
**ಚಿತ್ತಸ್ಥೈರ್ಯಂ ಪರಂ ಜ್ಞಾನಂ ಸಂಸಾರಕ್ಲೇಶಕೃಂತನಂ ॥೧೨೭॥**

**ಯತಃ ಸ್ಯಾತ್ತನ್ನ ಶೃಣುಯಾತ್ಸೋ ಮೂಢೋ ಯೋ ನರೇತರಃ ।**
**ತೋಽಸ್ಯೋಽಹಂ ತತ್ಪರೋ ಭೂತ್ವಾ ಕಥಯಸ್ವ ಕೃಪಾನಿಧೇ ॥೧೨೮॥**

**ಶೃಣು ತ್ವಂ ಮುನಿಶಾರ್ದೂಲ ಕಥಯಾಮ್ಯಾತ್ಮಕೌತುಕಮ್ ।**
**ಯಥಾ ವ್ರಜೇ ವಿಹಾರೋ ಮೇ ಭವೇತ್ಪರಮದುಷ್ಕರಃ ॥೧೨೯॥**

**ನಿತ್ಯೋ ವ್ರಜಸ್ತಥಾ ನಿತ್ಯಾ ಯ ಏತೇ ವ್ರಜವಾಸಿನಃ ।**
**ಗೋಪಾ ಗೋಪ್ಯೋ ವನಂ ಗಾವೋ ವಿಹರಾಮ್ಯತ್ರ ನಿತ್ಯಶಃ ॥೧೩೦॥**

---

ಗಿಯೇ ತೋರುತ್ತಿರುವೆ. ಜಲದಲ್ಲಿ ಸೂರ್ಯಾದಿ ಜ್ಯೋತಿಗಳ ಪ್ರತಿಬಿಂಬಗಳು ಹೇಗೆ ತೋರುವುವೋ ಅದರಂತೆ ಅವಿದ್ಯೆಯೆಂಬ ಉಪಾಧಿಯಲ್ಲಿ ನಿನ್ನ ಜ್ಯೋತಿಯು ಪ್ರತಿಬಿಂಬಿಸಿರುವುದು. ॥೧೨೬॥

ಪರಮಾತ್ಮ ಸ್ವರೂಪಿಯಾದ ನೀನು ಸಕಲ ಭೂತಗಳಲ್ಲಿಯೂ ನೆಲಸಿರುವವನಾಗಿ ಅಂತಃಕರಣವೆಂಬ ಉಪಾಧಿಯಲ್ಲಿ ವಿಶೇಷತಃ ಜೀವರೂಪದಿಂದ ಉಪಲಭ್ಯಮಾನನಾಗಿರುವೆ. ಯಾವ ನಿನ್ನ ಬಾಲಲೀಲೆಗಳ ಶ್ರವಣದಿಂದ ಚಿತ್ತಸ್ಥೈರ್ಯವೂ ಮತ್ತು ಸಂಸಾರದ ಕ್ಲೇಶಗಳನ್ನು ನಾಶಮಾಡುವ ಜ್ಞಾನವೂ ಉಂಟಾಗುವುದೋ ಅಂತಹ ಬಾಲಲೀಲೆಗಳನ್ನು ಯಾವನು ಶ್ರವಣಮಾಡುವುದಿಲ್ಲವೋ ಅವನೇ ಮೂಢನಾಗಿರುವನು. ಮತ್ತು ಅವನು ಮನುಷ್ಯನಾಗಿರುವುದಿಲ್ಲವು. ಕರುಣಾರ್ಣವನಾದ ಪ್ರಭುವೇ, ನಾನು ಆ ಕೃಷ್ಣಕಥಾಶ್ರವಣದಲ್ಲಿಯೇ ಆಸಕ್ತನಾಗಿ ಅತ್ಯಾನಂದವನ್ನು ಹೊಂದುವೆನು. ಆದುದರಿಂದ ಅದನ್ನು ನನಗೆ ಹೇಳುವವನಾಗು. ನಾರದನು ಹೀಗೆಂದು ಪ್ರಾರ್ಥಿಸಲು, ॥೧೨೭-೧೨೮॥

ಶ್ರೀಕೃಷ್ಣನು ಹೇಳಿದನು—ಎಲೈ ಮುನಿಶ್ರೇಷ್ಠನೇ, ಶ್ರವಣಕುತೂಹಲವನ್ನುಂಟುಮಾಡುವುದೂ ಮತ್ತು ಅತ್ಯಂತ ದುಷ್ಕರವೂ ಆದ ಆ ನನ್ನ ವ್ರಜವಿಹಾರವನ್ನು ಹೇಳುವೆನು ಕೇಳುವವನಾಗು. ॥೧೨೯॥

ಈ ಗೋಪಗ್ರಾಮವು ನಿತ್ಯವಾಗಿರುವುದು. ಈ ಗ್ರಾಮದಲ್ಲಿ ವಾಸಿಸುವ ಗೋಪಾಲಕರೂ, ಗೋಪಿಕಾಸ್ತ್ರೀಯರೂ ಮತ್ತು ಗೋವುಗಳೂ ನಿರಂತರವೂ ಇಲ್ಲಿಯೇ ನೆಲಸಿರುವರು. ನಾನೂ ಸಹ ಇಲ್ಲಿ ಸದಾ ವಿಹರಿಸುತ್ತಿರುವೆನು. ॥೧೩೦॥

ನ ಪಶ್ಯಂತಿ ನರಾ ಮೂಢಾ ಮಾಯಯಾ ನಷ್ಟಚಕ್ಷುಷಃ ।
ಕಾಮಕ್ರೋಧಾಭಿಭೂತಾಶ್ಚ ವಿಶೇಷೇಣ ಕಲೌ ಯುಗೇ ॥೧೩೧॥

ಲೋಕಾ ವಿಷಯಿಣೋ ಯೇಽತ್ರ ಶ್ರುತಿಸ್ಮೃತಿವಿವರ್ಜಿತಾಃ ।
ಧರ್ಮಹೀನಾ ಹ್ಯನುದಿನಂ ಮದ್ಭಕ್ತಿರಹಿತಾ ಭೃಶಂ ॥೧೩೨॥

ಭಕ್ತೋಽಹಂ ಜ್ಞಾನವಾನಸ್ಮಿ ಮತ್ತೋಽನ್ಯಃ ಕೋಽತ್ರ ವಿದ್ಯತೇ ।
ಬ್ರಾಹ್ಮಣಾ ವೇದರಹಿತಾಃ ಶೂದ್ರಾಚಾರಾಃ ಕುಟುಂಬಿನಃ ॥೧೩೩॥

ಲೋಲುಪಾ ಭೋಜನೇ ಪಾನೇ ವಿದ್ಯಾವಿರಹಿತಾಃ ಖಲಾಃ ।
ನಾನಾಪಥೋಪದೇಷ್ಟಾರಃ ಕುಕರ್ಮನಿರತಾಃ ಸ್ವಯಮ್ ॥೧೩೪॥

ದೂಷಕಾ ವಿಷ್ಣುಭಕ್ತಾನಾಂ ಸತ್ಕರ್ಮವಿಮುಖಾಃ ಪರಂ ।
ಲೋಕಂ ಚೋಪಹಸಿಷ್ಯಂತಿ ಸ್ವಚ್ಛಂದಾ ಬಕವೃತ್ತಯಃ ॥೧೩೫॥

---

ಆದರೂ ನನ್ನ ಮಾಯೆಯಿಂದ ಆವರಿಸಲ್ಪಟ್ಟ ಮೂಢಜನರು ಜ್ಞಾನಹೀನರಾಗಿ ನನ್ನನ್ನು ತಿಳಿಯಲಾರದವರಾಗಿದ್ದಾರೆ. ಪ್ರಾಯಶಃ ಕಲಿಯುಗದಲ್ಲಿ ಜನರೆಲ್ಲರೂ ಕಾಮಕ್ರೋಧಾದಿಗಳಿಂದ ವಿವೇಕಹೀನರಾಗಿದ್ದಾರೆ. ॥೧೩೧॥

ಈ ಕಲಿಯುಗದಲ್ಲಿ ಜನರು ಸರ್ವದಾ ವಿಷಯಾಸಕ್ತರಾಗಿ ವೇದ ಮತ್ತು ಧರ್ಮಶಾಸ್ತ್ರಗಳ ಅಧ್ಯಯನವನ್ನು ಮಾಡದೆ, ವಿಹಿತಕರ್ಮಾನುಷ್ಠಾನದಿಂದ ಹೀನರಾಗಿಯೂ ಮತ್ತು ವಾಸುದೇವನಾದ ನನ್ನಲ್ಲಿ ಭಕ್ತಿಯಿಲ್ಲದವರಾಗಿಯೂ ಇರುತ್ತಾರೆ. ॥೧೩೨॥

ಹೀಗಿದ್ದರೂ ಮನುಷ್ಯನು "ನಾನು ದೇವಭಕ್ತನು, ನಾನೇ ಜ್ಞಾನಿಯು, ನನಗಿಂತಲೂ ಜ್ಞಾನಿಯಾದವನು ಅನ್ಯನು ಯಾವನಿರುವನು ?" ಎಂಬ ಅಹಂಭಾವದಿಂದ ಕೂಡಿರುವವನಾಗಿರುತ್ತಾನೆ. ಬ್ರಾಹ್ಮಣರು ವೇದಾಧ್ಯಯನವರ್ಜಿತರಾಗಿಯೂ ಶೂದ್ರರಿಗೆ ಉಚಿತವಾದ ಪರಸೇವಾವೃತ್ತಿಯನ್ನು ಹೊಂದಿದವರಾಗಿಯೂ, ಕೇವಲ ಕುಟುಂಬಪೋಷಣೆಯಲ್ಲಿ ಆಸಕ್ತರಾಗಿಯೂ, ಭೋಜನದಲ್ಲಿಯೂ ಮತ್ತು ಪಾನದಲ್ಲಿಯೂ ಮನಸ್ಸುಳ್ಳವರಾಗಿಯೂ, ವಿದ್ಯಾವಿಹೀನರಾಗಿಯೂ, ದುಷ್ಟರಾಗಿಯೂ, ಸ್ವತಃ ದುಷ್ಕರ್ಮಗಳನ್ನು ಆಚರಿಸುವವರಾಗಿಯೂ, ಪರರಿಗೆ ನಾನಾ ವಿಧವಾದ ಉಪದೇಶಗಳನ್ನು ಮಾಡುವವರಾಗಿಯೂ, ವಿಷ್ಣುಭಕ್ತರನ್ನು ದೂಷಿಸುವವರಾಗಿಯೂ,

ಸ್ವಪ್ನೋಽಪಮೇ ನೃಲೋಕೇಽಸ್ಮಿನ್ವಿಶೇಷೇಣ ಕಲೌ ಯುಗೇ ।
ತೇಷಾಮುಹಂ ಸಮುದ್ಧರ್ತ್ತಾ ಅವಶ್ಯಂ ಸಂಸಾರಸಾಗರಾತ್ ॥೧೩೬॥

ಯದಾ ಪೂರ್ವಜನುಃ ಪುಣ್ಯೋಽಪಚಯೋ ಭವಿತಾ ನೃಣಾಂ ।
ತದಾ ಮದ್ಭಕ್ತಸಂಯೋಗಸ್ತತೋ ಮದ್ಭಕ್ತಿಸಂಭವಃ ॥೧೩೭॥

ವ್ರಜೇಽನುರಾಗೋ ರಾಧಾಯಾಃ ಚರಣಾನುಸ್ಮೃತಿಃ ಪರಂ ।
ಗೃ(ಹ್ಣ)ಣಾಮ್ಯನುಗ್ರಹೇಣೈವ ಅವತಾರಾನ್ ಪೃಥಗ್ವಿಧಾನ್ ॥೧೩೮॥

ಅಸುರಾ ಯವನಾಂಶೇಷು ಜಾತಾ ಲೋಕೋಽಪತಾಪಿನಃ ।
ಅನೀತಿನಿರತಾಃ ಸರ್ವೇ ಸಂಗ್ರಹೇ ಚ ಪ್ರಬುದ್ಧಯಃ ॥೧೩೯॥

---

ಸತ್ಕರ್ಮರಹಿತರಾಗಿಯೂ, ಸ್ವೇಚ್ಛಾಚಾರಿಗಳಾಗಿಯೂ, ಬಕಪಕ್ಷಿಗಳಂತೆ ಕಪಟಾಚರಣವುಳ್ಳವರಾಗಿಯೂ, ಪರಲೋಕದ ಅಸ್ತಿತ್ವ ವಿಷಯದಲ್ಲಿ ಅಪಹಾಸ್ಯಮಾಡುವವರಾಗಿಯೂ ಇರುತ್ತಾರೆ. ||೧೩೩-೧೩೪-೧೩೫||

ಸ್ವಪ್ನಸದೃಶವಾದ ಈ ಮನುಜಲೋಕದಲ್ಲಿ, ಅದರಲ್ಲಿಯೂ ವಿಶೇಷವಾಗಿ ಕಲಿಯುಗದಲ್ಲಿ, ನಾನು ಜನರನ್ನು ಈ ಸಂಸಾರಾರ್ಣವದಿಂದ ಪಾರುಗಾಣಿಸುವವನಾಗಿದ್ದೇನೆ. ||೧೩೬||

ಮನುಷ್ಯನಿಂದ ಪೂರ್ವಜನ್ಮಗಳಲ್ಲಿ ಪುಣ್ಯಕರ್ಮಗಳು ಆಚರಿಸಲ್ಪಟ್ಟಿದ್ದರೆ ಈ ಜನ್ಮದಲ್ಲಿ ನನ್ನ ಭಕ್ತರ ಸಹವಾಸವು ಉಂಟಾಗುವುದು. ಅದರಿಂದ ನನ್ನಲ್ಲಿ ಭಕ್ತಿಯು ಅಂಕುರಿಸುವುದು. ||೧೩೭||

ಗೋಕುಲದ ದರ್ಶನದಲ್ಲೂ ಅದರ ಕಥಾಶ್ರವಣದಲ್ಲೂ ಆದರವೂ, ರಾಧಾದೇವಿಯ ಪಾದಸ್ಮರಣೆಯೂ ಉಂಟಾಗುವುವು. ಅಲ್ಲದೆ ಸಜ್ಜನರ ಉಪಕಾರಕ್ಕಾಗಿ ಅವರಲ್ಲಿ ಅನುಗ್ರಹಬುದ್ಧಿಯಿಂದಲೇ ನಾನೂ ಅನೇಕವಾದ ಅವತಾರಗಳನ್ನು ಸ್ವೀಕರಿಸಿ ಧರ್ಮರಕ್ಷಣೆಯನ್ನೂ ಆಗಾಗ್ಗೆ ಮಾಡುತ್ತಿರುವೆನು. ||೧೩೮||

ಕಲಿಯುಗದಲ್ಲಿ ರಾಕ್ಷಸರು ಯವನರಾಗಿ ಹುಟ್ಟಿ ಜನಗಳಿಗೆ ಸಂತಾಪವನ್ನು ಉಂಟುಮಾಡುತ್ತಾರೆ. ಅವರೆಲ್ಲರೂ ಅನೀತಿಮಾರ್ಗದಲ್ಲಿ ಆಸಕ್ತರಾಗಿಯೂ, ಅನ್ಯಾಯದಿಂದ ಹಣ ಮುಂತಾದುವನ್ನು ಗಳಿಸುವುದರಲ್ಲಿ ಕುಶಲರಾಗಿಯೂ ಇರುವರು. ||೧೩೯||

**ಪಲಾಯಮಾನಾಸ್ತೇಷಾಂ ಹಿ ಪ್ರಜಾಃ ಸ್ಯುರತಿಪೀಡಿತಾಃ ।**
**ಪ್ರಾಪ್ನುರ್ದೇಶಾಂತರಂ ಚಾಪಿ ಕ್ವಚಿನ್ನ ಸುಖಿತಾಭವನ್ ॥೧೪೦॥**

**ವೈಶ್ಯಾಸ್ತು ಶುದ್ಧಪಾಷಂಡಾ ನಿಯತಂ ಕೂಟವೃತ್ತಯಃ ।**
**ಶಶ್ವತ್ಕ್ರೂರಕ್ರಿಯಾಶ್ಚೈವ ವಿಷಯೇ ಸಾರಬುದ್ಧಯಃ ॥೧೪೧॥**

**ತೇಷು ವಿಪ್ರೇಷು ನಷ್ಟೇಷು ಕಥಂ ಧರ್ಮಃ ಪ್ರವರ್ತತೇ ।**
**ಕದಾಚಿತ್ಕೇಽಪಿ ಮದ್ಭಕ್ತಾ ಭವಿಷ್ಯಂತಿ ಕಲೌ ಯುಗೇ ॥೧೪೨॥**

**ಶೂದ್ರಾ ವಿಕರ್ಮನಿರತಾ ಗೋವಿಪ್ರಾಗ್ನಿ ಪರಾಙ್ಮುಖಾಃ ।**
**ತದಾ ಧರಾತಿ ಭಾರಾ ಹಿ ಕೃತ್ವಾ ಗೋರೂಪಮುದ್ಭುತಮ್ ॥೧೪೩॥**
**ಸಂಪ್ರಾಪ್ತಾ ಬ್ರಹ್ಮಸದನಂ ಸ್ವದುಃಖಾನಿ ನ್ಯವೇದಯತ್ ।**

---

ಯವನರಾಜರ ಪ್ರಜೆಗಳು ಅವರಿಂದ ಪೀಡಿಸಲ್ಪಟ್ಟವರಾಗಿ ಓಡುತ್ತಾ ದೇಶಾಂತರವನ್ನು ಸೇರುವವರಾಗುತ್ತಾರೆ. ಆದರೂ ಅವರಿಗೆ ಎಲ್ಲಿಯೂ ಸುಖವು ಲಭಿಸುವುದಿಲ್ಲ. ॥೧೪೦॥

ವೈಶ್ಯರು ಶುದ್ಧ ನಾಸ್ತಿಕಬುದ್ಧಿಯುಳ್ಳವರಾಗಿಯೂ, ನಿರಂತರವೂ ಹಿಂಸಾತ್ಮಕವಾದ ಕರ್ಮಗಳಲ್ಲಿ ನಿರತರಾಗಿಯೂ, ವಿಷಯಸುಖಗಳಲ್ಲಿಯೇ ಸಾರಬುದ್ಧಿಯುಳ್ಳವರಾಗಿಯೂ ಇರುವರು. ॥೧೪೧॥

ಯಾವ ಬ್ರಾಹ್ಮಣರಿಂದ ವರ್ಣಾಶ್ರಮಧರ್ಮಗಳು ವ್ಯವಸ್ಥಿತರೀತಿಯಿಂದ ಇರುವುವೋ ಅಂತಹ ಬ್ರಾಹ್ಮಣರೇ ಭ್ರಷ್ಟರಾಗಲು ಧರ್ಮವು ಹೇಗೆತಾನೆ ನೆಲಸುವುದು ? ಹೀಗಿರುತ್ತಿರಲು ಒಂದಾನೊಂದು ಕಾಲದಲ್ಲಿ ನನ್ನ ಭಕ್ತರಾದ ಕೆಲವರು ಧರ್ಮಸಂರಕ್ಷಣೆಗೋಸ್ಕರ ಕಲಿಯುಗದಲ್ಲಿ ಅವತರಿಸುವರು. ॥೧೪೨॥

ಕಲಿಯುಗದಲ್ಲಿ ಶೂದ್ರರು ತಮ್ಮ ವರ್ಣಕ್ಕೆ ವಿರುದ್ಧವಾದ ಕರ್ಮಗಳಲ್ಲಿ ಆಸಕ್ತರಾಗಿ ಗೋವುಗಳು, ಬ್ರಾಹ್ಮಣರು ಮತ್ತು ಅಗ್ನಿ ಮುಂತಾದುವುಗಳಲ್ಲಿ ಪೂಜ್ಯಭಾವನೆಯಿಲ್ಲದವರಾಗುತ್ತಾರೆ. ಆಗ ಭೂದೇವಿಯು ಭಾರವನ್ನು ಹೊರಲು ಅಶಕ್ತಳಾಗಿ, ವಿಸ್ಮಯಕಾರಕವಾದ ಗೋರೂಪವನ್ನು ಧರಿಸಿ, ಬ್ರಹ್ಮನ ಆಲಯವನ್ನು ಪಡೆದು ಅವನೊಂದಿಗೆ ತನ್ನ ದುಃಖವನ್ನು ಹೀಗೆಂದು ನಿವೇದಿಸಿದಳು. ॥೧೪೩॥

ಪ್ರಯಾಮಿ ಪಾತಾಲತಲಂ ಭಾರಂ ಸೋಢುಂ ನ ಹಿ ಕ್ಷಮಾ ॥೧೪೪॥

ನ ಶೈಲಾನಾಂ ಚ ಸಿಂಧೂನಾಂ ಲವಣಾನಾಂ ತಥಾ ನೃಣಾಂ ।
ನಹಿ ಭಾರಃ ಸಂಭವತಿ ಯಥಾ ಭಾರೋ ಹ್ಯ ಪಾಲನಾತ್ ॥೧೪೫॥

ಬ್ರಾಹ್ಮಣಾ ವೇದರಹಿತಾಃ ಸದಾಚಾರ ವಿವರ್ಜಿತಾಃ ।
ಕ್ಷತ್ರಿಯಾ ಸ್ತ್ಯಕ್ತರಾಜ್ಯಾಶ್ಚ ವೈಶ್ಯಾ ವೃತ್ತಿ ಪ್ರಪೀಡಿತಾಃ ॥೧೪೬॥

ಶೂದ್ರಾಃ ಸ್ವಾಮಿಸ್ವಭಕ್ತಾಶ್ಚ ಸ್ತ್ರಿಯಃ ಪರರತಾಃ ಸತಾಃ (ದಾ) ।
ತ್ಯಕ್ತಮಾತಾಪಿತೃಸ್ನೇಹಾಃ ಶುಶ್ರೂಷಾರಹಿತಾಃ ಪರಮ್ ॥೧೪೭॥

ವಿಕರ್ಮನಿರತಾ ಲೋಕಾಃ ಕುಕರ್ಮಣ್ಯತಿರಾಗಿಣಃ ।
ಯದಾ ತದಾಽತಿಭಾರೋ ಮೇ ಭವತ್ಯೇವ ಜಗದ್ಗುರೋ ॥೧೪೮॥

ಶ್ರುತ್ವೇತಿ ವಾಕ್ಯಂ ಧರಣೇಃ ಪಿತಾಮಹ
ಶ್ಚಿರಂ ಸಮುದ್ವಿಗ್ನಮನಾ ವಿಚಾರ್ಯ ।

---

ಓ ಬ್ರಹ್ಮನೇ, ನಾನು ಭೂಲೋಕದಲ್ಲಿ ಪರ್ವತಗಳು, ನದಿಗಳು, ಸಮುದ್ರಗಳು ಮನುಷ್ಯರು ಇವರುಗಳ ದುಷ್ಟ ಭಾರವನ್ನು ಹೊರಲು ಅಶಕ್ತಳಾಗಿ ಪಾತಾಳದ ತಳಭಾಗಕ್ಕೆ ಹೋಗುತ್ತಿರುವೆನು. ॥೧೪೪-೧೪೫॥

ಭೂಲೋಕದಲ್ಲಿ ಬ್ರಾಹ್ಮಣರು ವೇದಬಾಹಿರರಾಗಿಯೂ, ಸತ್ಕರ್ಮರಹಿತರಾಗಿಯೂ, ಕ್ಷತ್ರಿಯರು ರಾಜ್ಯಪರಿಪಾಲನ ಕರ್ಮವನ್ನು ತೊರೆದವರಾಗಿಯೂ, ವೈಶ್ಯರು ತಮ್ಮ ವರ್ಣಕ್ಕೆ ಅನುಗುಣವಾದ ವಾಣಿಜ್ಯವೃತ್ತಿಯನ್ನು ತ್ಯಜಿಸಿರುವವರಾಗಿಯೂ, ಶೂದ್ರರು ಸ್ವಾಮಿಭಕ್ತಿಯನ್ನು ಬಿಟ್ಟವರಾಗಿಯೂ, ಸ್ತ್ರೀಯರು ಪರಪುರುಷನಲ್ಲಿ ಆಸಕ್ತರಾಗಿಯೂ ಇರುವರು. ॥೧೪೬॥

ಓ ಜಗತ್ಪ್ರಭುವೇ, ಜನರು ಮಾತಾಪಿತೃಗಳಲ್ಲಿ ಭಕ್ತಿಭಾವನೆಯನ್ನು ತೊರೆದವರಾಗಿಯೂ, ಗುರುಶುಶ್ರೂಷಾದಿಗಳಿಂದ ವಿಮುಖರಾಗಿಯೂ ವರ್ಣಾಶ್ರಮಕ್ಕೆ ಅನುಚಿತವಾದ ಕರ್ಮಗಳಲ್ಲಿ ಆಸಕ್ತರಾಗಿ ದುಷ್ಟಕಾರ್ಯದಲ್ಲಿ ನಿರತರಾಗುವರೋ ಆಗ ನನಗೆ ಅತಿಶಯವಾದ ಭಾರವು ಆಗಿಯೇ ಆಗುತ್ತದೆ. ॥೧೪೭-೧೪೮॥

ಭೂದೇವಿಯು ಹೀಗೆಂದು ಅರಿಕೆಮಾಡಲು ಅವಳ ವಾಕ್ಯವನ್ನು ಕೇಳಿ ಬ್ರಹ್ಮನು ಖೇದಗೊಂಡವನಾಗಿ ದೀರ್ಘಕಾಲದವರೆಗೆ ಪರ್ಯಾಲೋಚಿಸಿ, ಕೊನೆಗೆ

ಸಾರ್ಧಂ ಧರಿತ್ರ್ಯಾಽಮರಲೋಕಸಂಘೈಃ
ಮಮಾಲಯಂ ಕ್ಷೀರನಿಧಿಂ ಜಗಾಮ ॥೧೪೯॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ
ನಾರದ ಶೌನಕ ಸಂವಾದೇ ಕಲಿಪ್ರಭಾವವರ್ಣನಂ
ನಾಮ ಚತುರ್ದಶೋಽಧ್ಯಾಯಃ

---

ತನ್ನೊಂದಿಗೆ ಭೂದೇವಿಯನ್ನೂ ಕರೆದುಕೊಂಡು ದೇವತೆಗಳಿಂದ ಸಹಿತನಾಗಿ ನನ್ನ ಮನೆಯಾದ ಕ್ಷೀರಸಮುದ್ರವನ್ನು ಕುರಿತು ಹೊರಟವನಾದನು. ॥೧೪೯॥

ಇಲ್ಲಿಗೆ ಸಕಲ ಪುರಾಣ ಸಾರಭೂತವಾದ ಆದಿಪುರಾಣದಲ್ಲಿ
ನಾರದ ಶೌನಕ ಸಂವಾದದಲ್ಲಿ ಕಲಿಪ್ರಭಾವವರ್ಣನವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

|| ಅಥ ಪಂಚದಶೋಽಧ್ಯಾಯಃ ||

## ಹದಿನೈದನೆಯ ಅಧ್ಯಾಯವು

|| ಶ್ರೀಕೃಷ್ಣ ಉವಾಚ ||

**ಬ್ರಹ್ಮಾ ಕ್ಷೀರಾಬ್ಧಿನಿಕಟೇ ಸೂಕ್ತೈಶ್ಚಕ್ರೇ ಮಮ ಸ್ತವಂ ।**
**ಸಮಾಧಾಯ ತತಶ್ಚಿತ್ತಂ ಶ್ರುತವಾನಥ ಭಾರತೀಮ್ ||೧||**

**ಅಹಂ ಸ್ವರೂಪಂ ಲೋಕೇಷು ಪ್ರದರ್ಶ್ಯಾತಿ ಮನೋಹರಮ್ ।**
**ಹರಿಷ್ಯಾಮಿ ಭುವೋ ಭಾರಂ ಮಾಕುರುಷ್ವ ಮನೋಽನ್ಯಥಾ ||೨||**

**ತತೋ ಬ್ರಹ್ಮಾ ಮಮಾನುಜ್ಞಾಂ ಯಥೋಕ್ತಾಮಧಿಗಮ್ಯ ಚ ।**
**ಯಯೌ ಸ್ವಲೋಕಂ ದೇವಾಶ್ಚ ಯಯುಃ ಸ್ವಸ್ವನಿವೇಶನಮ್ ||೩||**

---

ಬ್ರಹ್ಮನು ಕ್ಷೀರಸಮುದ್ರದ ಬಳಿಯಲ್ಲಿ ನನ್ನನ್ನು ಅನೇಕ ಸೂಕ್ತಗಳಿಂದ ಸ್ತುತಿಸಿದನು. ನಾನು ಸಾವಧಾನವಾಗಿ ಆ ಬ್ರಹ್ಮನ ವಾಣಿಯನ್ನು ಕೇಳಿದೆನು. ಅನಂತರದಲ್ಲಿ ನಾನು ನನ್ನ ಸುಂದರವಾದ ರೂಪವನ್ನು ತೋರಿಸುತ್ತಾ ಪಿತಾಮಹ ನನ್ನು ಕುರಿತು "ಓ ಬ್ರಹ್ಮನೇ, ಸಮಸ್ತವಾದ ಭೂಭಾರವನ್ನು ಹೋಗಲಾಡಿಸು ವೆನು. ಅನ್ಯಥಾ ತಿಳಿಯಬೇಡವೆಂದು ಹೇಳಿದೆನು. ||೧-೨||

ತರುವಾಯ ಬ್ರಹ್ಮನು ನನ್ನ ಅಪ್ಪಣೆಯ ಮೇರೆಗೆ ತನ್ನ ಲೋಕಕ್ಕೆ ಹೋದನು. ದೇವತೆಗಳೂ ಕೂಡ ತಮ್ಮ ಸ್ಥಾನಗಳಿಗೆ ಹೋದರು. ||೩||

ತೈಃ ಪ್ರಾರ್ಥಿತೋಽಹಮುಭವಂ ದೇವಕ್ಯಾಂ ವಸುದೇವತಃ ।
ನೀತೋಽಹಂ ವಸುದೇವೇನ ಗೋಕುಲಂ ಗೋಪಮಂಡಿತಮ್ ॥೪॥

ಮದಾಗಮನಮಾರಭ್ಯ ಸಂವೃದ್ಧಿರ್ಗೋಕುಲೇಽಭವತ್ ।
ದೃಷ್ಟ್ವಾ ಮದ್ರೂಪಮತುಲಮುತ್ಸುಕೋ ನಂದಗೋಪಕಃ ॥೫॥

ಅಸಂಖ್ಯಾಃ ಪ್ರದದೌ ಗಾಂಶ್ಚ ಗೋಪಾನ್ ಗೋಪೀರಯೋಜಯತ್।
ಹೃಷ್ಟಃ ಸ್ವಭವನೇ ನಂದಶ್ಚಕಾರ ಪರನೋತ್ಸವಂ ॥೬॥

ಗೀತ ವಾದಿತ್ರಘೋಷೈಶ್ಚ ವಿಪ್ರಾಣಾಂ ವೇದ ನಿಸ್ವನೈಃ ।
ಗಾನೈರ್ವಲ್ಲವ ನಾರೀಣಾಂ ಗಾಯಕಾನಾಂ ಚ ಸಂಕುಲಂ ॥೭॥

ಹರಿದ್ರಾದಧಿತೈಲೈಸ್ತೇ ಲಿಲಿಪುರ್ನವನೀತಕಂ ।
ಚಿಕ್ಷಿಪುಃ ಸಿಷಿಚುರ್ಗೋಪಾಃ ನನೃತುಶ್ಚ ಪರಸ್ಪರಂ ॥೮॥

---

ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ನಾನು ವಸುದೇವನಿಂದ ದೇವಕೀಗರ್ಭದಲ್ಲಿ ಜನಿಸಿದೆನು. ಅನೇಕ ಗೋಪರಿರುವ ಗೋಕುಲಕ್ಕೆ ನನ್ನನ್ನು ಒಯ್ದರು. ನಾನು ಗೋಕುಲಕ್ಕೆ ಹೋದಮೇಲೆ ಎಲ್ಲಾ ವಸ್ತುಗಳೂ ಸಮೃದ್ಧಿಯಾದವು. ನನ್ನ ಸೌಂದರ್ಯವನ್ನು ನೋಡಿ ನಂದಗೋಪನು ಬಹಳ ಸಂತೋಷಗೊಂಡನು. ||೪-೫||

ನಂದಗೋಪನು ಸಂತೋಷದಿಂದ ಅನೇಕ ಗೋವುಗಳನ್ನು ದಾನಮಾಡಿದನು. ಗೋಪಗೋಪಿಯರನ್ನು ಸೇರಿಸಿ ದೊಡ್ಡ ಪುತ್ರೋತ್ಸವವನ್ನು ಮಾಡಿದನು. ||೬||

ಗಾನ ವಾದ್ಯಗಳ ಧ್ವನಿಗಳಿಂದಲೂ ಬ್ರಾಹ್ಮಣರ ವೇದಘೋಷದಿಂದಲೂ, ನಾರಿಯರ ಇಂಪಾದ ಗಾನಗಳಿಂದಲೂ ಸಹ ನಂದಗೋಪನ ಮನೆಯು ಆನಂದದಿಂದ ತುಂಬಿಹೋಯಿತು. ||೭||

ಗೋಪರು ಅರಶಿನವನ್ನೂ, ಮೊಸರನ್ನೂ, ಎಣ್ಣೆಯನ್ನೂ, ಬೆಣ್ಣೆಯನ್ನೂ ಸಹ ಮಂಗಳಾರ್ಥವಾಗಿ ಲೇಪಿಸಿದರು. ನಾನಾ ವಿಧವಾದ ಮಂಗಳದ್ರವ್ಯಗಳನ್ನು ಎರಚದರು ಮತ್ತು ಸಂತೋಷದಿಂದ ನರ್ತನಮಾಡಿದರು. ||೮||

ಆಶಿಷಂ ಪ್ರದದುಃ ವಿಪ್ರಾ ಯೇ ವಾಸಂಸ್ತತ್ರ ಯಾಚಕಾಃ ।
ಗೋಪಾ ಗೋಪ್ಯೋಽಭಿ ಸಂಹೃಷ್ಟಾ ದದುರ್ವಸ್ತ್ರ ವಿಭೂಷಣಂ ॥೯॥

ಕೇಚಿತ್ ಸ್ತುವಂತಿ ನೃತ್ಯಂತಿ ಗಾಯಂತಿ ದದುರಾಶಿಷಃ ।
ಅಯಾಚಿತಂ ಯಾಚಕೇಭ್ಯಃ ಪ್ರಾಯಚ್ಛಂಸ್ತೇ ಧನಂ ಬಹು ॥೧೦॥

ಸರ್ವೇ ವಿಸ್ಮೃತ್ಯ ಚಾತ್ಮಾನಂ ಮಮಾಶ್ಚ ಪರಮೋತ್ಸವೇ ।
ಧನಿಕಾ ಇವ ಲಭ್ಯಂತೇ ಸೂತಮಾಗಧ ವಂದಿನಃ ॥೧೧॥

ಗೋಪಾನಾಮುತಿದಾನೈಶ್ಚ ಯಾಚಕಾನಾಂ ಚ ತರ್ಪಣೈಃ ।
ಸುಮಂಗಲದ್ರವ್ಯದಧಿನವನೀತ ಘೃತಾಂಬುಭಿಃ ॥೧೨॥

ಸಿಕ್ತಾ ನರಾಸ್ತಥಾ ನಾರ್ಯೋ ಮುದಮಾಪುರ್ಮಹಾತುರಾಃ ।
ದೇವಾ ವಿಮಾನಮಾರುಹ್ಯ ದದೃಶುಃ ಪರಮೋತ್ಸವಂ ॥೧೩॥

---

ಆ ನಂದಗೋಕುಲದಲ್ಲಿ ಯಾಚಕರಾಗಿ ಬಂದ ಬ್ರಾಹ್ಮಣರು ಆಶೀರ್ವಾದ ಮಾಡಿದರು. ಗೋಪರೂ ಮತ್ತು ಗೋಪಿಯರೂ ಸಹ ಸಂತೋಷದಿಂದ ವಸ್ತ್ರಗಳನ್ನು ಮತ್ತು ಆಭರಣಗಳನ್ನೂ ದಾನಮಾಡಿದರು. ॥೯॥

ಕೆಲವರು ಸಂತೋಷದಿಂದ ಸ್ತೋತ್ರಮಾಡಿದರು. ನರ್ತನಮಾಡಿದರು. ಗಾನಮಾಡಿದರು. ಆಶೀರ್ವಾದಮಾಡಿದರು. ಯಾಚಕರು ಬೇಡದೇ ಇದ್ದಾಗ್ಯೂ ಹೆಚ್ಚಾದ ದ್ರವ್ಯವನ್ನು ದಾನಮಾಡಿದರು. ॥೧೦॥

ನನ್ನ ಜನ್ಮಮಹೋತ್ಸವದ ದಿವಸದಲ್ಲಿ ಎಲ್ಲರೂ ತಮ್ಮನ್ನೇ ಮರೆತರು. ಸಾರಥಿಗಳೂ, ಸ್ತುತಿಪಾಠಕರೂ, ಬಂದಿಗಳೂ ಸಹ ಸಮಾನರಾಗಿ ಧನಿಕರಂತೆ ತೋರಿದರು. ನರರೂ, ನಾರಿಯರೂ ಸಹ ಬಹಳ ಆತುರದಿಂದ ಮಂಗಳಕರವಾದ ಮೊಸರು, ಬೆಣ್ಣೆ, ತುಪ್ಪ, ಗಂಧದ ನೀರು ಇವುಗಳನ್ನು ದೇಹದಮೇಲೆ ಲೇಪಿಸಿಕೊಂಡರು. ಗೋಪರು ಯಥೇಚ್ಛವಾಗಿ ದಾನಮಾಡಿದ್ದರಿಂದ ಯಾಚಕರು ತೃಪ್ತರಾದರು. ॥೧೧-೧೨॥

ದೇವತೆಗಳು ವಿಮಾನಾರೂಢರಾಗಿ ಬಂದು ನನ್ನ ಜನ್ಮೋತ್ಸವವನ್ನು ನೋಡಿ ಸಂತೋಷಗೊಂಡು ಹೂಮಳೆಗರೆದರು. ನನ್ನನ್ನು ಸ್ತೋತ್ರಮಾಡಿ ವಾದ

ಚಕ್ರುಃ ಕುಸುಮವೃಷ್ಟೀಶ್ಚ ಸ್ತುತ್ವಾ ವಾದ್ಯಾನ್ಯವಾದಯನ್ ।
ತೇಷಾಂ ಮಹೋತ್ಸವೇನಾಽಹಂ ಪ್ರಸನ್ನೋಽತಿತರಾಂ ತದಾ ॥೧೪॥

ಪ್ರಜಸ್ಥೇಭ್ಯಃ ಸುಖಂ ದಾತುಂ ಲೀಲಾಂ ಕರ್ತುಂ ಸಮುತ್ಸುಕಃ ।
ದ್ವಾಪರಾಂತೇ ಕಲೇರಾದೌ ವ್ಯತೀತೇ ತು ಶರಚ್ಛತೇ ॥೧೫॥

ಪ್ರೌಷ್ಠ ಪದ್ಯಾಮಥಾಷ್ಟಮ್ಯಾಂ ಕೃಷ್ಣಾಯಾಮರ್ಧರಾತ್ರಕೇ ।
ರೋಹಿಣೀಸ್ಥೇ ಚಂದ್ರಮಸಿ ಸ್ವೋಚ್ಚಗೇಽಭೂಜ್ಜನಿರ್ಮಮ ॥೧೬॥

ತದಾ ಮನಾಂಸಿ ಸಾಧೂನಾಂ ಪ್ರಸನ್ನಾನ್ಯಭವನ್ ಗೃಹೇ ।
ದಿಶೋಽಭವನ್ಸುವಿಮಲಾ ವಿಯದ್ವಿಮಲತಾರಕಂ ॥೧೭॥

ಮಹೋತ್ಸವಸ್ತು ಸರ್ವೇಷಾಂ ಜನಾನಾಂ ಚಾಭವದ್ಗೃಹೇ ।
ಮದ್ಗುಣಶ್ರವಣಂ ನಾಮ್ನಾಂ ಕೀರ್ತನಂ ಸ್ಮರಣಂ ಮಮ ॥೧೮॥

ಪಾದಸೇವಾರ್ಚನಂ ದಾಸ್ಯಂ ವಂದನಂ ಚಾಭವದ್ಗೃಹೇ ।
ಸರ್ವೇಷಾಮಭವದ್ವಿಪ್ರ ತಥೈವಾತ್ಮನಿವೇದನಂ ॥೧೯॥

---

ಗಳನ್ನು ಬಾರಿಸಿದರು. ಈ ರೀತಿಯಾಗಿ ಎಲ್ಲರ ಸಂತೋಷವನ್ನು ನೋಡಿ ನಾನೂ ಬಹಳ ಸಂತೋಷಗೊಂಡೆನು. ॥೧೩-೧೪॥

ನಾನು ಗೋಕುಲದಲ್ಲಿರುವವರಿಗೆ ಸುಖವನ್ನುಂಟುಮಾಡಿ ಜಗತ್ತಿನಲ್ಲಿ ನನ್ನ ಮಹಿಮೆಯನ್ನು ತೋರಿಸಬೇಕೆಂದು ಯೋಚಿಸಿ ಅನೇಕವರ್ಷಗಳು ಕಳೆಯಲು ದ್ವಾಪರಯುಗದ ಅಂತ್ಯಕಾಲವಾದ ಕಲಿಯುಗದ ಆದಿಯಲ್ಲಿ ಭಾದ್ರಪದ (ಶ್ರಾವಣ) ಮಾಸದ ಕೃಷ್ಣಾಷ್ಟಮೀ ಅರ್ಧರಾತ್ರಿಯಲ್ಲಿ ಚಂದ್ರನು ರೋಹಿಣೀಸಹಿತನಾಗಿ ತನ್ನ ಉಚ್ಚಸ್ಥಾನವಾದ ವೃಷಭರಾಶಿಯಲ್ಲಿರುವಾಗ ನನ್ನ ಜನನವಾಯಿತು. ॥೧೫-೧೬॥

ನಾನು ಅವತರಿಸಲು ಸಾಧುಗಳ ಮನಸ್ಸು ನಿರ್ಮಲವಾಯಿತು. ದಿಕ್ಕುಗಳು ಪ್ರಸನ್ನವಾದುವು. ಆಕಾಶದಲ್ಲಿ ನಕ್ಷತ್ರಗಳು ಚೆನ್ನಾಗಿ ಪ್ರಕಾಶಿಸಿದುವು. ಎಲ್ಲರ ಮನೆಗಳಲ್ಲಿಯೂ ಮಹೋತ್ಸವವನ್ನಾಚರಿಸಿದರು. ಸಮಸ್ತಜನರೂ ನನ್ನ ಗುಣಗಳನ್ನು ಸ್ಮರಿಸಿ ಶ್ರವಣಮಾಡಿಸಿದರು. ನನ್ನ ನಾಮೋಚ್ಚಾರಣೆಮಾಡಿ ನನ್ನನ್ನು ಧ್ಯಾನಿಸಿದರು. ನನ್ನ ಪಾದಗಳನ್ನು ಪೂಜಿಸಿ ನನಗೆ ದಾಸರಾಗಿ ನಮಸ್ಕರಿಸಿದರು. ನಾನು ಜನಿಸಲು ಸಮಸ್ತರಿಗೂ ನವವಿಧಭಕ್ತಿಯಿಂದ ತಮ್ಮ ಆತ್ಮಸ್ವರೂಪವು ತಿಳಿಯಿತು. ॥೧೭-೧೮-೧೯॥

ಸರ್ವತ್ರ ಮಂಗಳಂ ಭೂಮಾವಧರ್ಮೋ ವಿಲಯಂ ಗತಃ ।
ಮಯ್ಯೇವ ನಿರತಾಃ ಸರ್ವೇ ಭಕ್ತಿಭಾವವಿಭಾವಿತಾಃ ॥೨೦॥

ದೇವಕ್ಯಾ ವಸುದೇವೇನ ಸೇವಿತಃ ಪೂರ್ವಜನ್ಮನಿ ।
ದಿವ್ಯವರ್ಷ ಸಹಸ್ರೈಸ್ತು ತತೋಽಹಮುಭವಂ ತಯೋಃ ॥೨೧॥

ಪ್ರತಿಜ್ಞಾತಂ ಮಯಾ ತತ್ರ ಭವಿಷ್ಯೇ ಯುವಯೋಃ ಸುತಃ ।
ಯೇನ ರೂಪೇಣ ಚ ತಯೋರ್ವರದಾನಾರ್ಥಮಾಗತಃ ॥೨೨॥

ತದೇವ ಪರಮಂ ರೂಪಮಾದಾಯಾಕ್ಷಿಪಥಂ ಗತಃ ।
ದೃಷ್ಟ್ವಾ ಚ ಪಿತರೌ ಹೃಷ್ಟೌ ಚಕ್ರತುಸ್ತೌ ಸ್ತುತಿಂ ಮಮ ॥೨೩॥

ಪಿತಾ ಮಮಾದ್ಭುತಂ ದೃಷ್ಟ್ವಾ ಪ್ರಬದ್ಧ ಕರಸಂಪುಟಃ ।
ಸುತಾಽಭಾವನಯಾ ವೃತ್ತ್ಯಾ ವಿನಯಾನತಕಂಧರಃ ।
ವಿದಿತ್ವಾಽತಿಗತೋ ಭಾವಂ ಸ್ತೌತಿ ಮಾಂ ಪ್ರಣಯಾಕುಲಃ ॥೨೪॥

---

ನಾನು ಅವತರಿಸಲು ಎಲ್ಲೆಲ್ಲಿಯೂ ಶುಭವಾಗಿ ಅಧರ್ಮವು ನಾಶವಾಯಿತು. ಸಮಸ್ತ ಜನರೂ ಭಕ್ತಿಯಿಂದ ನನ್ನಲ್ಲೇ ಆಸಕ್ತರಾದರು. ॥೨೦॥

ದೇವಕೀವಸುದೇವರುಗಳು ಹಿಂದಿನ ಜನ್ಮದಲ್ಲಿ ದೇವಮಾನದ ಅನೇಕ ವರ್ಷಗಳ ವರೆಗೆ ನನ್ನನ್ನು ಸೇವಿಸಿದುದರಿಂದ ನಾನು ಅವರಿಗೆ ಪುತ್ರನಾಗಿ ಜನಿಸಿದೆನು. ॥೨೧॥

ದೇವಕೀವಸುದೇವರಿಗೆ ನಾನು ಯಾವ ರೂಪದಿಂದ ಪುತ್ರನಾಗಿ ಜನಿಸುತ್ತೇನೆಂದು ಪ್ರತಿಜ್ಞೆಮಾಡಿಕೊಟ್ಟಿದ್ದೆನೋ, ಅದರಂತೆ ಅವರ ವರದಾನದ ಸಫಲತೆಗಾಗಿ, ಅದೇ ರೂಪದಿಂದಲೇ ಅವರಿಗೆ ಪುತ್ರನಾಗಿ ಜನಿಸಿದೆನು. ॥೨೨॥

ನನ್ನ ಮಾತಾಪಿತೃಗಳಾದ ದೇವಕೀ ವಸುದೇವರು ತಮ್ಮ ಕಣ್ಣುಗಳ ಮುಂದೆ ನಿಂತಿರುವ ನನ್ನ ಸಾಕ್ಷಾತ್ಕಾರವನ್ನು ಪಡೆದು ಸಂತೋಷಪಟ್ಟವರಾಗಿ ನನ್ನನ್ನು ಸ್ತೋತ್ರಮಾಡಿದರು. ॥೨೩॥

ನನ್ನ ತಂದೆಯಾದ ವಸುದೇವನು ನನ್ನ ಅದ್ಭುತವಾದ ರೂಪವನ್ನು ನೋಡಿ ತನ್ನ ಎರಡೂ ಕೈಗಳನ್ನು ಜೋಡಿಸಿದನು. ನಾನು ಅವನಿಗೆ ಪುತ್ರನೆಂಬ

॥ ಶ್ರೀವಸುದೇವ ಉವಾಚ ॥

**ದೃಷ್ಟಂ ಮೇ ಪರಮಂ ರೂಪಂ ಶ್ಯಾಮಕಂಜವಿಲೋಚನಂ ।**
**ಚತುರ್ಭುಜಂ ಶಂಖಚಕ್ರಗದಾಪದ್ಮವಿಭೂಷಿತಂ ॥೨೫॥**

**ಅಲೌಕಿಕಂ ಕುಂಡಲಿನಂ ಕಿರೀಟಾಂಗದ ಶೋಭಿತಂ ।**
**ತ್ವಮೇವ ವಿಷ್ಣುಃ ಪರಮಂ ಬ್ರಹ್ಮ ತ್ರೈಲೋಕ್ಯನಾಯಕಃ ॥೨೬॥**

**ಅನಂತಾಖ್ಯಂ ಚ ಬ್ರಹ್ಮಾಂಡ ಮೇ ತದ್ವಿಶ್ವೇಶ್ವರೋ ವಿಭುಃ ।**
**ಪ್ರತೀಯತೇ ಸತ್ತಯಾ ತೇ ವಿಶ್ವಂ ಸದಸದಾತ್ಮಕಂ ॥೨೭॥**

---

ಭಾವನೆಯು ಉಂಟಾಗಲಿಲ್ಲವಾದ್ದರಿಂದ ತನ್ನ ತಲೆಯನ್ನು ತಗ್ಗಿಸಿ ನನ್ನಲ್ಲಿ ಅತ್ಯಧಿಕವಾದ ಭಕ್ತಿಭಾವದಿಂದ ನಾನಾವಿಧವಾಗಿ ನನ್ನನ್ನು ಸ್ತೋತ್ರಮಾಡಿದನು. ॥೨೪॥

ವಸುದೇವನು ಹೇಳಿದನು—ಓ ದೇವನೇ, ಉತ್ತಮವಾಗಿಯೂ, ನೀಲೋತ್ಪಲದಂತೆ ನೇತ್ರಗಳುಳ್ಳದ್ದಾಗಿಯೂ, ನಾಲ್ಕು ಭುಜಗಳುಳ್ಳದ್ದಾಗಿಯೂ, ಶಂಖಚಕ್ರಗದಾಪದ್ಮಗಳನ್ನು ಧರಿಸಿರುವುದಾಗಿಯೂ, ಅಲೌಕಿಕವಾದ ಕುಂಡಲಗಳನ್ನು ಮತ್ತು ಕೈಬಳೆಗಳನ್ನು ಧರಿಸಿರುವ ನಿನ್ನ ರೂಪವನ್ನು ನೋಡುತ್ತಿರುವೆನು. ಓ ಸ್ವಾಮಿಯೇ, ನೀನೇ ಸಾಕ್ಷಾನ್ಮಹಾವಿಷ್ಣುವು. ನೀನು ಸಾಕ್ಷಾತ್ ಪರಬ್ರಹ್ಮನು. ಮೂರು ಲೋಕಗಳಿಗೂ ಸ್ವಾಮಿಯು ನೀನೇ ಆಗಿರುವೆ. ॥೨೫-೨೬॥

ಅಸಂಖ್ಯಾತವಾದ ಈ ಬ್ರಹ್ಮಾಂಡವು ಜಗತ್ತಿಗೆ ನಿಯಾಮಕನಾದ ನಿನ್ನ ವಿವರ್ತಸ್ವರೂಪವಾಗಿರುವುದು. ಈ ಸಮಸ್ತ ಪ್ರಪಂಚವೂ ಸದಸದ್ರೂಪವಾಗಿರುವುದರಿಂದ (ಮಿಥ್ಯಾಭೂತವಾಗಿರುವುದರಿಂದ) ನಿನ್ನ ಸತ್ತೆಯಿಂದಲೇ ಪ್ರಕಾಶಿಸುವುದು. ಎಂದರೆ ಜಗತ್ತು ಸತ್ತೆಂದು (ನಿಜವೆಂದು) ಹೇಳಲು ಸಾಧ್ಯವಿಲ್ಲ. ಏಕೆಂದರೆ ಅದು ಬ್ರಹ್ಮಜ್ಞಾನದಿಂದ ಬಾಧಿತವಾಗುವುದು. ಅಲ್ಲದೆ ಅದು ಶಶಶೃಂಗದಂತೆ ಅಸತ್ತೆಂದು ಹೇಳಲೂ ಸಾಧ್ಯವಿಲ್ಲ. ಇಂತಹ ಸದಸದ್ಭಿನ್ನಾತ್ಮಕವಾದ ಜಗತ್ತು ಬ್ರಹ್ಮಸ್ವರೂಪದಲ್ಲಿ ಅಧ್ಯಸ್ತವಾಗಿದೆ. ಆರೋಪಿತಪದಾರ್ಥದಲ್ಲಿ ಅಧಿಷ್ಠಾನಗತಸತ್ತೆಯು ತೋರುವುದೇ ಹೊರತು ಆರೋಪಿತದಲ್ಲಿ ಬೇರೆ ಸತ್ತೆಯಿಲ್ಲ. ಆದುದರಿಂದ ಬ್ರಹ್ಮನಲ್ಲಿ ಪ್ರಪಂಚವು ಆರೋಪಿತವಾಗಿ ಬ್ರಹ್ಮಸತ್ತೆಯಿಂದಲೇ ಜಗತ್ತಿನಲ್ಲೂ, ರಜತದಲ್ಲಿ ಶುಕ್ತಿ ಸತ್ತೆಯು ಇರುವಂತೆ ತೋರುವುದು. ॥೨೭॥

ನ ಕಿಂಚಿದಾಸೀತ್ ತ್ವತ್ತೋಽನ್ಯತ್ಕಿಂಚಿದಸ್ತಿ ಚರಾಚರಂ ।
ಪ್ರಕಾಶತೇ ಗೃಹಂ ಯದ್ವನ್ನಿಶಾಯಾಂ ಜ್ಯೋತಿಷಾಂ ವಿಭೋ ॥೨೮॥

ತತೋ ಬ್ರಹ್ಮಾಂಡಭಾಂಡಾಂತಃ ಪ್ರಕಾಶಸ್ತವ ನಾನ್ಯಥಾ ।
ಏಕೋಽನೇಕೋ ನ ತೇ ರೂಪಂ ಹ್ಯನಾದಿಸ್ತ್ವಮನಂತಕಃ ॥೨೯॥

ನಿರೀಹೋಽನಂತ ಲೀಲಶ್ಚ ನಿರ್ಗುಣಃ ಸಗುಣಾಕೃತಿಃ ।
ಸ್ರಷ್ಟಾ ಕರ್ತಾ ಚ ಸಂಹರ್ತಾ ಯಾಥಾರ್ಥ್ಯಂ ವೇದ ಕಸ್ತವ ॥೩೦॥

ಸ ಏವ ಭಗವಾನ್ಪೂರ್ಣಸ್ತ್ವಂ ಜಾತೋಽಸಿ ಗೃಹೇ ಮಮ ।
ಸತಾಂ ಸಂರಕ್ಷಣಾರ್ಥಾಯ ಅಸತಾಮ ಭವಾಯ ಚ ॥೩೧॥

ಅಹಂ ತೇ ಶರಣಂ ಪ್ರಾಪ್ತೋ ರಕ್ಷ ಮಾಮಖಿಲಾದ್ಭಯಾತ್ ।
ಕಂಸೋಽಪಿ ದುಷ್ಟೋಽಸಿಧರ ಆಯಾಸ್ಯತಿ ವಧಾಯ ತೇ ॥೩೨॥

---

ಚರಾಚರಾತ್ಮಕವಾದ ಈ ಪ್ರಪಂಚವು ಸೃಷ್ಟಿಗಿಂತ ಪೂರ್ವದಲ್ಲಿ ನಿನ್ನಲ್ಲಿಯೇ ಅಡಗಿದ್ದಿತು. ನಿನ್ನ ಸ್ವರೂಪವೇ ಹೊರತು ಇನ್ನು ಯಾವುದೂ ತೋರುತ್ತಿರಲಿಲ್ಲ. ಈಗ ಅದೇ ಜಗತ್ತು, ರಾತ್ರಿಯಲ್ಲಿ ಮನೆಯು ದೀಪದಿಂದ ಪ್ರಕಾಶಿಸುವಂತೆ, ಚೈತನ್ಯ ಸ್ವರೂಪನಾದ ನಿನ್ನ ಜ್ಯೋತಿಯಿಂದ ಬೆಳಗುತ್ತದೆ. ನಿನ್ನ ಪ್ರಕಾಶವಿಲ್ಲದಿದ್ದರೆ ಜಗತ್ತು ಪ್ರಕಾಶಿಸಲಾರದು. ನೀನು ಒಬ್ಬನೇ ಇದ್ದಾಗ್ಯೂ ನಿನ್ನ ಲೀಲಾಮಹಿಮೆಯಿಂದ ಅನೇಕ ವಿಧವಾಗಿ ತೋರುವೆ. ಆದರೆ ವಾಸ್ತವವಾಗಿ ನಿನಗೆ ಯಾವ ರೂಪವೂ ಇರುವುದಿಲ್ಲ. ನೀನು ಅನಾದಿಯಾಗಿಯೂ ನಾಶವಿಲ್ಲದವನಾಗಿಯೂ ಇರುವೆ. ||೨೮-೨೯||

ನೀನು ಪರಿಪೂರ್ಣಕಾಮನಾದುದರಿಂದ ಯಾವುದರಲ್ಲಿಯೂ ಇಚ್ಛೆಯಿಲ್ಲದವನಾಗಿರುವೆ. ಅನೇಕ ವಿಧವಾದ ಲೀಲಾಮಹಿಮೆಯುಳ್ಳವನಾಗಿರುವೆ. ನಿನ್ನಲ್ಲಿ ಯಾವ ಗುಣಗಳಿಲ್ಲದಿದ್ದಾಗ್ಯೂ ಗುಣಗಳುಳ್ಳವನಂತೆ ತೋರುತ್ತಿರುವೆ. ನೀನು ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾಗಿರುವೆ. ಓ ಸ್ವಾಮಿಯೇ, ನಿನ್ನ ಮಹಿಮೆಯನ್ನು ಯಾರು ತಿಳಿಯಬಲ್ಲರು? ಇಂತಹ ಪರಿಪೂರ್ಣಕಾಮನೂ ಷಡ್ಗುಣೈಶ್ವರ್ಯ ಸಂಪನ್ನನೂ ಆದ ನೀನು ದುಷ್ಟರನ್ನು ಶಿಕ್ಷಿಸಿ ಸಜ್ಜನರನ್ನು ಸಂರಕ್ಷಿಸಲು ನನ್ನ ಮನೆಯಲ್ಲಿ ಅವತರಿಸಿರುವೆ. ||೩೦-೩೧||

**ಯಾವನ್ಮನೋ ವಚಃ ಸ್ತುತ್ವಾ ವಸುದೇವೋಽಥ ಖಿನ್ನವತ್ ।**
**ವಿರರಾಮ ತದೋವಾಚ ದೇವಕೀ ಹರಿಮೀಶ್ವರಂ ॥೩೩॥**

**ಏತದ್ರೂಪಂ ಧ್ಯಾನಗಮ್ಯಂ ಯೋಗಿನಾಂ ಯೋಗಸಿದ್ಧಯೇ ।**
**ವೇದೈರಪಿ ನ ವಕ್ತವ್ಯಂ ತದ್ದೃಷ್ಟಂ ಮೇ ಸುರೇಶ್ವರ ॥೩೪॥**

**ಪ್ರಲಯೇ ಜಠರೇ ಯಸ್ಯ ವಿಶ್ವಂ ಯಾತ್ಯಖಿಲಂ ಲಯಂ ।**
**ಸ ತ್ವಂ ಮಯಾ ಕಥಂ ಗರ್ಭೇ ಭೃತೋ ಲೋಕವಿಡಂಬನಂ ॥೩೫॥**

**ವಿಡಂಬನಾ ಯಥಾ ನ ಸ್ಯಾತ್ತಥೈವಾತ್ಮತನುಂ ಕುರು ।**
**ಪುತ್ರಾನುರಾಗಸ್ತ್ವಯಿ ಮೇ ನ ಸ್ಯಾಚ್ಚ ಪರಮೇಶ್ವರ ॥೩೬॥**

---

ನಾನು ನಿನಗೆ ಶರಣಾಗತನಾಗಿರುವೆನು. ಎಲ್ಲಾ ಭಯಗಳಿಂದ ನನ್ನನ್ನು ರಕ್ಷಿಸುವವನಾಗು. ದುಷ್ಟನಾದ ಕಂಸನು ನಿನ್ನನ್ನು ವಧಿಸಲು ಕತ್ತಿಯನ್ನು ಕೈಯಲ್ಲಿ ಹಿಡಿದವನಾಗಿ ಈಗಲೇ ಬರುವನು. ॥೩೨॥

ವಸುದೇವನು ಹೀಗೆ ತನ್ನ ಮನಸ್ಸಿಗೆ ತೋರಿದಂತೆ ಮಾತಿನಿಂದ ನನ್ನನ್ನು ಸ್ತುತಿಸಿ ದುಃಖದಿಂದ ಸುಮ್ಮನಾದನು. ಅನಂತರದಲ್ಲಿ ದೇವಕಿಯು ಲೋಕೇಶ್ವರನಾದ ಹರಿಯನ್ನು ಕುರಿತು ಹೀಗೆಂದು ಹೇಳಿದಳು. ॥೩೩॥

ಓ ದೇವತೆಗಳ ಒಡೆಯನೇ, ನಿನ್ನ ಈ ರೂಪವನ್ನು ಯೋಗಿಗಳು ಯೋಗ ಸಿದ್ಧಿಗೋಸ್ಕರ ಧ್ಯಾನಮೂಲಕವಾಗಿ ನೋಡುವರು. ಸಾಮಾನ್ಯರಿಗೆ ನಿನ್ನ ಈ ರೂಪ ದರ್ಶನವು ದೊರೆಯಲಾರದು. ವೇದಗಳೂ ಸಹ ನಿನ್ನ ಸ್ವರೂಪವನ್ನು ಹೇಳಲು ಸಮರ್ಥವಾಗಲಾರವು. ಇಂತಹ ನಿನ್ನ ಸ್ವರೂಪವನ್ನು ನಾನು ಈಗ ನೋಡಿದೆನು. ॥೩೪॥

ನಿನ್ನ ಉದರದಲ್ಲಿ ಎಲ್ಲಾ ಜಗತ್ತು ಪ್ರಳಯಕಾಲದಲ್ಲಿ ಲಯಹೊಂದುವುದು. ಇಂತಹ ನಿನ್ನನ್ನು ನಾನು ಲೋಕದಲ್ಲಿ ಸ್ತ್ರೀಯರ ಸ್ವಭಾವದಂತೆ ಗರ್ಭದಲ್ಲಿ ಹೇಗೆ ಧರಿಸಿದ್ದೆನು ? ಅದೂ ಒಂದು ನಿನ್ನ ತೋರಿಕೆಯೇ ಆಗಿದೆ ! ॥೩೫॥

ನೀನು ಈ ಜಗದ್ರೂಪಿಯಾದ ಪರಮೇಶ್ವರನ ರೂಪವನ್ನು ಬಿಟ್ಟು, ಶಿಶು ರೂಪವನ್ನು ಧರಿಸುವವನಾಗು. ಹಾಗಿಲ್ಲದೆ ನೀನು ಇದೇ ರೂಪದಿಂದಿದ್ದರೆ ನಿನ್ನಲ್ಲಿ ನನಗೆ ಭಯಭಕ್ತಿಗಳುಂಟಾಗುವುವೇ ಹೊರತು ಪುತ್ರಾನುರಾಗವು ಹೇಗೆ ಉಂಟಾದೀತು ? ॥೩೬॥

ಅನುಗ್ರಹಾಯ ಭಕ್ತಾನಾಂ ತ್ವತ್ಪ್ರಾಕಟ್ಯಂ ಗೃಹೇ ಮಮ ।
ಕಂಸೋಽಯಂ ನ ಯಥಾ ವೇತ್ತಿ ತ್ವಜ್ಜನ್ಮ ಮಮ ವೇಶ್ಮನಿ ॥೩೭॥

ತಥೈವ ಕಾರ್ಯಂ ಭಗವನ್ನಚಿರೇಣ ಕೃಪಾನಿಧೇ ।
ಇತ್ಥಂ ಮುನೇ ಸ್ತುತಸ್ತಾಭ್ಯಾಂ ಭೀತಾಭ್ಯಾಂ ಕಂಸತೋ ಭೃಶಂ ॥೩೮॥

ವಿಜ್ಞಾಯಾತೋಽಭವಂ ತೂರ್ಣಂ ಯಥೈವ ಪ್ರಾಕೃತಃ ಶಿಶುಃ ।
ಮಯೋಕ್ತಂ ಚ ಪುನಸ್ತಾಭ್ಯಾ ಮಾಮುಪಾನಯ ಗೋಕುಲೇ ॥೩೯॥

ತತ್ರಾಸ್ತೇ ಚ ಸಖಾ ನಂದಸ್ತದ್ಗೃಹೇ ಮಾಂ ನಿಧಾಯ ಚ ।
ತಸ್ಯ ಕನ್ಯಾಮಿಹಾನೀಯ ದೇವಕೀ ಶಯನೇ ಕುರು ॥೪೦॥

ಇತ್ಯಾಜ್ಞಪ್ತೋ ಮಯಾ ಶೌರಿಶ್ಚಲಿತೋ ನಂದಗೋಕುಲಂ ।
ದ್ವಾರಃ ಸರ್ವಾಃ ಸ್ವಯಂ ಮುಕ್ತಾ ರುದ್ಧಾಃ ಕೀಲಕಶೃಂಖಲೈಃ ॥೪೧॥

---

ಓ ದಯಾಶಾಲಿಯಾದ ಭಗವಂತನೇ, ದುಷ್ಟನಾದ ಕಂಸನು ನೀನು ನನ್ನ ಮನೆಯಲ್ಲಿ ಅವತಾರಮಾಡಿರುವದನ್ನು ತಿಳಿಯದಂತೆ ಮಾಡು. ಈ ರೀತಿಯಾಗಿ ಕಂಸನಿಂದ ಭೀತರಾದ ವಸುದೇವ ದೇವಕಿಯರು ನನ್ನನ್ನು ಸ್ತೋತ್ರಮಾಡಲು ಅವರ ಅಭಿಪ್ರಾಯದಂತೆ ಜಾಗ್ರತೆಯಾಗಿ ಶಿಶುವಾದೆನು. ಮತ್ತು ನನ್ನನ್ನು ಗೋಕುಲಕ್ಕೆ ತೆಗೆದುಕೊಂಡು ಹೋಗು. ಎಂದು ಅವರನ್ನು ಕುರಿತು ಹೀಗೆಂದು ಹೇಳಿದೆನು. ॥೩೭-೩೮-೩೯॥

ಗೋಕುಲದಲ್ಲಿ ನಿನ್ನ ಸ್ನೇಹಿತನಾದ ನಂದನಿರುವನು. ಅವನ ಮನೆಯಲ್ಲಿ ನನ್ನನ್ನಿರಿಸು. ಮತ್ತು ನಂದಗೋಪನ ಮನೆಯಲ್ಲಿ ಜನಿಸಿರುವ ಸ್ತ್ರೀ ಶಿಶುವನ್ನು ತಂದು ದೇವಕಿಯ ಹಾಸಿಗೆಯಲ್ಲಿ ಮಲಗಿಸು. ಎಂದು ಹೇಳಿದೆನು. ॥೪೦॥

ಈ ರೀತಿಯಾಗಿ ನನ್ನಿಂದ ಆಜ್ಞಪ್ತನಾದ ವಸುದೇವನು ನನ್ನನ್ನು ನಂದ ಗೋಕುಲಕ್ಕೆ ತೆಗೆದುಕೊಂಡುಹೋದನು. ಸೆರೆಮನೆಗೆ ಹಾಕಿದ್ದ ಬಾಗಿಲುಗಳೂ ಅವುಗಳ ಅಗಣಿಗಳೂ, ಬೀಗಗಳೂ ತಾವಾಗಿಯೇ ತೆರೆದುವು. ॥೪೧॥

ಮೇಘಗಳು ಗರ್ಜಿಸಿ ಸಣ್ಣ ಮಳೆಯನ್ನುಂಟುಮಾಡಿದುವು. ಆಗ ಆದಿ ಶೇಷನು ತನ್ನ ಹೆಡೆಯಿಂದ ನನ್ನಮೇಲೆ ಮಳೆಯನೀರು ಬೀಳದಂತೆ ಮರೆಮಾಡಿದನು! ॥೪೨॥

ಘನಾ ಜಗರ್ಜುರ್ವವೃಷುರ್ಮಂದಂಮಂದಂ ಫಣೀಶ್ವರಃ ।
ಸ್ವಫಣೈರ್ವಾರಯಾಮಾಸ ಜಲಂ ವರ್ಷಾ ಸಮುದ್ಭವಂ ॥೪೨॥

ಗತೋಽಸೌ ಯಮುನಾತೀರೇ ಸಾ ಪೂರ್ಣಾ ವರ್ಷವಾರಿಭಿಃ ।
ರಾತ್ರಿರ್ಘೋರತರಾ ಘೋರತರಾ ನದೀಯಂ ಬಾಲಕೋ ಮಮ ॥೪೩॥

ದುರ್ಗಂ ಪಶ್ಯಾಮಿ ಪಂಥಾನಂ ತರಿಷ್ಯೇಽಹಂ ನದೀಂ ಕಥಂ ।
ಅತ್ರ ಸ್ಥಿತೇ ಮಯಿ ಕ್ರೂರಃ ಕಂಸಶ್ಚೇತ್ಪ್ರೇಷಯೇನ್ನರಾನ್ ॥೪೪॥

ಮಾಮ ದೃಷ್ಟ್ವಾಽಥ ತೇ ತತ್ರ ಯದೀ ಹಾಯಾಂತಿ ಮಾಮನು ।
ತದಾ ಕಿಂ ವಾ ಕರಿಷ್ಯೇಽಹಂ ಸ ಸರ್ವಾನ್ಮಾರಯೇತ್ ದ್ರುತಂ ॥೪೫॥

ಭೀತಸ್ತ್ವೇವಂ ವಾಸುದೇವಶ್ಚಿಂತಯಾಮಾಸ ಸಂಕಟಂ ।
ತಾವನ್ಮಾರ್ಗಂ ದದೌ ಶೌರೇರ್ಜಾನುಮಾತ್ರಜಲಾ ನದೀ ॥೪೬॥

---

ವಸುದೇವನು ನನ್ನನ್ನು ಎತ್ತಿಕೊಂಡು ಹೋಗುತ್ತಾ ಯಮುನಾನದಿಯ ದಡವನ್ನು ತಲಪಿದನು. ಆ ಯಮುನಾನದಿಯು ಮಳೆಯ ನೀರಿನ ದೆಸೆಯಿಂದ ತುಂಬಿ ಹರಿಯುತ್ತಾ ದಾಟಲಸಾಧ್ಯವಾಗಿದ್ದಿತು. ರಾತ್ರಿಯಾದರೋ ಅತಿ ಭಯಂಕರವಾಗಿದ್ದಿತು. ಆಗ “ ನಾನು ಈ ಬಾಲಕನನ್ನು ಸುರಕ್ಷಿತವಾಗಿ ಹೇಗೆ ದಾಟಿಸಲಿ ? ದಾರಿಯಾದರೋ ಬಹು ಕಠಿಣವಾಗಿದೆ. ಒಂದುವೇಳೆ ನಾನು ಇಲ್ಲಿಯೇ ಕಾಲಹರಣ ಮಾಡುತ್ತಾ ಇದ್ದುಬಿಟ್ಟರೆ ನೀಚನಾದ ಕಂಸನು ನನ್ನನ್ನು ಹುಡುಕಲು ಯಾರನ್ನಾದರೂ ಕಳುಹಿಸಬಹುದು. ಏನನ್ನು ಮಾಡಲಿ ? ” ಎಂದು ಅವನು ಚಿಂತೆಗೊಳಗಾದನು. ||೪೩-೪೪||

ಕಂಸನಿಂದ ನಿಯುಕ್ತರಾದವರು ನನ್ನನ್ನು ಅಲ್ಲಿ ಕಾಣದೆ ಇಲ್ಲಿಗೆ ಹುಡುಕಿಕೊಂಡು ಬರಬಹುದು. ಆಗ ಖಂಡಿತವಾಗಿಯೂ ನಮ್ಮೆಲ್ಲರನ್ನೂ ಸಂಹರಿಸುವರು. ||೪೫||

ಹೀಗೆ ಹೆದರಿದವನಾಗಿ ವಸುದೇವನು ಬಹು ಸಂಕಟದಿಂದ ಚಿಂತಿಸುತ್ತಿದ್ದನು. ಆ ಕೂಡಲೇ ಯಮುನಾನದಿಯು ಶೌರಿಗೆ ದಾಟಿಹೋಗಲು ಅನುಕೂಲವಾಗುವಂತೆ ಮೊಣಕಾಲಿನಷ್ಟು ಆಳದ ನೀರುಳ್ಳದ್ದಾಗಿ ದಾರಿಯನ್ನು ಬಿಟ್ಟಿತು. ||೪೬||

**ಉತ್ತೀರ್ಣಃ ಸ ಯಯೌ ಘೋಷಂ ಗೋಪೈರ್ಗೋಭಿರಲಂಕೃತಂ ।**
**ಸ ತತ್ರ ಮೋಹಿತಾನ್ಸರ್ವಾನ್ಭಗವಾನ್ಮಾಯಯಾ ವ್ರಜೇ ॥೪೭॥**

**ಸುಪ್ತಾಂಶ್ಚ ನಂದಗೋಪಾದೀನ್ವೀಕ್ಷ್ಯ ತತ್ಪುರಮಾವಿಶತ್ ।**
**ದೃಷ್ಟ್ವಾ ಯಶೋದಾಶಯನೇ ಕನ್ಯಕಾಂ ಸೂತಿಕಾಗೃಹೇ ॥೪೮॥**

**ನಿಧಾಯ ತತ್ರ ತನಯಂ ಕನ್ಯಾಮಾದಾಯ ಚಾಗಮತ್ ।**
**ಪೂರ್ವವತ್ಪಿಹಿತಾ ಆಸನ್ ದ್ವಾರಃ ಸರ್ವಾಃ ಸ್ವವೇಶ್ಮನಿ ॥೪೯॥**

**ತಾಂ ಕನ್ಯಾಂ ದೇವಕೀ ತಲ್ಪೇ ನಿಧಾಯ ಸ ಉಪಾವಿಶತ್ ।**
**ಮಧುರಾಯಾಂ ತತೋಽಭೂದ್ಯತ್ಪಶ್ಚಾದ್ವಕ್ಷ್ಯೇಽಥ ಸಾಂಪ್ರತಂ ॥೫೦॥**

**ಶೃಣು ನಂದಾಲಯೇ ಬ್ರಹ್ಮನ್ ಮಮ ಜನ್ಮ ಮಹೋತ್ಸವಂ ।**
**ಪೂರ್ವಂ ಯಶೋದಾ ಮುಗ್ಧಾಽಽಸೀನ್ಮಮ ಮಾಯಾವಿಮೋಹಿತಾ॥೫೧॥**

---

ವಸುದೇವನು ನದಿಯನ್ನು ದಾಟಿ ಗೋಪರಿಂದಲೂ, ಗೋವುಗಳಿಂದಲೂ ಅಲಂಕೃತವಾದ ಗೋಕುಲವನ್ನು ಸೇರಿದನು. ಆ ಗೋಕುಲದಲ್ಲಿ ಎಲ್ಲರೂ ಭಗವಂತನ ಮಾಯೆಯಿಂದ ಮೋಹಿತರಾಗಿ ಗಾಢನಿದ್ರೆಯನ್ನು ಮಾಡುತ್ತಿದ್ದರು! ಇಂತಹ ಪಟ್ಟಣವನ್ನು ವಸುದೇವನು ಪ್ರವೇಶಿಸಿದನು. ॥೪೭॥

ವಸುದೇವನು ಯಾವ ಅಡ್ಡಿಯೂ ಇಲ್ಲದೆ ನಂದಗೋಪನ ಮನೆಯನ್ನು ಪ್ರವೇಶಿಸಿ ಸೂತಿಕಾಗೃಹದ ಒಳಗೆ ಬಂದನು. ಅಲ್ಲಿ ಯಶೋದೆಯ ಹಾಸಿಗೆಯಲ್ಲಿ ಮಲಗಿರುವ ಹೆಣ್ಣುಮಗುವನ್ನು ನೋಡಿ, ಅದನ್ನು ತೆಗೆದುಕೊಂಡು ಆ ಸ್ಥಳದಲ್ಲಿ ತನ್ನ ಮಗುವನ್ನು ಮಲಗಿಸಿ, ಹಿಂತಿರುಗಿದನು. ॥೪೮॥

ಇವನು ತನ್ನ ಮನೆಯನ್ನು ಸುರಕ್ಷಿತವಾಗಿ ತಲುಪಿದ ಮೇಲೆ ಆ ಸೆರೆಮನೆಯ ಬಾಗಿಲುಗಳು ಪೂರ್ವದಲ್ಲಿದ್ದಂತೆ ತಾವಾಗಿಯೇ ಮುಚ್ಚಿಕೊಂಡವು! ವಸುದೇವನು ತಾನು ತಂದಿದ್ದ ಹೆಣ್ಣುಮಗುವನ್ನು ದೇವಕಿಯ ಹಾಸಿಗೆಯಲ್ಲಿ ಮಲಗಿಸಿ ಕುಳಿತುಕೊಂಡನು. ॥೪೯॥

ಮಧುರೆಯಲ್ಲಿ ಆಮೇಲೆ ನಡೆದ ವಿಚಾರವನ್ನು ಮುಂದೆ ತಿಳಿಸುವೆನು. ಈಗ ನಂದಗೋಪನ ಮನೆಯಲ್ಲಿ ನಡೆದ ನನ್ನ ಜನ್ಮಮಹೋತ್ಸವವನ್ನು ಹೇಳುವೆನು ಕೇಳು. ॥೫೦॥

**ಮಾ ವೇದ ಕನ್ಯಕಾಜನ್ಮ ಮಮ ಚಾಗಮನಂ ತದಾ ।**
**ಗತೇಽಥ ವಸುದೇವೇ ಸಾ ಪ್ರಬುದ್ಧಾ ಮಾಂ ದದರ್ಶ ವೈ ॥೫೨॥**

**ತತ್ರಸ್ಥಾ ಗೋಪಿಕಾಃ ಸರ್ವಾ ಮಾಂ ದೃಷ್ಟ್ವಾ ಮುದಮಾಪ್ನುವನ್ ।**
**ಶ್ರುತ್ವಾ ನಂದೋಽಥ ಹೃಷ್ಟಃ ಸನ್ಸ್ನಾತ್ವಾ ದಾನಾನ್ಯಥೋ ದದೌ ॥೫೩॥**

**ಅಸಂಖ್ಯಂ ಸ ಗವಾಂ ದಾನಂ ಸವತ್ಸಾನಾಂ ವಿಧಾನತಃ ।**
**ಅಲಂಕೃತಾನಾಂ ಗೃಷ್ಟೀನಾಂ ಪ್ರಾದಾತ್ಪರಮಯಾ ಮುದಾ ॥೫೪॥**

**ದರ್ಶನಾಯಾಗತಾನ್ಗೋಪಾನ್ ಶಾತ ಕೌಂಭಾಂಬರಾವೃತಾನ್ ।**
**ನಾನಾರತ್ನ ಸಮೇತಂ ಚ ದದೌ ದಾನಂ ಸ ಉತ್ತಮಂ ॥೫೫॥**

**ದಾನಾನಿ ಪ್ರದದೌ ತೇಽಪಿ ನ ಧನಾಗಾರ ಕಾಂಕ್ಷಿಣಃ ।**
**ಸ್ವಾಭಾವಿಕಂ ಮಹೌದಾರ್ಯ್ಯ(ರ್ಯಂ)ಮದ್ಭಕ್ತೇಷು ಭೃಶಂ ಭವೇತ್॥೫೬॥**

---

ನಾನು ಯಶೋದೆಯ ಬಳಿಗೆ ಹೋಗುವುದಕ್ಕೆ ಮುಂಚೆಯೇ ಅವಳು ನನ್ನ ಮಾಯೆಯಿಂದ ಮೋಹಿತಳಾಗಿದ್ದಳು. ಆದುದರಿಂದ ತಾನು ಕನ್ಯೆಯನ್ನು ಹಡೆದಿದ್ದ ವಿಚಾರವನ್ನೂ ಮತ್ತು ನಾನು ಅಲ್ಲಿಗೆ ಬಂದ ವಿಚಾರವನ್ನೂ ಸಹ ತಿಳಿಯಲಿಲ್ಲ. ವಸುದೇವನು ನನ್ನನ್ನು ಯಶೋದೆಯ ಹಾಸಿಗೆಯಲ್ಲಿ ಮಲಗಿಸಿ ಹೋಗಲು ಯಶೋದೆಯು ಎಚ್ಚರಗೊಂಡು ನನ್ನನ್ನು ನೋಡಿದಳು. ॥೫೧-೫೨॥

ಅಲ್ಲಿದ್ದ ಗೋಪಿಕಾಸ್ತ್ರೀಯರು ನನ್ನನ್ನು ನೋಡಿ ಸಂತೋಷಹೊಂದಿದರು. ನಂದಗೋಪನು ನಾನು ಹುಟ್ಟಿದ ವಿಚಾರವನ್ನು ಕೇಳಿ ಸಂತೋಷಗೊಂಡು ಸ್ನಾನ ಮಾಡಿ ಅನೇಕ ದಾನಗಳನ್ನು ಮಾಡಿದನು. ॥೫೩॥

ಕರುಸಹಿತವಾದ ಅನೇಕ ಗೋವುಗಳನ್ನೂ ಮತ್ತು ಅನೇಕ ಕಡಸುಗಳನ್ನೂ ವಿಧಿವತ್ತಾಗಿ ಸಂತೋಷದಿಂದ ದಾನಮಾಡಿದನು. ॥೫೪॥

ನಂದಗೋಪನು ನನ್ನ ದರ್ಶನಕ್ಕಾಗಿ ಬಂದ ಗೋಪರಿಗೆ ವಸ್ತ್ರಗಳನ್ನೂ ನಾನಾ ವಿಧವಾದ ರತ್ನಗಳಿಂದಲೂ ಸಹಿತವಾದ ಚಿನ್ನದ ಬಿಂದಿಗೆಗಳನ್ನೂ ದಾನ ಮಾಡಿದನು. ॥೫೫॥

ದಾನಗಳನ್ನು ತೆಗೆದುಕೊಳ್ಳುವವರೂ ಸಹ ದ್ರವ್ಯ ಮನೆ ಮುಂತಾದವುಗಳಲ್ಲಿ ಆಶೆಯಿಲ್ಲದವರಾದುದರಿಂದ, ಅವರೂ ಸಹ ದಾನಗಳನ್ನು ಮಾಡಿದರು. ಪ್ರಾಯಶಃ ನನ್ನ ಭಕ್ತರಲ್ಲಿ ಔದಾರ್ಯಗುಣವು ಸ್ವಭಾವವಾಗಿರುತ್ತದೆ. ॥೫೬॥

**ಮಚ್ಚಿತ್ತಾನಾಂ ಮನೋವೃತ್ತಿರ್ನಾನ್ಯತ್ರೇತಿ ಕದಾಚನ ।**
**ಯತ್ರಾಹಂ ತತ್ರ ಕಮಲಾ ಕೈವಲ್ಯಪದಮಾಸ್ಥಿತಾ ॥೫೭॥**

**ತಾಂ ವಿನಾ ಕ್ವ ಭವೇತ್ಪ್ರೇಮ ಕ್ವ ದಾನಂ ಕ್ವ ಮಹೋತ್ಸವಃ ।**
**ನಂದೋಽತಿಪೂರ್ಣಃ ಸಂಪತ್ತ್ಯಾ ತತ ಆಹೂಯ ಗೋಪಕಾನ್ ॥೫೮॥**

**ಚಕ್ರೇ ಮಹೋತ್ಸವಂ ದೃಷ್ಟ್ವಾ ಗೋಪ್ಯಶ್ಚ ಜಗ್ಮುರುತ್ಸುಕಾಃ ।**
**ಸರ್ವಾಃ ಸಮಾಗತಾಶ್ಚ ಸನ್ನಾನೋಪಾಯನ ಪಾಣಯಃ ॥೫೯॥**

**ನಂದಾಲಯಂ ಪ್ರಮುದಿತಾಃ ಸುವಸ್ತ್ರಾ ಮಣಿಭೂಷಿತಾಃ ।**
**ಆಗತ್ಯ ಮಿಲಿತಾಃ ಸರ್ವಾ ಉತ್ಸವಂ ಚಕ್ರುರುತ್ತಮಂ ॥೬೦॥**

**ನವನೀತ ಹರಿದ್ರಾಭಿಸ್ತಥಾ ಮಂಗಲವಸ್ತುಭಿಃ ।**
**ಯದ್ಗೀತಂ ಗೋಪಗೋಪೀಭಿಃ ತಚ್ಛೃಣುಷ್ವ ಮಹಾಮುನೇ ॥೬೧॥**

---

ನನ್ನಲ್ಲಿಯೇ ನಟ್ಟಮನಸ್ಸುಳ್ಳವರ ಚಿತ್ತವು ಯಾವಾಗಲೂ ಔದಾರ್ಯವನ್ನು ಬಿಟ್ಟುಎಂದಿಗೂ ಇರುವುದಿಲ್ಲ. ನಾನು ಎಲ್ಲಿರುವೆನೋ ಅಲ್ಲಿ ಮುಕ್ತಿಯನ್ನು ಕೊಡುವ ಸಂಪತ್ತು ಇರುವುದು. ಸಂಪತ್ತಿಲ್ಲದಿದ್ದರೆ ಪ್ರೇಮವೆಲ್ಲಿ? ದಾನವೆಲ್ಲಿ? ಉತ್ಸವವೆಲ್ಲಿ? ಇವೆಲ್ಲವೂ ಸಂಪತ್ತಿನಿಂದಲೇ ಸಾಧ್ಯವು. ಪರಿಪೂರ್ಣವಾದ ಸಂಪತ್ತುಳ್ಳ ನಂದಗೋಪನು ಎಲ್ಲಾ ಗೋಪರನ್ನೂ ಕರೆಯಿಸಿ ವಿಜೃಂಭಣೆಯಿಂದ ನನ್ನ ಜನ್ಮಮಹೋತ್ಸವವನ್ನು ನೆರವೇರಿಸಿದನು. ಎಲ್ಲರೂ ಸಹ ನಾನಾವಿಧವಾದ ಕಾಣಿಕೆಗಳನ್ನು ತೆಗೆದುಕೊಂಡು ನಂದಗೋಪನ ಮನೆಗೆ ಮಹೋತ್ಸವಕ್ಕಾಗಿ ಬಂದರು. ॥೫೭-೫೮-೫೯॥

ಆಹ್ವಾನಿಸಲ್ಪಟ್ಟ ಗೋಪರೆಲ್ಲರೂ ದಿವ್ಯಪೀತಾಂಬರಗಳಿಂದಲೂ ರತ್ನಗಳಿಂದಲೂ ಅಲಂಕೃತರಾಗಿ ನಂದಗೋಪನ ಮಂದಿರಕ್ಕೆ ಬಂದು ಸಂತೋಷದಿಂದ ಜನ್ಮಮಹೋತ್ಸವವನ್ನು ನೆರವೇರಿಸಿದರು. ॥೬೦॥

ಎಲೈ ಮಹಾಮುನಿಯೇ, ಅಲ್ಲಿ ನೆರೆದ ಸಮಸ್ತ ಗೋಪಿಯರೂ ಅತ್ಯುತ್ತಮವಾದ ಬೆಣ್ಣೆ ಅರಸಿನ ಮುಂತಾದ ಮಂಗಲದ್ರವ್ಯಗಳಿಂದ ಜನ್ಮಮಹೋತ್ಸವವನ್ನು ನೆರವೇರಿಸಿದ ಮೇಲೆ ಅವರು ಆನಂದದಿಂದ ನಂದಗೋಪನನ್ನು ಕುರಿತು ಹೀಗೆಂದು ಹರಸಿದರು. ನಂದಗೋಪನೂ ಮತ್ತು ಗೋಕುಲಕ್ಕೆ ನಾಯಿಕೆಯಾದ ಯಶೋ

**ಧನ್ಯೋ ನಂದೋ ಯಶೋದಾ ಚ ಧನ್ಯೇಯಂ ವ್ರಜನಾಯಿಕಾ।**
**ಯತೋ ಭಾಗ್ಯ ವಿಭೂತ್ಯೈವ ಜರಠತ್ವೇ ಸುತೋದ್ಭವಃ ॥೬೨॥**

**ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ ನಾರದ ಶೌನಕ ಸಂವಾದೇ ಕೃಷ್ಣೋತ್ಪತ್ತಿರ್ನಾಮ ಪಂಚದಶೋಽಧ್ಯಾಯಃ**

---

ದೆಯೂ ಧನ್ಯರು. ಏಕೆಂದರೆ ವೃದ್ಧಾಪ್ಯದಲ್ಲಿ ಇಂತಹ ಪುತ್ರರತ್ನವನ್ನು ಪಡೆಯುವ ಭಾಗ್ಯವು ಇವರಿಗೆ ಇರುವುದು! ಎಂದುಹೇಳಿ ಅವರಿಗೆ ಅನೇಕ ವಿಧವಾದ ಧನ್ಯವಾದಗಳನ್ನು ಅರ್ಪಿಸಿದರು. ॥೬೧-೬೨॥

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ಶ್ರೀಕೃಷ್ಣಜನ್ಮವನ್ನು ತಿಳಿಸುವ ಹದಿನೈದನೆಯ ಅಧ್ಯಾಯವು ಸಮಾಪ್ತವಾಯಿತು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಷೋಡಶೋಽಧ್ಯಾಯಃ ||

### ಹದಿನಾರನೆಯ ಅಧ್ಯಾಯವು

|| ಶ್ರೀಕೃಷ್ಣ ಉವಾಚ ||

**ಶ್ರುತ್ವೇತಿ ನಂದೋ ಗೋಪಾನಾಮತಿಹೃಷ್ಟ ಉವಾಚ ತಾನ್ ।**
**ಆಶೀರ್ಭಿರ್ಭವತಾನೇವ ಪುತ್ರಜನ್ಮ ಮಮಾಭವತ್ ॥೧॥**

**ಬಾಂಧವಾಃ ಸಾಧವೋ ಯಸ್ಯ ವಾಂಛಂತಿ ಸತತಂ ಸುಖಂ ।**
**ತಸ್ಯಾಸ್ತಿ ಪೂರ್ವಸುಕೃತಂ ಯತಃ ಸ್ಯುಃ ಸರ್ವಸಂಪದಃ ॥೨॥**

|| ಗೋಪಾಲ ಊಚುಃ ||

**ಯಶೋದಾಗರ್ಭ ಸಂಭೂತೇ ರಾರಭ್ಯ ಸಕಲೇ ವ್ರಜೇ ।**
**ಸಂಪತ್ತಿರ್ವಿಪುಲಾ ಜಾತಾ ಸರ್ವಸೌಖ್ಯಂ ದಿನೇ ದಿನೇ ॥೩॥**

---

ಶ್ರೀಕೃಷ್ಣನು ಹೇಳಿದನು—ನಂದಗೋಪನು ತನ್ನನ್ನು ಅಭಿನಂದಿಸಿದ ಗೋಪರನ್ನು ನೋಡಿ ಬಹುಸಂತೋಷದಿಂದ ಅವರನ್ನು ಕುರಿತು ಹೀಗೆಂದು ಹೇಳಿದನು. ನಿಮ್ಮೆಲ್ಲರ ಆಶೀರ್ವಾದಬಲದಿಂದ ನನಗೆ ಪುತ್ರಜನ್ಮವಾಯಿತು. ನನಗೆ ಸಾಧುಗಳಾಗಿಯೂ, ಹಿತವನ್ನು ಬಯಸುವವರಾಗಿಯೂ ಇರುವ ಬಂಧುಗಳು ಇರಲಾಗಿ ನನ್ನ ಸಂಪತ್ತಿಗೆ ಏನು ಕಡಿಮೆ? ಇವೆಲ್ಲವೂ ನನ್ನ ಪೂರ್ವಜನ್ಮದ ಪುಣ್ಯಕರ್ಮಗಳ ಫಲವು. ||೧-೨||

ಗೋಪರು ಹೇಳಿದರು—ಯಶೋದೆಯು ಗರ್ಭವನ್ನು ಧರಿಸಿದ ಮೊದಲುಗೊಂಡು ಗೋಕುಲದಲ್ಲಿ ಸಂಪತ್ತೂ ಸರ್ವಸೌಖ್ಯವೂ ಸಹ ಪ್ರತಿದಿವಸದಲ್ಲಿಯೂ

ಯತ್ರಯತ್ರ ಹಿ ವಿಶ್ವಾತ್ಮಾ ಸಂಭವೇದ್ಧರಿರೀಶ್ವರಃ ।
ತತ್ರ ತತ್ರ ಶ್ರಿಯೋ ವಾಸಃ ದೃಷ್ಟ ಏವ ಇಹಾದ್ಭುತಂ ॥೪॥

ಅನ್ಯಥಾ ಚೇದೀದೃಶೀ ಸಂಪತ್ತಥಾ ಪ್ರವವೃಧೇ ಕಥಂ ।
ಲಕ್ಷಣೈರೇವ ಜಾನೀಯಾಜ್ಜನ್ಮನೋ ಹಿ ಶುಭಾಶುಭಂ ॥೫॥

ಅಭಿತಃ ಸಂಪದೋ ನಿತ್ಯಾಃ ಸರ್ವೇಷಾಂ ಚ ಗೃಹೇ ಗೃಹೇ ।
ನ ಶ್ರುತಾ ನ ಚ ದೃಷ್ಟಾಶ್ಚ ಕಿಮೇತದಿತಿ ನೃತ್ಯತೇ ॥೬॥

ಗಾವೋ ಹ್ಯಸಂಖ್ಯಾಃ ಸರ್ವೇಷಾಂ ಪಾತ್ರಂ ಸರ್ವಂ ಹಿರಣ್ಮಯಂ ।
ಕದಾಽಪಿ ನಾಸೀದ್ಯದ್ದ್ರವ್ಯಂ ತದನಂತಂ ವಿಲೋಕ್ಯತೇ ॥೭॥

ಅತಸ್ತವಾಯಂ ತನಯೋ ವಿಷ್ಣುರೇವ ನ ಸಂಶಯಃ ।
ಉದ್ಭೂತಃ ಸಾಧುರಕ್ಷಾಯ ಸ್ವಜನಾನಾಂ ಹಿತಾಯ ಚ ॥೮॥

---

ಅಭಿವೃದ್ಧಿಯಾಗುತ್ತಲಿದೆ. ಪ್ರಪಂಚಸ್ವರೂಪಿಯಾದ ಈಶ್ವರನಾದ ಹರಿಯು ಎಲ್ಲಿ ವಾಸಿಸುತ್ತಾನೆಯೋ ಅಲ್ಲಿ ಲಕ್ಷ್ಮಿಯೂ ವಾಸಿಸುವಳು. ಇಂತಹ ಆಶ್ಚರ್ಯವು ಈಗ ಗೋಕುಲದಲ್ಲಿಯೂ ಕಾಣುತ್ತಿದೆ. ||೩-೪||

ಪರಮಾತ್ಮನ ಅನುಗ್ರಹವಿಲ್ಲದ ಪಕ್ಷದಲ್ಲಿ ಈರೀತಿಯಾಗಿ ವಿಪುಲವಾದ ಸಂಪತ್ತು ಹೇಗೆ ಅಭಿವೃದ್ಧಿಯಾದೀತು ? ಜನ್ಮಲಕ್ಷಣದಿಂದಲೇ ಶುಭಾಶುಭಫಲಗಳು ಗೊತ್ತಾಗುತ್ತವೆ. ಎಲ್ಲರ ಮನೆಯಲ್ಲಿಯೂ ಹೆಚ್ಚಾದ ಸಂಪತ್ತು ಅಭಿವೃದ್ಧಿಯಾಗುತ್ತಲಿದೆ. ಇಷ್ಟು ಅಪಾರವಾದ ಸಂಪತ್ತನ್ನು ಯಾರೂ ನೋಡಿಯೂ ಕೇಳಿಯೂ ಸಹ ಇರಲಿಲ್ಲ. ಅಧಿಕವಾದ ಸಂಪತ್ತನ್ನು ನೋಡಿ ಆಶ್ಚರ್ಯದಿಂದ ಎಲ್ಲರೂ ಕುಣಿಯುತ್ತಿರುವರು ! ||೫-೬||

ಎಲ್ಲರ ಮನೆಗಳಲ್ಲಿಯೂ ಲೆಕ್ಕವಿಲ್ಲದಷ್ಟು ಗೋವುಗಳು ತುಂಬಿವೆ. ಎಲ್ಲರ ಮನೆಗಳಲ್ಲಿಯೂ ಚಿನ್ನದ ಪಾತ್ರೆಗಳೇ ಕಾಣುತ್ತವೆ. ಇಂತಹ ಸಂಪತ್ತು ಯಾವಾಗಲೂ ಎಲ್ಲಿಯೂ ಉಂಟಾಗಿರಲಿಲ್ಲವು. ಆದುದರಿಂದ ನಿನ್ನ ಪುತ್ರನು ಸಾಕ್ಷಾತ್ ವಿಷ್ಣುವೆಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ವಿಷ್ಣುವು ತನ್ನವರನ್ನೂ, ಸಾಧುಜನಗಳನ್ನೂ ರಕ್ಷಿಸಲು ನಿನ್ನ ಮಗನಾಗಿ ಅವತರಿಸಿರುವನು. ||೭-೮||

ಧನ್ಯಂ ತವ ವಯಸ್ತ್ವಂ ಚ ಧನ್ಯೋಽಯಂ ತಸ್ಯ ಸಂಭವಃ ।
ಯತೋ ಭಾಗ್ಯೋದಯೋ ಗೋಪ ಗೋಪೀಷ್ವಿತಿ ವದಾಮ್ಯಹಂ॥೯॥

ಅಂತೇ ವಯಸಿ ಜಾತೋಽಯಂ ಯಶೋದಾಯಾಂ ತವಾತ್ಮಜಃ ।
ವಿಷ್ಣುರ್ವಾ ತತ್ಸಮೋಽನ್ಯೋ ವಾ ಸರ್ವಥಾ ಭಾಗ್ಯವಾನಯಂ ॥೧೦॥

॥ ಶ್ರೀಕೃಷ್ಣ ಉವಾಚ ॥

ವದತ್ಸ್ವೇವಂ ಗೋಪಗೋಪೀಜನೇಷು ನಿಖಿಲೇಷು ಚ ।
ನಂದೋ ಮಹಾಮನಾ ಮೇನ ಆತ್ಮಾನಂ ಪೂರ್ಣಮಾಶಿಷಾಂ ॥೧೧॥

ವ್ರಜೇ ತದ್ದಿನಮಾರಭ್ಯ ಮಂಗಲಾನಿ ದಿನೇ ದಿನೇ ।
ಅಭೂವನ್ನುತ್ಸುಕಾಃ ಸರ್ವೇ ಸಾಧವೋ ದುಃಖಿತಾಃ ಖಲಾಃ ॥೧೨॥

ದಿವ್ಯವಸ್ತ್ರಾವೃತಾಃ ಸರ್ವೇ ದಿವ್ಯಾಭರಣಭೂಷಿತಾಃ ।
ನಂದೇನ ಪೂಜಿತಾಃ ಸರ್ವೇ ವಿರೇಜುಸ್ತತ್ರ ತತ್ರ ಹಿ ॥೧೩॥

---

ನೀನು ಇಷ್ಟು ದಿವಸಗಳವರೆಗೆ ಬದುಕಿರುವುದು ಪ್ರಶಸ್ತವಾದುದು. ನೀನು ಹುಟ್ಟಿದ್ದೂ ಸಹ ಸಫಲವಾಯಿತು. ಇದೆಲ್ಲವೂ ಸಹ ಗೋಪಗೋಪಿಯರ ಪುಣ್ಯ ಭಾಗ್ಯೋದಯವೇ ಸರಿ. ಎಂದು ನಾನು ಖಂಡಿತವಾಗಿ ಹೇಳುವೆನು. ನಿನ್ನ ವೃದ್ಧಾಪ್ಯ ದಲ್ಲಿ ಯಶೋದೆಯ ಗರ್ಭದಿಂದ ಜನಿಸಿದ ಈ ನಿನ್ನ ಪುತ್ರನು ಸಾಕ್ಷಾತ್ ವಿಷ್ಣುವೇ ಆಗಲಿ ಅಥವಾ ವಿಷ್ಣುವಿಗೆ ತುಲ್ಯನಾದ ಇನ್ನೊಬ್ಬ ಮಹಾಪುರುಷನೇ ಆಗಲಿ, ಸರ್ವಥಾ ಈ ಪುತ್ರನು ಭಾಗ್ಯಶಾಲಿಯೇ ಸರಿ. ॥೯-೧೦॥

ಶ್ರೀಕೃಷ್ಣನು ಹೇಳಿದನು--ಎಲ್ಲಾ ಗೋಪಗೋಪಿಯರೂ ಹೀಗೆ ಹೇಳಲು ಉದಾರಶೀಲನಾದ ನಂದನು ತಾನು ಸಂಪೂರ್ಣವಾದ ಆಶೀರ್ವಾದಕ್ಕೆ ಪಾತ್ರನಾಗಿರು ವೆನೆಂದು ತಿಳಿದುಕೊಂಡನು. ॥೧೧॥

ಶ್ರೀಕೃಷ್ಣನು ಜನ್ಮತಾಳಿದ ಮೊದಲುಗೊಂಡು ಗೋಕುಲದಲ್ಲಿ ಪ್ರತಿದಿವಸವೂ ಮಂಗಳವು ಅಧಿಕವಾಯಿತು. ಸಾಧುಗಳು ಸಂತೋಷಗೊಂಡರು. ದುಷ್ಟರು ವ್ಯಸನಗೊಂಡರು. ದಿವ್ಯವಾದ ವಸ್ತ್ರಾಭರಣಗಳನ್ನು ಧರಿಸಿದ ಗೋಪಗೋಪಿಯರು ನಂದನಿಂದ ಪೂಜಿಸಲ್ಪಟ್ಟು ಎಲ್ಲಾ ಕಡೆಯಲ್ಲಿಯೂ ಪ್ರಕಾಶಮಾನರಾಗಿ ತೋರಿದರು. ॥೧೨-೧೩॥

ಜಗುರ್ನಾನಾವಿಧಂ ಗಾನಂ ನನೃತುಶ್ಚ ಪರಸ್ಪರಮ್ ।
ಗಾವೋಽಥ ಚಿತ್ರಿತಾ ವಸ್ತ್ರಮಾಲ್ಯ ಪರ್ವತಧಾತುಭಿಃ ॥೧೪॥

ವೃಷಾ ಗಾವೋ ವತ್ಸತರಾಶ್ಚುಕ್ರುಶುಃ ಘೋಷಭೂಮಿಷು ।
ಲಿಹಂತಿ ವತ್ಸಾಃ ಸ್ವಾಂಗಾನಿ ಪುಚ್ಛಾನೂರ್ಧ್ವಂ ಕ್ಷಿಪಂತಿ ಚ ॥೧೫॥

ಇತಸ್ತತಃ ಪ್ರಧಾವಂತಿ ನಿಷಿಂಚಂತಿ ಪಯಃಸ್ರವೈಃ ।
ಚಕ್ರುಸ್ತಥಾ ತಥಾ ಚೇಷ್ಟಾಂ ಮುಮುದುಸ್ತೇ ಯಥಾ ತಥಾ ॥೧೬॥

ಗೋಪಾ ಗೋಪ್ಯಃ ಪ್ರಮುದಿತಾಶ್ಚಕ್ರುಸ್ತೇ ದಧಿಕರ್ದಮಮ್ ।
ಗಾಲೀಭಿಃ ಪರಿಹಾಸೈಶ್ಚ ಜಗುಃ ಸರ್ವೇ ಮನೋರಮಮ್ ॥೧೭॥

ಉಗ್ರಶ್ಚ ಮಾಂ ಪ್ರತಿ ತದಾ ಪರಿಹಾಸೋ ಯಥಾಽಭವತ್ ।
ನಿತ್ಯಾನಂದಯುತಃ ಶಶ್ವದ್ಭವಿಷ್ಯತ್ಯೇಷ ಬಾಲಕಃ ॥೧೮॥

---

ಎಲ್ಲರೂ ಸಂತೋಷದಿಂದ ಸಂಗೀತವನ್ನು ಹೇಳುತ್ತಾ ನರ್ತನಮಾಡಿದರು. ಗೋವುಗಳನ್ನು ವಸ್ತ್ರಗಳಿಂದಲೂ ಹೂಮಾಲೆಗಳಿಂದಲೂ ಪರ್ವತದಲ್ಲಿ ಸಿಕ್ಕುವ ಕೆಂಪು ಹಸುರು ಮುಂತಾದ ಬಣ್ಣಗಳಿಂದಲೂ ಚಿತ್ರವಿಚಿತ್ರವಾಗಿ ಅಲಂಕರಿಸಿದರು. ಗೂಳಿಗಳೂ ಹಸುಗಳೂ ಸಣ್ಣ ಕರುಗಳೂ ಸಹ ಸಂತೋಷದಿಂದ ಕೂಗಿದುವು. ಕರುಗಳು ತಮ್ಮ ಮೈಯನ್ನು ನೆಕ್ಕುತ್ತಾ ಬಾಲಗಳನ್ನು ಸಂತೋಷದಿಂದ ಮೇಲ ಕ್ಕೆತ್ತಿದುವು. ॥೧೪-೧೫॥

ಗೋವುಗಳು ಸಂತೋಷದಿಂದ ಅಲ್ಲಿ ಇಲ್ಲಿ ನೆಗೆದು ಕುಣಿಯುತ್ತಾ ಹಾಲನ್ನು ಸುರಿಸಿದುವು. ಅವು ಸಂತೋಷದಿಂದ ಓಡುತ್ತಾ ನಾನಾವಿಧವಾದ ವಿಲಾಸಗಳನ್ನು ಮಾಡಿದುವು. ॥೧೬॥

ಗೋಪರೂ ಗೋಪಿಕಾಸ್ತ್ರೀಯರೂ ಸಹ ಸಂತೋಷದಿಂದ ಮೊಸರನ್ನು ಯಥೇಚ್ಛವಾಗಿ ವಿನಿಯೋಗಿಸಿಕೊಂಡರು. ಸಂತೋಷದಿಂದಲೂ ಹಾಸ್ಯಗಳಿಂದಲೂ ಸಹ ಇಂಪಾಗಿ ಗಾನಮಾಡಿದರು. ॥೧೭॥

ಅಲ್ಲಿ ಸೇರಿದ್ದ ಜನಗಳು ನನ್ನನ್ನು ಬಹಳವಾಗಿ ಪರಿಹಾಸ್ಯಮಾಡಿದರು. ನೀನು ನಿತ್ಯನಾದ ಆನಂದಭರಿತನಾದ ಸಾಕ್ಷಾತ್ ಈಶ್ವರನೇ ಆಗಿರುವೆ! ಆದರೂ ಸಹ ಮತ್ತೆ ಮತ್ತೆ ಅವತಾರ ಮಾಡುವೆ! ನಿನ್ನ ಈ ನಡತೆಯು ಕುತೂಹಲ ಮಾತ್ರ

ಕೌತುಕಂ ತು ಸಮಾಶ್ರಿತ್ಯ ತವ ಚೇಷ್ಟಾ ಪ್ರವರ್ತತೇ ।
ನ ತೇ ಮಾತಾ ಪಿತಾ ಕಶ್ಚಿನ್ನ ಕಶ್ಚನ ಸಹೋದರಃ ॥೧೯॥

ತವ ಮಾಯಾ ಜಡಾ ಸಾಧ್ವೀ ಪರಚಿತ್ತಪ್ರಹಾರಿಣೀ ।
ಗೃಹೇ ಗೃಹೇ ಪ್ರವಿಷ್ಟೇವ ಲಕ್ಷ್ಯತೇ ಭುವನತ್ರಯೇ ॥೨೦॥

ಕೋಽಪಿ ವೇತ್ತಿ ನ ತೇ ಕಾರ್ಯಂ ಕರ್ತುಂ ಯತ್ ತ್ವಂ ಕರೋಷಿ ಹಿ ।
ನಂದಗೋಪಗೃಹೇ ಪುತ್ರೋ ಯಶೋದಾ ಗರ್ಭಸಂಭವಃ ॥೨೧॥

ಸರ್ವೇಷಾಂ ಗೋಪಗೋಪೀನಾಂ ನಯನಾನಂದ ಭಾಜನಃ ।
ಅನೇಕಲೀಲಾಽವಿರ್ಭಾವಂ ಕುರ್ವನ್ನೇಷ ವ್ರಜೌಕಸಃ ॥೨೨॥

ಸುಪೂಜಿತಾಃ ಸ್ತುತಿಂ ಚಕ್ರುಃ ಸೂತಮಾಗಧವಂದಿನಃ ।
ಶ್ರುತಿಘೋಷೋಽಭವತ್ತತ್ರ ದ್ವಿಜಾನಾಂ ಬ್ರಹ್ಮವಾದಿನಾಂ ॥೨೩॥

ದುಂದುಭ್ಯಾನಕ ತೂರ್ಯಾಣಾಂ ಶಂಖಾದೀನಾಂ ಚ ನಿಸ್ವನೈಃ ।
ಬಭೂವ ನಿತರಾಂ ತತ್ರ ದೇವಮಾನುಷ ಚೇಷ್ಟಿತಂ ॥೨೪॥

---

ದಿಂದ ನಡೆಯುತ್ತಿದೆ. ನೀನು ಎಲ್ಲಕ್ಕೂ ಕಾರಣನಾದುದರಿಂದ ನಿನಗೆ ತಂದೆ ತಾಯಿಗಳಾಗಲೀ ಅಣ್ಣತಮ್ಮಂದಿರಾಗಲೀ ಯಾರೂ ಇರುವುದಿಲ್ಲ. ನಿನ್ನ ಸಂಬಂಧಿಯಾದ ಜಡವಾದ ಮಾಯೆಯು ಎಲ್ಲರ ಮನೆಯಲ್ಲಿಯೂ ಇದ್ದು ಎಲ್ಲರ ಮನಸ್ಸನ್ನೂ ಅಪಹರಿಸಿದಂತೆ ಭ್ರಮೆಗೊಳಿಸುತ್ತದೆ! ಮೂರು ಲೋಕಗಳಲ್ಲಿಯೂ ಸಹ ನಿನ್ನ ಮಾಯೆಯು ವ್ಯಾಪಿಸಿ ಇರುವುದು. ॥೧೮-೧೯-೨೦॥

ನೀನು ಯಾವ ಕೆಲಸವನ್ನು ಮಾಡುವೆ? ಎಂಬ ವಿಚಾರವನ್ನು ಯಾರೂ ತಿಳಿಯಲಾರರು. ಇಂತಹ ನೀನು ನಂದಗೋಪನ ಮನೆಯಲ್ಲಿ ಯಶೋದೆಯು ಗರ್ಭದಿಂದ ಪುತ್ರನಾಗಿ ಜನಿಸಿರುವೆ. ॥೨೧॥

ಗೋಕುಲದಲ್ಲಿರುವ ಎಲ್ಲಾ ಗೋಪಗೋಪಿಯರಿಗೆ ಆನಂದವನ್ನುಂಟು ಮಾಡುವ ಶ್ರೀಕೃಷ್ಣನು ಅನೇಕ ಲೀಲೆಗಳನ್ನು ತೋರಿಸಿದನು. ಸೂತರೂ ಮಾಗಧರೂ ಶ್ರೀಕೃಷ್ಣನನ್ನು ಪೂಜಿಸಿ ಸ್ತುತಿಸಿದರು. ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರು ವೇದಘೋಷವನ್ನು ಮಾಡಿದರು. ॥೨೨-೨೩॥

ಆ ಗೋಕುಲದಲ್ಲಿ ಭೇರಿ ದುಂದುಭಿ ತುತ್ತೂರಿ ಮುಂತಾದ ವಾದ್ಯಗಳನ್ನೂ

ದಿವಿ ದೇವಗಣಾ ಹೃಷ್ಟಾಃ ಕುಸುಮಾಸಾರವರ್ಷಿಣಃ ।
ಶಬ್ದಂ ಜಯಜಯೇತ್ಯುಚ್ಚೈರಪ್ಸರೋಭಿಃ ಸಮಂ ಜಗುಃ ॥೨೫॥

ಗೃಹಕರ್ಮಾಣಿ ನಷ್ಟಾನಿ ಸ್ವದೇಹಾನಿ ನ ಸಸ್ಮರುಃ ।
ಗೋಪಾ ಗೋಪ್ಯಶ್ಚ ದೇವಾಶ್ಚ ಮಹದಾಸೀತ್ತದದ್ಭುತಂ ॥೨೬॥

ಅಹೋ ಯಾಮಾಷ್ಟಪರ್ಯಂತಮಖಂಡಂ ತತ್ರ ಕೀರ್ತಿತಂ ।
ಬಭೂವ ನಂದಸದನೇ ಮುನೇ ಮೋದಾಭಿವರ್ಧನಂ ॥೨೭॥

ನಂದೋ ಮಹಾಮನಾಸ್ತೇಭ್ಯೋ ದದೌ ದಾನಮನುತ್ತಮಂ ।
ಸೂತಮಾಗಧವಂದಿಭ್ಯೋ ವಾಸೋಽಲಂಕಾರಭೋಜನಂ ॥೨೮॥

ತೇನೇತ್ಥಂ ಭಕ್ತಿಭಾವೇನ ಯಾಚಿತಃ ಪೂರ್ವಜನ್ಮನಿ ।
ಆವಿರ್ಭೂತಃ ಸೂರ್ಯವಂಶೇ ಭೂಭಾರಮಹರಂ ಮುನೇ ॥೨೯॥

---

ಶಂಖವನ್ನೂ ಊದಿ ಧ್ವನಿಮಾಡಿದರು. ದೇವತೆಗಳು ಸಂತೋಷದಿಂದ ಅಂತರಿಕ್ಷದಲ್ಲಿ ನೆರೆದು ಪುಷ್ಪವೃಷ್ಟಿಯನ್ನು ಸುರಿಸಿದರು. ಮತ್ತು ಜಯಜಯ ಶಬ್ದಮಾಡುತ್ತಾ ಅಪ್ಸರೆಯರೊಂದಿಗೆ ನರ್ತನಮಾಡಿದರು. ||೨೪-೨೫||

ಸಮಸ್ತರೂ ಶ್ರೀಕೃಷ್ಣ ಜನ್ಮಮಹೋತ್ಸವದ ಸಂತೋಷದಿಂದ ತಮ್ಮ ಮನೆಗೆಲಸಗಳನ್ನು ಮರೆತರು. ತಮ್ಮ ದೇಹದಮೇಲಿನ ಸ್ಮರಣೆಯನ್ನೂ ಸಹ ಬಿಟ್ಟರು. ಗೋಪಗೋಪಿಯರೂ ದೇವತೆಗಳೂ ಸಹ ಶ್ರೀಕೃಷ್ಣನು ಹುಟ್ಟಿದುದನ್ನು ನೋಡಿ ಬಹಳ ಆಶ್ಚರ್ಯಪಟ್ಟರು. ||೨೬||

ನಂದನ ಮನೆಯಲ್ಲಿ ಅಖಂಡವಾಗಿ ಎಂಟು ಜಾವಗಳವರೆಗೆ ಎಲ್ಲರೂ ಶ್ರೀ ಕೃಷ್ಣನನ್ನು ಕೀರ್ತಿಸಿದರು. ಬಹು ಸಂತೋಷವೂ ಅಭಿವೃದ್ಧಿಯಾಗಿ ಬಹು ಆಶ್ಚರ್ಯ ಕರವಾಗಿದ್ದಿತು. ||೨೭||

ಉದಾರಿಯಾದ ನಂದನು ತನ್ನ ಮನೆಗೆ ಬಂದವರಿಗೆ ಉತ್ತಮವಾದ ವಸ್ತು ಗಳನ್ನು ದಾನಮಾಡಿದನು. ಸೂತಮಾಗಧವಂದಿಗಳಿಗೆ ಶ್ರೇಷ್ಠವಾದ ವಸ್ತ್ರಾಭರಣ ಗಳನ್ನು ಕೊಟ್ಟು ಉತ್ತಮವಾದ ಭೋಜನವನ್ನು ಮಾಡಿಸಿದನು. ಓ ಮುನಿ ಶ್ರೇಷ್ಠನೇ, ಪೂರ್ವಜನ್ಮದಲ್ಲಿ ಭಕ್ತಿಯಿಂದ ಅವನು ನನ್ನನ್ನು ಬೇಡಿಕೊಳ್ಳಲು

ವೈವಸ್ವತ ಮನೋಃ ಪುತ್ರ ಇಕ್ಷ್ವಾಕುರಿತಿ ವಿಶ್ರುತಃ ।
ತಸ್ಯ ವಂಶೇ ದಿಲೀಪೋಽಭೂದ್ರಘುಸ್ತಸ್ಯಾತ್ಮಜಃ ಸ್ಮೃತಃ ॥೩೦॥

ತತ್ಪುತ್ರೋಽಜೋ ದಶರಥಸ್ತಸ್ಯಪುತ್ರಃ ಕಿಲಾಭವತ್ ।
ತಸ್ಯ ಭಾರ್ಯಾತ್ರಯಮಭೂತ್ಕೌಸಲ್ಯಾ ಕೈಕಯೀ ತಥಾ ॥೩೧॥

ಸುಮಿತ್ರಾಚ ತಿಸ್ರೃಣಾಂ ತು ಕೈಕೇಯ್ಯಾಸೀತ್ ನೃಪಪ್ರಿಯಾ ।
ಕೌಸಲ್ಯಾಯಾಮಹಂ ಜಾತೋ ಮದಂಶೋ ಭರತಸ್ತ್ವಭೂತ್ ॥೩೨॥

ಕೈಕೇಯ್ಯಾಂ ಚ ಸುಮಿತ್ರಾಯಾಂ ಮದಂಶೌ ಸಂಬಭೂವತುಃ ।
ಲಕ್ಷ್ಮಣಶ್ಚೈವ ಶತ್ರುಘ್ನಃ ಸರ್ವೇ ರಾಜ್ಞಃ ಪ್ರಿಯಾಃ ಸುತಾಃ ॥೩೩॥

ರಾಮಲಕ್ಷ್ಮಣಯೋಃ ಪ್ರೇಮ ಶತ್ರುಘ್ನಭರತೌ ತಥಾ ।
ಪ್ರಿಯಾವಾಸ್ತಾಂ ವಿಶೇಷೇಣ ವವೃಧುಃ ಪಿತೃಸಮ್ಮತಾಃ ॥೩೪॥

---

ಸೂರ್ಯವಂಶದಲ್ಲಿ ಹುಟ್ಟಿ ದುಷ್ಟರನ್ನು ಸಂಹರಿಸಿ ಭೂಮಿಯ ಭಾರವನ್ನು ಹೋಗಲಾಡಿಸಿದೆನು. ಹೇಗೆಂದರೆ, ॥೨೮-೨೯॥

ಸೂರ್ಯನಿಗೆ ವೈವಸ್ವತಮನುವೆಂಬ ಮಗನು ಹುಟ್ಟಿದನು. ಆ ವೈವಸ್ವತ ಮನುವಿಗೆ ಇಕ್ಷ್ವಾಕು ಎಂಬ ಪುತ್ರನು ಹುಟ್ಟಿದನು. ಆ ಇಕ್ಷ್ವಾಕುವಿನ ವಂಶದಲ್ಲಿ ದಿಲೀಪನೆಂಬವನು ಜನಿಸಿದನು. ಆ ದಿಲೀಪನ ಮಗನಿಗೆ ರಘುವೆಂದು ಹೆಸರು. ॥೩೦॥

ರಘುವಿಗೆ ಅಜನೆಂಬುವನು ಪುತ್ರನಾದನು. ಅಜನೆಂಬುವನಿಗೆ ದಶರಥ ನೆಂಬುವನು ಪುತ್ರನಾದನು. ಆ ದಶರಥನಿಗೆ ಕೌಸಲ್ಯಾ, ಕೈಕೇಯೀ ಮತ್ತು ಸುಮಿತ್ರಾ ಎಂಬ ಮೂವರು ಪತ್ನಿಯರಿದ್ದರು. ಆ ಮೂವರು ಪತ್ನಿಯರಲ್ಲಿ ಕೈಕೇಯಿಯಲ್ಲಿ ದಶರಥನಿಗೆ ಪ್ರೇಮವು ಅಧಿಕವಾಗಿದ್ದಿತು. ॥೩೧॥

ದಶರಥನ ಮೂವರು ಹೆಂಡಿತಿಯರಲ್ಲಿ ಹಿರಿಯಳಾದ ಕೌಸಲ್ಯೆಯಲ್ಲಿ ನಾನು ಜನಿಸಿದೆನು. ಕೈಕೇಯಿಯಲ್ಲೂ ಸುಮಿತ್ರೆಯಲ್ಲೂ ನನ್ನ ಅಂಶಭೂತರಾದ ಭರತ, ಲಕ್ಷ್ಮಣ ಶತ್ರುಘ್ನರು ಜನಿಸಿದರು. ಹೀಗೆ ನಾವು ನಾಲ್ವರು ಅಣ್ಣತಮ್ಮಂದಿರೂ ಸಹ ರಾಜನಾದ ದಶರಥನಿಗೆ ಪ್ರೀತಿಪಾತ್ರರಾಗಿದ್ದೆವು. ॥೩೨-೩೩॥

ರಾಮಲಕ್ಷ್ಮಣರಿಗೂ, ಭರತಶತ್ರುಘ್ನರಿಗೂ ಹೆಚ್ಚಾಗಿ ವಿಶ್ವಾಸವುಂಟಾಯಿತು. ರಾಮಾದಿಗಳು ದಶರಥನ ಪ್ರಿತಿಗೆ ಪಾತ್ರರಾಗಿ ವೃದ್ಧಿಹೊಂದಿದರು. ॥೩೪॥

**ವಿಶ್ವಾಮಿತ್ರೋ ಮುನಿಃ ಪ್ರಾಪ್ತೋ ರಾಜಾನಮಿದಮಬ್ರವೀತ್ ।**
**ರಾಜನ್ಮದಾಶ್ರಮೇ ಯಜ್ಞಃ ಪ್ರಾರಬ್ಧೋ ರಾಕ್ಷಸೈಃ ಖಲೈಃ ॥೩೫॥**

**ಕ್ರಿಯತೇ ನಿತರಾಂ ವಿಘ್ನಃ ಶಮಯಸ್ವ ಮಹಾಭುಜ ।**
**ಯಜ್ಞವಿಘ್ನವಿನಾಶಾಯ ರಾಮಂ ಪ್ರೇಷಯ ಮಾ ಚಿರಮ್ ॥೩೬॥**

॥ ದಶರಥ ಉವಾಚ ॥

**ಕ್ಲೇಶೇನಮಹತಾ ಲಬ್ಧೋ ವಯಸ್ಯಂತೇ ಮಯಾಽಧುನಾ ।**
**ಪ್ರಿಯೋ ಮೇ ತನಯೋ ರಾಮಸ್ತಂ ಕಥಂ ಪ್ರೇಷಯೇ ವನೇ॥೩೭॥**

**ತ್ವಯಾ ಸಾರ್ಧಮಹಂ ಗತ್ವಾ ಹತ್ವಾ ರಾಕ್ಷಸಸಂಚಯಮ್ ।**
**ನಿವಾರ್ಯ ಯಜ್ಞವಿಘ್ನಂ ತು ಆಗಮಿಷ್ಯೇಽಚಿರೇಣ ಹಿ ॥೩೮॥**

॥ ವಿಶ್ವಾಮಿತ್ರ ಉವಾಚ ॥

**ನ ತ್ವಯಾ ಮಮ ಕಾರ್ಯಂ ಹಿ ತಥಾ ಸಂಪತ್ಸ್ಯತೇ ನೃಪ ।**
**ಯಥಾ ರಾಮೇಣ ಸಕಲಂ ಭವಿಷ್ಯತಿ ನ ಸಂಶಯಃ ॥೩೯॥**

---

ಹೀಗಿರಲು ಒಂದುದಿನ ವಿಶ್ವಾಮಿತ್ರಮುನಿಯು ರಾಜನ ಬಳಿಗೆ ಬಂದು ಹೀಗೆಂದು ಹೇಳಿದನು. ಓ ಮಹಾಭುಜವುಳ್ಳ ರಾಜನೇ, ನನ್ನ ಆಶ್ರಮದಲ್ಲಿ ಯಜ್ಞವು ಆರಂಭವಾಗಿದೆ. ದುಷ್ಟರಾದ ರಾಕ್ಷಸರು ಆ ಯಜ್ಞಕ್ಕೆ ಅಡ್ಡಿಮಾಡುವರು. ಆ ವಿಘ್ನವನ್ನು ದೂರಮಾಡಲು ಶ್ರೀರಾಮನನ್ನು ತಡೆಮಾಡದೆ ಕಳುಹಿಸಿಕೊಡು. ॥೩೫-೩೬॥

ದಶರಥನು ಹೇಳಿದನು— ಪ್ರೀತಿಪಾತ್ರನಾದ ರಾಮನನ್ನು ಬಹಳ ಕಷ್ಟದಿಂದ ನಾನು ವೃದ್ಧಾಪ್ಯದಲ್ಲಿ ಪಡೆದಿರುವೆನು. ಇಂತಹ ಶ್ರೀರಾಮನನ್ನು ಭಯಂಕರವಾದ ಅರಣ್ಯಕ್ಕೆ ಹೇಗೆತಾನೆ ಕಳುಹಿಸಿಕೊಡಲಿ ? ಆದುದರಿಂದ ನಾನೇ ನಿನ್ನ ಜತೆಯಲ್ಲಿ ಅರಣ್ಯಕ್ಕೆ ಬಂದು ರಾಕ್ಷಸರನ್ನು ಸಂಹರಿಸಿ, ಯಜ್ಞಕ್ಕೆ ಸಂಭವಿಸುವ ವಿಘ್ನವನ್ನು ನಿವಾರಣೆ ಮಾಡಿ, ಊರಿಗೆ ಹಿಂತಿರುಗಿ ಬರುವೆನು. ॥೩೭-೩೮॥

ವಿಶ್ವಾಮಿತ್ರನು ಹೇಳಿದನು—ಎಲೈ ರಾಜನೇ, ಶ್ರೀರಾಮನಿಂದ ನನ್ನ ಎಲ್ಲಾ ಕಾರ್ಯಗಳೂ ನಿಸ್ಸಂಶಯವಾಗಿ ನೆರವೇರುವುದು. ಆದರೆ ಅವನಿಂದ ಕಾರ್ಯವು ನೆರವೇರುವ ಹಾಗೆ ನಿನ್ನಿಂದ ನಡೆಯಲಾರದು. ॥೩೯॥

|| ಶ್ರೀಕೃಷ್ಣ ಉವಾಚ ||

ಶ್ರುತ್ವೇತಿ ವಾಕ್ಯಂ ಸ ಮುನೇಃ ಪ್ರೇಷಯಾಮಾಸ ರಾಘವೌ ।
ತಾಭ್ಯಾಂ ಚ ಯಜ್ಞವಿಘ್ನಾನಿ ಶಮಿತಾನ್ಯಖಿಲಾನ್ಯಪಿ ||೪೦||

ಪುನಸ್ತು ತೌ ಗತೌ ದ್ರಷ್ಟುಂ ಮಿಥಿಲೇಶಸ್ಯ ಚಾಧ್ವರಮ್ ।
ತತ್ರ ಕೃತ್ವಾ ಧನುರ್ಭಂಗಂ ಲಬ್ಧಾ ಸೀತಾ ವಧೂಃ ಶುಭಾ ||೪೧||

ರಾಮೇಣಾನ್ಯೈಶ್ಚ ರಘುಜೈಃ ಕೃತೋದ್ವಾಹಾಸ್ತತಸ್ತು ತೇ ।
ಸಾರ್ಧಂ ನೃಪೇಣ ನಗರೀಮಯೋಧ್ಯಾಂ ಪುನರಾಗತಾಃ ||೪೨||

ತಸ್ಯಾಂ ನೃಪೋ ದಶರಥೋಽಭಿಷೇಕ್ತುಂ ರಾಮಮೈಚ್ಛತ ।
ಕೈಕೇಯ್ಯೋಕ್ತಂ ಮಮ ಸುತೋ ಭವತಾಽತ್ರಾಭಿಷಿಚ್ಯತಾಂ ||೪೩||

ಶ್ರುತ್ವೇತಿ ವಚನಂ ರಾಜ್ಞ್ಯಾ ನೃಪತಿರ್ಮೋಹಮಾಗತಃ ।
ಪುನಸ್ತದಾ ಗತಸ್ವಾಂತೋ ವಿಲಲಾಪ ಪುನಃ ಪುನಃ ||೪೪||

---

ಶ್ರೀಕೃಷ್ಣನು ಹೇಳಿದನು—ದಶರಥನು ವಿಶ್ವಾಮಿತ್ರನ ಮಾತನ್ನು ಕೇಳಿ ರಾಮಲಕ್ಷ್ಮಣರಿಬ್ಬರನ್ನೂ ಕಳುಹಿಸಿಕೊಟ್ಟನು. ಅವರಿಂದ ಯಜ್ಞಕ್ಕೆ ಉಂಟಾಗಿದ್ದ ವಿಘ್ನಗಳು ನಾಶವಾದವು. ||೪೦||

ಅನಂತರದಲ್ಲಿ ರಾಮಲಕ್ಷ್ಮಣರು ವಿಶ್ವಾಮಿತ್ರನೊಡನೆ ಮಿಥಿಲಾಧಿಪತಿಯಾದ ಜನಕಮಹಾರಾಜನ ಯಾಗವನ್ನು ನೋಡಲು ಹೋದರು. ಅಲ್ಲಿ ಜನಕನು ಸೀತಾ ಸ್ವಯಂವರಕ್ಕಾಗಿ ಇರಿಸಿದ್ದ ಶಿವಧನುಸ್ಸನ್ನು ರಾಮನು ಭಂಗಮಾಡಿ ಮಂಗಳಕರಳಾದ ಸೀತೆಯನ್ನು ವಿವಾಹವಾದನು. ಲಕ್ಷ್ಮಣಾದಿಗಳಿಗೂ ಸಹ ಅನುರೂಪರಾದ ಕನ್ನಿಕೆಯರೊಡನೆ ಅಲ್ಲಿಯೇ ವಿವಾಹವಾಯಿತು. ತರುವಾಯ ರಾಮಲಕ್ಷ್ಮಣಾದಿಗಳು ಅಲ್ಲಿಗೆ ಬಂದಿದ್ದ ದಶರಥನೊಡನೆ ಜನಕನ ಪುರಿಯಿಂದ ಹೊರಟು ತಮ್ಮ ರಾಜಧಾನಿಯಾದ ಅಯೋಧ್ಯೆಗೆ ಹಿಂತಿರುಗಿದರು. ||೪೧-೪೨||

ಆ ಬಳಿಕ ದಶರಥನು ರಾಮನಿಗೆ ಅಯೋಧ್ಯೆಯಲ್ಲಿ ಪಟ್ಟಾಭಿಷೇಕ ಮಾಡಬೇಕೆಂದು ಸನ್ನಾಹಮಾಡಲು, ಕೈಕೇಯಿಯು ತನ್ನ ಮಗನಾದ ಭರತನಿಗೆ ಪಟ್ಟಾಭಿಷೇಕ ಮಾಡಬೇಕೆಂದು ದಶರಥನನ್ನು ಪೀಡಿಸಿದಳು. ದಶರಥನು ಆ ಮಾತನ್ನು

ಕೈಕೇಯಿರಾ ರಾಮಮಾನೀಯ ವನಂ ಗಂತು ಮುವಾಚ ಹಿ ।
ರಾಮೋ ಮಾತೃವಚಃ ಶ್ರುತ್ವಾ ಸೀತಯಾ ಲಕ್ಷ್ಮಣೇನ ಚ ॥೪೫॥

ಸಾರ್ಧಂ ವನಮಿತೋ ವಾಸಂ ಕಾಂತಾರಮಕರೋದ್ಭೃಶಂ ।
ರಾಮೇ ಗತೇ ದಶರಥಃ ಶೋಕೇನ ಪ್ರಾಣಮತ್ಯಜತ್ ॥೪೬॥

ರಾಮೋಽಪ್ಯಥ ಕಿಯತ್ಕಾಲಂ ತ್ರಿಕೂಟೇಽದ್ರಾವುವಾಸ ವೈ ।
ದಂಡಕಾರಣ್ಯಮಾಸಾದ್ಯ ಸ್ಥಿತಸ್ತಸ್ಮಿನ್ಸುಖೇನ ಚ ॥೪೭॥

ಆಗತ್ಯ ರಾಕ್ಷಸೀ ಶೂರ್ಪಣಖಾ ಸ್ತ್ರೀ ದಿವ್ಯರೂಪಿಣೀ ।
ವವ್ರೇ ರಾಮಂ ತು ಚಾರ್ವಂಗೀ ತೇನ ಕ್ಷಿಪ್ತಾಽಥ ಲಕ್ಷ್ಮಣಂ ॥೪೮॥

ಗತಾ ತೇನಾಪಿ ಚ ಭೃಶಮವಜ್ಞಾತಾ ಚ ರಾಕ್ಷಸೀ ।
ಪ್ರಾಪ್ತಾ ರಾಮ ನಿಯೋಗೇನ ನಾಸಿಕಾಕರ್ಣಕೃಂತನಂ ॥೪೯॥

---

ಕೇಳಿ ಮೂರ್ಛಿತನಾದನು. ಅನಂತರದಲ್ಲಿ ಎಚ್ಚರಗೊಂಡು ಬಹು ವಿಧವಾಗಿ ಪ್ರಲಾಪ ಮಾಡಿದನು. ॥೪೩-೪೪॥

ಕೈಕೇಯಿಯು ರಾಮನನ್ನು ಕರೆಯಿಸಿ ಅವನನ್ನು ಅರಣ್ಯಕ್ಕೆ ಹೋಗೆಂದು ಹೇಳಿದಳು. ರಾಮನು ತಾಯಿಯ ಮಾತನ್ನು ಕೇಳಿ ಸೀತಾಲಕ್ಷ್ಮಣರೊಡನೆ ಅರಣ್ಯ ವಾಸವೇ ನನಗೆ ಹಿತವಾದುದೆಂದು ಹೇಳಿ ಅರಣ್ಯಕ್ಕೆ ಹೋದನು. ರಾಮನು ಅರಣ್ಯಕ್ಕೆ ಹೋಗಲು ದಶರಥನು ಪುತ್ರವಿಯೋಗ ದುಃಖವನ್ನು ತಾಳಲಾರದೆ ಪ್ರಾಣ ಗಳನ್ನು ಬಿಟ್ಟನು. ॥೪೫-೪೬॥

ರಾಮನು ಚಿತ್ರಕೂಟ ಪರ್ವತದಲ್ಲಿ ಸ್ವಲ್ಪಕಾಲ ವಾಸಮಾಡಿದನು. ಅಲ್ಲಿಂದ ಹೊರಟು ದಂಡಕಾರಣ್ಯಕ್ಕೆ ಹೋಗಿ ಸುಖವಾಗಿ ವಾಸಿಸುತ್ತಿದ್ದನು. ॥೪೭॥

ರಾಮ ಲಕ್ಷ್ಮಣರು ಸೀತಾ ಸಮೇತರಾಗಿ ದಂಡಕಾರಣ್ಯದಲ್ಲಿ ವಾಸಮಾಡು ತ್ತಿರಲು ಶೂರ್ಪಣಖಿಯೆಂಬ ರಾವಣನ ತಂಗಿಯಾದ ರಾಕ್ಷಸಿಯು ಸುಂದರವಾದ ವೇಷ ವನ್ನು ತಾಳಿ ಬಂದು ರಾಮನನ್ನು ಕಾಮಿಸಿದಳು. ರಾಮನು ಅವಳನ್ನು ತಿರಸ್ಕರಿಸಲು ಲಕ್ಷ್ಮಣನನ್ನು ಕಾಮಿಸಲು ಹೋದಳು. ॥೪೮॥

ಲಕ್ಷ್ಮಣನೂ ಸಹ ತಿರಸ್ಕರಿಸಲು ರಾಕ್ಷಸಿಯು ಅವಮಾನಪಟ್ಟು ಅವರಿಬ್ಬ ರನ್ನೂ ಕಾಡಲು, ಲಕ್ಷ್ಮಣನು ರಾಮನ ಅಪ್ಪಣೆಯಿಂದ ಶೂರ್ಪಣಖಿಯ ಕಿವಿ ಮೂಗುಗಳನ್ನು ಕತ್ತರಿಸಿದನು. ॥೪೯॥

ಸಾ ಗತ್ವಾ ದೂಷಣಂ ರಕ್ಷೋಽಬ್ರವೀನ್ನಿಜ ವಿರೂಪಣಂ ।
ಖರತ್ರಿಶಿರ ಆದ್ಯಾಸ್ತೇ ಪ್ರಯಯುಃ ಸೈನ್ಯಸಂಯುತಾಃ ॥೫೦॥

ರಾಮೇಣ ಯುಯುಧುಸ್ತೇನ ಹತಾಃ ಸರ್ವೇಽಪಿ ರಾಕ್ಷಸಾಃ ।
ಚತುರ್ದಶ ಸಹಸ್ರೇಣ ಸೈನ್ಯೇನ ಮಹತಾ ವೃತಾಃ ॥೫೧॥

ಪುನಃ ಶೂರ್ಪಣಖಾ ಲಂಕಾಂ ಗತ್ವಾ ರಾವಣಮಬ್ರವೀತ್ ।
ಧಿಕ್ತೇ ರಕ್ಷೋಽಧಿರಾಜತ್ವಂ ಧಿಗ್ಬಲಂ ಧಿಕ್ಪರಾಕ್ರಮಂ ॥೫೨॥

ಯನ್ಮೇಽಧಿಕಾರಿಣೋ ನಷ್ಟಾ ಜೀವತಾಽಪಿ ನ ರಕ್ಷಿತಾಃ ।
ಶ್ರುತ್ವೇತಿ ವಾಕ್ಯಂ ತಸ್ಯಾಶ್ಚ ಗತೋ ಮಾರೀಚ ಸನ್ನಿಧಿಂ ॥೫೩॥

ಗತ್ವಾಽಬ್ಧಿಕೂಲೇ ಮಾರೀಚ ಮುವಾಚ ಸ ತು ರಾವಣಃ ।
ಮಾನುಷೇಣೈವ ರಾಮೇಣ ಹತಾ ಮಮ ನಿಶಾಚರಾಃ ॥೫೪॥

---

ಶೂರ್ಪಣಖಿಯು ತನಗಾದ ಅವಮಾನವನ್ನು ಸಹಿಸಲಾರದೆ ಖರದೂಷಣ ತ್ರಿಶಿರರೆಂಬ ರಾಕ್ಷಸಸಹೋದರರಿಗೆ ದೂರು ಹೇಳಿದಳು. ಆ ರಾಕ್ಷಸರು ರಾಮನೊಂದಿಗೆ ಯುದ್ಧಮಾಡಲು ಸೈನ್ಯಸಮೇತರಾಗಿ ಬಂದರು. ॥೫೦॥

ಹದಿನಾಲ್ಕು ಸಾವಿರ ಸೇನೆಯೊಂದಿಗೆ ಕೂಡಿದ ಖರದೂಷಣ ತ್ರಿಶಿರಾದಿ ರಾಕ್ಷಸರು ಶ್ರೀರಾಮನೊಡನೆ ಯುದ್ಧಮಾಡಿ ಎಲ್ಲರೂ ಮೃತರಾದರು. ॥೫೧॥

ಪುನಃ ಶೂರ್ಪಣಖಿಯು ಲಂಕೆಗೆ ಹೋಗಿ ರಾವಣನನ್ನು ಕುರಿತು ಹೀಗೆಂದು ಹೇಳಿದಳು. ನಿನ್ನ ರಾಜ್ಯಾಧಿಪತ್ಯಕ್ಕೆ ಧಿಕ್ಕಾರವಿರಲಿ. ನಿನ್ನ ಸೈನ್ಯಕ್ಕೂ ಪರಾಕ್ರಮಕ್ಕೂ ಸಹ ಧಿಕ್ಕಾರವಿರಲಿ! ಏಕೆಂದರೆ ನೀನು ಜೀವಿಸಿದ್ದರೂ ಕೂಡ ನಿನ್ನ ಅಧಿಕಾರಿಗಳಾದ ಖರದೂಷಣಾದಿಗಳನ್ನು ರಕ್ಷಿಸಲಿಲ್ಲವು. ಅವರೆಲ್ಲರೂ ರಾಮನಿಂದ ಹತರಾದರು. ॥೫೨॥

ರಾವಣನು ಶೂರ್ಪಣಖಿಯ ಮಾತನ್ನು ಕೇಳಿ ಸಮುದ್ರದ ದಡದಲ್ಲಿ ವಾಸಿಸುತ್ತಿದ್ದ ಮಾರೀಚನ ಬಳಿಗೆ ಹೋಗಿ ಹೀಗೆಂದು ಹೇಳಿದನು. ರಾಮನೆಂಬ ಮನುಷ್ಯನು ದಂಡಕಾರಣ್ಯದಲ್ಲಿರುವನು. ಆವನು ನನ್ನ ಸಹೋದರರನ್ನೂ ಕೈಕೆಳಗಿನ ಅನೇಕ ರಾಕ್ಷಸರರನ್ನೂ ನಾಶಪಡಿಸಿರುವನು! ॥೫೩-೫೪॥

ವನೇ ತೇನ ಸಹೈವಾಸ್ತೇ ಭಾರ್ಯಾ ಚಾತೀವ ಸುಂದರೀ ।
ಹತ್ವಾ ರಾಮಂ ಲಕ್ಷ್ಮಣಂ ಚ ತದ್ಭಾರ್ಯಾಮಾಹರೇ ತತಃ ॥೫೫॥

ಚಲ ತ್ವಂ ಚ ಮಯಾ ಸಾರ್ಧಂ ಮತ್ಕಾರ್ಯಂ ಸಾಧಯಾಶು ಭೋಃ ।

॥ ಮಾರೀಚ ಉವಾಚ ॥

ರಾಕ್ಷಸಾಧಿಪ ಮಾಗಾಸ್ತ್ವಂ ವಿನಾಶಂ ಸಹ ಬಾಂಧವೈಃ ॥೫೬॥

ಕಿಂ ರಾಮಮಿಚ್ಛಸೇ ಹಂತುಮವಧ್ಯಂ ಸರ್ವಜಂತುಭಿಃ ।
ಪೂರ್ವಂ ಚ ವಿಶ್ವಾಮಿತ್ರಸ್ಯ ಯಜ್ಞವಿಘ್ನಂ ಕರೋಮ್ಯಹಂ ॥೫೭॥

ಗತಸ್ತತ್ರೈವ ರಾಮೇಣ ಬಾಣೇನೈಕೇನ ತಾಡಿತಃ ।
ತತೋ ರಾಮ ಶರೇಣೈವ ಶುಷ್ಕಪತ್ರಮಿವಾಗತಃ ॥೫೮॥

ಪತಿತೋಽಬ್ಧಿತಟೇ ಚಾತ್ರ ವಿಸಂಜ್ಞೋ ಭೃಶ ಮೂರ್ಛಿತಃ ।
ಲಬ್ಧಸಂಜ್ಞಃ ಕಥಂಚಿದ್ವೈ ಲೋಕಯನ್ವಿದಿಶೋ ದಿಶಃ ॥೫೯॥

---

ಆ ಶ್ರೀರಾಮನೊಡನೆ ಬಹು ಸುಂದರಿಯಾದ ಆತನ ಭಾರ್ಯೆಯು ಇರುವಳು. ರಾಮಲಕ್ಷ್ಮಣರನ್ನು ಸಂಹರಿಸಿ ರಾಮನ ಭಾರ್ಯೆಯನ್ನು ಅಪಹರಿಸುವೆನು. ಆದುದರಿಂದ ನೀನು ನನ್ನೊಡನೆ ಹೊರಟು ಬಾ ಮತ್ತು ನನ್ನ ಕಾರ್ಯವನ್ನು ಬೇಗನೆ ಸಾಧಿಸಿಕೊಡು. ॥೫೫॥

ಮಾರೀಚನು ಹೇಳಿದನು — ಎಲೈ ರಾಕ್ಷಸೇಶ್ವರನೇ, ಇಂತಹ ದುರಾಲೋಚನೆಯನ್ನು ಮಾಡಿದರೆ ನೀನು ಬಂಧುಸಹಿತನಾಗಿ ನಾಶಹೊಂದುವೆ. ರಾಮನು ಯಾವ ಪ್ರಾಣಿಯಿಂದಲೂ ವಧ್ಯನಲ್ಲವು. ಇಂತಹ ರಾಮನನ್ನು ಕೊಲ್ಲಲು ಅಪೇಕ್ಷಿಸುವೆಯಾ ? ಹಿಂದೆ ನಾನು ವಿಶ್ವಾಮಿತ್ರನ ಯಾಗಕ್ಕೆ ಅಡ್ಡಿಮಾಡಲು ಹೋದೆನು. ರಾಮನು ನನ್ನನ್ನು ಒಂದೇ ಒಂದು ಬಾಣದಿಂದ ಹೊಡೆದನು. ಆ ಬಾಣದ ಹೊಡೆತದಿಂದ ನಾನು ಒಣಗಿದ ಎಲೆಯಂತೆ ಹಾರಿಬಂದು ಈ ಸಮುದ್ರದ ದಡದಲ್ಲಿ ಬಿದ್ದೆನು. ಬಿದ್ದ ವೇಗಕ್ಕೆ ನನಗೆ ಮೂರ್ಛೆಯುಂಟಾಯಿತು. ಅನಂತರ ಬಹಳ ಹೊತ್ತಿನ ಮೇಲೆ ಕಷ್ಟದಿಂದ ನನಗೆ ಎಚ್ಚರವಾಗಿ ದಿಕ್ಕುಗಳನ್ನು ನೋಡಿದೆನು. ॥೫೬-೫೭-೫೮-೫೯॥

ಸರ್ವತ್ರ ರಾಮಂ ಪಶ್ಯಾಮಿ ಧನುರ್ಬಾಣಧರಂ ಪುರಃ ।
ತ್ರಸ್ತೋಽಭವಂ ಭೃಶಂ ತತ್ರ ಕ್ವ ಯಾಮೀತಿ ವ್ಯಚಿಂತಯಂ ॥೬೦॥

ತತಃ ಪ್ರಭೃತಿ ಮೇ ತ್ರಾಸಃ ಸುಮಹಾನಭವತ್ಪ್ರಭೋ ।
ಕಥಂ ಚಿತ್ಪ್ರಕೃತಿಂ ಪ್ರಾಪ್ತಸ್ತಿಷ್ಠಾಮ್ಯತ್ರ ವಿಕಂಪಿತಃ ॥೬೧॥

ತತೋ ಬ್ರವೀಮ್ಯಹಂ ರಾಜನ್ರಕ್ಷಾತ್ಮಾನಂ ಸ್ವಕಂ ಕುಲಂ ।
ಶ್ರುತಂ ತ್ವಯೈವ ರಾಕ್ಷಸ್ಯಾ ಯಥಾ ತೇ ರಾಕ್ಷಸಾ ಹತಾಃ ॥೬೨॥

ಸಹಸ್ರೈಃ ಪರಿಸಂಖ್ಯಾತಾ ರಾಮೇಣೈಕೇನ ಸಂಯುಗೇ ।
ನ ರಾಮೇಣ ಸಮಃ ಕಶ್ಚಿತ್ತ್ರೈಲೋಕ್ಯೇ ಸಚರಾಚರೇ ॥೬೩॥

ಪುರುಷೋಽಸ್ತಿ ಯಥಾ ರಾಜನ್ ನಿವೃತ್ತೋ ಭವ ಮೇ ಶೃಣು ॥೬೪॥

॥ ರಾವಣ ಉವಾಚ ॥

ಜಾನಾಮಿ ರಾಮಂ ಮಾರೀಚ ವಿಶ್ವೇಶ್ವರಮಜಂ ವಿಭುಂ ।
ಭೂಮೇರ್ಭಾರಾವತಾರಾರ್ಥಮವತೀರ್ಣಂ ಜಗದ್ಗುರುಂ ॥೬೫॥

---

ಎಲ್ಲಿ ನೋಡಿದರೂ ನನ್ನೆದುರಿಗೆ ಧನುರ್ಧಾರಿಯಾದ ಶ್ರೀರಾಮನು ಕಾಣುತ್ತಿರುವನು. ಆ ರಾಮನು ಬಾಣಹೊಡೆದ ಮೊದಲುಗೊಂಡು ನಾನು ಬಹಳ ಹೆದರಿದವನಾಗಿ ಎಲ್ಲಿಗೆ ಹೋಗಲೆಂದು ಚಿಂತಿಸಿ ಕೊನೆಗೆ ಧೈರ್ಯತಂದುಕೊಂಡು ಇಲ್ಲಿ ಇರುವೆನು. ॥೬೦-೬೧॥

ಆದುದರಿಂದ ನಿನ್ನನ್ನೂ ನಿನ್ನ ಕುಲವನ್ನೂ ಸಹ ರಕ್ಷಿಸಿಕೊಳ್ಳಬೇಕಾದರೆ ನನ್ನ ಮಾತನ್ನು ಕೇಳು. ಅನೇಕ ಸಹಸ್ರ ಸಂಖ್ಯಾತರಾದ ನಿನ್ನ ಕೈಕೆಳಗಿನ ರಾಕ್ಷಸರನ್ನು ರಾಮನೊಬ್ಬನೇ ಯುದ್ಧದಲ್ಲಿ ಕೊಂದ ವಿಚಾರವನ್ನು ಶೂರ್ಪಣಖಿಯಿಂದ ನೀನೇ ಕೇಳಿರುವೆ. ಚರಾಚರಾತ್ಮಕವಾದ ಮೂರು ಲೋಕಗಳಲ್ಲಿ ಶ್ರೀರಾಮನಿಗೆ ಸಮನಾದ ಪುರುಷನು ಯಾರೂ ಇಲ್ಲವು. ಆದುದರಿಂದ ನನ್ನ ಮಾತಿನಂತೆ ಶ್ರೀರಾಮನ ತಂಟೆಗೆ ಹೋಗದೆ ಸುಮ್ಮನಿರುವವನಾಗು. ॥೬೨-೬೩-೬೪॥

ಓ ಮಾರೀಚನೇ, ರಾಮನು ಯಾರೆಂಬ ವಿಚಾರವನ್ನು ನಾನೂ ಬಲ್ಲೆನು. ನಿತ್ಯನಾಗಿಯೂ, ಪ್ರಭುವಾಗಿಯೂ, ಎಲ್ಲಾ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೂ

**ತಥಾಽಪಿ ಮೇ ಮನೋ ನೈವ ಸ್ಥೈರ್ಯಂ ಯಾತಿ ಕರೋಮಿ ಕಿಂ ।**
**ಯುದ್ಧಾನ್ನಿವೃತ್ತಸ್ತ್ವದ್ವಾಕ್ಯಾತ್ತತ್ಪತ್ನೀಂ ಹರ್ತುಮಾಶು ವೈ ॥೬೬॥**

**ಗಮಿಷ್ಯಾಮ್ಯೇವ ತತ್ರ ತ್ವಂ ಭೂತ್ವಾಽಽಶ್ಚರ್ಯಮೃಗೋ ವ್ರಜ ।**
**ಲೋಭಯಿತ್ವಾಽಪ್ಯುಭೌ ರಾಮ ಲಕ್ಷ್ಮಣೌ ನಯ ದೂರತಃ ॥೬೭॥**

**ಶೂನ್ಯಾಶ್ರಮೇ ಸ್ಥಿತಾಂ ಸೀತಾಂ ಹರಿಷ್ಯಾಮಿ ನ ಸಂಶಯಃ ।**
**ತ್ವಂ ವೈ ಮಮ ವಚೋ ನೈವ ಕರಿಷ್ಯಸಿ ತದಾ ಧ್ರುವಂ ।**
**ತ್ವಾಂ ಹನಿಷ್ಯೇ ನ ಸಂದೇಹಸ್ತತೋ ಮತ್ಕಾರ್ಯಮಾಚರ ॥೬೮॥**

॥ ಶ್ರೀ ಭಗವಾನುವಾಚ ॥

**ಶ್ರುತ್ವಾ ರಾವಣವಾಕ್ಯಂ ಸ ಮನಸೀದಮ ಚಿಂತಯತ್ ।**
**ರಾಮಾದಪಿ ಚ ಮರ್ತವ್ಯಂ ಮರ್ತವ್ಯಂ ರಾವಣಾದಪಿ ॥೬೯॥**

---

ಕರ್ತನಾಗಿಯೂ, ಜಗತ್ತಿಗೆ ಗುರುವಾಗಿಯೂ ಇರುವ ಪರಮಾತ್ಮನೇ ಭೂಮಿಯ ಭಾರವನ್ನು ಹೋಗಲಾಡಿಸಲು ಶ್ರೀರಾಮನ ರೂಪದಿಂದ ಅವತರಿಸಿರುವನು. ಆದರೂ ಸಹ ನನ್ನ ಮನಸ್ಸು ಸ್ಥಿರವಾಗುವುದಿಲ್ಲ. ಏನನ್ನು ಮಾಡಲಿ ? ಯುದ್ಧವನ್ನು ಮಾಡಿ ರಾಮನ ಪತ್ನಿಯನ್ನು ಅಪಹರಿಸಲು ಜಾಗ್ರತೆಯಾಗಿ ಹೋಗುವೆನು. ನೀನು ನನ್ನ ಜೊತೆಯಲ್ಲಿ ಬಂದು ಆಶ್ಚರ್ಯಕರವಾದ ಮೃಗರೂಪವನ್ನು ಧರಿಸಿ ರಾಮ ಲಕ್ಷ್ಮಣರಿಗೆ ಆಶೆ ತೋರಿಸುತ್ತಾ ದೂರವಾಗಿ ಕರೆದುಕೊಂಡು ಹೋಗು.॥೬೫-೬೬-೬೭॥

ನಿನ್ನನ್ನು ಅಟ್ಟಿಸಿಕೊಂಡು ರಾಮಲಕ್ಷ್ಮಣರು ಹೋಗಲು ನಾನು ನಿರ್ಜನವಾದ ಆಶ್ರಮದಲ್ಲಿ ಏಕಾಂಗಿಯಾಗಿರುವ ಸೀತೆಯನ್ನು ಅಪಹರಿಸುವೆನು. ಇದರಲ್ಲಿ ಸಂದೇಹವಿಲ್ಲ. ನೀನು ನನ್ನ ಮಾತಿನಂತೆ ನಡೆಯದೆ ಹೋದಪಕ್ಷದಲ್ಲಿ ನಿಶ್ಚಯವಾಗಿಯೂ ನಿನ್ನನ್ನು ಕೊಲ್ಲುವೆನು. ,ಆದುದರಿಂದ ನನ್ನ ಕೆಲಸವನ್ನು ಮಾಡಿಕೊಡು. ॥೬೮॥

ಭಗವಂತನು ಹೇಳಿದನು— ಮಾರೀಚನು ರಾವಣನ ಮಾತನ್ನು ಕೇಳಿ ಮನಸ್ಸಿನಲ್ಲಿ ಹೀಗೆಂದು ಚಿಂತಿಸಿದನು. ಈಗ ನಾನು ರಾಮನಿಂದಲಾದರೂ ಸಾಯ

ಉಭಯೋರ್ಯದಿ ಮರ್ತವ್ಯಂ ವರಂ ರಾಮೋ ನ ರಾವಣಃ ।
ತದಹಂ ಯಾಮಿ ತತ್ಪಾರ್ಶ್ವಂ ಯದ್ಭಾವ್ಯಂ ತದ್ಭವಿಷ್ಯತಿ ॥೭೦॥

ವಿಚಾರ್ಯೇತ್ಥಂ ಪ್ರಚಲಿತೋ ಭೂತ್ವಾ ದಿವ್ಯ ಮೃಗೋಽಪ್ಯಸೌ ।
ರಾಮಾಶ್ರಮಮನುಪ್ರಾಪ್ತಸ್ತತ್ರ ಸೀತಾಂ ವ್ಯಲೋಕಯತ್ ॥೭೧॥

ಸೀತಾಽಪಿ ರಾಮಮಾಹೇದಂ ಲಕ್ಷ್ಮಣಂ ಚ ವಚೋ ಭೃಶಂ ।
ಹತ್ವಾ ಮೃಗ ಮಿಹಾನೀಯ ಸ್ಥಾಪ್ಯತಾಮಾಶ್ರಮೇ ಮಮ ॥೭೨॥

ತತೋ ರಾಮೋಽಬ್ರವೀತ್ಸೀತಾಂ ಮಾಯಾವೀ ರಾಕ್ಷಸೋ ಹ್ಯಯಂ ।
ಸ್ವಕಾರ್ಯಾರ್ಥಮಿಹಾಯಾತೋ ನಿವೃತ್ತಾ ಭವ ಮಾನಿನೀ ॥೭೩॥

ತಥಾಽಪಿ ನಾಗ್ರಹಂ ಸೀತಾ ತತ್ಯಾಜ ಮೃಗದರ್ಶನೇ ।
ರಾಮೋ ಲಕ್ಷ್ಮಣಮಾಹೇದಂ ಸೌಮಿತ್ರೇ ತ್ವಮಿಹ ಸ್ಥಿತಃ ॥೭೪॥

---

ಬೇಕು. ಅಥವಾ ರಾವಣನಿಂದಲಾದರೂ ಸಾಯಬೇಕು. ಅಂತೂ ಒಟ್ಟಿನಲ್ಲಿ ನಾನು ಈಗ ಸಾಯಲೇಬೇಕು. ಆದರೆ ರಾವಣನಿಂದ ಸಾಯುವುದಕ್ಕಿಂತಲೂ ರಾಮನಿಂದ ಸಾಯುವುದೇ ಒಳ್ಳೆಯದು. ಹೀಗೆಂದು ಚಿಂತಿಸಿ ಮಾರೀಚನು ದಿವ್ಯವಾದ ಜಿಂಕೆಯ ರೂಪವನ್ನು ಧರಿಸಿ ರಾಮನ ಆಶ್ರಮದ ಬಳಿಗೆ ಹೋಗಿ ಸೀತೆಯನ್ನು ನೋಡಿದನು. ||೬೯-೭೦-೭೧||

ಸೀತೆಯು ಆ ಜಿಂಕೆಯನ್ನು ನೋಡಿ ಆಶೆಪಟ್ಟು ರಾಮಲಕ್ಷ್ಮಣರನ್ನು ಕುರಿತು ನೀವು ಈಗಲೇ ಆ ಮೃಗವನ್ನು ಕೊಂದು ನನ್ನ ಆಶ್ರಮದಲ್ಲಿಡಿರೆಂದು ಹೇಳಿದಳು. ||೭೨||

ಅನಂತರದಲ್ಲಿ ರಾಮನು ಸೀತೆಯನ್ನು ಕುರಿತು—ಎಲೌ ಮಾನವತಿಯೇ, ಇದು ನಿಜವಾದ ಜಿಂಕೆಯಲ್ಲ. ಇದು ಮಾಯಾವಿಯಾದ ರಾಕ್ಷಸನ ಮೋಸವು. ತನ್ನ ಕಾರ್ಯಾರ್ಥವಾಗಿ ಈ ವೇಷದಿಂದ ಬಂದಿರುವನು. ಆದುದರಿಂದ ಆ ಮೃಗದ ಆಶೆಯನ್ನು ಬಿಡು. ಎಂದು ಹೇಳಿದನು. ||೭೩||

ರಾಮನು ಹೀಗೆ ಹೇಳಲು ಸೀತೆಯು ಮೃಗದ ಮೇಲಿನ ಆಶೆಯನ್ನು ಬಿಡದೆ ಪುನಃ ಅದೇ ಮಾತನ್ನು ಹೇಳಿದಳು. ರಾಮನು ಕೊನೆಗೆ ಲಕ್ಷ್ಮಣನನ್ನು ಕುರಿತು ಓ ಲಕ್ಷ್ಮಣನೇ, ನೀನು ಇಲ್ಲಿಯೇ ಇದ್ದು ಸೀತೆಯನ್ನು ರಕ್ಷಿಸುತ್ತಿರು. ನಾನು ಜಾಗ್ರತೆ

ರಕ್ಷ ಸೀತಾ ಮಹಂ ಯಾಮಿ ಮೃಗಮಾನೇತು ಮೋಜಸಾ ।
ರಕ್ಷೋ ಗತ್ವಾ ಕಿಯದ್ದೂರಂ ರಾಮವಾಚಾಽಹ ಲಕ್ಷ್ಮಣಂ ॥೭೫॥

ಭ್ರಾತರ್ಮಾಂ ರಕ್ಷರಕ್ಷೇತಿ ರಾಕ್ಷಸೋ ಮಾಂ ನಿಹಂತಿ ವೈ ।
ಶ್ರುತ್ವಾ ರಾಮವಚಃ ಸೀತಾ ಲಕ್ಷ್ಮಣಂ ಪ್ರಾಹ ಗಚ್ಛತು ॥೭೬॥

ಭವಾನ್ ಭ್ರಾತುರ್ಹಿ ರಕ್ಷಾರ್ಥಂ ಸ ಚ ಸೀತಾಮುವಾಚ ಹ ।
ಕೋ ಹಿ ರಾಮಂ ಕ್ಷಮೋ ಹಂತುಂ ತ್ರೈಲೋಕ್ಯೇ ಸಚರಾಚರೇ ॥೭೭॥

ತಿಷ್ಠೇದಾನೀಂ ಸ್ಥಿರಾ ಭೂತ್ವಾ ರಾಮೋ ಹತ್ವಾ ನಿಶಾಚರಂ ।
ಆಯಾಸ್ಯತಿ ಧ್ರುವಂ ಸೀತೆ ಚಿಂತಾಂ ಕರ್ತುಂ ಹಿ ನಾರ್ಹಸಿ ॥೭೮॥

ಶ್ರುತ್ವಾ ಸೌಮಿತ್ರಿವಾಕ್ಯಂ ಸಾ ತಮುವಾಚ ಖರಂ ಭೃಶಂ ।
ಸ ಚ ಕ್ರುದ್ಧಃ ಪ್ರಚಲಿತೋ ರಾಮಂ ದ್ರಷ್ಟುಂ ತ್ವರಾಽನ್ವಿತಃ ॥೭೯॥

ಲಬ್ಧ್ವಾಽಂತರಂ ರಾವಣೋಽಪಿ ಕೃತ್ವಾ ಪಾಷಂಡವೇಷಕಂ ।
ಜಹಾರ ಸೀತಾಮಾರೋಪ್ಯ ವಿಮಾನೇ ಸ್ವಪುರೀಂ ಯಯೌ ॥೮೦॥

---

ಯಾಗಿ ಹೋಗಿ ಆ ಮೃಗವನ್ನು ತರುವೆನು. ಎಂದು ಹೇಳಿ ಆ ಮೃಗವನ್ನು ಹಿಂಬಾಲಿಸಿ ಹೊರಟನು. ಮೃಗರೂಪಿಯಾದ ರಾಕ್ಷಸನು ಸ್ವಲ್ಪದೂರ ಓಡಿಹೋಗಿ, ಓ ತಮ್ಮನೇ, ನನ್ನನ್ನು ರಾಕ್ಷಸನು ಕೊಲ್ಲುತ್ತಿರುವನು. ನನ್ನನ್ನು ರಕ್ಷಿಸು. ಎಂದು ರಾಮನ ಧ್ವನಿಯಂತೆಯೇ ಕೂಗಿದನು. ||೭೪-೭೫||

ಸೀತೆಯು ರಾಮನ ಕೂಗನ್ನು ಕೇಳಿ ಭೀತಳಾಗಿ ಲಕ್ಷ್ಮಣನನ್ನು ಕುರಿತು, ನೀನು ಅಣ್ಣನನ್ನು ಕಾಪಾಡಲು ಕೂಡಲೇ ಹೋಗೆಂದಳು. ಸೀತೆಯನ್ನು ಕುರಿತು ಲಕ್ಷ್ಮಣನು ಹೀಗೆಂದು ಹೇಳಿದನು—ಓ ಸೀತಾದೇವಿಯೇ, ಚರಾಚರಾತ್ಮಕವಾದ ಮೂರು ಲೋಕಗಳಲ್ಲಿ ಶ್ರೀರಾಮನನ್ನು ಕೊಲ್ಲಲು ಯಾವನು ತಾನೆ ಸಮರ್ಥನು ? ಆದುದರಿಂದ ನೀನು ಸ್ವಸ್ಥಳಾಗಿರು. ರಾಮನು ನಿಶ್ಚಯವಾಗಿಯೂ ರಾಕ್ಷಸನನ್ನು ಕೊಂದು ಈಗಲೇ ಇಲ್ಲಿಗೆ ಬರುವನು. ಎಂದು ಸಮಾಧಾನ ಹೇಳಿದನು. ||೭೬-೭೭-೭೮||

ಲಕ್ಷ್ಮಣನ ಮಾತನ್ನು ಕೇಳಿ ಸೀತೆಯು ಕ್ರೂರವಾಗಿ ಮಾತನಾಡಲು ಲಕ್ಷ್ಮಣನು ಕೋಪಗೊಂಡು ರಾಮನನ್ನು ನೋಡಲು ಹೊರಟುಹೋದನು. ಈ

**ರಾಮೋಽಥ ಹತ್ವಾ ಮಾರೀಚಂ ನಿವೃತ್ತೋ ಲಕ್ಷ್ಮಣಂ ಪಥಿ ।**
**ದೃಷ್ಟ್ವಾ ನಿರ್ಭರ್ತ್ಸಯಾಮಾಸ ತತಃ ಸ್ವಾಶ್ರಮಮಾಗತಃ ॥೮೧॥**

**ಸೀತಾಮಸೌ ಚ ನಾಪಶ್ಯತ್ ಜ್ಞಾತ್ವಾ ರಾವಣ ಕರ್ಮ ತತ್ ।**
**ಹರಿಭಿಶ್ಚ ಸಮಂ ಪ್ರಾಯಾತ್ಕೂಲಂ ಲವಣವಾರಿಧೇಃ ॥೮೨॥**

**ಸೇತುಂ ಬಬಂಧ ಗಿರಿಭಿ ರಾನೀತೈರ್ವಾನರೈರ್ವನಾತ್ ।**
**ತೇನ ಸಿಂಧುಂ ಸಮುತ್ತೀರ್ಯ ಗತ್ವಾ ರಾವಣಪಾಲಿತಾಂ ॥೮೩॥**

**ಲಂಕಾಂ ತತ್ರ ರಾಕ್ಷಸಶ್ಚ ಯುಯುಧೇ ಸಹ ವಾನರೈಃ ।**
**ಕುಂಭಕರ್ಣಂ ರಾವಣಂ ಚ ಹತ್ವಾಽನ್ಯಾನಪಿ ರಾಕ್ಷಸಾನ್ ॥೮೪॥**

**ವಿಭೀಷಣಂ ರಾಕ್ಷಸಾನಾಮಧಿಪಂ ಸ ಚಕಾರ ತಂ ।**
**ನಿನ್ಯೇ ಸೀತಾಂ ತತೋ ರಾಮಃ ಪ್ರಾಪ್ತೋಽಯೋಧ್ಯಾಂ ಪುರೀಂ ಸ್ವಕಾಂ ॥**

---

ಅವಕಾಶದಲ್ಲಿ ರಾವಣನು ಪಾಷಂಡ ವೇಷವನ್ನು ಧರಿಸಿ ರಾಮಾಶ್ರಮಕ್ಕೆ ಬಂದು ಸೀತೆಯನ್ನು ಅಪಹರಿಸಿ ವಿಮಾನದಲ್ಲೇರಿಸಿಕೊಂಡು, ತನ್ನ ನಗರಿಯಾದ ಲಂಕೆಗೆ ಹೊರಟುಹೋದನು. ||೭೯-೮೦||

ಇತ್ತಲಾಗಿ ರಾಮನು ರಾಕ್ಷಸನನ್ನು ಕೊಂದು, ಹಿಂತಿರುಗಿ ಬರುವ ಮಾರ್ಗದಲ್ಲಿ ಲಕ್ಷ್ಮಣನನ್ನು ನೋಡಿ ಆಶ್ರಮದಲ್ಲಿ ಸೇತೆಯೊಬ್ಬಳನ್ನೇ ಬಿಟ್ಟು ಬಂದುದಕ್ಕೆ ಅವನನ್ನು ಆಕ್ಷೇಪಿಸಿ, ಆಶ್ರಮಕ್ಕೆ ಬಂದನು. ||೮೧||

ಆಶ್ರಮದಲ್ಲಿ ಸೀತೆಯನ್ನು ಕಾಣದಿರಲು ಇದು ರಾವಣನ ಕಾರ್ಯವೆಂದು ತಿಳಿದನು. ಅನಂತರದಲ್ಲಿ ರಾಮನು ಹನುಮಂತ ಸುಗ್ರೀವ ಮುಂತಾದ ಕಪಿವೀರರೊಡನೆ ಸಮುದ್ರದ ದಡವನ್ನು ಸೇರಿದನು. ||೮೨||

ತರುವಾಯ ರಾಮನು ಕಪಿಗಳು ಅರಣ್ಯಗಳಿಂದ ತೆಗೆದುಕೊಂಡು ಬಂದ ಪರ್ವತಗಳಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸಿ, ಅದರ ಮೂಲಕ ಸಮುದ್ರವನ್ನು ದಾಟಿ, ರಾವಣನಿಂದ ಪಾಲಿತವಾದ ಲಂಕೆಯನ್ನು ಮುತ್ತಿದನು. ಅಲ್ಲಿದ್ದ ರಾಕ್ಷಸನಾದ ರಾವಣನು ಕಪಿಗಳೊಡನೆ ಯುದ್ಧಮಾಡಿದನು. ||೮೩||

ರಾಮನು ಕುಂಭಕರ್ಣ ಮತ್ತು ರಾವಣನನ್ನು ಮತ್ತು ಇನ್ನೂ ಇತರ ರಾಕ್ಷಸರನ್ನೂ ಸಹ ಸಂಹರಿಸಿ ರಾವಣನ ತಮ್ಮನಾದ ವಿಭೀಷಣನಿಗೆ ರಾಕ್ಷಸಾಧಿ

ಭ್ರಾತೃಭಿಃ ಸಹಿತೋ ರೇಜೇ ಪೂರ್ಣಚಂದ್ರ ಇವಾನಿಶಂ ।
ಇತ್ಥಂ ದಶರಥಸ್ಯಾಹಂ ಪುತ್ರೋ ಭೂತ್ವಾ ದದೌ ಸುಖಂ ॥೮೬॥

ತಥಾ ತವಾಽಪಿ ಸಂದಾತುಂ ವಾಂಛಿತಂ ವರಮುತ್ತಮಂ ।
ಪುತ್ರತ್ವಮಾಗತಸ್ತ್ವದ್ಯ ದಾಸ್ಯೇ ಸುಖಮನುತ್ತಮಂ ॥೮೭॥

ತ್ವತ್ಪ್ರೀತ್ಯೈ ಸರ್ವಮೇತದುಕ್ತಂ ದತ್ತಂ ಚ ದರ್ಶನಂ ।
ವ್ರಜೇ ವೃಂದಾವನೇ ಚಾಹಂ ಕ್ರೀಡಿಷ್ಯೇ ಚಿರಮುತ್ಸುಕಃ ॥೮೮॥

ಇತ್ಯುಕ್ತ್ವಾ ನಂದಮಾಭಾಷ್ಯ ತತ್ರೈವಾಂತರ್ಹಿತೋ ವಿಭುಃ ।
ನಿದ್ರಾಭಂಗೇ ತದಾ ನಂದೋ ಮನಸೀದ ಮಚಿಂತಯತ್ ॥೮೯॥

ಆಶ್ಚರ್ಯ ಮೇ ತತ್ಸ್ವಪ್ನೇ ಮೇ ದೃಷ್ಟೇ ರಾಮಕಥಾಃ ಶುಭಾಃ ।
ಶ್ರುತ್ವಾ ಕ್ರಮೇಣ ಕಿಮಸೌ ವಿಷ್ಣುರ್ಜಾತೋ ಮಮಾತ್ಮಜಃ ॥೯೦॥

ಹರಿಬ್ರಹ್ಮೇಶ್ವರೇಂದ್ರಾದಿ ದೇವೈರಪಿ ಸುಪೂಜಿತಃ ।
ಸ ಕಥಂ ಪುತ್ರತಾಮದ್ಯ ಮಮಾಯಾತ ಸ್ತ್ರಿಲೋಕಪಃ ॥೯೧॥

---

ಪತ್ಯವನ್ನು ಕೊಟ್ಟನು. ಅನಂತರದಲ್ಲಿ ಸೀತಾ ಸಮೇತನಾಗಿ ತನ್ನ ರಾಜಧಾನಿಯಾದ ಅಯೋಧ್ಯಾಪಟ್ಟಣಕ್ಕೆ ಬಂದನು. ॥೮೪-೮೫॥

ಪೂರ್ಣಚಂದ್ರನಂತೆ ಸುಂದರನಾದ ಶ್ರೀರಾಮನು ಲಕ್ಷ್ಮಣನೇ ಮುಂತಾದ ತಮ್ಮಂದಿರೊಡನೆ ಪ್ರಕಾಶಿಸಿದನು. ಈ ರೀತಿಯಾಗಿ ನಾನು ದಶರಥನಿಗೆ ಪುತ್ರನಾಗಿ ಜನಿಸಿ ಪ್ರಪಂಚಕ್ಕೆ ಆನಂದವನ್ನುಂಟುಮಾಡಿದೆನು. ॥೮೬॥

ನಿನಗೂ ಸಹ ನಾನು ಉತ್ತಮವಾದ ವರವನ್ನು ಕೊಟ್ಟು ನಿನಗೆ ಪುತ್ರನಾಗಿ ಜನಿಸಿದೆನು. ನಿನಗೂ ಸಹ ಉತ್ತಮವಾದ ಆನಂದವನ್ನುಂಟುಮಾಡುವೆನು. ॥೮೭॥

ನಾರದನು ಹೇಳಿದನು — ಈರೀತಿಯಾಗಿ ಪ್ರಭುವಾದ ವಿಷ್ಣುವು ನಂದನಿಗೆ ಹೇಳಿ ಅಲ್ಲಿಯೇ ಅಂತರ್ಧಾನನಾದನು. ನಂದನಿಗೆ ನಿದ್ರಾಭಂಗವುಂಟಾಗಿ ಹೀಗೆ ಮನಸ್ಸಿನಲ್ಲಿ ಯೋಚಿಸಿದನು. ॥೮೯॥

ನನಗೆ ಸ್ವಪ್ನದಲ್ಲಿ ಮಂಗಳಕರವಾದ ಶ್ರೀರಾಮ ಕಥೆಯು ಕ್ರಮವಾಗಿ ತೋರಿತು. ಇದು ಬಹಳ ಆಶ್ಚರ್ಯವಾಗಿದೆ. ಬ್ರಹ್ಮಾ ಈಶ್ವರ ಇಂದ್ರಾದಿಗಳಿಂದ ಸೇವಿಸಲ್ಪಟ್ಟ, ಮೂರು ಲೋಕಗಳಿಗೆ ಒಡೆಯನಾದ ಸಾಕ್ಷಾದ್ವಿಷ್ಣುವು ನನ್ನ

ವತ್ಸೋ ಮೇ ಏಷ ಜಾತಶ್ಚ ಮಮ ಭಾಗ್ಯಂ ಚ ಉತ್ತಮಂ ।
ಕೃತಾರ್ಥೋಽಹಂ ನ ಸಂದೇಹೋ ಯದ್ವಿಷ್ಣುರ್ಮೇ ಸುತೋಽಭವತ್ ।
ಕೋನ್ಯೋ ಧನ್ಯತರೋ ಮತ್ತಃ ತ್ರಿಷು ಲೋಕೇಷು ವರ್ತತೇ ॥೯೨॥

ಇತ್ಥಂ ನಂದಃ ಸ್ವಪ್ನದೃಷ್ಟಂ ವಿಚಿಂತ್ಯ
ರಾತ್ರೇಃ ಶೇಷಂ ಜಾಗರೇಣೈವ ನೀತ್ವಾ ।
ಪ್ರಾತರ್ಹರ್ಷ್ಯೋ ಗೋಪಗೋಪೀಷು ಚೋಕ್ತ್ವಾ
ದದೌ ದಾನಂ ಶ್ರದ್ಧಯಾ ಸ ದ್ವಿಜೇಭ್ಯಃ ॥೯೩॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ
ನಾರದ ಶೌನಕ ಸಂವಾದೇ ಕೃಷ್ಣಜನ್ಮಾನುಕೀರ್ತನೇ
ನಂದದೃಷ್ಟಸ್ವಪ್ನವರ್ಣನಂ ನಾಮ ಷೋಡಶೋಽಧ್ಯಾಯಃ

---

ಪುತ್ರನಾಗಿ ಹುಟ್ಟಿರಬಹುದು. ಆ ವಿಷ್ಣುವು ನನ್ನ ಮಗನಾಗಿ ಹುಟ್ಟಲು ಏನು ಕಾರಣವಿರಬಹುದು ? ||೯೦-೯೧||

ಶ್ರೀವಿಷ್ಣುವೇ ನನ್ನ ಮಗನಾಗಿ ಹುಟ್ಟಿರುವನು. ನನ್ನ ಭಾಗ್ಯವು ಉತ್ತಮವಾದುದು. ನಿಜವಾಗಿಯೂ ನಾನು ಕೃತಾರ್ಥನೇ ಸರಿ. ನನ್ನಂತಹ ಅದೃಷ್ಟಶಾಲಿಗಳು ಮೂರು ಲೋಕಗಳಲ್ಲಿ ಯಾರೂ ಇಲ್ಲವು. ||೯೨||

ಹೀಗೆ ನಂದನು ಸ್ವಪ್ನ ವಿಚಾರವನ್ನು ಯೋಚಿಸುತ್ತಾ ಉಳಿದ ರಾತ್ರಿಯನ್ನು ಜಾಗರಣೆಯಲ್ಲಿಯೇ ಕಳೆದನು. ಬೆಳಗಾದ ಮೇಲೆ ಎಲ್ಲಾ ವಿಚಾರಗಳನ್ನು ಗೋಪಗೋಪಿಯರಿಗೆ ಸಂತೋಷದಿಂದ ತಿಳಿಸಿ ಬ್ರಾಹ್ಮಣರಿಗೆ ಅನೇಕ ದಾನಗಳನ್ನು ಕೊಟ್ಟನು. ||೯೩||

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ನಾರದ ಶೌನಕ ಸಂವಾದದಲ್ಲಿ ನಂದನ ಸ್ವಪ್ನವಿವರಣೆ ಎಂಬ ಹದಿನಾರನೆಯ ಅಧ್ಯಾಯವು ಸಮಾಪ್ತವಾಯಿತು.



॥ ಶ್ರೀಗಣೇಶಾಯನಮಃ॥

॥ ಓಂ ನಮೋ ಭಗವತೇ ವಾಸುದೇವಾಯ ॥

# ಆದಿಪುರಾಣಂ

## ॥ ಅಥ ಸಪ್ತದಶೋಽಧ್ಯಾಯಃ ॥

### ಹದಿನೇಳನೆಯ ಅಧ್ಯಾಯವು

**ಏವಂ ದಿನೇಷ್ವತೀತೇಷು ದಶಸ್ವಪಿ ಮಹಾಸುರಃ ।**
**ಕಂಸಃ ಸ್ವಪ್ನಂ ವ್ರಜೇ ಗಂತುಂ ದೃಷ್ಟ್ವಾ ಪ್ರಾಹ ಬಕಾನುಜಾಮ್ ॥೧॥**

**ಪೂತನೇ ತ್ವಂ ಸದೈವಾಸ್ಮತ್ಪ್ರಿಯಂ ಕರ್ತುಂ ಚಿಕೀರ್ಷಸಿ ।**
**ಅದ್ಯಸ್ವಪ್ನೇ ಮಯಾ ದೃಷ್ಟೋ ಬಾಲಕಃ ಕಾಲರೂಪವಾ಼ ॥೨॥**

**ತೇನ ಚೋಕ್ತಮಿದಂ ಭದ್ರೇ ಹನಿಷ್ಯೇ ತ್ವಾಂ ನ ಸಂಶಯಃ ।**
**ವರ್ಷೇ ಚೈಕಾದಶೇ ಪ್ರಾಪ್ತೇ ಮೂಢ ತಿಷ್ಠಾಮ್ಯಹಂ ವ್ರಜೇ ॥೩॥**

---

ಈರೀತಿಯಾಗಿ ಹತ್ತು ದಿನಗಳು ಕಳೆಯಲು ಕಂಸಾಸುರನು ಸ್ವಪ್ನದಲ್ಲಿ ಯಮಸ್ವರೂಪಿಯಾದ ಬಾಲಕನನ್ನು ನೋಡಿ, ಬಕನೆಂಬ ರಾಕ್ಷಸನ ತಂಗಿಯಾದ ಪೂತನಿಯನ್ನು ಕರೆಯಿಸಿ ಗೋಕುಲದಲ್ಲಿ ಸಂಚರಿಸಲು ಹೇಳಿ ಮತ್ತೆ ಇಂತೆಂದನು. ಓ ಪೂತನಿಯೇ, ನೀನು ನನಗೆ ಹಿತವನ್ನು ಬಯಸುವವಳಾಗಿರುವೆ. ಈ ದಿವಸ ನಾನು ಯಮರೂಪಿಯಾದ ಒಬ್ಬ ಬಾಲಕನನ್ನು ನನ್ನ ಸ್ವಪ್ನದಲ್ಲಿ ಕಂಡೆನು. ಆ ಬಾಲಕನು ನನ್ನನ್ನು ಕುರಿತು ಎಲೈ ಮೂಢನೇ, ನನ್ನ ಹನ್ನೊಂದನೆಯ ವಯಸ್ಸಿನಲ್ಲಿ ನಾನು ನಿನ್ನನ್ನು ಖಂಡಿತವಾಗಿಯೂ ಕೊಲ್ಲುವೆನು. ಇದರಲ್ಲಿ ಸಂದೇಹ ವಿಲ್ಲ. ನಾನು ಗೋಕುಲದಲ್ಲಿರುವೆನು ! ಎಂದು ಹೇಳಿದನು. ॥೧-೨-೩॥

ಸ್ವಪ್ನವಾರ್ತಾ ಹಿ ಮಿಥ್ಯೈವ ಕದಾಚಿತ್ಸತ್ಯತಾಂ ವ್ರಜೇತ್ ।
ಅತಸ್ತ್ವಯಾ ಹ್ಯನುಷ್ಠೇಯಂ ವ್ರಜೇ ಬಾಲವಿಹಿಂಸನಂ ॥೪॥

ತ್ವದ್ದೃಷ್ಟಿಪಥಮಾಯಾತಾ ನ ಹಿ ಜೀವಂತಿ ಬಾಲಕಾಃ ।
ತತ್ರ ಜೀವತಿ ಕಶ್ಚಿಚ್ಚೇತ್ಸಹಂತವ್ಯಃ ಪ್ರಯತ್ನತಃ ॥೫॥

ಬಲೇನ ಛಲರೋಷೇಣ ಹಂತವ್ಯೋ ನಿಶ್ಚಯೇನ ಚ ।
ಧರ್ಮೋಽಸ್ತಿ ನ ಹಿ ದೋಷೋಽಯಂ ಮಮ ಚಾಜ್ಞಾಮುರೀಕುರು ॥೬॥

ಅತೋ ಗತ್ವಾ ವ್ರಜೇ ಬಾಲಾ ನಿಹಂತವ್ಯಾ ನ ಸಂಶಯಃ ।
ತುಭ್ಯಂ ದಾಸ್ಯಾಮಿ ರತ್ನಾನಿ ರಾಜಭೋಗ್ಯಮನುತ್ತಮಂ ॥೭॥

ಇತಿ ಶ್ರುತ್ವಾ ವಚಃ ಪ್ರಾಹ ಪೂತನಾ ಬಾಲಘಾತಿನೀ ।
ಕಂಸಮಾಭಾಷ್ಯ ದೇವಾರಿಮಧೋಮುಖ ವಿಶಂಕಿತಾ ॥೮॥

ದುರ್ನಿಮಿತ್ತಾನಿ ದೃಷ್ಟಾನಿ ರಾತ್ರೌ ಸ್ವಪ್ನೇ ಮಯಾ ನೃಪ ।
ಕಥಯಾಮಿ ಶೃಣುಷ್ವ ತ್ವಂ ಕರಿಷ್ಯೇ ವಚನಂ ತವ ॥೯॥

---

ಸ್ವಪ್ನಾರ್ಥವು ಸುಳ್ಳಾದುದೇ ಸರಿ. ಆದರೂ ಅದು ಒಂದುವೇಳೆ ಸತ್ಯವಾದರೂ ಆಗಬಹುದು. ಆದ್ದುದರಿಂದ ನೀನು ಗೋಕುಲಕ್ಕೆ ಹೋಗಿ ಎಲ್ಲಾ ಬಾಲಕರನ್ನೂ ಕೊಲ್ಲಬೇಕು. ನಿನ್ನ ಎದುರಿಗೆ ಬಂದ ಬಾಲಕರೆಲ್ಲಾ ಮೃತರಾಗುವರು. ಹಾಗೆ ಯಾವನಾದರೂ ಬಾಲಕನು ಜೀವಿಸಿದುದೇ ಆದರೆ ಅಂತಹ ಬಾಲಕನನ್ನು ಪ್ರಯತ್ನಪೂರ್ವಕವಾಗಿ ಕೊಲ್ಲಬೇಕು. ||೪-೫||

ನೀನು ಬಲದಿಂದಲಾಗಲಿ, ಕಪಟದಿಂದಾಗಲೀ ಅಥವಾ ಕೋಪದಿಂದಾಗಲೀ ಖಂಡಿತವಾಗಿಯೂ ಬಾಲಕರನ್ನು ಕೊಲ್ಲಲೇಬೇಕು. ಹೀಗೆ ನೀನು ನನ್ನ ಆಜ್ಞಾನುಸಾರವಾಗಿ ಕೆಲಸಮಾಡುವುದರಿಂದ ನಿನಗೆ ಪುಣ್ಯವುಂಟಾಗುವುದೇ ಹೊರತು ದೋಷವಿಲ್ಲ. ಆದುದರಿಂದ ನೀನು ಗೋಕುಲಕ್ಕೆ ಹೋಗಿ ಬಾಲಕರನ್ನು ಕೊಲ್ಲು. ನಿನಗೆ ರಾಜಭೋಗಕ್ಕೆ ಯೋಗ್ಯವಾದ ಅನೇಕ ರತ್ನಗಳನ್ನು ಕೊಡುವೆನು. ||೬-೭||

ಕಂಸನ ಮಾತನ್ನು ಕೇಳಿ ಬಾಲಕರನ್ನು ನಾಶಗೊಳಿಸುವ ಪೂತನಿಯು ತನ್ನ ಮುಖವನ್ನು ಕೆಳಗೆ ಮಾಡಿಕೊಂಡು ಭೀತಿಯಿಂದ ದೇವತೆಗಳ ಶತ್ರುವಾದ ಕಂಸನನ್ನು ಕುರಿತು ಹೇಳಿದಳು. ಓ ದೊರೆಯೇ, ನಾನೂ ಸಹ ನನ್ನ ಸ್ವಪ್ನದಲ್ಲಿ ಅನೇಕ

ಸ್ತನಪ್ರದೇಶ ಪೀಡಾ ಮೇ ಅಕಸ್ಮಾದುತ್ಥಿತಾ ನೃಪ ।
ಪ್ರೇತೈರಾಲಿಂಗಿತಾ ನಗ್ನಾ ಜಪಾಕುಸುಮ ಮಾಲಿನೀ ।
ತೈಲಾಭ್ಯಕ್ತಾ ದಕ್ಷಿಣಾಶಾಂ ವ್ರಜಂತೀ ಮುಕ್ತಮೂರ್ಧಜಾ ॥೧೦॥

ಮಮ ಕ್ರೋಡಸ್ಥಿತಃ ಕಶ್ಚಿದ್ಬಾಲೋ ಮೇ ಪೀತವಾನ್ ಸ್ತನಂ ।
ನಿಪೀಡಿತಾಽಹಂ ನೃಪತೇ ಪತಿತಾ ಗತಜೀವಿತಾ ॥೧೧॥

ಉತ್ಥಿತಾ ನೃಪ ಗಾಯಂತೀ ಹಸಂತೀ ನೃತ್ಯತೀ ಭೃಶಂ ।
ಧಾವಂತೀ ಪತಿತಾ ಕೂಪೇ ಪರಿಶ್ರಾಂತಾಽಸೃಗ್ವಾಸವಂ ॥೧೨॥

ಪ್ರಪಿಬಂತೀ ನಿಮಗ್ನಾ ಚ ಶೈಲಾಗ್ರ ಪತಿತಾ ಭುವಿ ।
ಭಯಾದ್ವಿಗತ ನಿದ್ರಾಽಹಂ ಶೋಚಂತೀ ಪುನರುತ್ಥಿತಾ ॥೧೩॥

ಕ್ಷಣಮಾತ್ರಂ ನ ಸುಪ್ತಾ ಚ ಸ್ವಪ್ನದೃಷ್ಟಾರ್ಥ ಶಂಕಯಾ ।
ಇತಿ ಶ್ರುತ್ವಾ ವಚಸ್ತಸ್ಯಾಃ ಕಂಸೋ ವಚನಮಬ್ರವೀತ್ ॥೧೪॥

---

ದುರ್ನಿಮಿತ್ತಗಳನ್ನು ನೋಡಿದೆನು. ಆ ಸ್ವಪ್ನ ವಿಚಾರವನ್ನು ನಿನಗೆ ಹೇಳಿ ನೀನು ಹೇಳಿದ ಕಾರ್ಯವನ್ನು ನಡೆಸುವೆನು. ||೮-೯||

ಓ, ರಾಜನೇ, ನನ್ನ ಸ್ವಪ್ನವಿಚಾರವು ಹೀಗಿರುವುದು. ನನ್ನ ಸ್ತನಪ್ರದೇಶ ದಲ್ಲಿ ಅಕಸ್ಮಾತ್ ನೋವುಂಟಾಯಿತು. ಅನೇಕ ಪ್ರೇತಗಳಿಂದ ಆವರಿಸಲ್ಪಟ್ಟು, ದಿಗಂಬರಳಾಗಿಯೂ, ಕೆಂಪುದಾಸವಾಳದ ಪುಷ್ಪಮಾಲಿಕೆಯನ್ನು ಧರಿಸಿಯೂ, ತಲೆಗೆ ಎಣ್ಣೆಯನ್ನು ಹಚ್ಚಿಕೊಂಡು, ಕೂದಲನ್ನು ಕೆದರಿ, ನಾನು ದಕ್ಷಿಣಾಭಿಮುಖವಾಗಿ ಹೋದೆನು. ||೧೦||

ಆಗ ಒಬ್ಬ ಬಾಲಕನು ನನ್ನ ಎದೆಯಮೇಲೆ ಕುಳಿತುಕೊಂಡು ನನ್ನ ಸ್ತನ್ಯ ವನ್ನು ಪಾನಮಾಡಿದನು. ಇದರಿಂದ ನನಗೆ ಬಹು ಯಾತನೆಯಾಗಿ ಭೂಮಿಯಲ್ಲಿ ಮೃತಳಾಗಿ ಬಿದ್ದೆನು. ಆನಂತರದಲ್ಲಿ ಎದ್ದು ಗಾನಮಾಡಿ ಗಟ್ಟಿಯಾಗಿ ನಕ್ಕೆನು. ಹಾಗೆಯೇ ಓಡುತ್ತಾ ಹೋಗಿ ಒಂದು ಹಳ್ಳದಲ್ಲಿ ಬಿದ್ದು ಮದ್ಯಕೂಡಿದ ರಕ್ತವನ್ನು ಪಾನಮಾಡಿದೆನು. ಪುನಃ ಆ ರಕ್ತದಲ್ಲಿಯೇ ಮುಳುಗಿ ಪರ್ವತದ ಮೇಲ್ಭಾಗದಿಂದ ಭೂಮಿಯ ಮೇಲೆ ಬಿದ್ದೆನು! ಆಗ ನನಗೆ ಬಹುಭಯವಾಗಿ ಎಚ್ಚರವಾಗಲು, ನನ್ನ ಸ್ವಪ್ನಭಂಗವಾಯಿತು. ಅನಂತರದಲ್ಲಿ ಬಹಳ ಹೆದರಿಕೆಯಿಂದ ನನಗೆ ಪುನಃ

ಕೈತವೇ ತೇ ಭಯಂ ನಾಸ್ತಿ ದೇವೈಶ್ಚ ಕಿಮು ಮಾನುಷಾತ್ ।
ತತ್ರಾಪಿ ಬಾಲಕೇಭ್ಯಸ್ತೇ ಮರಣಂ ಭವಿತಾ ನ ಹಿ ॥೧೫॥

ನ ಹಿ ಸ್ವಪ್ನಗತಂ ಕಿಂಚಿತ್ಸತ್ಯಂ ಭವಿತು ಮರ್ಹತಿ ।
ಸ್ವಪ್ನೇ ದೃಷ್ಟಾನ್ಯರಿಷ್ಟಾನಿ ವಸುದೇವ ಸುತೋ(ತೇ)ಭವೇತ್ ॥೧೬॥

ತೇನೈವಾತ್ಮವಧಂ ಚೈವ ದೃಷ್ಟ್ವಾ ಭೀತವದುತ್ಥಿತಃ ।
ಗತೋಽಹಮಾಕುಲತರೋ ವಸುದೇವ ನಿಕೇತನಂ ॥೧೭॥

ತತ್ರ ದೃಷ್ಟ್ವಾ ಮಯಾ ಕನ್ಯಾ ದೇವಕ್ಯಾಂ(ಕ್ಯಂ)ಕಗತಾ ಹಿ ಸಾ ।
ಬಲಾದ್ಗೃಹೀತ್ವಾ ತಾಂ ಬಾಲಾಂ ಶಿಲಾಯಾಮುಕ್ಷಿಪಂ ತದಾ ॥೧೮॥

ತಾವದುತ್ಪತ್ಯ ಮದ್ಧಸ್ತಾದ್ಗತ್ವಾಽಕಾಶತಲೇಽಬ್ರವೀತ್ ।
ಕಿಂ ಮಯಾ ಹತಯಾ ಮಂದ ಸ ಜಾತಃ ಕುತ್ರ ತೇ ರಿಪುಃ ॥೧೯॥

---

ನಿದ್ರೆಯೇ ಬರಲಿಲ್ಲ. ಎಂದು ಹೇಳಿದಳು. ಪೂತನಿಯು ಹೇಳಿದ ಮಾತನ್ನು ಕೇಳಿ ಕಂಸನು ಅವಳನ್ನು ಕುರಿತು ಹೀಗೆಂದನು. ||೧೧-೧೨-೧೩-೧೪||

ನಿನಗೆ ಮೋಸವು ತಿಳಿದಿದೆ. ಆ ಮೋಸವಿರಲು ದೇವತೆಗಳು ಸಹ ನಿನಗೆ ಏನನ್ನೂ ಮಾಡಲಾರರು. ಹೀಗಿರಲು ಮನುಷ್ಯರು ಏನನ್ನು ಮಾಡಬಲ್ಲರು? ಅದರಲ್ಲಿಯೂ ಬಾಲಕರಿಂದ ನಿನಗೆ ಖಂಡಿತವಾಗಿಯೂ ಮರಣವು ಅಸಂಭವವೇ ಸರಿ. ಸ್ವಪ್ನದಲ್ಲಿ ನೋಡುವುದೆಲ್ಲವೂ ಸುಳ್ಳೇ ಹೊರತು ಯಾವಾಗಲೂ ಸತ್ಯವಾಗುವುದಿಲ್ಲವು. ಸ್ವಪ್ನದಲ್ಲಿ ನೋಡಿದ ಅರಿಷ್ಟಗಳು ವಸುದೇವನ ಪುತ್ರನಾದ ಶ್ರೀಕೃಷ್ಣನಿಗಿರಬಹುದು. ||೧೫-೧೬||

ಆ ವಸುದೇವ ಪುತ್ರನಿಂದ ನನಗೆ ಮರಣವುಂಟಾದಂತೆ ಕನಸಾಗಲು ಭಯದಿಂದ ಎಚ್ಚರಗೊಂಡು ವಸುದೇವನಿರುವಲ್ಲಿಗೆ ಹೋಗಿ ನೋಡಿದೆನು. ಅಲ್ಲಿ ದೇವಕಿಯು ಒಂದು ಹೆಣ್ಣು ಶಿಶುವನ್ನು ತನ್ನ ತೊಡೆಯಮೇಲೆ ಮಲಗಿಸಿಕೊಂಡಿದ್ದಳು. ನಾನು ಆ ಬಾಲಿಕೆಯನ್ನು ಬಲಾತ್ಕಾರದಿಂದ ತೆಗೆದುಕೊಂಡು ಕಲ್ಲಿನಮೇಲೆ ಎಸೆದೆನು. ||೧೭-೧೮||

ಆ ಬಾಲಿಕೆಯು ತನ್ನ ಕೈಯಿಂದ ತಪ್ಪಿಸಿಕೊಂಡು ಆಕಾಶಕ್ಕೆ ಹಾರಿ ನನ್ನನ್ನು ಕುರಿತು ಹೇಳಿದಳು. ಓ ಮೂಢನೇ, ನನ್ನನ್ನು ಕೊಲ್ಲುವುದರಿಂದ ಪ್ರಯೋಜನ

ತ್ವಾಂ ಹನಿಷ್ಯತ್ಯವಶ್ಯಂ ಸ ನಾತ್ರ ಕಾರ್ಯಾ ವಿಚಾರಣಾ ।
ಶ್ರುತ್ವೇತ್ಥಂ ವಚನಂ ತಸ್ಯಾ ಹ್ಯಭವದ್ವಿಪುಲಂ ಭಯಂ ॥೨೦॥

ಅಚಿಂತ್ಯರೂಪಮೇವಾಂತೇ ರಾತ್ರೌ ಸ್ವಪ್ನೇ ವಿಲೋಕಿತಮ್ ।
ಯಥಾ ತಥೋಕ್ತಂ ಕೈತವ್ಯೇ ತತ್ಕಾರ್ಯಂ ತ್ವಂ ತತಃ ಕುರು ॥೨೧॥

ಮಮ ಸ್ವಪ್ನಃ ಸತ್ಯ ಇವ ಪ್ರತಿಭಾತಿ ನ ಚಾನ್ಯಥಾ ।
ಬಾಲಃ ಕಾಲಸ್ವರೂಪೇಣ ದೃಷ್ಟಸ್ತೇ ಕಥಿತಂ ಮಯಾ ॥೨೨॥

ಮಮ ಪತ್ನ್ಯಾಃ ಪ್ರಿಯಾ ಘೋರಾ ಕೈತವೀ ರಾಕ್ಷಸೀ ಮತಾ ।
ತಸ್ಯಾಃ ಪುತ್ರೀ ಪೂತನಾ ತ್ವಂ ಜಾತಾ ಲೋಕಭಯಂಕರೀ ॥೨೩॥

ತ್ವಯಿ ಮೇ ತ್ವತಿವಿಶ್ವಾಸಃ ಕಾರ್ಯಗೌರವಸಾಧನೇ ।
ಅತೋ ಗಚ್ಛಸ್ವ ಘೋಷೇ ವೈ ಮಮ ಕಾರ್ಯ ಪರಾಯಣಾ ॥೨೪॥

---

ವೇನು? ನಿನ್ನ ಶತ್ರುವು ಎಲ್ಲಿ ಹುಟ್ಟಿರುವನು? ಆ ಶತ್ರುವು ಖಂಡಿತವಾಗಿಯೂ ನಿನ್ನನ್ನು ವಧಿಸುವನು. ಇದರಲ್ಲಿ ವಿಚಾರ ಮಾಡಬೇಕಾದುದಿಲ್ಲ. ಈ ಮಾತನ್ನು ಕೇಳಿ ನನಗೆ ಬಹಳ ಭೀತಿಯುಂಟಾಯಿತು. ||೧೯-೨೦||

ರಾತ್ರಿಯಲ್ಲಿ ಯೋಚಿಸಲೂ ಅಸಾಧ್ಯವಾದ ಸ್ವಪ್ನವು ನನಗೆ ಕಂಡಿತು. ನಾನು ಹೇಳಿದಂತೆ ನೀನು ಮೋಸಕೃತ್ಯವನ್ನು ನಡೆಯಿಸು. ನನ್ನ ಸ್ವಪ್ನವು ಸತ್ಯವಾದುದಾಗಿಯೇ ತೋರುತ್ತಿದೆ. ಸುಳ್ಳಾಗಲಾರದು. ಯಮಸ್ವರೂಪಿಯಾದ ಬಾಲಕನು ನನಗೆ ಸ್ವಪ್ನದಲ್ಲಿ ಕಂಡನೆಂಬ ವಿಚಾರವನ್ನು ಮೊದಲೇ ನಿನಗೆ ತಿಳಿಸಿರುವೆನು. ನೀನು ನನ್ನ ಪತ್ನಿಯ ಪ್ರಿಯಳೂ ಮತ್ತು ಮಾಯೆಯಲ್ಲಿ ಚತುರಳೂ ಆದ ಘೋರಾ ಎಂಬ ರಾಕ್ಷಸಿಯ ಮಗಳಾಗಿ ಲೋಕಕ್ಕೆ ಭಯವನ್ನುಂಟು ಮಾಡುವಳಾಗಿರುವೆ. ||೨೧-೨೨-೨೩||

ನನ್ನ ಕಾರ್ಯವನ್ನು ಸಾಧಿಸಲು ನೀನು ಶಕ್ತಳೆಂದು ತಿಳಿದು ನಾನು ನಿನ್ನಲ್ಲಿ ಬಹಳ ವಿಶ್ವಾಸವನ್ನಿಟ್ಟಿರುವೆನು. ಆದುದರಿಂದ ನನ್ನ ಕಾರ್ಯಸಾಧನೆಗಾಗಿ ಈಗಲೇ ಗೋಕುಲಕ್ಕೆ ಹೊರಡು. ||೨೪||

ಭಗಿನೀ ಮೇ ಮಹಾರಾಜ ಖ್ಯಾತಾ ನಾಮ್ನಾ ವೃಕೋದರೀ ।
ಸಾ ಬುದ್ಧಿಬಲಸಂಯುಕ್ತಾ ತಾಂ ದೃಷ್ಟ್ವಾ ಗಮ್ಯತೇ ಮಯಾ ॥೨೫॥

ಅಹಂ ವ್ರಜಂ ಗಮಿಷ್ಯಾಮಿ ಭಾವ್ಯಂ ಯದ್ಭವತಿ ಧ್ರುವಂ ।
ಇತ್ಯುಕ್ತ್ವಾ ಪೂತನಾ ಕಂಸಂ ಜಗಾಮ ಭಗಿನೀಂ ಪ್ರತಿ ॥೨೬॥

ಪಪ್ರಚ್ಛ ತಾಂ ವ್ರಜಂ ಯಾಮಿ ಬಾಲಕಾಘಾತಹೇತವೇ ।
ಅದ್ಯ ಸ್ವಪ್ನೇಽಶುಭೋ ದೃಷ್ಟಃ ಕಂಸೋ ಮಾಂ ಪ್ರೇಷಯತ್ಯತ ॥೨೭॥

ಕಿಂ ಕರೋಮಿ ವದಾಶು ತ್ವಂ ವಿಚಾರ್ಯ ಭಗಿನೀ ಮಮ ।
ಶ್ರುತ್ವೇತ್ಥಂ ಪೂತನಾವಾಕ್ಯಂ ವಚ ಆಹ ವೃಕೋದರೀ ॥೨೮॥

ಕಂಸೋಽಬ್ರವೀತ್ತದಾಜ್ಞಾ ವೈ ಪಾಲನೀಯಾ ಪ್ರಯತ್ನತಃ ।
ಅಸ್ಮಾಕಂ ಕೈತವಂ ಧರ್ಮಃ ಕೈತವ ಖ್ಯಾತಿಮಾಶ್ರಿತಾಃ ॥೨೯॥

ವಿಚರಾಮಃ ಪರದ್ರೋಹೇ ಕೃತಯತ್ನಾಃ ಸದೈವ ಹಿ ।
ಇಹಲೋಕೇ ಕದಾಚಿದ್ವೈ ನಾಸ್ಮಾಕಂ ಭಯಮಣ್ವಪಿ ॥೩೦॥

---

ಪೂತನಿಯು ಹೇಳಿದಳು. ಓ ಮಹಾರಜನೇ, ನನ್ನ ತಂಗಿಯಾದ ವೃಕೋದರೀ ಎಂಬುವಳು ಬಹಳ ಪ್ರಸಿದ್ಧಳಾಗಿರುವಳು. ಅವಳು ಬಹಳ ಚುರುಕಾದ ಬುದ್ಧಿಯುಳ್ಳವಳು. ಅವಳನ್ನು ನೋಡಿ ನಾನು ಗೋಕುಲಕ್ಕೆ ಹೋಗುವೆನು. ಮುಂದೆ ಏನು ಆಗುವುದೋ ಆಗಲಿ. ಎಂದು ಪೂತನಿಯು ಕಂಸನಿಗೆ ಹೇಳಿ ತಂಗಿಯಾದ ವೃಕೋದರಿಯನ್ನು ನೋಡಲು ಹೋದಳು. ||೨೫-೨೬||

ಪೂತನಿಯು ತನ್ನ ತಂಗಿಯಾದ ವೃಕೋದರಿಯ ಬಳಿಗೆ ಹೋಗಿ ಕೇಳಿದಳು. ಎಲೌ ಸಹೋದರಿಯೇ, ನಾನು ಈಗ ಬಾಲಕರನ್ನು ಸಂಹರಿಸಲು ಕಂಸನ ಆಜ್ಞೆಯಿಂದ ಗೋಕುಲಕ್ಕೆ ಹೊರಟಿರುವೆನು. ಆದರೆ ನನಗೆ ಈ ದಿವಸ ಅಶುಭವಾದ ಸ್ವಪ್ನವು ತೋರಿರುವುದು. ನಾನು ಏನನ್ನು ಮಾಡಬೇಕೆಂಬುದನ್ನು ಯೋಚಿಸಿ ಹೇಳು. ವೃಕೋದರಿಯು ಪೂತನಿಯ ಮಾತುಗಳನ್ನು ಕೇಳಿ ಹೀಗೆ ಹೇಳಿದಳು. ||೨೭-೨೮||

ಕಂಸನ ಆಜ್ಞೆಯೆಂದಮೇಲೆ ಪ್ರಯತ್ನಪಟ್ಟು ನಡೆಯಿಸಲೇಬೇಕು. ರಾಕ್ಷಸರಾದ ನಮಗೆ ಕಪಟಕೃತ್ಯವೇ ಧರ್ಮವಾಗಿರುವುದು. ಆ ಕಪಟದಿಂದಲೇ ಪ್ರಪಂಚ

**ವಿಧಾಯ ವೇಷಂ ಸುಸ್ತ್ರೀಣಾಂ ವ್ರಜಂ ಗಚ್ಛಸ್ವ ಸತ್ವರಮ್ ।**
**ಸ್ತನೌ ಗರಲಸಂಲಿಪ್ತೌ ಕೃತ್ವಾ ಮಾರಯ ಬಾಲಕಾನ್ ॥೩೧॥**

**ಆಗ್ರಹೇಣ ಪರಂ ಕಾರ್ಯಂ ಕರ್ತವ್ಯಂ ಸಕಲಂ ಹಿ ತೇ ।**
**ಕಂಸೇ ಪ್ರೀತೇ ಪಶ್ಯ ಸರ್ವಾಃ ಪ್ರೀತಾಃ ಸ್ಯುರ್ನಾತ್ರ ಸಂಶಯಃ॥೩೨॥**

**ಭಗಿನ್ಯುದಿತಮಾಕರ್ಣ್ಯ ಪೂತನಾ ಪುನರಾಯಯೌ ।**
**ಕಂಸಂ ಕಂಸಾನುಜಾನೀಹಿ ವೀಟಿಕಂ ಮೇ ಪ್ರಯಚ್ಛ ವೈ ॥೩೩॥**

**ಹತ್ವಾ ವ್ರಜಶಿಶೂನದ್ಯ ಆಗಮಿಷ್ಯಾಮ್ಯಹಂ ಪುನಃ ।**
**ಘಟೋದರೋ ಮಮ ಪತಿಃ ಖೇಲಿತುಂ ನಿರ್ಗತೋ ಬಹಿಃ ॥೩೪॥**

**ಕ್ರೀಡಿತ್ವಾ ಯಾವದಾಯಾತಿ ತಾವದಾಗಮನಂ ಮಮ ।**
**ಇತಿ ಶ್ರುತ್ವಾ ವಚಃ ಕಂಸೋ ದದೌ ತಸ್ಯೈ ಸುವೀಟಿಕಮ್ ॥೩೫॥**

---

ದಲ್ಲಿ ನಾವು ಪ್ರಸಿದ್ಧರಾಗಿರುವೆವು. ನಮಗೆ ಈ ಪ್ರಪಂಚದಲ್ಲಿ ಯಾರಿಂದಲೂ ಸ್ವಲ್ಪವೂ ಭೀತಿಯಿಲ್ಲವು. ॥೨೯-೩೦॥

ನೀನು ಸುಂದರ ಸ್ತ್ರೀವೇಷವನ್ನು ಧರಿಸಿ ಕೂಡಲೇ ಗೋಕುಲಕ್ಕೆ ಹೋಗು. ಸ್ತನಗಳಿಗೆ ಕಾಲಕೂಟ ವಿಷವನ್ನು ಸವರಿಕೊಂಡು ಬಾಲಕರಿಗೆ ಆ ಸ್ತನ್ಯವನ್ನು ಕೊಟ್ಟು ಸಂಹರಿಸುವವಳಾಗು. ನೀನು ಮಾಡುವ ಕಾರ್ಯವನ್ನು ಅವಶ್ಯವಾಗಿ ಮಾಡಬೇಕು. ಕಂಸನು ಪ್ರೀತನಾದರೆ ನಾವೆಲ್ಲರೂ ಪ್ರೀತರಾಗುವೆವು! ಇದರಲ್ಲಿ ಸಂಶಯವಿಲ್ಲ. ॥೩೧-೩೨॥

ತಂಗಿಯ ಮಾತನ್ನು ಕೇಳಿ ಪೂತನಿಯು ತಿರುಗಿ ಕಂಸನ ಬಳಿಗೆ ಬಂದು ಹೇಳಿದಳು. ಓ ಕಂಸನೇ, ನಾನು ಗೋಕುಲಕ್ಕೆ ಹೋಗುವೆನು. ನನಗೆ ತಾಂಬೂಲ ವನ್ನು ಕೊಡು. ಬಾಲಕರನ್ನೆಲ್ಲರನ್ನೂ ಕೊಂದು ಪುನಃ ಈ ದಿವಸವೇ ವಾಪಸು ಬರುವೆನು. ನನ್ನ ಪತಿಯಾದ ಘಟೋದರನು ಕ್ರೀಡೆಗಾಗಿ ಹೊರಗೆ ಹೋಗಿರುವನು. ಅವನು ಬರುವುದರೊಳಗೆ ನಾನು ಬಂದು ಸೇರುವೆನು. ಈ ಮಾತನ್ನು ಕೇಳಿ ಕಂಸನು ಪೂತನಿಗೆ ತಾಂಬೂಲವನ್ನು ಕೊಟ್ಟನು. ॥೩೩-೩೪-೩೫॥

ಬಹುಮಾನೇನ ಸಂಹೃಷ್ಟಃ ಪ್ರೇಷಯಾಮಾಸ ಗೋಕುಲಂ ।
ಯದಾ ಪ್ರಚರಿತಾ ಯೋಷಾ ಪೂತನಾ ಬಾಲಘಾತಿನೀ ॥೩೬॥

ಅರಿಷ್ಟಮಭವಚ್ಚಾಸ್ಯಾ ದಕ್ಷಿಣಾಂಗೇ ಚ ವೇಪಥುಃ ।
ಕಾಚಿತ್ಸಂಮುಖಮಾಗತ್ಯ ಪೂತನಾಯಾ ನ್ಯವೇದಯತ್ ॥೩೭॥

ಪತಿತಾ ವ್ಯಗ್ರ ಹೃದಯಾ ರುದತೀ ಮುಕ್ತಮೂರ್ಧಜಾ ।
ಶ್ರುತ್ವಾಽಥ ಪತಿತಾಽಶಂ ಸಾ ಪಪಾತ ಧರಣೀತಲೇ ॥೩೮॥

ಮುಮೂರ್ಛ ಚೇಷ್ಟಾ ಮಾಪನ್ನಾ ರುರೋದ ಚ ಭೃಶಂ ತತಃ ।
ಉತ್ಥಿತಾ ಚಲಿತಾ ದೃಷ್ಟ್ವಾ ಸ್ಖಲಿತಾ ಪತಿತಾಽಭವತ್ ॥೩೯॥

ವಿವಸ್ತ್ರಾ ಶೋಕಮೂಢಾ ಚ ದೀನಾ ಮುಕ್ತ ಶಿರೋರುಹಾ ।
ರುದತ್ಯೇವ ವ್ರಜಂ ಗಂತುಂ ನಾಶಕದ್ದುಃಖ ಸಂಪ್ಲುತಾ ॥೪೦॥

---

ಬಹುಮಾನದಿಂದ ಸಂತುಷ್ಟನಾದ ಕಂಸನು ಗೋಕುಲಕ್ಕೆ ಪೂತನಿಯನ್ನು ಕಳುಹಿಸಿದನು. ಬಾಲಕರನ್ನು ನಾಶಮಾಡಬೇಕೆಂದು ಪೂತನಿಯು ಸುಂದರ ಸ್ತ್ರೀ ವೇಷವನ್ನು ಧರಿಸಿ ಹೊರಡಲು ಅವಳಿಗೆ ಅನೇಕ ಅಶುಭಸೂಚನೆಗಳಾದುವು. ಬಲಭಾಗವು ಅದುರಿತು. ಒಬ್ಬ ಸ್ತ್ರೀಯು ಅವಳ ಮುಂಭಾಗದಲ್ಲಿ ಬಂದು ಅರಿಷ್ಟ ಗಳನ್ನೇ ಸೂಚಿಸಿದಳು. ||೩೬-೩೭||

ಅಶುಭಸೂಚನೆಯನ್ನು ಕಂಡು ಪೂತನಿಯು ಬಹಳ ದುಃಖದಿಂದ ಬಿದ್ದು ಅತ್ತಳು. ತಲೆಯು ಬಿಚ್ಚಿಹೋಯಿತು. ದುಃಖವನ್ನು ಸಹಿಸಲಾರದೆ ನೆಲದಮೇಲೆ ಬಿದ್ದು ಮೂರ್ಛಿತಳಾದಳು. ತಿರುಗಿ ಜ್ಞಾನವನ್ನು ಹೊಂದಿ ಬಹಳವಾಗಿ ರೋದನ ಮಾಡಿದಳು. ಅನಂತರ ಎದ್ದು ಸ್ವಲ್ಪದೂರ ಹೋಗಿ ಎಡವಿಬಿದ್ದಳು. ||೩೮-೩೯||

ಶೋಕದಿಂದ ವಸ್ತ್ರಗಳೂ ತಲೆಕೂದಲೂ ಬಿಚ್ಚಿಹೋದವು. ವ್ಯಸನದಿಂದ ಅಳುವ ಪೂತನಿಯು ಗೋಕುಲಕ್ಕೆ ತೆರಳಲು ಸಮರ್ಥಳಾಗಲಿಲ್ಲ. ||೪೦||

ನೋಲ್ಲಂಘನೀಯಾ ರಾಜಾಜ್ಞಾ ಚೇತಿ ಹಾ ಸಾ ಗತಾ ತ್ವರಾ ।
ಅಗಣಯ್ಯ ಚ ದುಃಖಾನಿ ಪ್ರಾಪ್ತಾಽಸೀದ್ವ್ರಜ ಸನ್ನಿಧಿಂ ॥೪೧॥

ವಿಧಾಯ ರೂಪಂ ಪರಮಂ ಘೋಷಲೋಕ ವಿಮೋಹನಂ ।
ವಿಲೋಕ್ಯ ಪೂತನಾರೂಪಂ ಮುಮುಹುಸ್ತೇ ವ್ರಜೌಕಸಃ ॥೪೨॥

ಮನೋ ಹರಂತೀ ಸರ್ವೇಷಾಂ ವಿಶಂತೀ ನಿಜಮಂದಿರಂ ।
ನ ವಾರಿತಾ ಸಾ ಕೇನಾಪಿ ಮನ್ಯಮಾನೇನ ತಾಂ ರಮಾಂ ॥೪೩॥

ಸ್ವಭಾಗ್ಯಮಭಿಲಂಘ್ಯಾಶು ಸ್ವಗೃಹೇ ಸಾ ಪ್ರವೇಶಿತಾ ।
ರೋಹಿಣೀ ಚ ಯಶೋದಾ ಚ ತಸ್ಯಾ ರೂಪಪ್ರಧರ್ಷಿತೇ ॥೪೪॥

ವಿಮೋಹಿತೇ ತದಾ ತಾಂ ತು ನ ವೈ ವಾರಯಿತುಂ ಕ್ಷಮೇ ।
ಇತಿ ಸಂಮೋಹಿತಾಃ ಸರ್ವೇ ವೀಕ್ಷಮಾಣಾ ವ್ರಜೌಕಸಃ ॥೪೫॥

---

ರಾಜನ ಅಪ್ಪಣೆಯನ್ನು ಮೀರಲು ಸಾಧ್ಯವಿಲ್ಲ! ಏನನ್ನು ಮಾಡಲಿ ? ಎಂದು ಯೋಚಿಸಿದಳು. ಅನಂತರದಲ್ಲಿ ದುಃಖವನ್ನು ಎಣಿಸದೆ ಜಾಗ್ರತೆಯಾಗಿ ಹೊರಟು ಗೋಕುಲದ ಸಮೀಪಕ್ಕೆ ಹೋದಳು. ||೪೧||

ಪೂತನಿಯು ಲೋಕವನ್ನು ಮೋಹಿಸುವಂತೆ ಸುಂದರ ಸ್ತ್ರೀವೇಷವನ್ನು ಧರಿಸಿ ಗೋಕುಲಕ್ಕೆ ಹೋದಳು. ಅವಳ ವೇಷವನ್ನು ನೋಡಿ ಎಲ್ಲರೂ ಮೋಹಿತರಾದರು. ಎಲ್ಲರ ಮನಸ್ಸನ್ನೂ ಎಳೆಯುತ್ತಾ ಎಲ್ಲರ ಮನೆಗೂ ಹೋದಳು. ಇವಳು ಸಾಕ್ಷಾತ್ ಲಕ್ಷ್ಮಿಯು ಎಂದು ಯಾರೂ ಪೂತನಿಯನ್ನು ತಡೆಯಲಿಲ್ಲ. ||೪೨-೪೩||

ಪೂತನಿಯು ತನ್ನ ಅದೃಷ್ಟವನ್ನು ಮೀರಿ ನಂದನ ಮನೆಗೆ ಹೋದಳು. ರೋಹಿಣಿ ಯಶೋದೆಯರು ಪೂತನಿಯ ರೂಪವನ್ನು ನೋಡಿ ಮುಗ್ಧರಾದರು. ಅವಳನ್ನು ಯಾರೂ ತಡೆಯಲಿಲ್ಲ. ಈರೀತಿಯಾಗಿ ಪೂತನಿಯನ್ನು ಗೋಕುಲದಲ್ಲಿರುವವರೆಲ್ಲರೂ ನೋಡಿದರು. ||೪೪-೪೫||

ಪೂತನಾ ಬಾಲರೂಪಂ ಮಾಂ ಮಾಲಿತಾಕ್ಷಂ ತು ಕೈತವ್ಯೈಃ ।
ಅಬುದ್ಧಾ(ಧ್ವಾ)ಮದ್ಬಲಂ ಮೂಢಾ ಜಗೃಹೇ ಸಾಂತಕಂ ತಥಾ॥೪೬॥

ವಿಮೋಹಕೈಸ್ತದಾ ವಾಕ್ಯೈ ರುದಂತಂ ಮಾಮಥಾಽಬ್ರವೀತ್ ।
ತ್ವಂ ಮೇ ಪ್ರಾಣಧನಂ ಬಾಲ ತವ ಮಾತಾಽಸ್ಮಿ ಸಾಂಪ್ರತಂ ॥೪೭॥

ಇತ್ಯುಕ್ತ್ವಾ ಗರಲಾಲಿಪ್ತಂ ಸ್ತನಂ ಮಮ ಮುಖೇ ದದೌ ।
ಯದಾಽಹಂ ನ ಪಿಬಾಮ್ಯಂಗ ವಕ್ಷಸ್ಯಾರೋಪ್ಯ ಪಾಲಿತ ॥೪೮॥

ಮಾತುರ್ವಾಕ್ಯಮಿವೋಕ್ತ್ವಾ ಚ ತದಾ ಸಂತೋಷಿತೋಽಸ್ಮ್ಯಹಂ ।
ಜನ್ಮಕೋಟಿಕೃತಂ ಕರ್ಮ ತಸ್ಯಾಃ ಕ್ಷೀಣಮಭೂತ್ ಕ್ಷಣಾತ್ ॥೪೯॥

ಸ್ತನೌ ತಸ್ಯಾಃ ಕರಾಭ್ಯಾಂ ಚ ಸಮಾಕೃಷ್ಯಾ ಪಿಬಂ ಪಯಃ ।
ಮಹಾಪಾಪ ನಿಮಗ್ನಾಸಾ ಮುಕ್ತಾಽಭೂನ್ಮತ್ಪ್ರಸಂಗತಃ ॥೫೦॥

ವಿಹಾಯ ಕೈತವಂ ರೂಪಂ ನಿಜರೂಪಂ ಸಮಾಗತಾ ।
ತೇಷಾಂ ವ್ಯಾಪಕದೇಹೇನ ಮಹದಾಸೀತ್ತದದ್ಭುತಮ್ ॥೫೧॥

---

ಪೂತನಿಯು ಬಾಲರೂಪನಾದ ನನ್ನ ಶಕ್ತಿಯನ್ನು ತಿಳಿಯಲಾರದೆ ತನ್ನ ಮಾಯೆ ಮತ್ತು ಮೋಸಗಳಿಂದ ತನಗೆ ಮೃತ್ಯುವಿನಂತಿರುವ ನನ್ನನ್ನು ಎತ್ತಿ ತೆಗೆದುಕೊಂಡಳು. ಅಳುತ್ತಿರುವ ನನ್ನನ್ನು ಕುರಿತು ಮನಸ್ಸಿಗೆ ಮೋಹವನ್ನುಂಟುಮಾಡುವ ಮಾತುಗಳಿಂದ ಹೀಗೆಂದು ಹೇಳಿದಳು. ಓ ಬಾಲಕನೇ, ನೀನೇ ನನ್ನ ಪ್ರಾಣಧನದಂತಿರುವೆ. ನಾನೇ ನಿನ್ನ ತಾಯಿಯೆಂದು ತಿಳಿ. ಅಳಬೇಡ. ॥೪೬-೪೭॥

ಪೂತನಿಯು ಹೀಗೆ ಹೇಳಿ ಕಾಲಕೂಟವಿಷವನ್ನು ಲೇಪಿಸಿರುವ ಸ್ತನವನ್ನು ನನ್ನ ಬಾಯಿಯಲ್ಲಿಟ್ಟಳು. ನಾನು ಆ ಸ್ತನವನ್ನು ಪಾನಮಾಡುವುದಕ್ಕೆ ಮುಂಚೆಯೇ ಪೂತನಿಯು ನನ್ನನ್ನು ಎದೆಯಮೇಲೆ ಕೂಡಿಸಿಕೊಂಡು ತಾಯಿಯು ಮಕ್ಕಳನ್ನು ಸಂತೋಷಗೊಳಿಸುವಂತೆ ಸಂತೋಷಗೊಳಿಸಿದಳು. ಹೀಗೆ ಮಾಡಿದುದರಿಂದ ಅನೇಕ ಕೋಟಿ ಜನ್ಮಗಳಿಂದ ಸಂಚಿತವಾದ ಪೂತನಿಯ ಪಾಪಗಳು ಕ್ಷಣದೊಳಗೆ ನಾಶವಾದುವು. ॥೪೮-೪೯॥

ಪೂತನಿಯ ಸ್ತನಗಳನ್ನು ನನ್ನ ಎರಡು ಕೈಗಳಿಂದ ಹಿಡಿದುಕೊಂಡು ಸ್ತನ್ಯಪಾನಮಾಡಿದೆನು. ನನ್ನ ಸಂಗದಿಂದ ಪೂತನಿಯು ಮಹಾ ಪಾಪಗಳಿಂದ ಮುಕ್ತಿ

ವರ್ಧಯಿತ್ವಾ ನಿಜಂ ದೇಹಂ ಮಹಾಶಬ್ದಮುಚ್ಚೇಕರೋತ್ ।
ನಿಪಪಾತ ಧರಾಯಾಂ ಚ ಮೃತಾಭೂದಚಿರೇಣ ಸಾ ॥೫೨॥

ತಸ್ಯಾ ದೇಹೇನ ಪತತಾ ತ್ರಿಗವ್ಯೂತಿದ್ರುಮಾ ಲತಾಃ ।
ಪತಿತಾಸ್ತತ್ಸ್ವನೇನಾಪಿ ಪೂರಿತಾಶ್ಚ ದಿಶೋ ದಶ ॥೫೩॥

ತಸ್ಯಾಂ ನಿಪತಮಾನಾಯಾಂ ಭೀತಾಸ್ತೇಽತಿವ್ರಜೌಕಸಃ ।
ರವವಿತ್ರಸ್ತಹೃದಯಾ ನಿಪೇತುರ್ಧರಣೀತಲೇ ॥೫೪॥

ವಿಕೀರ್ಯ ಕೇಶಾಂಶ್ಚರಣೌ ನಿಕ್ಷಿಪಂತೀ ಭುಜಾವಪಿ ।
ಖಿ(ಸ್ಬಿ)ನ್ನಗಾತ್ರಾ ತಥಾ ಸೌಮ್ಯ ಮುನೋಹ ಚ ಮಮಾರ ಸಾ ॥೫೫॥

ತತೋ ವ್ರಜೌಕಸೋ ಭೀತಾಃ ಸಮುತ್ಥಾಯ ಚಿರೇಣ ತು ।
ದದೃಶುಃ ಪತಿತಂ ದೇಹಂ ತಸ್ಯಾಶ್ಚಾತೀವ ಭೀಷಣಂ ॥೫೬॥

---

ಹೊಂದಿದಳು! ತಾನು ಮೋಸದಿಂದ ಹಾಕಿಕೊಂಡು ಬಂದಿದ್ದ ಸುಂದರವೇಷವನ್ನು ಬಿಟ್ಟು ನಿಜರೂಪವನ್ನು ತಾಳಿದಳು. ಅವಳ ದೊಡ್ಡ ಶರೀರದಲ್ಲಿ ಒಂದು ಬಹಳ ಆಶ್ಚರ್ಯಕರವಾದ ಸಂಗತಿಯು ಆಗ ನಡೆಯಿತು. ॥೫೦-೫೧॥

ಪೂತನಿಯು ತನ್ನ ಶರೀರವನ್ನು ದೊಡ್ಡದಾಗಿ ಮಾಡಿಕೊಂಡು ಭಯಂಕರವಾದ ದೊಡ್ಡ ಶಬ್ದವನ್ನು ಮಾಡಿದಳು. ಭೂಮಿಯಲ್ಲಿ ಬಿದ್ದ ಕೂಡಲೇ ಮೃತಳಾದಳು. ಬೀಳುತ್ತಿರುವ ಪೂತನಿಯ ಶರೀರದಿಂದ ಹೊರಟ ಶಬ್ದವನ್ನು ಸಹಿಸಲಾರದೆ ಮೂರು ಯೋಜನದ ಸಮೀಪವಿರುವ ಗಿಡ ಮರ ಲತೆಗಳೂ ಸಹ ಮುರಿದು ಬಿದ್ದುವು! ಎಲ್ಲಾ ದಿಕ್ಕುಗಳೂ ಶಬ್ದದಿಂದ ತುಂಬಿದುವು. ಗೋಕುಲದಲ್ಲಿದ್ದವರೆಲ್ಲರೂ ಆ ಶಬ್ದವನ್ನು ಕೇಳಿ ಭಯದಿಂದ ನಡುಗುವವರಾಗಿ ನೆಲದಮೇಲೆ ಬಿದ್ದರು. ॥೫೨-೫೩-೫೪॥

ಪೂತನಿಯು ತಲೆಕೂದಲನ್ನು ಕೆದರಿಕೊಂಡು ಬಾಹುಗಳನ್ನು ಇತ್ತಲಾಗಿ ಅತ್ತಲಾಗಿ ಹೊರಳಾಡಿಸಿದಳು. ಶರೀರದಲ್ಲಿ ಬಹಳ ವೇದನೆಯುಂಟಾಗಿ ಬಿದ್ದು ಮೂರ್ಛೆ ಹೊಂದಿ ಮೃತಳಾದಳು. ॥೫೫॥

ಅನಂತರದಲ್ಲಿ ಬಹಳ ಹೊತ್ತಿನಮೇಲೆ ಗೋಕುಲವಾಸಿಗಳು ಭಯವನ್ನು ಬಿಟ್ಟು ಎದ್ದರು. ಭಯಂಕರವಾದ ಅವಳ ಶರೀರವನ್ನು ನೋಡಿದರು. ಮಂದರ ಪರ್ವತಕ್ಕೆ ಸಮಾನವಾದ ಪೂತನಿಯ ಗುಹೆಯಂತಿರುವ ಮುಖವನ್ನು ನೋಡಲು

ಸರ್ವೇಽಭಿ ಜಗ್ಮುಸ್ತಂ ದ್ರಷ್ಟುಂ ಮುಖಂ ಕಂದರಸನ್ನಿಭಂ ।
ಫಾಲದಂತ ಸಮಾಕೀರ್ಣ ಗಿರಿಶೃಂಗೋಚ್ಚನಾಸಿಕಮ್ ॥೫೭॥

ಅಂಧಕೂಪ ಗಭೀರಾಕ್ಷಂ ವಾಪೀವತ್ಕರ್ಣಯುಗ್ಮಕಮ್ ।
ಶೈಲಗಂಡಸ್ತನಂ ಬಾಹುಯುಗಂ ಸೇತುಮಿವ ಸ್ಥಿತಂ ॥೫೮॥

ಆತಪ್ತತಾಮ್ರಕೇಶಾಂತಂ ಸಂತ್ರಾಸಾವಹ ಮೇವಚ ।
ಶುಷ್ಕಸರೋವದುದರಮುರುದ್ವಯ ಶಿಲೋಚ್ಚಯಮ್ ॥೫೯॥

ವಿಲೋಕ್ಯ ದೇಹಂ ತ್ರೇಸುಸ್ತೇ ಮುಮುಹುಸ್ತತ್ರ ದಾರುಣಂ ।
ಪೂರ್ವಂ ತಸ್ಯಾಃ ಸ್ವನೇನೈವ ಭಿನ್ನ ಹೃತ್ಕರ್ಣಮಸ್ತಕಾಃ ॥೬೦॥

ಚಿರಂ ಸಂಜ್ಞಾಮವಾಪುಸ್ತೇ ಗೋಪಾ ಗೋಪ್ಯಃ ಸುವಿಸ್ಮಿತಾಃ ।
ತಸ್ಯಾ ಉರಸ್ಥಿತಂ ಮಾಂ ತು ಜಗೃಹುರ್ಗೋಪಿಕಾಽಽದೃತಾಃ ॥೬೧॥

ಆದಾಯ ದದ್ಯುರ್ಮಾಂ ಮಾತ್ರೇ ಮೃತಂ ಪುನರಿವಾಗತಂ ।
ಕುಶಲಾವಯವಂ ದೃಷ್ಟ್ವಾ ಮಾತುರ್ಮೋದೋಽಭವನ್ಮನೇ ॥೬೨॥

---

ಎಲ್ಲರೂ ಬಂದರು ! ಪೂತನಿಯ ಮುಖವು ದೊಡ್ಡದಾದ ಹಣೆಯಿಂದಲೂ ಉದ್ದವಾದ ಹಲ್ಲುಗಳಿಂದಲೂ ಪರ್ವತದ ಶಿಖರದಂತೆ ಎತ್ತರವಾದ ನಾಸಿಕದಿಂದಲೂ ಸಹ ಕೂಡಿದ್ದಿತು. ॥೫೬-೫೭॥

ಪೂತನಿಯ ಕಣ್ಣುಗಳು ಕತ್ತಲೆಯುಳ್ಳ ಭಾವಿಗಳಂತಿದ್ದುವು. ಕಿವಿಗಳು ವಾಪಿಗಳಂತಿದ್ದುವು. ಸ್ತನಗಳು ಪರ್ವತದಲ್ಲಿರುವ ಅರೆಕಲ್ಲಿನ ಬಂಡೆಗಳಂತಿದ್ದುವು. ಬಾಹುಗಳು ಸೇತುವೆಗಳಂತಿದ್ದುವು. ಕೇಶಗಳು ಭಯಂಕರವಾಗಿಯೂ ಕಾಯಿಸಿದ ತಾಮ್ರದಂತೆ ಕೆಂಪಾಗಿಯೂ ಇದ್ದುವು. ಹೊಟ್ಟೆಯು ಒಣಗಿದ ಸರೋವರದಂತೆಯೂ, ಎರಡು ತೊಡೆಗಳು ಕಲ್ಲಿನ ಬಂಡೆಗಳಂತೆ ಕಠಿನವಾಗಿಯೂ ಇದ್ದುವು. ಹಿಂದೆಯೇ ಪೂತನಿಯ ಶಬ್ದಶ್ರವಣದಿಂದ ಚೂರಾದ ಹೃದಯ ಕಿವಿ ತಲೆಯುಳ್ಳ ಗೋಕುಲ ವಾಸಿಗಳು ಇಂತಹ ಭಯಂಕರವಾದ ದೇಹವನ್ನು ನೋಡಿ ಮೂರ್ಛೆಗೊಂಡರು. ॥೫೮-೫೯-೬೦॥

ಗೋಪಗೋಪಿಯರು ಬಹಳ ಹೊತ್ತಿನಮೇಲೆ ಎಚ್ಚರಗೊಂಡು ಆಶ್ಚರ್ಯ ಭರಿತರಾದರು. ಪೂತನಿಯ ಎದೆಯಮೇಲೆ ಕುಳಿತಿರುವ ನನ್ನನ್ನು ಆದರದಿಂದ

ಅಥ ಗೋಪ್ಯಃ ಸಮಾಗತ್ಯ ರಕ್ಷಾಂ ಮೇ ಚಕ್ರುರದ್ಭುತಾಂ ।
ಗವಾಂ ರಜೋಭಿರುದ್ವೃತ್ಯ ಗೋಮೂತ್ರೈಃ ಸ್ನಾನಕರ್ಮ ಚ ॥೬೩॥

ಗೋಪುಚ್ಛೈರ್ಭ್ರಾಮಯಿತ್ವಾಽಥ ಸುಜಲೈಃ ಸ್ನಾಪಯನ್ ಪುನಃ ।
ಸಂಸ್ನಾತಾಃ ಪ್ರಯತಾಶ್ಚೈವ ನ್ಯಾಸಂ ಚಕ್ರುರತಂದ್ರಿತಾಃ ॥೬೪॥

ಆತ್ಮನೋಽಂಗೇಷು ಪೂರ್ವಂ ತಾಂ ರಕ್ಷಾಂ ಕೃತ್ವಾ ತು ಮೇಽಂಗಕೇ ।
ನ್ಯಾಸಂ ಚಕ್ರುರ್ವಿಧಾನೇನ ಪ್ರಸಿದ್ಧೈರ್ವಿಷ್ಣುನಾಮಭಿಃ ॥೬೫॥

ಪಾದೌ ತು ಪಾತು ವಿಶ್ವಾತ್ಮಾ ಅಜೋ ವಿಷ್ಣುಶ್ಚ ಜಾನುನೀ ।
ಓಷ್ಠೌ ನರಕಜಿತ್ಪಾತು ಘ್ರಾಣಂ ಸೌಮಿತ್ರಿವತ್ಸಲಃ ॥೬೬॥

---

ಕರೆದುಕೊಂಡು ಗೋಪಿಯರು ನನ್ನ ತಾಯಿಯಾದ ಯಶೋದೆಗೆ ಕೊಟ್ಟರು. ಯಶೋದೆಯು ನನ್ನನ್ನು ಕರೆದುಕೊಂಡು ಎಲ್ಲಾ ಅವಯವಗಳಿಂದಲೂ ಕುಶಲಿಯಾದ ನನ್ನನ್ನು ನೋಡಿ ಸಂತೋಷಗೊಂಡಳು. ||೬೧-೬೨||

ಅನಂತರ ಗೋಪಿಯರು ಬಂದು ನನಗೆ ಅದ್ಭುತವಾದ ರಕ್ಷೆಯನ್ನು ಮಾಡಿದರು. ಗೋಧೂಳಿಯಿಂದ ಮೈಯನ್ನೆಲ್ಲವನ್ನೂ ಉಜ್ಜಿ ಗೋಮೂತ್ರದಿಂದ ಸ್ನಾನ ಮಾಡಿಸಿದರು. ಗೋಬಾಲಗಳಿಂದ ಬೀಸಿ ಪುನಃ ಶುದ್ಧೋದಕ ಸ್ನಾನವನ್ನು ಮಾಡಿಸಿದರು. ಗೋಪಿಯರೆಲ್ಲರೂ ಸ್ನಾನಮಾಡಿ ಇಂದ್ರಿಯನಿಗ್ರಹಪೂರ್ವಕವಾಗಿ ಅಂಗನ್ಯಾಸ ಕರನ್ಯಾಸಗಳನ್ನು ಮೊದಲು ತಮಗೂ ಆಮೇಲೆ ನನಗೂ ಮಾಡಿದರು. ||೬೩-೬೪||

ಗೋಪಿಯರು ತಮ್ಮ ತಮ್ಮ ಮನೆಗಳಲ್ಲಿಯೂ ಸಹ ನನಗೆ ರಕ್ಷೆಯನ್ನು ಮಾಡಿದರು. ನನ್ನ ಅವಯವಗಳಲ್ಲಿ ಪ್ರಸಿದ್ಧವಾದ ವಿಷ್ಣುನಾಮಗಳಿಂದ ವಿಧಿವತ್ತಾಗಿ ರಕ್ಷಾಬಂಧನೆಯನ್ನು ಮಾಡಿದರು. ಹೇಗೆಂದರೆ, ಪ್ರಪಂಚರೂಪಿಯಾದ ಭಗವಂತನು ಪಾದಗಳನ್ನು ರಕ್ಷಿಸಲಿ. ಬ್ರಹ್ಮನೂ ವಿಷ್ಣುವೂ ಸಹ ಮೊಣಕಾಲನ್ನು ಕಾಪಾಡಲಿ. ನರಕರಾಕ್ಷಸನನ್ನು ಸಂಹರಿಸಿದ ಭಗವಂತನು ತುಟಿಗಳನ್ನು ರಕ್ಷಿಸಲಿ. ಲಕ್ಷ್ಮಣನಲ್ಲಿ ವಾತ್ಸಲ್ಯವುಳ್ಳ ರಾಮನು ಮೂಗನ್ನು ಕಾಪಾಡಲಿ. ||೬೫-೬೬||

ನೇತ್ರೇ ದೇವೇಶ್ವರಃ ಪಾತು ಭಾಲಂ ಭುವನಪಾಲಕಃ ।
ಕೇಶವಃ ಕೇಶವೃಂದಂ ಚ ಕೃಷ್ಣಃ ಸರ್ವತ್ರ ರಕ್ಷತು ॥೬೭॥

ಡಾಕಿನೀ ಶಾಕಿನೀ ಭೂತಪ್ರೇತ ಮಾತೃಗಣಾಶ್ಚಯೇ ।
ತಾವತ್ತೇ ಪಾಂತು ದೇಹಂ ನ್ವೈ ತತಃ ಸರ್ವೇ ಸಮೇತ್ಯ ಚ ॥೬೮॥

ಪೂತನಾಯಾಃ ಶರೀರಂ ಚ ಛಿತ್ವಾ ಛಿತ್ವಾ ಸುದೂರತಃ ।
ಕ್ಷಿಪ್ತ್ವಾ ಕಾಷ್ಠೈಶ್ಚ ಸಂವೇಷ್ಟ್ಯ ದಾಹಯಾಂಚಕ್ರುರಂಜಸಾ ॥೬೯॥

ದಹ್ಯಮಾನಸ್ಯ ದೇಹಸ್ಯ ಧೂಮೋಽಭೂದತಿಸೌರಭಃ ।
ಕೃಷ್ಣಾಽಗುರೋರಪಿ ಮಹಾನ್ ಕೃಷ್ಣಾಂಗಸ್ಪರ್ಶಕಾರಣಾತ್ ॥೭೦॥

ನ ತನ್ಮುಕ್ತೌ ಭ್ರಮಃ ಕಾರ್ಯಃ ಪಾಪರಾಶೇರಪಿ ಧ್ರುವಂ ।
ಮದಂಗಸ್ಪರ್ಶಯೋಗೇನ ಕಿಂಭವೇನ್ನಹಿಭೂತಲೇ ॥೭೧॥

ಅಂತರ್ಮನಸಿ ಮಾಂ ಯೇ ಚ ಚಿಂತಯೇಯುಃ ಸಕೃನ್ಮುದಾ ।
ತೇಷಾಂ ಮುಕ್ತಿರ್ಭವೇದೇವ ಕಿಂ ಪುನರ್ಮೇಽಂಗಸಂಗತಃ ॥೭೨॥

---

ಇಂದ್ರನು ನೇತ್ರಗಳನ್ನು ರಕ್ಷಿಸಲಿ. ಪ್ರಪಂಚ ರಕ್ಷಕನಾದ ಈಶ್ವರನು ಹಣೆಯನ್ನು ರಕ್ಷಿಸಲಿ. ಕೇಶವನು ಕೂದಲುಗಳನ್ನು ರಕ್ಷಿಸಲಿ. ಎಲ್ಲಾ ಅಂಗಗಳನ್ನೂ ಕೃಷ್ಣನು ರಕ್ಷಿಸಲಿ. ಡಾಕಿನೀ ಶಾಕಿನೀ ಮುಂತಾದ ಭೂತಪ್ರೇತಗಳೂ ಬ್ರಾಹ್ಮೀ ಮಾಹೇಶ್ವರೀ ಮುಂತಾದ ಮಾತೃಕಾಗಣಗಳೂ ಸಹ ಸೇರಿ ನಿನ್ನ ಶರೀರವನ್ನು ಕಾಪಾಡಲಿ. ಎಂದು ರಕ್ಷೆಯನ್ನು ಮಾಡಿ, ಅವರು ॥೬೭-೬೮॥

ಅನಂತರದಲ್ಲಿ ಪೂತನಿಯ ಶರೀರವನ್ನು ತುಂಡು ತುಂಡುಮಾಡಿ ದೂರ ತೆಗೆದುಕೊಂಡು ಹೋಗಿ ಕಾಷ್ಠಗಳಿಂದ ಸುಟ್ಟರು. ಸುಡುತ್ತಿರುವ ಶರೀರದಿಂದ, ಶ್ರೀಕೃಷ್ಣನ ಸಂಪರ್ಕವಾಗಿದ್ದುದರಿಂದ ಅಗುರುವಿಗಿಂತಲೂ ಪರಿಮಳವಾದ ಹೊಗೆಯು ಹೊರಟಿತು. ॥೬೯-೭೦॥

ನನ್ನ ಶರೀರ ಸಂಪರ್ಕವು ಪೂತನಿಗೆ ಆಗಿದ್ದುದರಿಂದ ಅವಳ ಪಾಪವು ಹೋಯಿತೆಂಬ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ. ಯಾರು ನನ್ನನ್ನು ಒಂದಾವೃತ್ತಿ ಮನಸ್ಸಿನಲ್ಲಿ ಸಂತೋಷದಿಂದ ಧ್ಯಾನಿಸುವರೋ ಅವರು ಮುಕ್ತರಾಗುವರು. ಅಂದ

ಅಹಂ ವೈ ಪರಮಂ ಬ್ರಹ್ಮ ಸರ್ವವ್ಯಾಪಿ ಸನಾತನಂ ।
ಯಜನಾತ್ ಧ್ಯಾನತೋ ಮಹ್ಯಂ ಸದ್ಯೋ ಮುಕ್ತಿರ್ಭವೇತ್ ಧ್ರುವಂ॥೭೩॥

ಆತ್ಮಾಽಹಂ ಪರಮಾತ್ಮಾಚ ಅಹಂ ಧರ್ಮಶ್ಚ ಶಾಶ್ವತಃ ।
ಅಹಂ ಸತ್ಯಮಹಂ ಜ್ಞಾನಂ ಶಾಶ್ವತಾಽನಂತಸೌಖ್ಯಯುಕ್ ॥೭೪॥

ಮಚ್ಚಿಂತನಾನ್ಮದ್ಯಜನಾನ್ಮಮ ಸಾಧನತಸ್ತಥಾ ।
ಜಪನಾಲ್ಲಪನಾತ್‌ಸೌಮ್ಯ ಸರ್ವಸಿದ್ಧಿರ್ವಿನಿಶ್ಚಿತಾ ॥೭೫॥

ಮದಂಗಸ್ಪರ್ಶಯೋಗೇನ ಕಿನ್ನ ಸಿದ್ಧಿರ್ಭವಿಷ್ಯತಿ ॥೭೬॥

|| ನಾರದ ಉವಾಚ ||

ದೇವದೇವ ವ್ರಜೇಶಾದ್ಯ ಶ್ರುತಂ ತೇ ವಚನಂ ಮಹತ್ ।
ಅಹಂ ತೇ ಸತತಂ ಭೃತ್ಯಸ್ತ್ವಂ ಮೇ ನಾಥಶ್ಚಿರಂ ತತಃ ॥೭೭॥

---

ಮೇಲೆ ನನ್ನ ಅಂಗಸ್ಪರ್ಶವಾದಮೇಲೆ ಹೇಳಬೇಕಾದುದೇನಿದೆ? ಪೂತನಿಗೆ ನನ್ನ ಅಂಗಸ್ಪರ್ಶದಿಂದ ಮುಕ್ತಿಯು ದೊರಕಿತು. ||೭೧-೭೨||

ನಾನು ಎಲ್ಲಾ ಕಡೆಗಳಲ್ಲಿಯೂ ಇರುವ ಅನಾದಿಯಾದ ಬ್ರಹ್ಮನಾಗಿರುವೆನು. ಜನರು ನನ್ನನ್ನುದ್ದೇಶಿಸಿ ಯಾಗಮಾಡುವುದರಿಂದಲೂ ಭಜಿಸುವುದರಿಂದಲೂ, ಧ್ಯಾನಮಾಡುವುದರಿಂದಲೂ, ಸಹ ಕೂಡಲೇ ಮುಕ್ತಿಯನ್ನು ಹೊಂದುವರು. ಜೀವಾತ್ಮ ಪರಮಾತ್ಮರೂ ನಾನಾಗಿರುವೆನು. ಶಾಶ್ವತವಾದ ಧರ್ಮವೂ ನಾನೇ. ನಾನು ಸತ್ಯನಾಗಿಯೂ ಜ್ಞಾನರೂಪಿಯಾಗಿಯೂ, ನಿತ್ಯವಾದ ಆನಂದರೂಪಿಯಾಗಿಯೂ ಇರುವೆನು. ||೭೩-೭೪||

ನನ್ನನ್ನು ಧ್ಯಾನಿಸುವುದರಿಂದಲೂ ಪೂಜಿಸುವುದರಿಂದಲೂ ಶ್ರವಣಮನನಾದಿಗಳನ್ನು ಮಾಡುವುದರಿಂದಲೂ, ನನ್ನ ನಾಮವನ್ನು ಜಪಿಸುವುದರಿಂದಲೂ, ನನ್ನ ವಿಷಯವಾದ ಮಾತನ್ನು ಆಡುವುದರಿಂದಲೂ, ಸಹ ಮನುಷ್ಯನಿಗೆ ಎಲ್ಲಾ ಸಿದ್ಧಿಗಳೂ ಉಂಟಾಗುವುವು. ನನ್ನ ಶರೀರ ಸಂಗವುಂಟಾದರೆ ಎಂತಹ ಫಲ ಬರಬಹುದೆಂದು ಹೊಸದಾಗಿ ಹೇಳಬೇಕಾದುದೇ ಇಲ್ಲವು. ||೭೫-೭೬||

ಇತಿ ವಿಶ್ವಾಸಭಾವೇನ ತತಃ ಪೃಚ್ಛಾಮಿ ತೇಽನಘ ;
ಕಿಂ ಪುಣ್ಯಂ ಪೂರ್ವಮಸ್ಯಾಸ್ತು ಪೂತನಾಯಾ ಬಭೂವ ಹ ॥೭೮॥

ತವಾಂಗಸ್ಪರ್ಶನಂ ಲೋಕೇ ಯೋಗೀಶಾತ್ಯಂತದುರ್ಲಭಮ್
ತಪಸ್ವಿನಸ್ತಪೋ ಘೋರಂ ಕೃತ್ವಾಽಪಿ ಪರಮರ್ಷಯಃ ।
ಕಥಂಚಿದಪಿ ನ ಪ್ರಾಪ್ತಾ ಸ್ತವಾಂಗಸ್ಪರ್ಶನಂ ಮಹತ್ ॥೭೯॥

ಈಷದ್ವಿಸ್ಮಯಮಾನೋಽಹಂ ಶ್ರುತ್ವಾ ತಸ್ಯಾಸ್ತು ಸದ್ಗತಿಮ್ ॥೮೦॥

ಪೃಚ್ಛಾಮಿ ತ್ವಾಂ ಕೃಪಾಸಿಂಧೋ ಸಂಶಯಂ ಛೇತ್ತುಮರ್ಹಸಿ ॥೮೧॥

॥ ಶ್ರೀಕೃಷ್ಣ ಉವಾಚ ॥

ಸಾಧು ಪೃಷ್ಟಂ ತ್ವಯಾ ವಿಪ್ರ ಲೋಕಾನ್ ಸಾಧ್ವನುಗೃಹ್ಣತಾ ।
ಕಥಯಾಮಿ ಮುನಿಶ್ರೇಷ್ಠ ಪೂತನಾ ಪೂರ್ವಸಂಭವಂ ॥೮೨॥

ಯತ್ರಾಸೀತ್ಸಾ ಯಚ್ಚ ಕರ್ಮಾ ಕರೋದ್ವೈ
ಯಸ್ಮಾದಾಪ ಪ್ರಾಣಿ ಹಿಂಸಾಮವಶ್ಯಂ ।

---

ನಾರದನು ಹೇಳಿದನು. ಓ ದೇವದೇವನೇ, ಗೋಕುಲನಾಥನೇ, ನಿನ್ನ ಮಹತ್ವಾದ ಮಾತನ್ನು ಕೇಳಿದೆನು. ನಾನು ಯಾವಾಗಲೂ ನಿನಗೆ ಭೃತ್ಯನಾಗಿರುವೆನು. ನೀನು ನನಗೆ ಸ್ವಾಮಿಯಾಗಿರುವೆ. ಆದುದರಿಂದ ವಿಶ್ವಾಸದಿಂದ ಒಂದು ವಿಷಯವನ್ನು ಕೇಳುವೆನು. ಉತ್ತರವನ್ನು ಹೇಳು. ಏನೆಂದರೆ ಪೂತನಿಯು ಎಂತಹ ಪುಣ್ಯವನ್ನು ಹಿಂದಿನ ಜನ್ಮದಲ್ಲಿ ಮಾಡಿರುವಳು. ಏಕೆಂದರೆ ನಿನ್ನ ಅಂಗಸ್ಪರ್ಶವು ಯೋಗೀಶ್ವರರಿಗೂ ಸಹ ದೊರೆಯಲಾರದು. ಮಹರ್ಷಿಗಳು ಬಹಳ ಕಷ್ಟದಿಂದ ದೊಡ್ಡ ತಪಸ್ಸನ್ನಾಚರಿಸಿದರೂ ಸಹ ನಿನ್ನ ಪುಣ್ಯತಮವಾದ ಶರೀರಸಂಪರ್ಕವನ್ನು ಹೊಂದಲಿಲ್ಲವು. ಹೀಗಿರಲು, ॥೭೭-೭೮-೭೯॥

ಆ ಪೂತನಿಯು ಸದ್ಗತಿಯನ್ನು ಹೊಂದಿದಳೆಂಬ ಮಾತನ್ನು ಕೇಳಿ ಸ್ವಲ್ಪ ಆಶ್ಚರ್ಯವಾಯಿತು. ಆದುದರಿಂದ ಓ ದಯಾಶಾಲಿಯೇ, ನನಗುಂಟಾದ ಸಂದೇಹವನ್ನು ಹೋಗಲಾಡಿಸು. ॥೮೦-೮೧॥

ಶ್ರೀಕೃಷ್ಣನು ಹೇಳಿದನು—ಓ ಮುನಿಶ್ರೇಷ್ಠನೇ, ನಿನಗೆ ಮಂಗಳವಾಗಲಿ. ನೀನು ಲೋಕಕ್ಕೆ ಕಲ್ಯಾಣವನ್ನು ಬಯಸುವವನಾಗಿ ಪೂತನಿಯ ವಿಚಾರವನ್ನು

**ಸರ್ವಂ ತುಭ್ಯಂ ವಿಸ್ತರೇಣ ಬ್ರವೀಮಿ**
**ಶ್ರೋತುಂ ಶ್ರದ್ಧಾ ವಿದ್ಯತೇ ಚೇತ್ತವಾತ್ರ** ॥೮೩॥

**ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯ್ಯಾಸಿಕೇ ನಾರದ ಶೌನಕ ಸಂವಾದೇ ಪೂತನಾವಧೋ ನಾಮ ಸಪ್ತದಶೋಽಧ್ಯಾಯಃ**

---

ಕೇಳಲು ಆಶೆಯುಳ್ಳವನಾಗಿರುವೆ. ಆ ಪೂತನಿಯು ಎಲ್ಲಿದ್ದಳು? ಯಾವ ಕರ್ಮವನ್ನಾಚರಿಸಿದಳು? ಪ್ರಾಣಿಹಿಂಸೆಯನ್ನು ಏಕೆ ಮಾಡಿದಳು? ಇವೇ ಮುಂತಾದ ವಿಚಾರಗಳನ್ನು ವಿಸ್ತರಿಸಿ ಹೇಳುವೆನು. ನಿನಗೆ ಶ್ರದ್ಧೆಯಿರುವುದಾದರೆ ಕೇಳು. ॥೮೩॥

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ಪೂತನಿಯ ಸಂಹಾರವನ್ನು ತಿಳಿಸುವ ಹದಿನೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಅಷ್ಟಾದಶೋಽಧ್ಯಾಯಃ ||

## ಹದಿನೆಂಟನೆಯ ಅಧ್ಯಾಯವು

|| ಶ್ರೀಕೃಷ್ಣ ಉವಾಚ ||

**ಪುರಾ ಸರಸ್ವತೀ ತೀರೇ ವಸತಿ ಸ್ಮ ದ್ವಿಜೋತ್ತಮಃ ।**
**ಕಕ್ಷೀವಾನ್ ಪರಮಬ್ರಹ್ಮ ಧ್ಯಾತಾ ವಿಷ್ಣುಪರಾಯಣಃ ॥೧॥**

**ಜಿತೇಂದ್ರಿಯೋ ಜಿತಶ್ವಾಸಸ್ತಪಸ್ತೇಪೇ ಸುದುಷ್ಕರಂ ।**
**ಅಧಶ್ಶಿರಾಃ ಊರ್ಧ್ವಪಾದಃ ಸಮುತ್ಸಾಹಮನಾ ಭೃಶಂ ॥೨॥**

**ತಸ್ಯೈವಂ ತಪ್ಯಮಾನಸ್ಯ ತಪಸಾ ಭೂರಿತೇಜಸಃ ।**
**ತದಾಶ್ರಮಮನುಪ್ರಾಪ್ತಃ ಕಾಲಭೀರುರ್ಮಹಾತಪಾಃ ॥೩॥**

---

ಶ್ರೀಕೃಷ್ಣನು ಹೇಳಿದನು—ಪೂರ್ವದಲ್ಲಿ ಸರಸ್ವತೀ ನದಿಯ ತೀರದಲ್ಲಿ ವಿಷ್ಣುಭಕ್ತನೂ, ಪರಬ್ರಹ್ಮನನ್ನು ಧ್ಯಾನಿಸತಕ್ಕವನೂ ಆದ ಕಕ್ಷೀವಂತನೆಂಬ ಬ್ರಾಹ್ಮಣಶ್ರೇಷ್ಠನು ವಾಸಿಸುತ್ತಿದ್ದನು. ||೧||

ಆ ಬ್ರಾಹ್ಮಣೋತ್ತಮನು ಜಿತೇಂದ್ರಿಯನಾಗಿಯೂ, ಪ್ರಾಣಾಯಾಮಪರನಾಗಿಯೂ, ತಲೆಯನ್ನು ಕೆಳಮುಖವಾಗಿಯೂ ಪಾದಗಳನ್ನು ಊರ್ಧ್ವಮುಖವಾಗಿಯೂ ಇಟ್ಟು (ಶೀರ್ಷಾಸನದ ಸ್ಥಿತಿಯಲ್ಲಿದ್ದವನಾಗಿ) ಘೋರವಾದ ತಪಸ್ಸನ್ನಾಚರಿಸಿದನು. ||೨||

**ಸಪತ್ನೀಕಃ ಸುತಾಂ ರಮ್ಯಾಂ ಸಮಾದಾಯ ಸ್ವಯಂವರಾ ।**
**ನಾಮ್ನಾ ಚಾರುಮತೀಂ ಬಾಲಾಂ ಸರ್ವಾಭರಣಭೂಷಿತಾಂ ॥೪॥**

**ತಂ ಸಮಾಯಾಂತಮಾಲೋಕ್ಯ ಕಕ್ಷೀವಾನ್ ದ್ವಿಜಸತ್ತಮಃ ।**
**ಸಮುತ್ಥಾಯ ಸನಾತ್ತೂರ್ಣಂ ವಿಧಿನಾ ಸಮಪೂಜಯತ್ ॥೫॥**

**ತಾಂ ವಿಲೋಕ್ಯ ಮುನೇಃ ಕನ್ಯಾಂ ಚಕಮೇಽತಿ ಮನೋಹರಾಂ ।**
**ಸಾಽಪಿ ತಂ ಚಕಮೇ ಸ್ತ್ರೀಣಾಂ ಮನೋನಯನ ನಂದನಂ ॥೬॥**

**ಸಮೀಕ್ಷ್ಯ ಕಾಲಭೀರುಶ್ಚ ಸುತಾಯಾಸ್ತಂ ಮನೋರಥಂ ।**
**ದದೌ ತಸ್ಮೈ ಗುಣಾಢ್ಯಾಯ ಕನ್ಯಾಂ ಕಕ್ಷೀವಶರ್ಮಣೇ ॥೭॥**

---

ಈ ರೀತಿಯಲ್ಲಿ ತಪಸ್ಸನ್ನಾಚರಿಸುತ್ತಿದ್ದ, ತಪೋಮಹಿಮೆಯಿಂದ ಅತಿಶಯವಾದ ತೇಜಸ್ಸನ್ನು ಪಡೆದ, ಆ ಬ್ರಾಹ್ಮಣೋತ್ತಮನ ಆಶ್ರಮವನ್ನು ಕುರಿತು ಕಾಲಭೀರುವೆಂಬ ಮಹಾತಪಸ್ವಿಯು ಬಂದವನಾದನು. ॥೩॥

ಆ ಕಾಲಭೀರುವು ಪತ್ನೀ ಸಹಿತನಾಗಿ, ಅತಿ ಚೆಲುವೆಯಾಗಿಯೂ, ಸರ್ವಾಭರಣಗಳಿಂದ ಅಲಂಕೃತಳಾಗಿಯೂ, ಸ್ವಯಂವರಕ್ಕೆ ಸಿದ್ಧಳಾಗಿಯೂ, ಇರುವ ಚಾರುಮತಿಯೆಂಬ ಹೆಸರುಳ್ಳ ತನ್ನ ಮಗಳೊಂದಿಗೆ ಕಕ್ಷೀವಾನನ ಆಶ್ರಮವನ್ನು ಕುರಿತು ಬಂದನು. ॥೪॥

ತನ್ನ ಆಶ್ರಮಕ್ಕೇ ಬಂದ ಆ ತಪಸ್ವಿಯನ್ನು ನೋಡಿ ಬ್ರಾಹ್ಮಣೋತ್ತಮನಾದ ಕಕ್ಷೀವಾನನು ಶೀಘ್ರವಾಗಿ ತನ್ನ ಆಸನದಿಂದ ಮೇಲಕ್ಕೆದ್ದು, ಅವನನ್ನು ಶಾಸ್ತ್ರೋಕ್ತವಿಧಿಯಿಂದ ಪೂಜಿಸಿದನು. ॥೫॥

ಕಕ್ಷಿವಾನನು ತಪಸ್ವಿಯೊಂದಿಗಿರುವ ಸುಂದರಿಯಾದ ಆ ಕನ್ಯೆಯನ್ನು ನೋಡಿ ಅವಳನ್ನು ಕಾಮಿಸಿದನು. ಮುನಿಕನ್ಯೆಯಾದ ಚಾರುಮತಿಯೂ ಸಹ ಸ್ತ್ರೀಯರ ಮನಸ್ಸನ್ನೂ ಮತ್ತು ನೇತ್ರಗಳನ್ನೂ ಆನಂದಿಸುವಂತೆ ಮಾಡುವ ಆ ತರುಣ ತಪಸ್ವಿಯನ್ನು ಕಾಮಿಸಿದಳು. ॥೬॥

ಕಾಲಭೀರುವು ಮಗಳ ಮನೋರಥವನ್ನು ತಿಳಿದವನಾಗಿ ಅವಳನ್ನು ಸದ್ಗುಣಶಾಲಿಯಾದ ಕಕ್ಷಿವಾನನಿಗೆ ವಿವಾಹದಲ್ಲಿ ದಾನಮಾಡಿದನು. ॥೭॥

ದತ್ವಾ ಸಮ್ಯಗ್ವಿವಾಹೇ ತು ಕನ್ಯಾಂ ಕಮಲಲೋಚನಾಂ ।
ತಮುವಾಚ ಮಹಾಭಾಗಃ ಕಾಲಭೀರುಃ ಪ್ರಹರ್ಷಿತಃ ॥೮॥

॥ ಕಾಲಭೀರುರುವಾಚ ॥

ಮುನೇ ಕನ್ಯಾ ಪರಿತ್ಯಾಗಃ ಕರ್ತವ್ಯೋ ನ ಕದಾಚನ ।
ಪರತ್ರ ಭೀತ್ಯೈಃ ಪುರುಷೈರಿತಿ ಪ್ರೋಕ್ತಂ ಮಹರ್ಷಿಭಿಃ ॥೯॥

ದೇವವಿಪ್ರಾಗ್ನಿಸಾನ್ನಿಧ್ಯೇ ಪರಿಣೀತಾ ಹಿ ಕನ್ಯಕಾ ।
ಜ್ಞಾತಿದತ್ತಾ ಮಂತ್ರಪೂರ್ವಂ ನ ತ್ಯಾಜ್ಯಾ ಸಾ ಕದಾಚನ ॥೧೦॥

॥ ಕಕ್ಷೀವಾನುವಾಚ ॥

ಸತ್ಯಂ ತ್ಯಾಜ್ಯಾ ನ ಕುಲಜಾ ದೇವವಿಪ್ರಾಗ್ನಿ ಸನ್ನಿಧೌ ।
ಪರಿಣೀತಾ ಯದಾ ಗೃಹ್ಯ ಶ್ರುತ್ಯುಕ್ತ್ಯೈಃ ಸಂಮತಾ ಭವೇತ್ ॥೧೧॥

---

ಕಮಲದಂತೆ ಕಣ್ಣುಳ್ಳ ಕನ್ಯೆಯನ್ನು ವಿವಾಹಮಾಡಿಕೊಟ್ಟ ಕಾಲಭೀರುವು ಬಹು ಸಂತೋಷಗೊಂಡವನಾಗಿ ಕಕ್ಷೀವಾನನನ್ನು ಕುರಿತು ಹೀಗೆಂದು ಹೇಳಿದನು. ॥೮॥

ಕಾಲಭೀರುವು ಹೇಳಿದನು—ಎಲೈ ಮುನಿಯೇ, ಕನ್ಯೆಯನ್ನು ಪರಿಗ್ರಹಿಸಿದ ಪುರುಷರು ಅವಳನ್ನು ಪೋಷಿಸಲು ಅಶಕ್ತರಾಗಿಯಾಗಲೀ ಅಥವಾ ಕನ್ಯಾದೋಷದಿಂದ ಭೀತರಾಗಿಯಾಗಲೀ ಕನ್ಯೆಯನ್ನು ಎಂದಿಗೂ ಪರರ ಮನೆಯಲ್ಲಿ ತ್ಯಜಿಸಬಾರದು. ಎಂದು ದೊಡ್ಡವರಾದ ಮಹರ್ಷಿಗಳಿಂದ ಹೇಳಲ್ಪಟ್ಟಿರುತ್ತದೆ. ॥೯॥

ಈ ಕನ್ಯೆಯು ದೇವಬ್ರಾಹ್ಮಣ ಮತ್ತು ಅಗ್ನಿ ಇವರ ಸನ್ನಿಧಿಯಲ್ಲಿ ಮಾತಾ ಪಿತೃಗಳಿಂದ ಮಂತ್ರಪೂರ್ವಕವಾಗಿ ದಾನಮಾಡಲ್ಪಟ್ಟು ವರಿಸಲ್ಪಟ್ಟವಳಾಗಿರುತ್ತಾಳೆ. ಆದುದರಿಂದ ಇವಳನ್ನು ಎಂದಿಗೂ ತ್ಯಜಿಸಬಾರದು. ॥೧೦॥

ಕಕ್ಷೀವಾನನು ಹೇಳಿದನು - ಓ ಮುನಿಯೇ, ನಿನ್ನ ವಚನವು ಸತ್ಯವಾದುದಾಗಿರುತ್ತದೆ. ಸತ್ಕುಲಪ್ರಸೂತಳೂ ದೇವಬ್ರಾಹ್ಮಣ ಅಗ್ನಿ ಇವರ ಸನ್ನಿಧಿಯಲ್ಲಿ ಗೃಹ್ಯವಿಧಿಯಿಂದಲೂ ಮತ್ತು ವೇದ ಮಂತ್ರಗಳಿಂದಲೂ ವಿವಾಹಿತಳಾದ ಕನ್ಯೆಯು ತ್ಯಾಜ್ಯಳಲ್ಲವೆಂಬುದು ಮಾತ್ರವಲ್ಲದೆ ಸನ್ಮಾನಪಾತ್ರಳಾಗಿರುವಳು. ॥೧೧॥

ಪತಿವ್ರತಾ ಗುಣಗಣೈರುಪೇತಾ ಹ್ಯನುರಾಗಿಣೀ ।
ಸುಶೀಲಾ ಸತ್ಯಸಂಯುಕ್ತಾ ಗೃಹಕಾರ್ಯ ಪರಾಯಣಾ ॥೧೨॥

ಪತಿವ್ರತಾ ಬಂಧುಯುಕ್ತಾ ಆಗತೇಷ್ವತಿಥಿಷ್ವಪಿ ।
ಅತ್ಯಾದರ ಪರಾ ನಿತ್ಯಂ ನ ತ್ಯಾಜ್ಯಾ ಕುಲಜಾ ವಧೂಃ ॥೧೩॥

ಪತಿಧರ್ಮರತಾ ಯಾ ಚ ಅವಿಮುಕ್ತಕರಾ ಶುಭಾ ।
ಮಿಷ್ಟವಾಗನಸೂಯಾ ಚ ಕ್ರೋಧೇರ್ಷ್ಯಾಭಿಮಾನವರ್ಜಿತಾ ॥೧೪॥

ಕಠೋರವಾಕ್ಯಾ ನಿದ್ರಾಲುಃ ಪತಿದೂಷಣವಾದಿನೀ ।
ರತಾ ಪರಗೃಹದ್ವಾರಿ ತ್ಯಾಜ್ಯೈವೇತ್ಥಂವಿಧಾ ವಧೂಃ ॥೧೫॥

ಹೀನಜಾತಿರತಾ ನಾರೀ ಪಥಿ ಚಾನ್ಯ ನಿರೀಕ್ಷಣೀ ।
ಆತ್ಮಲಾವಣ್ಯನಿರತಾ ಸಂತ್ಯಾಜ್ಯೇತ್ಥಂವಿಧಾ ವಧೂಃ ॥೧೬॥

---

ಪತಿವ್ರತೆಯೂ, ದಯೆ, ಗುರುಭಕ್ತಿ ಮುಂತಾದ ಸದ್ಗುಣಗಳಿಂದ ಯುಕ್ತಳೂ, ಪತಿಯಲ್ಲಿ ಅನುರಾಗವುಳ್ಳವಳೂ, ಸದ್ವರ್ತನೆಯುಳ್ಳವಳೂ, ಸತ್ಯಸಂಧೆಯೂ, ಗೃಹಕೃತ್ಯಗಳಲ್ಲಿ ಶ್ರದ್ಧಾಳುವೂ, ಬಂಧುಗಳಿಂದ ಸಹಿತಳೂ, ಅನವರತವೂ ಅತಿಥಿಗಳನ್ನು ಸತ್ಕರಿಸುವವಳೂ ಮತ್ತು ಸತ್ಕುಲಪ್ರಸೂತಳೂ ಆದ ಕನ್ಯೆಯನ್ನು ಪರಿತ್ಯಜಿಸಬಾರದು. ॥೧೨-೧೩॥

ಮತ್ತು ಪತಿಧರ್ಮವನ್ನನುಸರಿಸುವವಳೂ, ದಾನಶೂರಳೂ, ಸುಶೀಲೆಯೂ, ಪ್ರಿಯಭಾಷಿಣಿಯೂ, ಅಸೂಯೆಯಿಲ್ಲದವಳೂ, ಕ್ರೋಧ, ಮತ್ಸರ, ಗರ್ವ ಮೊದಲಾದುವುಗಳಿಂದ ಬಿಡಲ್ಪಟ್ಟವಳೂ ಆದ ಕನ್ಯೆಯನ್ನು ಪರಿತ್ಯಜಿಸತಕ್ಕದಲ್ಲ. ॥೧೪॥

ನಿಷ್ಠುರವಾಕ್ಯಗಳನ್ನಾಡುವವಳೂ, ಸದಾ ನಿದ್ರೆಯನ್ನು ಮಾಡುವ ಸ್ವಭಾವವುಳ್ಳವಳೂ, ಪತಿಯನ್ನು ನಿಂದಿಸುವವಳೂ, ಪರರ ಗೃಹದಲ್ಲಿಯೇ ಸದಾ ಇರುವವಳೂ ಆದ ವಧುವನ್ನು ತ್ಯಜಿಸಬೇಕು. ॥೧೫॥

ಮತ್ತು ಅಧಮಜಾತಿಯ ಪುರುಷರಲ್ಲಿ ಆಸಕ್ತಳೂ, ಮಾರ್ಗದಲ್ಲಿ ಪರಪುರುಷರನ್ನು ನಿರೀಕ್ಷಿಸುವವಳೂ, ವಸ್ತ್ರ, ಮಾಲ್ಯ, ಆಭರಣ ಮುಂತಾದ ಅಲಂಕಾರ ವಸ್ತುಗಳಿಂದ ತನ್ನ ಸೌಂದರ್ಯವನ್ನು ಪ್ರಕಟಪಡಿಸುವುದರಲ್ಲಿಯೇ ಆಸಕ್ತಿಯುಳ್ಳವಳೂ ಆದ ವಧುವನ್ನು ಪರಿತ್ಯಜಿಸಬೇಕು. ॥೧೬॥

|| ಶ್ರೀಕೃಷ್ಣ ಉವಾಚ ||

ಇತ್ಯುಕ್ತ್ವಾ ತಂ ಮುನಿರ್ವಿಪ್ರಃ ಸಂತೋಷ ವಚನೈಃ ಶುಭೈಃ ।
ಕನ್ಯಾಯಾಸ್ತು ಕರಂ ತತ್ರ ಜಗೃಹೇ ವಿಧಿಪೂರ್ವಕಂ ||೧೭||

ಕಾಲಭೀರುರಥೋ ಕನ್ಯಾಂ ದತ್ವಾ ಕಕ್ಷೀವತೇ ತತಃ ।
ಸಪತ್ನೀಕಃ ಸಮಾಯಾತಃ ಸ್ವಾಶ್ರಮಂ ಮುದಿತೋ ಭೃಶಂ ||೧೮||

ಪ್ರಸ್ಥಿತೇ ಪಿತರಿ ಪ್ರಾಹ ಪತಿಧರ್ಮ ಪರಾಯಣಾ ।
ವಿಶ್ವೇಶೋ ಹರಿರೇವೈಕಃ ಸೇವ್ಯಃ ಸರ್ವ ಜನೈರಿಹ ||೧೯||

ಆವಯೋಃ ಸಮಯೋ ನೂನಂ ತತ್ಸೇವೋಪಯಿಕಃ ಪ್ರಭೋ ।
ಪತ್ನೀ ಪರಿಗ್ರಹೇ ನೂನಂ ಪತೀನಾಂ ನರಕಾಯ ಚ ||೨೦||

---

ಹೀಗೆಂದು ಹೇಳಿ ಆ ಬ್ರಾಹ್ಮಣೋತ್ತಮನು ಮನೋಹರವಾಗಿಯೂ, ಸಂತೋಷಕರವಾಗಿಯೂ ಇರುವ ವಚನಗಳಿಂದ ಮುನಿಯನ್ನು ಸಂತೈಸಿ ವಿಧಿ ಪೂರ್ವಕವಾಗಿ ಕನ್ಯೆಯ ಪಾಣಿಗ್ರಹಣವನ್ನು ಮಾಡಿದನು. ||೧೭||

ಬಳಿಕ ಕಾಲಭೀರುವು ತನ್ನ ಕನ್ಯೆಯನ್ನು ಕಕ್ಷೀವಾನನಿಗೆ ದಾನಮಾಡಿ ಹರ್ಷಗೊಂಡವನಾಗಿ ಪತ್ನಿಯೊಂದಿಗೆ ತನ್ನ ಆಶ್ರಮವನ್ನು ಕುರಿತು ತೆರಳಿದನು. ||೧೮||

ತಂದೆಯು ತನ್ನ ಆಶ್ರಮವನ್ನು ಕುರಿತು ತೆರಳಲಾಗಿ, ಪತಿವ್ರತೆಯಾದ ಆ ಕನ್ಯೆಯು ತನ್ನ ಪತಿಯನ್ನು ಕುರಿತು ಹೀಗೆಂದು ಹೇಳಿದಳು—ಓ ಪತಿದೇವನೇ, ಈ ಲೋಕದಲ್ಲಿ ಸರ್ವರಿಗೂ ಜಗದೀಶ್ವರನಾದ ಶ್ರೀಹರಿಯೊಬ್ಬನೇ ಭಜಿಸಲು ಯೋಗ್ಯನಾಗಿರುವನು. ನಮ್ಮಿಬ್ಬರಿಗೂ ಈ ಸಮಯವೇ ಹರಿಯನ್ನು ಸೇವಿಸಲು ಉಪಾಯ ರೂಪವಾಗಿರುತ್ತದೆ. ||೧೯||

ವಿಷಯಲಂಪಟರಾಗಿ ಕೃಷ್ಣನನ್ನು ಮನಸ್ಸಿನಲ್ಲಿ ಧ್ಯಾನಿಸದಿದ್ದರೆ ಪತಿಗಳಿಗೆ ಪತ್ನೀಪರಿಗ್ರಹವು ನರಕಕ್ಕೆ ಕಾರಣವಾಗಿರುತ್ತದೆ. ||೨೦||

ಯದಿ ಕೃಷ್ಣೋ ನ ಮನಸಿ ಧೃತೋ ವಿಷಯ ಲಂಪಟ್ಯೈಃ ।
ಏವಂ ಪ್ರಬೋಧಿತಃ ಪತ್ನ್ಯಾ ತತಃ ಪ್ರಾರಭ್ಯ ಶಕ್ತಿಮಾನ್ ॥೨೧॥

ಅಭೂತ್ಕರ್ಮ ಪರಿತ್ಯಜ್ಯ ಆತ್ಮನೋ ಬಂಧಮುಕ್ತಯೇ ।
ನ ಪಿಬತ್ಯಂಬು ಮಾತ್ರಂ ಹಿ ವಿನಾ ವಿಷ್ಣು ಸಮರ್ಪಿತಂ ॥೨೨॥

ಹರಿಂ ತ್ರೈಲೋಕ್ಯ ನಾಥಂ ಹಿ ಪ್ರತ್ಯಹಂ ತೋಷಯತ್ಯಲಂ ।
ಏವಂ ಗಚ್ಛತಿ ಕಾಲೇ ತು ಭಜತೋರುಭಯೋರಪಿ ॥೨೩॥

ನಿತ್ಯಂ ಹಿ ಕೃಷ್ಣಪದಯೋಃ ಪ್ರೀತಿರಾಸೀನ್ನಿರಂತರಂ ।
ಸ್ವಯಂ ವಕ್ತಿ ಕಥಾಂ ವಿಷ್ಣೋಃ ಪ್ರೀತ್ಯಾಚೈವ ಶೃಣೋತಿ ಸಃ ॥೨೪॥

ಸೇವತೇ ಚ ಸದಾ ವಿಷ್ಣುಂ ಪಾದಸೇವಾಂ ಕರೋತಿ ಚ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥೨೫॥

ಇತ್ಥಂ ನವವಿಧಾಂ ಭಕ್ತಿಂ ಕುರ್ವನ್ನನುದಿನಂ ದ್ವಿಜಃ ।
ನಯತ್ಯಹೋರಾತ್ರಯಾಮಾನ್ ಸ್ತ್ರಿಯಾ ಸಹ ಸದೈವ ಹಿ ॥೨೬॥

---

ಈರೀತಿಯಲ್ಲಿ ಪತ್ನಿಯಿಂದ ಬೋಧಿಸಲ್ಪಟ್ಟ ಕಕ್ಷೀವಾನನು ಅಂದಿನಿಂದ ಮೊದಲುಗೊಂಡು ತನ್ನ ತಪೋನುಷ್ಠಾನವಲ್ಲಿ ಫಲಾಸೆಯನ್ನು ಪರಿತ್ಯಜಿಸಿ ಸಂಸಾರ ಪಾಶದಿಂದ ಮುಕ್ತಿಯನ್ನು ಹೊಂದುವುದಕ್ಕೋಸ್ಕರ ಬದ್ಧಶ್ರದ್ಧನಾದನು. ॥೨೧॥

ಈ ಪ್ರಕಾರವಾಗಿ ಮೋಕ್ಷಾಪೇಕ್ಷಿಯಾದ ಕಕ್ಷೀವಾನನು ಪ್ರತಿದಿನವೂ ಹರಿಗೆ ಸಮರ್ಪಣೆಮಾಡದೆ ನೀರನ್ನು ಸಹ ಕುಡಿಯುತ್ತಿರಲಿಲ್ಲ. ಭಕ್ತಿಯಿಂದ ಹರಿಯನ್ನು ಸಂತೋಷಪಡಿಸುತ್ತಿದ್ದನು. ॥೨೨॥

ಈ ರೀತಿಯಲ್ಲಿ ಕೆಲವು ಕಾಲವು ಅತಿಕ್ರಮಿಸಲು ಶ್ರೀಕೃಷ್ಣನ ಪಾದಕಮಲ ಗಳನ್ನು ಭಜಿಸುವ ಆ ದಂಪತಿಗಳಿಗೆ ಕೃಷ್ಣನಲ್ಲಿ ನಿರಂತರವಾದ ಭಕ್ತಿಯು ಪ್ರಾದುರ್ಭವಿಸಿತು. ॥೨೩॥

ಕಕ್ಷೀವಾನನು ಸ್ವತಃ ಪರರಿಗೆ ವಿಷ್ಣುಕಥೆಯನ್ನು ಹೇಳುವವನಾಗಿಯೂ, ಮತ್ತು ಪ್ರೀತಿಪೂರ್ವಕವಾಗಿ ಶ್ರವಣ ಮಾಡುವವನೂ ಆಗಿದ್ದನು. ಹೀಗೆ ಪ್ರವಚನ, ಶ್ರವಣ, ಭಜನ, ಪಾದಸೇವನ, ಅರ್ಚನ, ದಾಸ್ಯ, ಸಖ್ಯ, ಆತ್ಮಸಮರ್ಪಣ, ವಂದನ

ಭಜತೋರಥ ದಂಪತ್ಯೋಃ ಸಂತುಷ್ಟೋಽಹಂ ಮುನೀಶ್ವರ ।
ಕದಾಚಿತ್ತೀರ್ಥಯಾತ್ರಾಯೈ ದ್ವಿಜೋ ಗೇಹಾದ್ವಿನಿಸ್ಸೃತಃ ॥೨೭॥

ಉಪಾದಿಶತ್ಪ್ರಿಯಾಂ ಭಾರ್ಯಾಂ ಪಾತಿವ್ರತ್ಯೇನ ರಾಗಿಣೀಂ ।
ನ ಕಾರ್ಯೋ ದೇಹಸಂಸ್ಕಾರೋ ವಿನಾ ಮುದ್ರಾಽನುಧಾರಣಂ ॥೨೮॥

ಭೂಷಣಾನಿ ನ ಧಾರ್ಯಾಣಿ ತುಲಸೀ ಮಾಲ್ಯಮಂತರಾ ।
ಭೋಗ್ಯಾನಿ ನಿತ್ಯಂ ತ್ಯಾಜ್ಯಾನಿ ವಿನಾ ವಿಷ್ಣುನಿವೇದಿತಂ ॥೨೯॥

ಸ್ಮರ್ತವ್ಯೋ ಭಗವಾನ್ವಿಷ್ಣುಃ ನ ವಿಸ್ಮರ್ತವ್ಯ ಏವ ಹಿ ।
ಪರಗೇಹೇ ನ ಗಂತವ್ಯಂ ವಿನಾ ಬಂಧುನಿಮಿತ್ತಕಂ ॥೩೦॥

---

ಎಂಬ ಒಂಬತ್ತು ವಿಧವಾದ ಭಕ್ತಿಯಿಂದ ಆ ಮಹಾವಿಷ್ಣುವನ್ನು ಪತ್ನಿಸಮೇತನಾಗಿ ಸೇವಿಸುವವನಾಗಿ ಅಹೋರಾತ್ರಿಯಾಮಗಳನ್ನು ಕಳೆಯುತ್ತಿದ್ದನು. ॥೨೪-೨೫-೨೬॥

ಎಲೈ ಮುನಿಶ್ರೇಷ್ಠನಾದ ನಾರದನೇ, ಈ ಪ್ರಕಾರವಾಗಿ ನಿರಂತರವೂ ಆ ದಂಪತಿಗಳು ನನ್ನನ್ನು ಭಜಿಸುತ್ತಿರಲು, ನಾನು ಅವರ ಸೇವೆಗೆ ಸಂತುಷ್ಟನಾದೆನು. ಹೀಗಿರುತ್ತಿರಲು ಒಂದಾನೊಂದು ಸಮಯದಲ್ಲಿ ಆ ಬ್ರಾಹ್ಮಣನು ತೀರ್ಥಯಾತ್ರೆಗೋಸ್ಕರವಾಗಿ ತನ್ನ ಗೃಹದಿಂದ ಹೊರಟವನಾಗಿ, ಪತಿವ್ರತೆಯಾಗಿರುವ ತನ್ನ ಪತ್ನಿಯನ್ನು ಕುರಿತು ಹೀಗೆಂದು ಉಪದೇಶಿಸಿದನು. ॥೨೭॥

ಎಲೌ ಪ್ರಿಯತಮೆಯೇ, ವಿಷ್ಣುಭಕ್ತರ ಲಾಂಛನವಾದ ಮುದ್ರೆಯನ್ನು ಧರಿಸದೇ ಶರೀರಕ್ಕೆ ಯಾವ ವಿಧವಾದ ಸಂಸ್ಕಾರವನ್ನೂ ಮಾಡಬಾರದು. ತುಲಸೀ ಮಾಲಿಕೆಯನ್ನು ಬಿಟ್ಟು ಇನ್ನಿತರ ಯಾವ ಅಲಂಕಾರವಸ್ತುವನ್ನೂ ಧರಿಸಬಾರದು. ವಿಷ್ಣುವಿಗೆ ನಿವೇದಿಸದಿರುವ ಯಾವ ಭೋಗ್ಯವಸ್ತುಗಳನ್ನೂ ಎಂದಿಗೂ ಸ್ವೀಕರಿಸಬಾರದು. ॥೨೮-೨೯॥

ಭಗವಂತನಾದ ವಿಷ್ಣುವನ್ನು ಅನವರತವೂ ಸ್ಮರಿಸಬೇಕು. ಅವನನ್ನು ಎಂದಿಗೂ ಮರೆಯಬಾರದು ಬಂಧುಭಾಂಧವರ ಕಾರಣವಿಲ್ಲದೆ ಪರರ ಮನೆಗೆ ಹೋಗಬಾರದು. ॥೩೦॥

**ಪುಂಭಿರ್ನಾಃಸ್ಯಂ ನ ವಕ್ತವ್ಯಂ ವಿನಾ ನಂದಮಹೋತ್ಸವಮ್ ।**
**ನೃತ್ಯಗೀತೋತ್ಸವಂ ದ್ರಷ್ಟುಂ ನ ಗಮಃ ಪರವೇಶ್ಮನಿ ॥೩೦॥**

**ವಿನಾ ಪರ್ವೋತ್ಸವಂ ವಿಷ್ಣೋಃ ತಥಾ ದೇವಾಲಯೋತ್ಸವಂ ।**
**ಪರನಿಂದಾ ನ ಕರ್ತವ್ಯಾ ವಿನಾ ವಿಷ್ಣುವಿರೋಧಿನಃ ॥೩೨॥**

**ನಾತಿಥಿರ್ವಿಮುಖಃ ಕಾರ್ಯೋ ವಿನಾ ದೇವನಯಾಚಕಂ ।**
**ಸ್ವಗೇಹೇ ಸ್ಥಿತಯಾ ಕಾರ್ಯಂ ಮನಃ ಶ್ರೀಕೃಷ್ಣಪಾದಯೋಃ ॥೩೩॥**

**ಕಾಲೋ ನೇಯೋ ವೃಥಾ ನೈವ ವಿನಾ ಶ್ರೀಕೃಷ್ಣಸೇವಯಾ ।**
**ಏವಮಾದಿಶ್ಯ ಭಾರ್ಯಾಂ ಸ್ವಾಂ ನಾಮ್ನಾ ಚಾರುಮತೀಂ ತದಾ ॥೩೪॥**
**ಕಕ್ಷೀವಾಂಸ್ತೀರ್ಥಯಾತ್ರಾಯೈ ನಿರ್ಜಗಾಮ ಗೃಹಾದಪಿ ।**

---

ಕೃಷ್ಣೋತ್ಸವದ ಸಮಯವನ್ನು ಬಿಟ್ಟು ಇನ್ನಿತರ ಸಮಯಗಳಲ್ಲಿ ಪರಪುರುಷರೊಂದಿಗೆ ಮಾತನಾಡಬಾರದು. ನೃತ್ಯ, ಗಾನ, ಉತ್ಸವ ಮುಂತಾದುವನ್ನು ನೋಡಲು ಪರರ ಗೃಹಕ್ಕೆ ಹೋಗಬಾರದು.

ಪರ್ವಕಾಲದಲ್ಲಿ ನಡೆಯುವ ವಿಷ್ಣುವಿನ ಉತ್ಸವದ ಸಮಯವನ್ನೂ ಮತ್ತು ದೇವಾಲಯದಲ್ಲಿ ನಡೆಯುವ ಉತ್ಸವಗಳನ್ನು ಬಿಟ್ಟು ಬೇರೆ ಯಾವ ಸಮಯದಲ್ಲಿಯೂ ಪರಗೃಹಕ್ಕೆ ಹೋಗಬಾರದು. ॥೩೧॥

ಜೂಜಾಡುವುದು ಮುಂತಾದ ದುಷ್ಕರ್ಮ ನಿರತನಾದ ಅತಿಥಿಯನ್ನು ಬಿಟ್ಟು ಇನ್ನಿತರ ಯಾವ ಅತಿಥಿಯೇ ಆಗಲಿ ಮನೆಗೆ ಬಂದರೆ ಅವನನ್ನು ಸತ್ಕರಿಸದೇ ವಿಮುಖನನ್ನಾಗಿ ಮಾಡಬಾರದು. ॥೩೨॥

ಸ್ವಗೃಹದಲ್ಲಿ ಕೆಲಸವನ್ನು ಮಾಡುತ್ತಾ ಮನಸ್ಸನ್ನು ಶ್ರೀಕೃಷ್ಣನ ಪಾದಗಳಲ್ಲಿ ಸಮರ್ಪಿಸಿರಬೇಕು. ಶ್ರೀಕೃಷ್ಣನನ್ನು ಸೇವಿಸದೆ ವ್ಯರ್ಥವಾಗಿ ಕಾಲಯಾಪನೆ ಮಾಡಬೇಡ. ॥೩೩॥

ಕಕ್ಷೀವಾನನು ತನ್ನ ಭಾರ್ಯೆಯಾದ ಚಾರುಮತಿಗೆ ಈ ರೀತಿಯಲ್ಲಿ ಉಪದೇಶಮಾಡಿ ತೀರ್ಥಯಾತ್ರೆಗೋಸ್ಕರವಾಗಿ ತನ್ನ ಮನೆಯಿಂದ ಹೊರಟವನಾದನು. ॥೩೪॥

ಸಾಃಕರೋತ್ತಾನಿ ಕರ್ಮಾಣಿ ಯಥೋದ್ದಿಷ್ಟಂ ಮಹಾತ್ಮನಾ ॥೩೫॥

ಕದಾಚಿದ್ಧರಿಸೇವಾರ್ಥಂ ಫಲಪುಷ್ಪಾರ್ಥಿನೀ ಗತಾ ।
ಕಾನನೇ ಸ್ವಾಶ್ರಮಪ್ರಾಂತೇ ಪಾತಿವ್ರತ್ಯ ಪರಾಯಣಾ ॥೩೬॥

ಚಿರಾದಾದಾಯ ಪುಷ್ಪಾಣಿ ಪರಾವೃತ್ತಾ ಗೃಹಂ ಪ್ರತಿ ।
ಆಗಚ್ಛಂತೀ ಗೃಹಂ ಸಾಧ್ವೀ ದದಾರ್ಶಾಗತಮಂತಿಕೇ ॥೩೭॥

ಕಾಮಿನಂ ಕಂಚಿದಾಯಾಂತಂ ಶೂದ್ರಂ ಸಹ ಭುಜಿಷ್ಯಯಾ ।
ಸ ದೃಷ್ಟ್ವಾ ತಾಂ ಮಹಾಪಾಪೀ ಅಕಾಮಾಮಪ್ಯ ಕಾಮಯತ್ ॥೩೮॥

ಆಗತ್ಯ ಸಮ್ಮುಖಂ ತಸ್ಯಾಸ್ತಾಂ ಬಾಲಾಂ ಸಮಬೋಧಯತ್ ।
ಬಹುಧಾ ಮೋಹಕೈರ್ವಾಕ್ಯೈಭ್ರಾಂತಮೇವಾಲಪಚ್ಛಠಃ ॥೩೯॥
ತಾನಿ ವಾಕ್ಯಾನಿ ಜಾನೀಹಿ ತೇನೋಕ್ತಾನಿ ಶೃಣುಷ್ವ ಮೇ ।

---

ಚಾರುಮತಿಯೂ ಸಹ ತನ್ನ ಪತಿಯ ಉಪದೇಶದಂತೆಯೇ ಸಕಲ ಕಾರ್ಯಗಳನ್ನೂ ಆಚರಿಸುವವಳಾಗಿದ್ದಳು. ॥೩೫॥

ಹೀಗಿರುತ್ತಿರಲು ಒಂದಾನೊಂದು ದಿವಸ ಪತಿವ್ರತೆಯಾದ ಆ ಸಾಧ್ವಿಯು ಹರಿಯ ಸೇವೆಗೋಸ್ಕರ ಹಣ್ಣು ಹೂಗಳನ್ನು ತರಲಪೇಕ್ಷೆಯುಳ್ಳವಳಾಗಿ ತನ್ನ ಆಶ್ರಮದ ಸಮೀಪದಲ್ಲಿದ್ದ ಅರಣ್ಯಕ್ಕೆ ಹೋದಳು. ॥೩೬॥

ಅರಣ್ಯದಲ್ಲಿ ಪುಷ್ಪಗಳನ್ನು ಸಂಗ್ರಹಿಸಿ ಅಲ್ಲಿಂದ ಹಿಂತಿರುಗಿ ಶೀಘ್ರವಾಗಿ ಮನೆಯನ್ನು ಕುರಿತು ಬರುತ್ತಿದ್ದಳು. ಆಗ ಕಾಮುಕನಾಗಿಯೂ, ಇವಳೊಂದಿಗೆ ರಮಿಸಲು ಇಚ್ಛೆಯುಳ್ಳವನಾಗಿಯೂ ಇದ್ದ ಒಬ್ಬ ಶೂದ್ರನು ತನ್ನ ಸಮೀಪದಲ್ಲಿಯೇ ತನ್ನನ್ನು ಹಿಂಬಾಲಿಸುತ್ತಿರುವುದನ್ನು ನೋಡಿದಳು. ಆ ಶೂದ್ರನು ಮಹಾಪಾಪಿಯು. ಚಾರುಮತಿಯು ಕಾಮುಕಳಲ್ಲದಿದ್ದರೂ ಸಹ ಶೂದ್ರನು ಅವಳನ್ನು ಕಾಮಿಸಿದನು. ॥೩೭-೩೮॥

ಆ ದುಷ್ಟನು ಅವಳ ಮುಂಭಾಗದಲ್ಲಿ ಬಂದು ಮೋಹಗೊಳಿಸುವ ಮಾತುಗಳಿಂದ ಬಹು ವಿಧವಾಗಿ ಉಪದೇಶಿಸಿ ಅವಳನ್ನು ಭ್ರಾಂತಿಗೊಳಿಸಿದನು. ॥೩೯॥

**ದೇಹಿನೋ ದೇಹಯೋಗೇನ ವಿಷಯಾಃ ಖಲು ಸೌಖ್ಯದಾಃ ॥೪೦॥**

**ಆಬ್ರಹ್ಮಕೀಟಪರ್ಯಂತಂ ವಿಷಯೇಽಭಿರತಂ ಸದಾ ।**
**ಅಜ್ಞಾ ಅನ್ಯದ್ವದಂತ್ಯತ್ರ ಕುರ್ವಂತೋ ಯತ್ನಸಂಚಯಮ್ ॥೪೧॥**

**ದೇಹಾಂತೇ ಮುಕ್ತಿಕಾಮಾಸ್ತೇ ಮುಕ್ತಿಂ ನೈವ ಸಮಾಗತಾಃ ।**
**ನೈವಾಪುರ್ಮುನಯೋ ಮುಕ್ತಿಂ ವೃಥಾ ಕಷ್ಟಂ ಸಮಾಶ್ರಿತಾಃ ॥೪೨॥**

**ತಸ್ಮಾನ್ನ ಕಾರ್ಯಂ ದೇಹಸ್ಯ ಕದನಂ ಭೋಗಭಾಗಿನಃ ।**
**ತತೋಽನೇಕ ವಿಧೈರ್ಭಾವೈಃ ಭಜಂತಂ ಮಾಂ ಭಜಸ್ವ ಚ ॥೪೩॥**

---

ಎಲೈ ನಾರದನೇ, ಆ ಶೂದ್ರನು ಹೇಳಿದ ಮಾತುಗಳನ್ನು ನಿನಗೆ ತಿಳಿಸುತ್ತೇನೆ. ಕೇಳುವವನಾಗು. ಎಲೌ ಸಾಧ್ವಿಯೇ, ಸಕಲ ಪ್ರಾಣಿಗಳಿಗೂ ದೇಹ ಮತ್ತು ವಿಷಯಗಳ ಸಂಬಂಧದಿಂದ ಸೌಖ್ಯವು ಉಂಟಾಗುವುದು. ಈ ಲೋಕದಲ್ಲಿ ಬ್ರಹ್ಮಾದಿಕೀಟಪರ್ಯಂತವಾದ ಸಕಲ ಪ್ರಾಣಿಗಳೂ ನಿರಂತರವಾಗಿ ವಿಷಯಸುಖದಲ್ಲಿ ಆಸಕ್ತವಾಗಿರುವುವು. ॥೪೦॥

ಹೀಗಿದ್ದರೂ ಸಹ ಅಜ್ಞಾನಿಗಳಾದ ಜನರು ವಿಷಯಸುಖವನ್ನು ತಿರಸ್ಕರಿಸಿ ಅನ್ಯಥಾ ಭಾವಿಸುತ್ತಾರೆ. ಅವರು ಮೋಕ್ಷಸಂಪಾದನೆಗೆ ಉಪಾಯಭೂತವಾದ ಪುಣ್ಯಕರ್ಮಗಳನ್ನು ಆಚರಿಸುವರು. ಆದರೂ ಮೋಕ್ಷಾಭಿಲಾಷಿಗಳಾದ ಅವರು ಮರಣಕಾಲದಲ್ಲಿ ಮುಕ್ತಿಯನ್ನು ಪಡೆದವರಾಗುವುದಿಲ್ಲ. ॥೪೧॥

ಮೋಕ್ಷಸುಖವನ್ನು ಬಯಸುವ ಮುನಿಗಳು ಮೋಕ್ಷಕ್ಕೋಸ್ಕರ ವೃಥಾ ಕಾಯಕ್ಲೇಶವನ್ನು ಹೊಂದಿದವರಾಗಿ ಕೊನೆಗೂ ಮುಕ್ತಿಯನ್ನು ಪಡೆಯುತ್ತಲೇ ಇಲ್ಲವು ! ॥೪೨॥

ಹೀಗಿರುವುದರಿಂದ ವಿಷಯ ಸುಖಗಳನ್ನನುಭವಿಸುವವರು ವೃಥಾದೇಹವನ್ನು ದಂಡಿಸಬಾರದು. ಆದುದರಿಂದ ನಾನಾವಿಧವಾದ ಹಾವಭಾವಗಳಿಂದ ನಿನ್ನನ್ನು ಸೇವಿಸುವ ನನ್ನನ್ನು ಸೇರಿ ನೀನೂ ಸುಖಿಸುವವಳಾಗು. ॥೪೩॥

ಜೀವಿತಸ್ಯ ಫಲಂ ಭೋಗೋ ನ ಭೋಗೋ ದಂಪತೀ ವಿನಾ ।
ಪತಿಂ ವಿನಾಽತಿಕ್ಲೇಶೇನ ಕಾಲೋ ಯಾತಿ ಮುಧಾಽಬಲೇ ॥೪೪॥

ಕಿಂ ಕ್ಲಿಷ್ಟೇನ ಶರೀರೇಣ ಕೋಮಲಾಂಗಿ ಫಲೇಚ್ಛಯಾ ।
ದೃಶ್ಯತೇ ಪರಮಂ ರೂಪಂ ವಯಶ್ಚಾಪಿ ಮನೋಹರಮ್ ॥೪೫॥

ನ ಯಥಾ ತೇ ವೃಥಾ ಯಾತು ತಥಾ ಕುರು ನಿತಂಬಿನೀ ॥೪೬॥

ಯತ್ಸಾಧಾರಣದೇಹೋಽಯಂ ಮನುಷ್ಯಸ್ಯಾ ಬುಧೈಃಕೃತಃ ।
ವರ್ಣಭೇದೋ ಹಿ ತತ್ರಾಪಿ ಜಾತಿವೃತ್ತ್ಯಾದಿಕಂ ವೃಥಾ ॥೪೭॥

ಪೂಜ್ಯತೇ ವಿಷಯಸ್ತಾವದ್ದೇಹಸ್ಯೈವ ಚ ಧಾರಣೇ ॥೪೮॥
ನಷ್ಟೇ ದೇಹೇ ಕ್ವ ವಿಷಯಃ ಕ್ವ ಸ್ವರ್ಗೋ ಮುಕ್ತಿರೇವ ವಾ

---

ಎಲೌ ಅಬಲೆಯೇ, ಭೋಗವೇ ಜೀವನದ ಫಲವಾಗಿರುತ್ತದೆ. ಆ ಭೋಗವು ಸ್ತ್ರೀ ಪುರುಷರ ಪರಸ್ಪರ ಸಂಯೋಗದಿಂದ ಉಂಟಾಗುತ್ತದೆ. ಪತಿಯು ಇಲ್ಲದೇ ಇರುವ ಕಾಲದಲ್ಲಿ ಸ್ತ್ರೀಯರಿಗೆ ಕಾಲವನ್ನು ಕಳೆಯುವುದು ಅತಿ ಕಷ್ಟಕರವು. ॥೪೪॥

ಎಲೌ ಕೋಮಲಾಂಗಿಯೇ, ಫಲೇಚ್ಛೆಯಿಂದ ಶರೀರವನ್ನು ದಂಡಿಸುವುದರಿಂದ ಯಾವ ಪ್ರಯೋಜನವು ತಾನೆ ಲಭಿಸುತ್ತದೆ? ನಿನಗಾದರೋ ಅತಿ ಸುಂದರವಾದ ರೂಪವೂ ಮತ್ತು ಮನೋಹರವಾದ ಯೌವನವೂ ಇರುತ್ತದೆ. ॥೪೫॥

ನಿನ್ನ ಸುಂದರವಾದ ರೂಪವನ್ನೂ ಮತ್ತು ಯೌವನವನ್ನೂ ವ್ಯರ್ಥಗೊಳಿಸದಂತೆ ನಡೆದುಕೋ. ॥೪೬॥

ಸಕಲ ಮನುಷ್ಯರಿಗೂ ಈ ದೇಹವು ಸಾಧಾರಣವಾದುದಾಗಿರುವುದು. ಹೀಗಿರುತ್ತಿರಲು ಅಜ್ಞಾನಿಗಳು ವರ್ಣಭೇದವನ್ನೂ ಅದರಲ್ಲಿಯೂ, ಜಾತಿ, ವೃತ್ತಿ ಮುಂತಾದುವುಗಳನ್ನೂ ಕಲ್ಪಿಸಿರುತ್ತಾರೆ. ಈ ವರ್ಣಭೇದಾದಿ ಉತ್ಕರ್ಷಾಪಕರ್ಷಗಳ ವ್ಯವಸ್ಥೆಗಳು ವ್ಯರ್ಥವಾದದ್ದಾಗಿರುವುವು. ॥೪೭॥

ದೇಹ ಧಾರಣೆಯಿಂದ ವಿಷಯವು ಪೂಜಿಸಲ್ಪಡುತ್ತದೆ. ಏಕೆಂದರೆ ವಿಷಯವನ್ನು ಭೋಗಿಸಲು ಅನುಕೂಲವಾದ ಶರೀರವು ಇರುವುದರಿಂದ ವಿಷಯಗಳಿಗೆ

ಅತೋ ಮಯಾ ಸಹ ಶುಭೇ ಭೋಗಾನ್ಭುಂಕ್ಷ್ವ ಮನೋರಮಾನ್ ।
ಇತ್ಯಾದಿಭಿಸ್ತಸ್ಯ ವಾಕ್ಯೈರ್ಮುರ್ಗ್ಧಾ ಮೂಢತ್ವಮಾಗತಾ ।
ನ ಶಶಾಕ ಮನೋ ಧರ್ತುಂ ಕಾಮಸ್ಯ ವಶಮಾಗತಂ ॥೪೯॥

ಮನೋ ದುಷ್ಟಂ ಚಂಚಲಂ ಚ ಸಂಗಾಚ್ಚ ಪರಿವರ್ತತೇ ।
ಸತ್ಸಂಗಾತ್ಸಾಧುತಾಮೇತಿ ದುಸ್ಸಂಗಾದ್ಯಾತಿ ದುಷ್ಟತಾಮ್ ॥೫೦॥

ದುಷ್ಟಸಂಗೋ ನ ಕರ್ತವ್ಯಃ ಆತ್ಮನಃ ಶ್ರೇಯ ಇಚ್ಛತಾ ।
ಸತಾಂ ಸಂಗಾದ್ಧಿಮನುಜೋ ಲೋಕದ್ವಯ ಸುಖಂ ವ್ರಜೇತ್ ॥೫೧॥

ಸಾ ತಸ್ಯ ಸಂಗಾದ್ದುಷ್ಟಸ್ಯ ದುಷ್ಟಾ ಸ್ವಲ್ಪದಿನೈರಭೂತ್ ।
ಚಿರಂ ಸಮಾಗತಸ್ತಸ್ಯಾಃ ಪತಿಸ್ತೀರ್ಥಾಂತರಂ ಗತಃ ॥೫೨॥

---

ಸಾರ್ಥಕತೆ ಇರುವುದು. ಈ ದೇಹವು ನಾಶವಾಗಲು ವಿಷಯ, ಸ್ವರ್ಗ, ಮೋಕ್ಷ ಇವುಗಳು ಹೇಗೆ ತಾನೆ ಇರಬಲ್ಲವು ?

ಆದುದರಿಂದ ಎಲೌ ಭದ್ರೆಯೇ, ನೀನು ನನ್ನೊಂದಿಗೆ ಮನೋಹರವಾದ ವಿಷಯಸುಖಗಳನ್ನು ಅನುಭವಿಸುವವಳಾಗು. ॥೪೮॥

ಇವೇ ಮೊದಲಾದ ಶೂದ್ರನ ಮಾತುಗಳಿಗೆ ಮರುಳಾಗಿ ಅಲ್ಪಮತಿಯಾದ ಆ ಯುವತಿಯು ಬುದ್ಧಿಗೆಟ್ಟು ತನ್ನ ಮನಸ್ಸನ್ನು ನಿಗ್ರಹಿಸಲು ಅಸಮರ್ಥಳಾಗಿ ಮನ್ಮಥನಿಗೆ ಅಧೀನಳಾದಳು. ॥॥೪೯॥

ಮನಸ್ಸು ಸ್ವಾಭಾವಿಕವಾಗಿ ದುಷ್ಟವಾಗಿಯೂ, ಚಂಚಲವಾಗಿಯೂ ಇರುವುದಲ್ಲದೆ ಸಹವಾಸಕ್ಕೆ ಅನುಗುಣವಾಗಿ ಬದಲಾವಣೆಯನ್ನು ಹೊಂದುವ ಸ್ವಭಾವವುಳ್ಳದ್ದಾಗಿರುತ್ತದೆ. ಸತ್ಸಹವಾಸದಿಂದ ಸಾಧುಸ್ವಭಾವವನ್ನೂ ದುಷ್ಟರ ಸಹವಾಸದಿಂದ ದುಷ್ಟಸ್ವಭಾವವನ್ನೂ ಹೊಂದುತ್ತದೆ. ॥೫೦॥

ಆತ್ಮೋದ್ಧಾರವನ್ನು (ತನ್ನ ಶ್ರೇಯಸ್ಸನ್ನು) ಇಚ್ಛಿಸುವ ಮನುಷ್ಯನು ದುಷ್ಟರ ಸಂಗವನ್ನು ಮಾಡಬಾರದು. ಸತ್ಪುರುಷರ ಸಹವಾಸದಿಂದ ಇಹದಲ್ಲಿಯೂ ಮತ್ತು ಪರದಲ್ಲಿಯೂ ಸಹ ಮನುಜನು ಸೌಖ್ಯವನ್ನು ಹೊಂದುತ್ತಾನೆ. ॥೫೧॥

ಆ ತರುಣಿಯು ದುಷ್ಟನಾದ ಆ ಶೂದ್ರನ ಸಹವಾಸದಿಂದ ಕೆಲವು ದಿನಗಳಲ್ಲಿಯೇ ತಾನೂ ದುಷ್ಟಳಾದಳು. ಹೀಗಿರಲು ತೀರ್ಥಯಾತ್ರೆಗೋಸ್ಕರ ಹೋಗಿದ್ದ ಆಕೆಯ ಪತಿಯು ಶೀಘ್ರದಲ್ಲಿಯೇ ಹಿಂತಿರುಗಿ ಬಂದನು. ॥೫೨॥

ನಾಽಪಶ್ಯತ್ತಾಂ ತಥಾ ಭೂತಾಮಪೂರ್ವಾಮತಿಕಾಮುಕೀಂ ।
ಚಲಚಿತ್ತಾಂ ಪರರತಾಂ ಗೃಹಕಾರ್ಯವಿಧಾಯಿನೀಂ ॥೫೩॥

ತಥಾಽಪ್ಯಸೌ ದ್ವಿಜೋ ದುಷ್ಟಾಂ ವನಿತಾಂ ಸಂನ್ಯವಾರಯತ್ ।
ತರ್ಜನೈಃ ಸಾಂತ್ವವಚನೈರ್ಯದಾ ತಸ್ಯಾ ಮನೋಽನ್ಯಥಾ ॥೫೪॥

ಕರ್ತುಂ ನ ಶಕ್ತಃ ಕಕ್ಷೀವಾನ್ ಕ್ರುದ್ಧಚಿತ್ತಃ ಶಶಾಪ ತಾಮ್ ।
ಪ್ರಯಾತು ರಾಕ್ಷಸೀಂ ಯೋನಿಂ ದುಷ್ಟೇ ದುಷ್ಟ ಪ್ರದೂಷಿತಾ ॥೫೫॥

ತ್ವಂ ವಂಚಯಿತ್ವಾ ಮಾಂ ನಿತ್ಯಂ ಯದಭೂಃ ಕಿತವೇ ರತಾ ।
ಪಾಪಕರ್ಮಾಣಿ ಕುರ್ವಾಣಾಂ ದುಷ್ಟಾಂ ಲೋಕಾಹಿತೈಷಿಣೀಂ॥೫೬॥
ಕದಾಚಿತ್ಕರುಣಾಸಿಂಧುಃ ಕೃಷ್ಣಃ ಸಂತಾರಯಿಷ್ಯತಿ ।

---

ಮನೆಗೆ ಬಂದ ಅವಳ ಪತಿಯು ತನ್ನ ಪತ್ನಿಯು ಮುಂಚಿನಂತೆ ಇಲ್ಲದೆ ಅತಿ ಕಾಮುಕಿಯೂ, ಚಂಚಲಚಿತ್ತಳೂ, ಅನ್ಯಾಸಕ್ತಳೂ, ಗೃಹಕಾರ್ಯವನ್ನು ಮಾಡದೇ ಇರುವವಳೂ ಆಗಿರುವಳೆಂಬುದನ್ನು ತಿಳಿಯದೇ ಇರಲಿಲ್ಲ. ||೫೩||

ಆದರೂ ಆ ಬ್ರಾಹ್ಮಣನು ದುಷ್ಟಳಾದ ತನ್ನ ಭಾರ್ಯೆಯನ್ನು ನಾನಾವಿಧವಾದ ಸಮಾಧಾನೋಕ್ತಿಗಳಿಂದಲೂ, ಮತ್ತು ನಿಷ್ಠುರೋಕ್ತಿಗಳಿಂದಲೂ ಸನ್ಮಾರ್ಗದಲ್ಲಿರಬೇಕೆಂದು ಬುದ್ಧಿಹೇಳಿದನು. ಆದರೂ ಆವಳ ಮನಸ್ಸನ್ನು ಪರಿವರ್ತಿಸಲು ಅಸಮರ್ಥನಾಗಿ ಕೋಪಗೊಂಡು ಅವಳನ್ನು ಹೀಗೆಂದು ಶಪಿಸಿದನು. ||೫೪||

ಎಲೌ ದುಷ್ಟಳೇ, ನೀನು ದುಷ್ಟನ ಸಹವಾಸದಿಂದ ಜಾತಿಭ್ರಷ್ಟಳಾಗಿ ನನ್ನನ್ನು ವಂಚಿಸಿ, ಆ ಧೂರ್ತನಲ್ಲಿ ಆಸಕ್ತಳಾದುದರಿಂದ ನೀನು ರಾಕ್ಷಸಯೋನಿಯಲ್ಲಿ ಜನಿಸುವವಳಾಗು. ||೫೫||

ರಾಕ್ಷಸ ಯೋನಿಯಲ್ಲಿ ಜನ್ಮವನ್ನು ತಾಳಿ ಪಾಪಕರ್ಮಗಳನ್ನು ಎಸಗುವವಳೂ, ದುಷ್ಟಳೂ, ಲೋಕಕ್ಕೆ ಅಹಿತವನ್ನು ಬಯಸುವವಳೂ ಆದ ನಿನ್ನನ್ನು ಒಂದಾನೊಂದು ಸಮಯದಲ್ಲಿ ಕೃಪಾಸಿಂಧುವಾದ ಶ್ರೀಕೃಷ್ಣನು ರಾಕ್ಷಸಜನ್ಮದಿಂದ ಮುಕ್ತಿಯನ್ನು ಪಡೆದವಳನ್ನಾಗಿ ಮಾಡುವನು. ||೫೬||

ನಿಜಭಕ್ತಿಪ್ರಭಾವೇಣ ಭಕ್ತಾ ನೋ ಯಾಂತಿ ದುರ್ಗತಿಮ್ ॥೫೭॥

ಸಖ್ಯಂ ಕಥಂಚಿದ್ವಿಷ್ಣೋಸ್ತ್ವಮಕರೋಃ ಸೇವನಂ ಯತಃ ।
ತತೋ ನ ಸಂತು ನರಕಾ ನೋಚಿತಂ ತವ ವರ್ತತೇ ॥೫೮॥

ಇತ್ಥಂ ಬ್ರಾಹ್ಮಣಶಾಪೇನ ಪೂತನಾ ಸಾಭವನ್ಮುನೇ ।
ಏತತ್ತೇಽಭಿಹಿತಂ ಸರ್ವಂ ಕಿಮನ್ಯಚ್ಛ್ರೋತುಮಿಚ್ಛಸಿ ॥೫೯॥

॥ ನಾರದ ಉವಾಚ ॥

ಕೃಷ್ಣ ತಸ್ಯಾಸ್ತು ದುಷ್ಟಾಯಾಸ್ತ್ವಯಾ ಸ್ಪರ್ಶಃ ಕಥಂ ಕೃತಃ ।
ನ ತದೇಯಂ ವಿಶುದ್ಧಾ ಕಿಂ ಸ್ತನಂ ತಸ್ಯಾಃ ಪಪೌ ಭವಾನ್ ॥೬೦॥

॥ ಶ್ರೀಕೃಷ್ಣ ಉವಾಚ ॥

ಚ್ಯವನಃ ಸ್ವಾಶ್ರಮೇ ಪೂರ್ವಂ ತಪಸಾ ಗತ ಕಲ್ಮಷಃ ।
ಮನೋ ದಧೌ ಚಾತ್ಮನಾ ತು ಸರ್ವಾತ್ಮನ್ಯಖಿಲೇಶ್ವರೇ ॥೬೧॥

---

ನೀನು ಪೂರ್ವಜನ್ಮದ ಸುಕೃತವಿಶೇಷದಿಂದ ವಿಷ್ಣುವಿನಲ್ಲಿ ಭಕ್ತಿಯುಳ್ಳವಳಾಗಿದ್ದೆಯಾದುದರಿಂದ ನಿನಗೆ ದುರ್ಗತಿಯು ಸಂಭವಿಸುವುದಿಲ್ಲ. ಏಕೆಂದರೆ ವಿಷ್ಣುಭಕ್ತರು ತಮ್ಮ ಭಕ್ತಿಯ ಪ್ರಭಾವದಿಂದ ಎಂದಿಗೂ ದುರ್ಗತಿಯನ್ನು ಹೊಂದುವುದಿಲ್ಲ. ಆದುದರಿಂದ ನಿನಗೆ ನರಕಲೋಕಪ್ರಾಪ್ತಿಯು ಇರುವುದಿಲ್ಲ. ಆದರೂ ನಿನಗೆ ಈ ರೀತಿಯಾದ ವರ್ತನೆಯು ಉಚಿತವಾದುದಲ್ಲ. ॥೫೭-೫೮॥

ಎಲೈ ನಾರದಮುನಿಯೇ, ಈ ರೀತಿಯಲ್ಲಿ ಬ್ರಾಹ್ಮಣಶಾಪದಿಂದ ಆ ಯುವತಿಯು ಪೂತನಿಯೆಂಬ ಹೆಸರುಳ್ಳ ರಾಕ್ಷಸಿಯಾಗಿ ಜನಿಸಿದಳು. ಈ ವಿಷಯವನ್ನು ನಿನಗೆ ತಿಳಿಸಿರುವೆನು. ಇದಕ್ಕಿಂತಲೂ ಬೇರೆ ಯಾವ ವಿಷಯವನ್ನು ಕೇಳಲು ಇಷ್ಟಪಡುವೆ? ॥೫೯॥

ನಾರದನು ಹೇಳಿದನು — ಓ ಕೃಷ್ಣನೇ, ದುಷ್ಟಳಾದ ಆ ಪೂತನಿಯನ್ನು ನೀನು ಹೇಗೆ ಸ್ಪರ್ಶಿಸಿದೆ? ನೀನು ಅವಳ ಸ್ತನ್ಯವನ್ನು ಪಾನಮಾಡುವ ಕಾಲದಲ್ಲಿ ಅವಳು ಅಶುದ್ಧಳಾಗಿರಲಿಲ್ಲವೆ? ॥೬೦॥

ಶ್ರೀಕೃಷ್ಣನು ಹೇಳಿದನು — ಹಿಂದೆ ಒಂದಾನೊಂದು ಕಾಲದಲ್ಲಿ ಚ್ಯವನ ಮಹರ್ಷಿಯು ತನ್ನ ಆಶ್ರಮದಲ್ಲಿ ತಪಸ್ಸನ್ನಾಚರಿಸಿ, ಅದರಿಂದ ಚಿತ್ತಶುದ್ಧಿಯನು

ಚಿರಮೇವಂ ಪ್ರತಪತಿ ಮುನೌ ಶಾಂತಿಮುಪೇಯುಷಿ ।
ಜಗ್ಧುಮಾರೇಭಿರೇ ದೈತ್ಯಾಃ ಪಾತಾಲತಲವಾಸಿನಃ ॥೬೨॥

ಚ್ಯವನೋ ಬ್ರಹ್ಮನಿರ್ವಾಣಪರಮಂ ಸುಖಮಾಶ್ರಿತಃ ।
ಶ್ರುತ್ವಾ ವಚಃ ಸಮುತ್ತಸ್ಥೌ ಛಿಂಧಿ ಭಿಂಧೀತಿ ವಾದಿನಾಂ ॥೬೩॥

ಚುಕೋಪ ದೃಷ್ಟ್ವಾ ತಾನ್ದೈತ್ಯಾನ್ ಸ್ವಾಂ ತನುಂ ಚ ವ್ಯಲೋಕಯತ್
ಅಥ ತಸ್ಯ ತತೋ ದೇವಾಃ ಸಮುತ್ಪನ್ನಾಸ್ತ್ವರಾಽನ್ವಿತಾಃ ।
ಅಸುರಾಂಸ್ತಾನ್ನಿಹನ್ಯುಶ್ಚ ಷಷ್ಟಿ ಸಾಹಸ್ರಸಮ್ಮಿತಾನ್ ॥೬೪॥

ಬದ್ಧಾಂಜಲಿ ಸುರಾಃ ಪ್ರೋಚುಃ ನಿಹತೇಷ್ವಸುರೇಷ್ವಪಿ ।
ಮುನೇ ತೇ ಕಿಂಕರಾಃ ಸರ್ವೇ ಕಿಂ ಕುರ್ಮಸ್ತ್ವಂ ವದಾಶು ನಃ ॥೬೫॥

---

ಪಡೆದವನಾಗಿ ಸರ್ವರಿಗೂ ಅಂತರಾತ್ಮನಾದ ಆ ಪರಬ್ರಹ್ಮನಲ್ಲಿ ತನ್ನ ಮನಸ್ಸನ್ನಿರಿಸಿದನು. ॥೬೧॥

ಈ ರೀತಿಯಲ್ಲಿ ಆ ಚ್ಯವನ ಮಹರ್ಷಿಯು ದೀರ್ಘಕಾಲಪರ್ಯಂತ ತಪಸ್ಸನ್ನಾಚರಿಸಿ ಶಾಂತಚಿತ್ತನಾಗಿರಲು, ಪಾತಾಳಲೋಕದಲ್ಲಿ ವಾಸಮಾಡುತ್ತಿದ್ದ ರಾಕ್ಷಸರು ಈ ಮುನಿಯ ತಪೋಭಂಗವನ್ನು ಮಾಡಲು ಉಪಕ್ರಮಿಸಿದರು. ॥೬೨॥

ತಪಸ್ಸಿನಲ್ಲಿ ಮಗ್ನನಾಗಿ, ನಿರತಿಶಯವಾದ ಮೋಕ್ಷಸುಖದಲ್ಲಿ ತಲ್ಲೀನನಾದ ಚ್ಯವನನು ಕಡಿ, ಹೊಡಿ ಎಂಬ ಕ್ರೂರವಾದ ಮಾತುಗಳನ್ನಾಡುವ ಆ ರಾಕ್ಷಸರ ಕಠೋರವಾಣಿಯನ್ನು ಕೇಳಿ ತಪಸ್ಸಿನಿಂದ ಎಚ್ಚೆತ್ತವನಾದನು. ॥೬೩॥

ಈ ರೀತಿಯಲ್ಲಿ ತಪಸ್ಸಿನಿಂದ ಎಚ್ಚತ್ತವನಾದ ಮುನಿಯು ಆ ರಾಕ್ಷಸರನ್ನು ನೋಡಿ ಅನಂತರ ತನ್ನ ದೇಹವನ್ನೂ ನೋಡಿಕೊಂಡನು. ಬಳಿಕ ಅವನ ದೇಹದಿಂದ ದೇವತೆಗಳು ಪ್ರಾದುರ್ಭವಿಸಿ ಅತ್ಯಂತ ತ್ವರೆಯಿಂದ ಕೂಡಿದವರಾಗಿ ಅರವತ್ತು ಸಾವಿರ ಸಂಖ್ಯೆಯಿಂದ ಕೂಡಿದ ಆ ರಾಕ್ಷಸರನ್ನು ಹನನ ಮಾಡಿದರು. ॥೬೪॥

ರಾಕ್ಷಸರು ಹತರಾದ ಬಳಿಕ, ಆ ದೇವತೆಗಳು ಅಂಜಲಿಬದ್ಧರಾಗಿ ಚ್ಯವನ ಮಹರ್ಷಿಯನ್ನು ಕುರಿತು ಹೀಗೆಂದು ಹೇಳಿದರು. ಓ ಮುನಿಯೇ, ನಾವೆಲ್ಲರೂ ನಿನ್ನ ಸೇವಕರಾಗಿರುವೆವು. ನಮ್ಮ ಮುಂದಿನ ಕರ್ತವ್ಯಗಳನ್ನು ಹೇಳುವವನಾಗು. ದೇವತೆಗಳು ಹೀಗೆಂದು ಬಿನ್ನವಿಸಲು, ॥೬೫॥

|| ಚ್ಯವನ ಉವಾಚ ||

ಪ್ರಯಾತ ಗಿರಿಶಂ ದೇವಮುಪಧಾವತ ಸರ್ವಶಃ ।
ಪ್ರಣಮ್ಯ ಪರಯಾ ಭಕ್ತ್ಯಾ ಧ್ಯಾನೋ ಪರತಮೀಶ್ವರಂ ॥೬೬॥

ತೇ ತಥೋಕ್ತಾಸ್ತತ್ರ ಜಗ್ಮುರ್ದದೃಶುಃ ಶಿವಮವ್ಯಯಂ ।
ಧ್ಯಾನಸಂಸ್ಥಂ ತದಂಕೇ ಚ ಪಾರ್ವತೀಂ ವೀಕ್ಷ್ಯವಿಸ್ಮಿತಾಃ ॥೬೭॥

ಜಹಸುಶ್ಚ ಪರಂ ರೂಪಂ ದೃಷ್ಟ್ವಾ ಕಾಮವಿಮೋಹಿತಾಃ ।
ತತಸ್ತೇ ಸಂಸ್ಮರುರ್ದೇವಾ ನಿಂದಾಂ ಚಕ್ರುರ್ಮನಸಸ್ಸ ಚ ॥೬೮॥

ಧಿಙ್ಮನೋ ನಃ ಪರಂ ಶತ್ರುಭೂತಂ ಧಿಕ್ಕೃತಶಸ್ತಥಾ ।
ದೃಷ್ಟ್ವಾ ಪರಸ್ತ್ರಿಯಂ ಮೋಹಂ ನಾಪ್ನುವಂತಿ ಮಹಾಬಲಾಃ ॥೬೯॥

ಪರಸ್ತ್ರೀ ಸ್ಮರಣೇ ಪಾಪಂ ಕಿಂ ಪುನರ್ದರ್ಶನಾದಿಷು ।
ಅತಃ ಪ್ರಸಾದಯಿಷ್ಯಾಮಃ ಶಿವಂ ಸರ್ವ ಸುರೇಶ್ವರಮ್ ॥೭೦॥

---

ಚ್ಯವನಮಹರ್ಷಿಯು ಹೇಳಿದನು-ಎಲೈ ದೇವತೆಗಳೇ, ನೀವು ಪರಮೇಶ್ವರನ ಬಳಿಗೆ ಧಾವಿಸಿರಿ. ಮತ್ತು ಧ್ಯಾನಾಸಕ್ತನಾದ ಈಶ್ವರನನ್ನು ಅತ್ಯಂತ ಭಕ್ತಿಯಿಂದ ನಮಸ್ಕರಿಸಿ ಸ್ವಾರ್ಥವನ್ನು ಕುರಿತು ತಿಳಿಯುವವರಾಗಿರಿ. ||೬೬||

ಚ್ಯವನನಿಂದ ಹೀಗೆಂದು ಹೇಳಲ್ಪಟ್ಟ ಆ ದೇವತೆಗಳು ಅದರಂತೆಯೇ ಈಶ್ವರ ಸನ್ನಿಧಿಯನ್ನು ಕುರಿತು ತೆರಳಿದರು. ಬಳಿಕ ಧ್ಯಾನಾಸಕ್ತನೂ, ವ್ಯಯ ರಹಿತನೂ ಆದ ಈಶ್ವರನನ್ನೂ ಮತ್ತು ಅವನ ತೊಡೆಯ ಮೇಲೆ ಕುಳಿತಿರುವ ಪಾರ್ವತಿಯನ್ನೂ ನೋಡಿ ಅತ್ಯಾಶ್ಚರ್ಯಗೊಂಡವರಾದರು. ||೬೭||

ಮತ್ತು ಆ ಪಾರ್ವತಿಯ ಮನೋಹರವಾದ ರೂಪಲಾವಣ್ಯವನ್ನು ನೋಡಿ ಕಾಮಪರವಶರಾಗಿ ನಕ್ಕವರಾದರು. ಬಳಿಕ ದೇವತೆಗಳು ತಾವು ಮಾಡಿದ ಅಪರಾಧವನ್ನು ತಿಳಿದು ತಮ್ಮ ಮನಸ್ಸನ್ನು ನಿಂದಿಸಿದರು. ||೬೮||

ಶುತ್ರುವಿನಂತೆ ಇರುವ ನಮ್ಮ ಈ ಮನಸ್ಸಿಗೆ ನೂರುಬಾರಿ ಧಿಕ್ಕಾರವಿರಲಿ. ಮಹಾತ್ಮರೂ ಪರಾಕ್ರಮಿಗಳೂ ಪರಸ್ತ್ರೀಯರನ್ನು ನೋಡಿ ಕಾಮಿಸುವುದಿಲ್ಲ. ||೬೯||

ಪರಸ್ತ್ರೀಯರನ್ನು ಸ್ಮರಿಸುವುದರಿಂದಲೂ ಅತ್ಯಂತ ಪಾಪವು ಸಂಭವಿಸುವುದು.

ಏವಂ ತೇ ಚಿರಮಾತಸ್ಥುರ್ನಿರೀಕ್ಷಂತೋ ಧ್ಯಾನಮೋಚನಮ್ ॥೭೦॥

ವರ್ಷಾಣಾಮಯುತೇ ಜಾತೇ ಮಹೇಶೋ ಧ್ಯಾನಮುತ್ಯಜತ್ ।
ಅಪಶ್ಯತ್ಪಾರ್ವತೀಂ ಶುದ್ಧಾಂ ತತಸ್ತೇ ತಂ ವ್ಯಜಿಜ್ಞಪನ್ ॥೭೨॥

ಬದ್ಧಾಂಜಲಿಪುಟಾಃ ಸರ್ವೇ ಅಪರಾಧಂ ಯಥಾಕೃತಮ್ ।
ಸಮಾಗತಾ ಮಹಾದೇವ ವಯಂ ತೇ ದರ್ಶನಾರ್ಥಿನಃ ॥೭೩॥

ಚ್ಯವನಾಂಗ ಸಮುದ್ಭೂತಾ ಆಗತಾಸ್ತ್ವನ್ನಿದೇಶತಃ ।
ಚಿರಂ ಸ್ಥಿತಾ ದೈವವಶಾತ್ಪಾರ್ವತೀ ರೂಪಮೋಹಿತಾಃ ॥೭೪॥

ಮುಹೂರ್ತಮಾತ್ರಂ ದುರ್ಬುದ್ಧಿವ ಶಾತ್ಕಾಮವಶಂ ಗತಾಃ
ವಿಪ್ರಿಯಂ ತೇನ ಪಾಪೇನ ಸಮುದ್ಧರ್ತುಂತ್ವಮರ್ಹಸಿ ।
ಯಥಾ ನೈವಂ ಪುನಃ ಕರ್ಮ ಕುರ್ಮೋ ದಂಡೋ ವಿಧೀಯತಾಂ॥೭೫॥

---

ದರ್ಶನವಾದರೆ ಹೇಳಬೇಕಾದ್ದೇನಿದೆ? ಆದುದರಿಂದ ದೇವೇಶನಾದ ಪರಶಿವನನ್ನು ಸಂತೋಷಗೊಳಿಸೋಣ. ॥೭೦॥

ಈ ರೀತಿಯಲ್ಲಿ ಯೋಚಿಸಿ ಆ ದೇವತೆಗಳು ಈಶ್ವರನ ಧ್ಯಾನಾವಸಾನದ ಸಮಯವನ್ನು ನಿರೀಕ್ಷಿಸುವವರಾಗಿ ಬಹುಕಾಲ ಅಲ್ಲಿಯೇ ನಿಂತವರಾದರು. ಹೀಗಿರುತ್ತಿರಲು ಎರಡು ಸಾವಿರ ವರ್ಷಗಳು ಅತಿಕ್ರಮಿಸಲು ಶಿವನು ತನ್ನ ಧ್ಯಾನವನ್ನು ಮುಗಿಸಿದನು. ॥೭೧॥

ಹೀಗೆ ಧ್ಯಾನಮುದ್ರೆಯಿಂದ ಬಹಿರ್ಮುಖನಾದ ಶಿವನು ಶುದ್ಧಳಾದ ಪಾರ್ವತಿಯನ್ನು ನೋಡಿದನು. ಬಳಿಕ ದೇವತೆಗಳು ತಮ್ಮ ಕೈಗಳನ್ನು ಮುಗಿದು ತಮ್ಮ ಅಪರಾಧವನ್ನು ಯಥಾವತ್ತಾಗಿ ಶಿವನಲ್ಲಿ ವಿಜ್ಞಾಪಿಸಿಕೊಂಡರು. ॥೭೨॥

ಓ ಮಹಾದೇವನೇ, ಚ್ಯವನಮಹರ್ಷಿಯ ದೇಹದಿಂದ ಉದಿಸಿದ ನಾವು ಅವನ ಅಪ್ಪಣೆಯ ಮೇರೆಗೆ ನಿನ್ನ ದರ್ಶನವನ್ನಪೇಕ್ಷಿಸಿದವರಾಗಿ ಇಲ್ಲಿಗೆ ಬಂದು, ಬಹುಕಾಲಪರ್ಯಂತ ನಿಂತವರಾಗಿ, ವಿಧಿವಶದಿಂದ ಪಾರ್ವತಿಯ ರೂಪಕ್ಕೆ ಮರುಳಾದೆವು. ॥೭೩-೭೪॥

ಹೀಗೆ ಪಾರ್ವತೀರೂಪಮೋಹಿತರಾದ ನಮ್ಮ ದುರ್ಬುದ್ಧಿಯ ಅಧೀನತೆಯಿಂದ ಕಾಮಪರವಶರಾದೆವು. ಆ ಅಪರಾಧದಿಂದುಂಟಾದ ಪಾಪವನ್ನು ಪರಿಹರಿ

ಇತಿ ಶ್ರುತ್ವಾ ಮಹಾದೇವಸ್ತುಷ್ಟಸ್ತಾನಿದಮಬ್ರವೀತ್ ।
ಭವಿಷ್ಯಥ ಕೃಶಾನೋಸ್ತು ಪುತ್ರಾ ಯೂಯಂ ಮಹೌಜಸಃ ॥೨೬॥

ಅನಿದಶಾಃ ಸ್ತನಾದಾನ್ಯೈಃ ಪೂತನಾಯಾ ಮರಿಷ್ಯಥ ।
ಕಂಸ ಪ್ರಣೋದಿತಾ ಸಾ ತು ರಾಕ್ಷಸೀ ನಂದಗೋಕುಲಂ ॥೨೭॥

ಯದಾ ಯಾಸ್ಯತಿ ಹಂತುಂ ವೈ ಕೃಷ್ಣಂ ಲಿಪ್ತ್ವಾಸ್ತನೇ ವಿಷಮ್ ।
ಅಂಗೇ ಕೃತ್ವಾ ಹರಿಂ ಘೋರಾ ಸ್ತನ್ಯಂ ಯತ್ಪಾಯಯಿಷ್ಯತಿ ॥೨೮॥

ಭವತ್ಪೀತಾ ವಶಿಷ್ಟಂ ತದ್ಭಗವಾನ್ಪಾಸ್ಯತಿ ಸ್ತನಮ್ ।
ಪೀಡಯಿತ್ವಾ ಸಹ ಪ್ರಾಣೈಸ್ತದಾ ಮುಕ್ತಿಮವಾಪ್ಸ್ಯಥ ॥೨೯॥

॥ ಶ್ರೀಕೃಷ್ಣ ಉವಾಚ ॥

ಇತಿ ರುದ್ರವಚಃ ಸತ್ಯಂ ಕರ್ತುಂ ತಸ್ಯಾಃ ಪಪೌ ಸ್ತನಮ್ ।
ನ ಕರ್ಮಬಂಧನಂ ಪಾಶಂ ಛೇತ್ತುಮರ್ಹತಿ ಕಶ್ಚನ ॥೩೦॥

---

ಸಲು ನೀನೇ ಸಮರ್ಥನು. ಆದುದರಿಂದ ಇನ್ನು ಮುಂದೆ ನಾವು ಈ ರೀತಿಯಾದ ಪಾಪವನ್ನು ಮಾಡದಂತೆ ಯೋಗ್ಯವಾದ ಶಿಕ್ಷೆಯನ್ನು ನಮಗೆ ವಿಧಿಸುವವನಾಗು. ||೨೫||

ದೇವತೆಗಳ ಈ ಮಾತನ್ನು ಕೇಳಿ ಮಹಾದೇವನು ಸಂತೋಷಗೊಂಡವನಾಗಿ ಅವರನ್ನು ಕುರಿತು ಹೀಗೆಂದು ಹೇಳಿದನು. ಎಲೈ ದೇವತೆಗಳಿರಾ, ಮಹಾಪರಾಕ್ರಮಿಗಳಾದ ನೀವು ಕೃಶಾನುವಿನ ಮಕ್ಕಳಾಗಿ ಜನಿಸಿರಿ. ಮತ್ತು ಪೂತನಿಯೆಂಬ ರಾಕ್ಷಸಿಯ ಸ್ತನ್ಯವನ್ನು ದಶಾಹದೊಳಗೆ ಪಾನಮಾಡಿ ಮರಣವನ್ನು ಹೊಂದುವವರಾಗಿರಿ.||೨೬||

ಯಾವ ಕಾಲದಲ್ಲಿ ಆ ರಾಕ್ಷಸಿಯು ಕಂಸನಿಂದ ಪ್ರೇರಿತಳಾಗಿ ತನ್ನ ಸ್ತನಗಳಲ್ಲಿ ವಿಷವನ್ನು ಲೇಪಿಸಿ ನಂದಗೋಕುಲಕ್ಕೆ ಬಂದು ಶ್ರೀಕೃಷ್ಣನನ್ನು ತನ್ನ ತೊಡೆಯ ಮೇಲೆ ಮಲಗಿಸಿ ತನ್ನ ಸ್ತನ್ಯವನ್ನು ಕುಡಿಸುವಳೋ, ಆ ಕಾಲದಲ್ಲಿ ಶ್ರೀಕೃಷ್ಣನು ನಿಮ್ಮಿಂದ ಪಾನಮಾಡಲ್ಪಟ್ಟ ಉಳಿದಿರುವ ಸ್ತನ್ಯವನ್ನು ಪಾನಮಾಡುತ್ತಾನೆ. ಆಗ ನೀವು ಮರಣವನ್ನು ಹೊಂದಿ ಮುಕ್ತಿಯನ್ನು ಪಡೆಯುವಿರಿ. ||೨೭-೨೮-೨೯||

ಶ್ರೀಕೃಷ್ಣನು ಹೇಳಿದನು — ಎಲೈ ನಾರದನೇ, ಶಿವನು ದೇವತೆಗಳನ್ನು ಕುರಿತು ಹೀಗೆಂದು ಹೇಳಲು, ಅವನ ಮಾತನ್ನು ಸತ್ಯವನ್ನಾಗಿ ಮಾಡಲು, ನಾನು

|| ನಾರದ ಉವಾಚ ||

**ಯದಾ ತೇ ನಿಹತಾಽಽಸಾಧ್ವೀ ಪೂತನಾ ಬಾಲಘಾತಿನೀ ।**
**ತದಾ ನಂದೋಽಭವತ್ಕುತ್ರ ವ್ರಜೇ ವಾಽನ್ಯತ್ರ ವಾ ಗತಃ ॥೮೧॥**

**ಏತನ್ಮೇ ಬ್ರೂಹಿ ವಿಶ್ವೇಶ ಪರಂ ಕೌತೂಹಲಂ ಮಮ ।**
**ತೃಪ್ತಿರ್ನ ಜಾಯತೇ ಶ್ರುತ್ವಾ ಕಥಾಂ ತೇ ಕಲಿನಾಶಿನೀಮ್ ॥೮೨॥**

**ಅಮೃತಂ ಜಾಯತೇ ಯತ್ರ ತಾಪಶಾಂತಿಶ್ಚ ಮಾನಸೀ ।**
**ಸ್ವರ್ಗಾಪವರ್ಗಯೋರ್ದ್ವಾರಂ ದ್ವಾರಂ ವೈ ಮೋಕ್ಷಭೋಗಯೋಃ ॥೮೩॥**

|| ಶ್ರೀಕೃಷ್ಣ ಉವಾಚ ||

**ಮಮ ಜನ್ಮದಿನೇ ವಿಪ್ರ ಕೃತ್ವಾ ಜನ್ಮೋತ್ಸವಂ ಪಿತಾ ।**
**ದಿನಾಷ್ಟಾಸು ವ್ಯತೀತೇಷು ಗೋಪೈಃ ಕತಿಪಯೈರ್ವೃತಃ ॥೮೪॥**
**ವಾರ್ಷಿಕಂ ಭೋಜರಾಜೀಯಕರಂ ದಾತುಂ ಪುರೀಂ ಗತಃ ।**

---

ಆ ರಾಕ್ಷಸಿಯು ಸ್ತನ್ಯಪಾನವನ್ನು ಮಾಡಿದೆನು. ಕರ್ಮವೆಂಬ ಬಂಧನವನ್ನು ತಪ್ಪಿಸಲು ಯಾವನೂ ಸಮರ್ಥನಾಗುವುದಿಲ್ಲ. ||೮೦||

ನಾರದನು ಹೇಳಿದನು—ಓ ಜಗದೀಶನೇ, ನೀನು ಬಾಲಕರನ್ನು ಸಂಹರಿಸುವ ಪೂತನಿಯೆಂಬ ಆ ರಾಕ್ಷಸಿಯನ್ನು ವಧಿಸಿದ ವೇಳೆಯಲ್ಲಿ ನಂದನು ಎಲ್ಲಿದ್ದನು? ಅವನ ಮನೆಯಲ್ಲಿದ್ದನೋ ಅಥವಾ ಬೇರೆಯೆಲ್ಲಿಯಾದರೂ ಇದ್ದನೋ? ಎಂಬ ವಿಷಯವನ್ನು ಹೇಳುವವನಾಗು. ಇದನ್ನು ಕೇಳಲು ನನಗೆ ತುಂಬ ಕುತೂಹಲವುಂಟಾಗಿದೆ. ಓ ಪ್ರಭುವೇ, ಕಲಿಪಾಪನಾಶಕವಾದ ನಿನ್ನ ಕಥೆಯನ್ನು ಎಷ್ಟು ಕೇಳಿದರೂ ತೃಪ್ತಿಯೇ ಉಂಟಾಗುವುದಿಲ್ಲ. ||೮೧-೮೨||

ನಿನ್ನ ಕಥೆಯನ್ನು ಕೇಳುವುದರಿಂದ ಮನಸ್ಸಿನ ತಾಪವು ಶಾಂತವಾಗಿ ಆಹ್ಲಾದವುಂಟಾಗುತ್ತದೆ. ಮತ್ತು ನಿನ್ನ ಕಥಾಶ್ರವಣವೇ ಸ್ವರ್ಗಮೋಕ್ಷಗಳಿಗೆ ದ್ವಾರವು, ಹಾಗೆಯೇ ಮೋಕ್ಷಸುಖಗಳಿಗೂ ದ್ವಾರವಾಗಿರುತ್ತದೆ. ||೮೩||

ಶ್ರೀಕೃಷ್ಣನು ಹೇಳಿದನು—ಎಲೈ ಬ್ರಾಹ್ಮಣನೇ, ನಾನು ಜನ್ಮಿಸಿದ ದಿನದಲ್ಲಿ ನನ್ನ ತಂದೆಯು ನನ್ನ ಜನ್ಮೋತ್ಸವವನ್ನು ನೆರವೇರಿಸಿ ಬಳಿಕ ಎಂಟು ದಿವಸಗಳು ಕಳೆಯಲು ಕೆಲವು ಮಂದಿ ಗೋಪಾಲಕರಿಂದ ಕೂಡಿದವನಾಗಿ ಭೋಜ

ತದ್ರಾತ್ರೌ ತೃಷಿತಃ ಶ್ರಾಂತೋ ವಿಶ್ರಾಂತಃ ಪ್ರಾತರೇವ ಹಿ ॥೮೫॥

ಗತ್ವಾ ರಾಜ್ಞೋ ಗೃಹಂ ತತ್ರ ನತ್ವಾ ರಾಜ್ಞೇ ಕರಂ ದದೌ ।
ದತ್ವಾ ತಸ್ಯಾಧಿಕಾರಿಭ್ಯ ಆಜಗಾಮಾವಮೋಚನಂ ॥೮೬॥

ಶ್ರುತ್ವಾ ಶೌರಿಸ್ತಮಾಯಾತಂ ನಂದಂ ಸುಹೃದಮಾತ್ಮನಃ ।
ರಾಜ್ಞೇ ದತ್ತಕರಂ ಜ್ಞಾತ್ವಾ ಯಯೌ ತದ್ದರ್ಶನೋತ್ಸುಕಃ ॥೮೭॥

ತತೋ ವಿಲೋಕ್ಯ ತಂ ನಂದಃ ಶೌರಿಂ ತತ್ರ ಸಮಾಗತಮ್ ।
ಉತ್ಥಾಯ ಸಂಭ್ರಮೇಣಾಶು ಸಹಜಪ್ರೇಮ ವಿಹ್ವಲಃ ॥೮೮॥

ಚಿರಂ ವಿಮೋಚ್ಯ ಹೃದಯಾದುಪವೇಶ್ಯ ವರಾಸನೇ ।
ವಸುದೇವಮುವಾಚೇದಂ ಕಿಂ ಪೃಚ್ಛೇ ದರ್ಶನಂ ತವ ॥೮೯॥

---

ರಾಜನಿಗೆ ಪ್ರತಿವರ್ಷದ ಕಪ್ಪವನ್ನು ಕೊಡುವುದಕ್ಕೋಸ್ಕರ ಅವನ ಪಟ್ಟಣವನ್ನು ಕುರಿತು ಹೋದನು. ||೮೪||

ಆ ದಿನ ರಾತ್ರಿ ನಂದನು ಹಸಿವು ಬಾಯಾರಿಕೆಗಳಿಂದ ಬಳಲಿದವನಾಗಿ ಆ ಪಟ್ಟಣದಲ್ಲಿಯೇ ವಿಶ್ರಮಿಸಿಕೊಂಡು, ಪ್ರಾತಃಕಾಲವಾಗಲು ರಾಜಗೃಹವನ್ನು ಸೇರಿ, ರಾಜನನ್ನು ನಮಸ್ಕರಿಸಿ, ಅಧಿಕಾರಿಗಳಿಗೆ ಕಪ್ಪವನ್ನು ಸಮರ್ಪಿಸಿ ಋಣ ಮುಕ್ತನಾದನು. ||೮೫-೮೬||

ನಂದನು ರಾಜನಿಗೆ ಕಪ್ಪವನ್ನು ಒಪ್ಪಿಸಿ ಹಿಂತಿರುಗಿ ಬರುತ್ತಿರುವನೆಂಬ ವಾರ್ತೆಯನ್ನು ಕೇಳಿ ಅವನ ಸ್ನೇಹಿತನಾದ ಶೌರಿಯು ಅವನನ್ನು ನೋಡಲು ಬಂದನು. ||೮೭||

ತರುವಾಯ ತಾನಿದ್ದೆಡೆಗೆ ಬಂದ ವಸುದೇವನನ್ನು ನೋಡಿ ನಂದನು ಸಹಜವಾದ ಪ್ರೇಮದಿಂದ ಕೂಡಿದವನಾಗಿ ಪ್ರತ್ಯುತ್ಥಾನಮಾಡಿ, ದೀರ್ಘಕಾಲದ ಪರ್ಯಂತರ ಅವನನ್ನು ಆಲಿಂಗಿಸಿ, ಬಳಿಕ ಶ್ರೇಷ್ಠವಾದ ಆಸನದಲ್ಲಿ ಕುಳ್ಳಿರಿಸಿ ಹೀಗೆಂದು ಹೇಳಿದನು. ಎಲೈ ಮಿತ್ರನೇ, ನಿನ್ನ ದರ್ಶನವು ಲಭಿಸಿದುದನ್ನು ಏನೆಂದು ಹೇಳಲಿ? (ನಿನ್ನ ದರ್ಶನದ ಆನಂದಾತಿರೇಕದಿಂದ ಏನನ್ನು ಹೇಳಲೂ ತೋರುವುದಿಲ್ಲ ಎಂದರ್ಥವು.) ||೮೮-೮೯||

ಜೀವಸೀತ್ಯದ್ಭುತಂ ಜಾತಂ ಕಂಸೇ ಜೀವತಿ ನಿಶ್ಚಿತಮ್ ।
ಬಹವೋ ನಿಹತಾ ಯೇನ ಶಿಶವಃ ಪಾವಕೋಪಮಾಃ ॥೯೦॥

ಅವಶಿಷ್ಟಾ ಸುತಾ ಚೈಕಾ ಸಾಽಪಿ ತೇನ ನಿಪಾತಿತಾ ।
ತಥಾಽಪ್ಯದೃಷ್ಟಮಾಶ್ರಿತ್ಯ ಸುಖಂ ದುಃಖಂ ನ ಚಾನ್ಯಥಾ ॥೯೧॥

ದೈವೇಽನುಕೂಲೇ ಭವತಿ ಸಂತತಿಃ ಸುಹೃದಾಂ ವರ ।
ಪ್ರತಿಕೂಲೇ ತಥಾ ದೈವೇ ಸಾ ನಾಶಂ ವ್ರಜತಿ ಧ್ರುವಮ್ ॥೯೨॥

ವಸುದೇವ ವಿದಾಂ ಬುದ್ಧಿರ್ನ ಮೋಹಾಯ ಹಿ ಕಲ್ಪತೇ
ತತ್ರ ದೈವಮಿತಿ ಜ್ಞಾತ್ವಾ ನ ಚ ಶೋಚಿತುಮರ್ಹಸಿ ।
ಈಶ್ವರೇಣ ಕೃತಂ ಯತ್ತದುದ್ಭವತ್ಯೇವ ನಾನ್ಯಥಾ ॥೯೩॥

---

ಯಾವ ಕಂಸನಿಂದ ಅತಿ ತೇಜಸ್ವಿಗಳಾದ ನಿನ್ನ ಅನೇಕ ಶಿಶುಗಳು ಕೊಲ್ಲಲ್ಪಟ್ಟವೋ ಅಂತಹ ಕಂಸನು ಇನ್ನೂ ಜೀವಸಹಿತನಾಗಿರಲು ನೀನು ಜೀವಿಸಿರುವೆ ಎಂಬುದು ಅತ್ಯಾಶ್ಚರ್ಯಕರವಾದ ಸಂಗತಿಯಾಗಿರುವುದು. ॥೯೦॥

ನಿನ್ನ ಸಕಲ ಶಿಶುಗಳೂ ಆ ಕಂಸನಿಂದ ಕೊಲ್ಲಲ್ಪಟ್ಟು ಉಳಿದಿದ್ದ ಒಬ್ಬಳು ಹೆಣ್ಣುಮಗಳೂ ಸಹ ಕೊಲ್ಲಲ್ಪಟ್ಟಳು. ಆದರೂ ಸುಖದುಃಖಗಳು ಅವರವರ ಅದೃಷ್ಟವನ್ನು ಅವಲಂಬಿಸಿರುತ್ತವೆ. ಅನ್ಯಥಾ ಇಲ್ಲ. ॥೯೧॥

ಎಲೈ ಮಿತ್ರವರ್ಯನೇ, ವಿಧಿಯು ಅನುಕೂಲವಾಗಿದ್ದರೆ ಸಂತತಿಯು ಉಂಟಾಗುತ್ತದೆ. ಆ ವಿಧಿಯು ಪ್ರತಿಕೂಲವಾದರೆ ಸಂತತಿಯು ಉಂಟಾದರೂ ನಾಶವನ್ನು ಹೊಂದುತ್ತದೆ. ॥೯೨॥

ಎಲೈ ವಸುದೇವನೇ, ಜ್ಞಾನಿಗಳ ಬುದ್ಧಿಯು ಮೋಹವನ್ನು ಹೊಂದುವುದಿಲ್ಲ. ಆದುದರಿಂದ ಸಂತತಿಯ ಆಗುಹೋಗುಗಳು ದೈವಾಯತ್ತವಾದುವುಗಳೆಂದು ತಿಳಿದು, ಜ್ಞಾನಿಯಾದ ನೀನು ಈ ವಿಷಯವನ್ನು ಕುರಿತು ಶೋಚಿಸುವವನಾಗಬೇಡ. ಈಶ್ವರನಿಂದ ನಿಯಮಿಸಲ್ಪಟ್ಟ ಸಮಸ್ತ ಕಾರ್ಯವೂ ಅವನ ಸಂಕಲ್ಪಕ್ಕೆ ಅನುಗುಣವಾಗಿಯೇ ಆಗುವುದಲ್ಲದೆ ವಿಪರೀತವಾಗಿ ಎಂದಿಗೂ ಆಗಲಾರದು. ॥೯೩॥

ಏವಂ ಶ್ರುತ್ವಾ ನಂದವಾಕ್ಯಂ ತದಾನೀಂ
ಶೌರಿಶ್ಚೈವಂ ಲಬ್ಧಬುದ್ಧಿ ಪ್ರಸಾದಃ ।
ತ್ಯಕ್ತ್ವಾಽಶೋಕಂ ಮೋಹಭಾರಂ ತಥೈವ
ಯಥಾಗತಂ ಪ್ರಸ್ಥಿತೋ ಭಾವಿತಾತ್ಮಾ ॥೯೪॥

ಯಾಚಕೇಭ್ಯೋಽಖಿಲೇಭ್ಯಶ್ಚ ವ್ರಜೇಽಭೂತ್ಪರಮೋತ್ಸವಃ ।
ನಿಹತ್ಯೈವಂ ಬಕೀಂ ದುಷ್ಟಾಂ ಮುನೇಽಹಂ ವ್ರಜಮಾಸ್ಥಿತಃ ॥೯೫॥

ಸುಖಯನ್ಬಾಲರೂಪೇಣ ತತ್ರ ಸರ್ವಾನ್ ವ್ರಜೌಕಸಃ ।
ಕಂಸೋಽಪಿ ಲೋಕೇ ಶುಶ್ರಾವ ಮೃತಾ ಘೋರಾ ವ್ರಜೇ ಬಕೀ ॥೯೬॥

ಸ್ತನೌ ಗರಲಸಂಲಿಪ್ತೌ ದತ್ವಾ ಬಾಲಾಯ ಗರ್ವಿತಾ ।
ಸ್ವಯಂ ಮೃತೇತಿ ಕಂಸೋ ವೈ ಮೇನೇ ನಾನ್ಯೇನ ಹೇತುನಾ ॥೯೭॥

ವಿಕ್ರಿಯಾ ಗರಲಸ್ಯೈವ ಪ್ರವೃತ್ತಾ ಮರಣಾಯ ಹಿ ।
ತಯೈವೋಕ್ತೋ ಯತಃ ಸ್ವಪ್ನಃ ಸದ್ಯೋ ಮರಣ ಸೂಚಕಃ ॥೯೮॥

---

ನಂದನ ಈ ಪ್ರಕಾರವಾದ ಮಾತುಗಳನ್ನು ಕೇಳಿ ಶೌರಿಯು ವಿವೇಕ ಜ್ಞಾನವನ್ನು ಪಡೆದವನಾಗಿ ಶೋಕಮೋಹಗಳನ್ನು ತ್ಯಜಿಸಿ ತಾನು ಆಗಮಿಸಿದ್ದಂತೆಯೇ ಹಿಂತಿರುಗಿದನು. ಇತ್ತಲಾಗಿ ಗೋಕುಲದಲ್ಲಿ ಪೂತನಿಯು ನನ್ನಿಂದ ಕೊಲ್ಲಲ್ಪಡಲು ಯಾಚಕರಾದಿಯಾಗಿ ಸಕಲರಿಗೂ ಪರಮಾನಂದವುಂಟಾಯಿತು. ॥೯೪॥

ಎಲೈ ಮುನಿಯೇ, ಈ ಪ್ರಕಾರವಾಗಿ ದುಷ್ಟಳಾದ ಆ ರಾಕ್ಷಸಿಯನ್ನು ಸಂಹರಿಸಿ, ಗೊಪಗೃಹದಲ್ಲಿರುವ ಸಕಲಜನರಿಗೂ, ಬಾಲರೂಪದಿಂದ ಸಂತೋಷವನ್ನುಂಟುಮಾಡುವವನಾಗಿ ಗೋಪಗ್ರಾಮದಲ್ಲಿ ಇರುವವನಾದೆನು. ॥೯೫॥

ಇತ್ತ ಕಂಸನಾದರೋ ಗೋಪಗ್ರಾಮದಲ್ಲಿ ಘೋರರಾಕ್ಷಸಿಯು ಮೃತಳಾದಳೆಂಬ ವಾರ್ತೆಯನ್ನು ಕೇಳಿದವನಾದನು. ॥೯೬॥

ಮದಾಂಧಳಾದ ಆ ರಾಕ್ಷಸಿಯು ವಿಷಲಿಪ್ತವಾದ ತನ್ನ ಸ್ತನಗಳನ್ನು ಓರ್ವ ಬಾಲಕನಿಗೆ ಸ್ತನ್ಯಪಾನಮಾಡಿಸುವ ಇಚ್ಛೆಯಿಂದ ಸಮರ್ಪಿಸಿ, ವಿಷದ ಪ್ರಭಾವದಿಂದ ಸ್ವತಃ ಮರಣವನ್ನು ಹೊಂದಿದಳು. ಎಂಬುದಾಗಿಯೇ ಕಂಸನು ಅರಿತಿದ್ದನು. ಅವನು ಅವಳ ಮರಣದ ವಿಷಯದಲ್ಲಿ ನಿಜವಾದ ಕಾರಣವನ್ನು ಅರಿಯದವನಾ

**ಏವಂ ವಿತರ್ಕಯಂತಂ ತಮಾಜಗಾಮ ವೃಕೋದರೀ ॥೯೯॥**

॥ ವೃಕೋದರ್ಯುವಾಚ ॥

**ಮೃತಾ ಮೇ ಭಗಿನೀ ಕಂಸ ತವ ಕಾರ್ಯಾಯ ಸಾ ಗತಾ ।**
**ಕಿಂ ಜೀವಿತೇನ ತನ್ಮೇಽದ್ಯ ಗೋಪೈರಲ್ಪೈರ್ನಿಪಾತಿತಾ ॥೧೦೦॥**

**ಧಿಕ್ತೇ ಜನ್ಮ ವೃಥಾ ಮಾನಂ ತವೈಶ್ವರ್ಯಂ ಪರಾಕ್ರಮಮ್ ।**
**ತ್ವಯಿ ಜೀವತಿ ಮೇ ಕಾಂತಾ ಭಗಿನೀ ನಿಹತಾ ವ್ರಜೇ ॥೧೦೧॥**

**ಅಹೋ ಸೃಗಾಲೋ ಬಲವಾನ್ಸಿಂಹಂ ಚೈವ ನಿಹಂತಿ ಕಿಂ ।**
**ಮಾರ್ಜಾರಂ ಮೂಷಕೋ ವಾಽಪಿ ಸರ್ವಂ ವೈ ಹ್ಯದ್ಭುತಂ ಪರಂ ॥೧೦೨॥**

**ಕ್ಷುದ್ರಾಶ್ಚೈವ ವ್ರಜೇ ಕಂಸ ಯೇ ವಸಂತಿ ವದಾಮಿ ಕಿಮ್ ।**
**ತೇಷಾಂ ನಿಕಾರೋ ಹಸ್ತೇನ ತವ ನಾಪಿ ಮಹಾತ್ಮನಃ ॥೧೦೩॥**

---

ಗಿದ್ದನು. ಏಕೆಂದರೆ ಪೂತನಿಯು ತಾನು ಅನುಭವಿಸಿದ್ದ, ಶೀಘ್ರದಲ್ಲಿಯೇ ಮರಣವನ್ನು ಸೂಚಿಸುವ, ಸ್ವಪ್ನವೊಂದನ್ನು ಕಂಸನಿಗೆ ತಿಳಿಸಿದ್ದಳು. ॥೯೭-೯೮॥

ಈ ಪ್ರಕಾರವಾಗಿ ತರ್ಕಿಸುತ್ತಿರುವ ಕಂಸನಿದ್ದಲ್ಲಿಗೆ ಪೂತನಿಯ ಸಹೋದರಿಯಾದ ವೃಕೋದರಿ ಎಂಬ ರಾಕ್ಷಸಿಯು ಬಂದಳು. ॥೯೯॥

ವೃಕೋದರಿಯು ಹೇಳಿದಳು---ಎಲೈ ಕಂಸನೇ, ನನ್ನ ಸಹೋದರಿಯಾದ ಪೂತನಿಯು ನಿನ್ನ ಕಾರ್ಯವನ್ನು ಸಾಧಿಸಲು ಹೋಗಿ ಮೃತಳಾದಳು. ಕ್ಷುದ್ರರಾದ ಗೋಪಾಲಕರಿಂದ ಅವಳು ಹತಳಾಗಲು ನಾನು ಜೀವಿಸಿ ಫಲವೇನು ? ॥೧೦೦॥

ನಿನ್ನ ಜೀವಿತಕ್ಕೆ ಧಿಕ್ಕಾರವಿರಲಿ. ನಿನ್ನ ಅಭಿಮಾನವೂ, ಐಶ್ವರ್ಯವೂ ಮತ್ತು ಪರಾಕ್ರಮವೂ ವ್ಯರ್ಥವಾದವುಗಳು. ನೀನು ಜೀವಿಸಿರುವಾಗಲೇ ಪ್ರೀತಿಪಾತ್ರಳಾದ ನನ್ನ ಸಹೋದರಿಯು ಗೋಪಗ್ರಾಮದಲ್ಲಿ ಕೊಲ್ಲಲ್ಪಟ್ಟಳು. ೧೦೧॥

ನರಿಯು ಬಲಶಾಲಿಯಾಗಿದ್ದರೂ ಸಿಂಹವನ್ನು ಕೊಲ್ಲಬಲ್ಲದೆ? ಮೂಷಕವು ತನಗಿಂತ ಬಲಶಾಲಿಯಾದ ಬೆಕ್ಕನ್ನು ಕೊಲ್ಲಬಲ್ಲುದೆ? ಇದು ಬಹು ಆಶ್ಚರ್ಯಕರವಾದ ವಿಷಯವಾಗಿರುತ್ತದೆ. ॥೧೦೨॥

ಎಲೈ ಕಂಸನೇ, ಯಾವ ಅಲ್ಪರಾದ ಗೋಪಾಲಕರು ಗೋಕುಲದಲ್ಲಿ ವಾಸಿಸುತ್ತಿರುವರೋ ಅವರನ್ನು ಮಹಾಪರಾಕ್ರಮಶಾಲಿಯಾದ ನೀನು ಸ್ವಹಸ್ತ

**ಬಾಲಾಶ್ಚ ಪ್ರಭವೋ ಯಸ್ಯ ತಸ್ಯಾಂತೇ ಜೀವಿತಾತ್ಸುಖಂ ।**
**ಮರಣೇ ಭಾತಿ ಮೇ ಕಂಸ ಕಿಂ ವದಾಮಿ ಹತಾಽಸ್ಯ(ಸ್ಮ್ಯ)ಹಮ್॥೧೦೪॥**

**ಧಿಗ್ಧಿಗ್ವೀರ್ಯಂ ತವೈವೇದಂ ಧಿಗ್ರಾಜತ್ವಂ ವದಾಮಿ ಕಿಮ್ ।**
**ಸರ್ವಂ ವೈ ವಿಫಲಂ ಜಾತಂ ಬಾಲಕೇನ ಹತಂ ತಥಾ ॥೧೦೫॥**

**ಅಧುನಾ ಕಿಂ ವದಿಷ್ಯಾಮಿ ವದ ಕಂಸ ಮಹಾಬಲ ।**
**ಭಗಿನೀ ನಿಹತಾ ಮೇ ಹಿ ಧಿಕ್ ಧಿಙ್ಮಾಂ ವ್ಯರ್ಥಜೀವಿನೀಮ್ ॥೧೦೬॥**

**ವಿನಾಶ ಸಮಯೇ ಬುದ್ಧಿರ್ಮರ್ತ್ಯಾನಾಂ ಕಾಲನೌಕಸಾಂ ।**
**ವಿಪರೀತಾ ಭವೇದ್ಧ್ರುವ್ಯಂ ಕೋಽನ್ಯಥಾ ಕರ್ತುಮೀಶ್ವರಃ ॥೧೦೭॥**

---

ದಿಂದ ಏಕೆ ನಿವಾರಿಸುವುದಿಲ್ಲ (ಸಂಹರಿಸುವುದಿಲ್ಲ)? ನಿನ್ನ ವರ್ತನೆಯನ್ನು ಏನೆಂದು ಹೇಳಲಿ? ॥೧೦೩॥

ಯಾವನಿಗೆ, ಬಾಲಕರೂ ಸಹ ಪ್ರಭುಗಳಾಗಿರುವರೋ ಅಂತಹ ನಿನ್ನ ಸಮೀಪದಲ್ಲಿ ಜೀವಿಸಿರುವುದಕ್ಕಿಂತಲೂ, ಮರಣವೇ ಲೇಸಾದುದೆಂದು ನನಗೆ ತೋರುವುದು. ಇದನ್ನು ನಾನು ಏನೆಂದು ಹೇಳಲಿ? ನನ್ನ ಸರ್ವಸ್ವವೂ ನಾಶವಾದಂತಾಗಿರುವುದು. ॥೧೦೪॥

ನಿನ್ನ ಪರಾಕ್ರಮಕ್ಕೂ, ತಿಳಿವಳಿಕೆಗೂ ಮತ್ತು ಪ್ರಭುತ್ವಕ್ಕೂ ಸಹ ಧಿಕ್ಕಾರವಿರಲಿ. ಸಕಲವೂ ವಿಫಲವಾಗಿ ಪರಿಣಮಿಸಿತು. ಮತ್ತು ಅಲ್ಪನಾದ ಓರ್ವ ಬಾಲಕನಿಂದ ಸರ್ವಸ್ವವೂ ನಾಶಮಾಡಲ್ಪಟ್ಟಿತು. ॥೧೦೫॥

ಎಲೈ ಮಹಾ ಪರಾಕ್ರಮಶಾಲಿಯಾದ ಕಂಸನೇ, ಈಗ ನಾನು ಏನೆಂದು ಹೇಳಲಿ? ಅದನ್ನು ಹೇಳುವವನಾಗು. ನನ್ನ ಸಹೋದರಿಯು ಕೊಲ್ಲಲ್ಪಟ್ಟಳು. ವ್ಯರ್ಥವಾಗಿ ಜೀವಿಸುತ್ತಿರುವ ನನಗೆ ಧಿಕ್ಕಾರವಿರಲಿ. ॥೧೦೬॥

ಕಾಲದ ಗತಿಯನ್ನು ಅರಿಯದ ಮನುಷ್ಯರ ಬುದ್ಧಿಯು, ವಿನಾಶಕಾಲವು ಪ್ರಾಪ್ತವಾಗಲು, ವಿಪರೀತವಾಗಿ ಪರಿಣಮಿಸುತ್ತದೆ. ಸಹಜವಾದ ಆಗು ಹೋಗುಗಳನ್ನು ಪರಿವರ್ತಿಸಲು ಯಾರು ತಾನೆ ಸಮರ್ಥರು? ॥೧೦೭॥

**ಗಮಿಷ್ಯತಿ ಪತಿಸ್ತಸ್ಯಾ ಮಹಾಕ್ರೋಧೀ ಘಟೋದರಃ ।**
**ಅಘಾಸುರೋ ಬಕೋ ನಾಽಪಿ ಭ್ರಾತರೌ ಕ್ರೋಧಿನೌ ತತಃ ॥೧೦೮॥**

**ವ್ರಜಸ್ಥಾನಾಂ ಚ ಸರ್ವೇಷಾಂ ಗ್ರಸಿತಾರಸ್ತು ತೇ ತ್ರಯಃ ।**
**ಗಮಿಷ್ಯಂತಿ ಫಲಂ ತೇಷಾಂ ವೈರಸ್ಯ ತು ಭವಿಷ್ಯತಿ ॥೧೦೯॥**

|| ಕಂಸ ಉವಾಚ ||

**ಸ್ವಯಮೇವ ಗರಾಲಿಪ್ತಸ್ತನಾ ಮೂಢಾ ಗತಾ ಹಿ ಸಾ ।**
**ದೂಷಣಂ ನ ಹಿ ಕೇಷಾಂ ಚಿತ್ತೇಷಾಂ ವೈ ವ್ರಜವಾಸಿನಾಂ ॥೧೧೦॥**

**ಯದಿ ಜಾನಾಮಿ ತೇ ನಾಶಂ ನೀತಾ ವೈರಂ ತು ವೈ ಶುಭಂ ।**
**ಅಘಾಸುರಬಕೌ ತತ್ರ ಗಚ್ಛತೌ ಬಲವತ್ತರೌ ॥೧೧೧॥**

---

ಪೂತನಿಯ ಪತಿಯಾದ ಘಟೋದರನು ಕ್ರೋಧಾವಿಷ್ಟನಾಗಿರುವನು. ಮತ್ತು ಅವಳ ಸಹೋದರರಾದ ಅಘಾಸುರ ಮತ್ತು ಬಕನೆಂಬ ಇಬ್ಬರು ರಾಕ್ಷಸರೂ ಕೂಡ ಕೋಪಗೊಂಡವರಾಗಿರುವರು. ||೧೦೮||

ಈ ಮೂವರೂ, ಗೋಕುಲದಲ್ಲಿ ವಾಸಿಸುವ ಸಕಲ ಜನರನ್ನೂ ಒಂದೇ ಬಾರಿಗೆ ನುಂಗುವವರಾಗಿದ್ದಾರೆ. ಹೀಗಿರುತ್ತಿರಲು, ಗೋಕುಲದಲ್ಲಿ ವಾಸಿಸುವ ಜನರ ಅಪರಾಧಕ್ಕೆ ತಕ್ಕ ಫಲವು ಸಿಕ್ಕಿದಂತಾಗುವುದು. ಮತ್ತು ವೈರದ ಪ್ರತೀಕಾರವೂ ಆಗುವುದು. ವೃಕೋದರಿಯು ಹೀಗೆಂದು ಪ್ರಲಾಪಿಸಲು ||೧೦೯||

ಕಂಸನು ಹೇಳಿದನು—ಮೂಢಳಾದ ಆ ಪೂತನಿಯು, ತಾನೇ ತನ್ನ ಸ್ತನಗಳಿಗೆ ವಿಷವನ್ನು ಲೇಪಿಸಿಕೊಂಡು ಗೋಕುಲಕ್ಕೆ ಹೋದಳು. ಇದರಲ್ಲಿ ಯಾರ ಅಪರಾಧವೂ ಇಲ್ಲ. ಗೋಕುಲವಾಸಿಗಳು ನಿರಪರಾಧಿಗಳಾಗಿದ್ದಾರೆ. ||೧೧೦||

ಇದನ್ನು ನಾನು ತಿಳಿದಿರುವೆನು. ಆ ಗೋಕುಲವಾಸಿಗಳು ನಷ್ಟರಾದಂತೆಯೇ ಸರಿ. ಮತ್ತು ಅವರ ಬಲವತ್ತರವಾದ ವೈರವನ್ನೂ ಬೆಳಸಿದಂತೆಯೂ ಆಯಿತು. ಅವರನ್ನು ನಾಶಮಾಡಲು ಅಘಾಸುರ ಮತ್ತು ಬಕ ಇವರಿಬ್ಬರೂ ಗೋಕುಲಕ್ಕೆ ಹೋಗಲಿರುವರು. ||೧೧೧||

**ಅಥ ವಾಽದ್ಯ ತೃಣಾವರ್ತೋ ಭೃಶಂ ಮೇ ಚಾತಿವಲ್ಲಭಃ ।**
**ಗಮಿಷ್ಯತಿ ಮಯಾಽಜ್ಞಪ್ತೋ ವ್ರಜನಾಶಾಯ ಸಾಂಪ್ರತಂ ॥೧೧೨॥**

**ಘಟೋದರಾದಯೋ ಯಾವತ್ ಸಮೇಷ್ಯಂತಿ ವೃಕೋದರಿ ।**
**ತಾವತ್ತ್ವಂ ತಿಷ್ಠ ಮದ್ಗೇಹೇ ಯಾವತ್ಕಾರ್ಯಂ ಪ್ರಸಿಧ್ಯತಿ ॥೧೧೩॥**

॥ ಶ್ರೀಕೃಷ್ಣ ಉವಾಚ ॥

**ಇತಿ ಕಂಸ ವಚಃ ಶ್ರುತ್ವಾ ನ ಸ್ಥಿತಾ ಸಾ ವೃಕೋದರೀ ।**
**ಜಗಾಮ ಭಗಿನೀಶೋಕಮೂರ್ಛಿತಾ ನಿಜಮಂದಿರಂ ॥೧೧೪॥**

**ಕಂಸೋಽಪಿ ತದ್ವತ್ಸಸ್ಮಾರ ರಾಜಕಾರ್ಯಂ ಸಮಾಕುಲಃ ।**
**ಅಹಂ ಚ ಗೋಪಸದನೇ ಬಾಲಚೇಷ್ಟಾಭಿರದ್ಭುತಂ ॥೧೧೫॥**

---

ಅಥವಾ ನನಗೆ ಅತ್ಯಂತ ಪ್ರೀತಿಪಾತ್ರನಾಗಿರುವ ತೃಣಾವರ್ತನು ನನ್ನಿಂದ ಆಜ್ಞಾಪಿಸಲ್ಪಟ್ಟವನಾಗಿ ಈಗಿಂದೀಗಲೇ ಗೋಕುಲವನ್ನು ಧ್ವಂಸಗೊಳಿಸಲು ಹೋಗುವನು. ॥೧೧೨॥

ಎಲೌ ವೃಕೋದರಿಯೇ, ಘಟೋದರನೇ ಮೊದಲಾದವರು ಗೋಕುಲವನ್ನು ಕುರಿತು ತೆರಳುವರು. ಅವರ ಕಾರ್ಯವು ಸಿದ್ಧಿಸುವವರೆಗೂ ನೀನು ನನ್ನ ಗೃಹದಲ್ಲಿಯೇ ಇರುವವಳಾಗು. ॥೧೧೩॥

ಶ್ರೀಕೃಷ್ಣನು ಹೇಳಿದನು — ಕಂಸನ ಮಾತನ್ನು ಕೇಳಿ ವೃಕೋದರಿಯು ಆ ಸ್ಥಳದಲ್ಲಿ ಇರಲಾರದೇ, ಭಗಿನೀಶೋಕದಿಂದ ಮೂರ್ಛೆಗೊಂಡವಳಾಗಿ ಎದ್ದ ಬಳಿಕ ತನ್ನ ಗೃಹವನ್ನು ಕುರಿತು ತೆರಳಿದಳು. ಅದರಂತೆಯೇ ಕಂಸನೂ ಸಹ ಚಿಂತಾಕ್ರಾಂತನಾಗಿ ಮುಂದೆ ಕೈಗೊಳ್ಳಬಹುದಾದ ರಾಜಕಾರ್ಯವನ್ನು ಯೋಚಿಸ ತೊಡಗಿದನು. ॥೧೧೪॥

ನಾನಾದರೋ ಗೋಪಗೃಹದಲ್ಲಿ ಯಶೋದಾ ಮತ್ತು ನಂದ ಇವರಿಬ್ಬರಲ್ಲೂ ನನ್ನ ಅದ್ಭುತವಾದ ಬಾಲ್ಯಚೇಷ್ಟೆಗಳಿಂದ ಅಪಾರವಾದ ಆನಂದವನ್ನುಂಟುಮಾಡುತ್ತಲಿದ್ದೆನು. ॥೧೧೫॥

**ಸುಖ ಮ್ಮಹದ್ದದಾನಸ್ತು ತತ್ರ ನಂದ ಯಶೋದಯೋಃ ।**
**ಯದಿ ಮೇ ಜನನೀ ರಾತ್ರೌ ಸುಪ್ತಾ ನಿದ್ರಾ ಕುಲಾಽಭವೇತ್ ॥೧೧೬॥**

**ತದಾಽಹಂ ರೋದನಮಿಷಾತ್ ನಿದ್ರಾಭಂಗಂ ಕರೋಮ್ಯಹಂ(ಲಂ) ।**
**ಜಾಗರಂ ಸಮವಾಪ್ಯಾಶು ಕರೋತಿ ಕರವಾದನಂ ॥೧೧೭॥**

**ಸಾ ಗಾಯತಿ ಮುನೇ ಗಾನಂ ಲಾಲಯಂತೀ ಭೃಶಂ ಹಿ ಮಾಂ ।**
**ತ್ವಂ ಮೇ ಪ್ರಾಣಪ್ರಿಯೋ ವತ್ಸ ತ್ವದಾಧಾರಂ ಹಿ ಜೀವನಂ ॥೧೧೮॥**

**ರೋದನಂ ತ್ವಂ ಮಾ ಚ ಕೃತ್ವಾ ಸುಖಂ ಶಯನಮಾಚರ ।**
**ತ್ವಯಿ ಜಾಗರ್ತಿ ಜಾಗರ್ಮಿ ತ್ವಯಿ ಸುಪ್ತೇ ಸ್ವಪಾಮ್ಯಹಂ ॥೧೧೯॥**

**ಸ್ತನಂ ಪಿಬ ಕ್ಷುಧಾರ್ತೋಽಸಿ ತ್ಯಕ್ತ್ವಾ ರೋದನಮಂಜಸಾ ।**
**ಕದಾಚಿದಂಕಮಾರೋಪ್ಯ ಶಯನಂ ಕಾರಯತ್ಯಪಿ ।**
**ಕ್ಷಣಂ ನಿದ್ರಾಽಭವತ್ತಸ್ಯಾ ಜಾಗರೋ ಜಾಯತೇ ನಿಶಿ ॥೧೨೦॥**

---

ರಾತ್ರಿಯ ಸಮಯದಲ್ಲಿ ಮಲಗಿರುವ ನನ್ನ ಮಾತೆಯು ನಿದ್ರಾಸಕ್ತಳಾಗಿರುವ ಸಮಯದಲ್ಲಿ ನಾನು ಅಳುವ ವ್ಯಾಜದಿಂದ ಅವಳಿಗೆ ನಿದ್ರಾಭಂಗವನ್ನುಂಟು ಮಾಡುವೆನು. ಬಳಿಕ ಅವಳು ಎಚ್ಚೆತ್ತವಳಾಗಿ ಕರತಾಡನವನ್ನು ಮಾಡುವಳು. ||೧೧೬-೧೧೭||

ಎಲೈ ಮುನಿಯೇ, ಯಶೋದೆಯು ನನ್ನನ್ನು ಲಾಲಿಸುವವಳಾಗಿ ಗಾನ ಮಾಡುವಳು. ಮತ್ತು ನನ್ನನ್ನು ಹೀಗೆಂದು ಸಮಾಧಾನಪಡಿಸುವಳು. ಎಲೈ ಮಗುವೇ, ನೀನು ನನ್ನ ಪ್ರಾಣಪ್ರಿಯನಾಗಿರುವೆ. ನನ್ನ ಜೀವನವು ನಿನ್ನನ್ನೇ ಅವಲಂಬಿಸಿರುತ್ತದೆ. ನೀನು ರೋದನಮಾಡದೆ ಸುಖವಾಗಿ ಮಲಗಿ ನಿದ್ರೆಮಾಡು. ||೧೧೮||

ನೀನು ಎಚ್ಚರವಾಗಿದ್ದರೆ ನಾನೂ ಎಚ್ಚರವಾಗಿರುತ್ತೇನೆ. ನೀನು ಮಲಗಿದರೆ ನಾನೂ ಮಲಗುವೆನು. ನಿನಗೆ ಹಸಿವುಂಟಾಗಿರುವುದಾದರೆ ರೋದನವನ್ನು ಬಿಟ್ಟು ಸ್ತನ್ಯವನ್ನು ಪಾನಮಾಡು. ||೧೧೯||

ಒಂದೊಂದು ವೇಳೆ ಅವಳು ನನ್ನನ್ನು ತನ್ನ ತೊಡೆಯ ಮೇಲೆ ಮಲಗಿಸುವಳು. ಇದರಿಂದ ಅವಳಿಗೆ ಕ್ಷಣಕಾಲ ನಿದ್ರೆಯು ಲಭಿಸುವುದು. ಉಳಿದ ಕಾಲಗಳಲ್ಲಿ ರಾತ್ರಿಯಲ್ಲೆಲ್ಲಾ ಜಾಗರಣೆಯೇ ಆಗುತ್ತದೆ. ||೧೨೦||

ಮುಖ ಮಾಸ್ವಾದಯಂತೀ ಮೇ ಚುಂಬನಾಲಿಂಗನಾದಿಭಿಃ ।
ಜಾಗರೇ ದರ್ಶನಾತ್ಸೌಖ್ಯಂ ನಿದ್ರಯಾ ಸ್ವಪ್ನದರ್ಶನಾತ್ ॥೧೨೧॥

ಸ್ವಭಾವಾತ್ಪುತ್ರಭಾವೇನ ಮಯಿ ಸ್ನೇಹಪರಾಽಭವತ್ ।
ಏವಂ ನಿಶಾ ವ್ಯತೀತಾ ಚೇತ್ಪ್ರಾತಃಕಾಲೋ ಭವೇದ್ಯದಿ ॥೧೨೨॥

ಸಮುತ್ಥಾಯಾಥ ಜನನೀ ಮುಖಂ ಪಶ್ಯತಿ ಮೇ ಭೃಶಂ ।
ವಿಲೋಕ್ಯ ವದನಂ ರಮ್ಯಂ ಸಾ ತಸ್ಯ ನಯನಾಂಬುಜಂ ॥೧೨೩॥

ಮೋದಮಾಯಾತಿ ಪರಮಂ ತತೋ ವದತಿ ಶೋಭನಂ ।
ಉತ್ತಿಷ್ಠ ತಾತ ಭದ್ರಂ ತೇ ಪಶ್ಯಂತೀ ತೇ ಮುಖಾಂಬುಜಂ ॥೧೨೪॥

ಸದಾ ಕರೋಮಿ ಕಾರ್ಯಾಣಿ ತ್ವನ್ಮುಖಂ ಮಮ ಮಂಗಲಂ ।
ಏವಂ ನಂದೋಽಪಿ ಮಾಂ ವೀಕ್ಷ್ಯ ಮೋಹಮಾಪ್ನೋತಿ ಶಾಶ್ವತಂ ॥೧೨೫॥
ಆರೋಪ್ಯಾಂಕಮಥೋ ಮೂರ್ಧ್ನಿ ಸಮಾಘ್ರಾಯ ಸಮಾಹಿತಃ ।

---

ಜಾಗ್ರದವಸ್ಥೆಯಲ್ಲಿ ಚುಂಬನ ಆಲಿಂಗನ ಮುಂತಾದುವುಗಳಿಂದ ನನ್ನ ಮುಖವನ್ನು ಆಸ್ವಾದಿಸುತ್ತಾ ನನ್ನ ದರ್ಶನದಿಂದ ಸಂತೋಷಪಡುವಳು. ನಿದ್ರಾವಸ್ಥೆಯಲ್ಲಿ ನನ್ನನ್ನು ಸ್ವಪ್ನದಲ್ಲಿ ನೋಡುವುದರಿಂದ ಸೌಖ್ಯವನ್ನು ಹೊಂದುವಳು. ॥೧೨೧॥

ಸ್ವಾಭಾವಿಕವಾಗಿ ನನ್ನಲ್ಲಿ ಪುತ್ರನೆಂಬ ಭಾವನೆಯಿಂದ ವಿಶ್ವಾಸವುಳ್ಳವಳಾಗಿದ್ದಳು. ಈ ಪ್ರಕಾರವಾಗಿ ರಾತ್ರಿಯು ಅತಿಕ್ರಮಿಸಿ ಬೆಳಗಾಗಲು ಮಾತೆಯು ಎದ್ದು ನನ್ನ ಮುಖವನ್ನು ದೀರ್ಘಕಾಲಪರ್ಯಂತ ನೋಡುವಳು. ॥೧೨೨॥

ಸುಂದರವಾದ ನನ್ನ ಮುಖವನ್ನು ನೋಡಿದ ಬಳಿಕ ಶಿಶುವಿನ ಕಮಲದಳದಂತೆ ವಿಶಾಲವಾದ ನೇತ್ರಗಳನ್ನು ನೋಡಿ, ಅಪಾರವಾದ ಸಂತೋಷವನ್ನು ಹೊಂದುವಳು. ಮತ್ತು ಸವಿಯಾದ ಮಾತುಗಳನ್ನಾಡುವಳು. ॥೧೨೩॥

ಎಲೈ ಮಗುವೇ, ಏಳುವವನಾಗು. ನಿನಗೆ ಮಂಗಳವಾಗಲಿ. ಅನವರತವೂ ನಿನ್ನ ಮುಖಕಮಲವನ್ನು ನೋಡುತ್ತಾ ನನ್ನ ಮನೆಗೆಲಸಗಳನ್ನು ಮಾಡುತ್ತೇನೆ. ನಿನ್ನ ಮುಖವು ನನಗೆ ಮಂಗಲವನ್ನುಂಟುಮಾಡುವುದಾಗಿರುತ್ತದೆ. ॥೧೨೪॥

ಇದೇ ರೀತಿಯಲ್ಲಿ ನಂದನೂ ಸಹ ನನ್ನನ್ನು ನೋಡಿ ಪರಮಾನಂದವನ್ನು ಹೊಂದುವನು. ॥೧೨೫॥

**ಮುಖಂ ಚುಂಬತಿ ಮೋದೇನ ಪುನಃ ಪಶ್ಯತಿ ಮೇ ಮುಖಂ ॥೧೨೬॥**

**ಕದಾಚಿದಂಕ ಆದಾಯ ಸ್ವಕಂಠೇ ಯೋಜಯತ್ಯಪಿ ।**
**ಅನುಭೂಯಾಶೇಷ ಸುಖಮುಭಾಭ್ಯಾ ಮುಚ್ಯತೇ ಕಥಾ ॥೧೨೭॥**

**ಪರಸ್ಪರಾನುಮೋದೇನ ಸ್ನೇಹೇನ ಮಯಿ ನಾರದ ।**
**ಆವಾಂ ಧನ್ಯೌ ಯತಃ ಪುತ್ರೋ ಗತೇ ವಯಸಿ ಶೋಭನಃ ॥೧೨೮॥**

**ಸಂಬಭೂವ ಪ್ರಿಯೋ ಜೀವ್ಯಾತ್ಸೋಽಯಂ ನೈ ಶರದಾಂ ಶತಂ ।**
**ವಿಭವೋ ದೃಷ್ಟಿ ದೋಷೇಣ ಬಹಿಸ್ಥಾಪ್ಯೋ ನ ತೇ ಕ್ವಚಿತ್ ॥೧೨೯॥**

**ದೃಷ್ಟಿದೋಷ ನಿವಾರಾಯ ಭಾಲೇ ಕಜ್ಜಲಕಂ ಕುರು ।**
**ಕಂಠೇ ವ್ಯಾಘ್ರನಖಂ ಚೈವ ರಾಮನಾಮಾಂಕಿತಂ ಸ್ವಯಂ ॥೧೩೦॥**

---

ನನ್ನನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಬಳಿಕ ನೆತ್ತಿಯನ್ನು ಆಘ್ರಾಣಿಸಿ ಸಮಾಧಾನ ಹೊಂದಿದವನಾಗಿ ಆನಂದದಿಂದ ಮುಖವನ್ನು ಮುತ್ತಿಡು ವನು. ಮತ್ತೊಮ್ಮೆ ನನ್ನ ಮುಖವನ್ನು ನೋಡುವನು. ॥೧೨೬॥

ಒಂದೊಂದು ಸಮಯದಲ್ಲಿ ನನ್ನನ್ನು ತೊಡೆಯಮೇಲೇರಿಸಿ ತನ್ನ ಕಂಠ ದೊಂದಿಗೆ ಬಿಗಿದು ಅಪ್ಪಿಕೊಳ್ಳುವನು. ಎಲೈ ನಾರದನೇ, ಈರೀತಿಯಲ್ಲಿ ನನ್ನಿಂದ ಸಕಲ ಸುಖವನ್ನೂ ಪಡೆದು ಅವರಿಬ್ಬರೂ ನನ್ನಲ್ಲಿರುವ ವಿಶ್ವಾಸದಿಂದ ಪರಸ್ಪರವಾಗಿ ಹೀಗೆಂದು ಮಾತನಾಡಿಕೊಳ್ಳುವರು. ॥೧೨೭॥

ನಾವು ಧನ್ಯರಾಗಿರುವೆವು. ಏಕೆಂದರೆ, ಪುತ್ರನು, ವಯಸ್ಸು ಬರುತ್ತಾ ಬರುತ್ತಾ ಸದ್ವರ್ತನೆಯುಳ್ಳವನೂ, ಪ್ರೀತಿಪಾತ್ರನೂ ಆಗಿರುವನು. ಅವನು ಬಹಳ ಕಾಲದ ವರೆಗೆ ಜೀವಿಸುವವನಾಗಲಿ. ॥೧೨೮॥

ಈ ನಮ್ಮ ವೈಭವದಂತೆ ಇರುವ ಪುತ್ರನನ್ನು ಎಂದಿಗೂ ಮನೆಯಿಂದ ಹೊರಗೆ ಹೋಗಗೊಡಬಾರದು. ಹೊರಗೆ ಹೋಗಲು ಅವಕಾಶ ಕೊಟ್ಟರೆ ದೃಷ್ಟಿ ದೋಷ ಉಂಟಾಗುವುದು. ಆದುದರಿಂದ ದೃಷ್ಟಿ ದೋಷವನ್ನು ಹೋಗಲಾಡಿಸುವುದ ಕ್ಕೋಸ್ಕರ ಹಣೆಯಲ್ಲಿ ಕಾಡಿಗೆಯನ್ನು ಧರಿಸುವಂತೆ ಮಾಡು. ಕಂಠದಲ್ಲಿ ಹುಲಿಯ ಉಗುರನ್ನು ಕಟ್ಟಿ ರಾಮನಾಮಾಂಕಿತವಾದ ಯಂತ್ರವನ್ನೂ ಕಟ್ಟಿಸುವವಳಾಗು. ॥೧೨೯-೧೩೦॥

ಆವಯೋಃ ಜೀವನಂ ಬಾಲಃ ಸೇವಿತಃ ಪರಮೇಶ್ವರಃ ।
ತೇನ ಪುಣ್ಯೇನ ಪುತ್ರೋಽಸೌ ಆವಯೋರಂಕಗಃ ಸ್ಫುಟಂ ॥೧೩೧॥

ಏವಂ ಪ್ರಾತಃ ಸಮುತ್ಥಾಯ ವಿಲೋಕ್ಯ ವದನಂ ಮಮ ।
ವಿಚಿತ್ರವಾಕ್ಯೌ ಪಿತರೌ ನಿತರಾಮ್ಮುದಮಾಪತುಃ ॥೧೩೨॥

ಪಶ್ಚಾನ್ಮೇ ಜನನೀ ಮಹ್ಯಂ ಸ್ಥಾಪಯಿತ್ವಾ ನಿಜಾಂತಿಕೇ ।
ಪಶ್ಯಂತೀ ಮನ್ಮುಖಂ ಶಶ್ವನ್ಮಮಂಥ ದಧಿ ಭಾಜನೇ ॥೧೩೩॥

ಗಾಯಂತೀ ಮಮ ಕರ್ಮಾಣಿ ಗೀತಾನಿ ತು ಮಹೋತ್ಸವೇ ।
ಯಾನಿ ಯೋಗಿಭಿರತ್ಯಂತಂ ಕಾಲತ್ರಯ ಕೃತಾನಿ ಹಿ ॥೧೩೪॥

ಯತ್ಕಿಂಚಿದ್ಗೃಹಕರ್ಮಾಣಿ ಕುರುತೇಽಹರ್ನಿಶಂ ತು ಸಾ ।
ಗಾಯಂತೀ ಮಮ ಕರ್ಮಾಣಿ ಪಾಪಂ ಶಾಮಯತೀತ್ಯಲಂ ॥೧೩೫॥

---

ಈ ಬಾಲಕನೇ ನಮ್ಮ ಜೀವನವು. ನಾವು ಪರಮೇಶ್ವರನನ್ನು ಸೇವಿಸಿದ್ದೆವು. ಆದರಿಂದುಂಟಾದ ಪುಣ್ಯದಿಂದ ಪುತ್ರನಾದ ಇವನು ನಮ್ಮ ತೊಡೆಯ ಮೇಲೆ ಕುಳಿತವನಾಗಿರುತ್ತಾನೆ. ॥೧೩೧॥

ಪ್ರಾತಃಕಾಲದಲ್ಲಿ ಹಾಸಿಗೆಯಿಂದ ಮೇಲಕ್ಕೆದ್ದು ನನ್ನ ಮಾತಾ ಪಿತೃಗಳು ನನ್ನ ಮುಖವನ್ನು ಅವಲೋಕಿಸಿ ಮೇಲೆ ಹೇಳಿದಂತೆ ವಿಚಿತ್ರವಾಗಿ ಮಾತನಾಡುತ್ತಾ ಆತ್ಮಾನಂದ ತುಂದಿಲರಾಗುತ್ತಿದ್ದರು. ॥೧೩೨॥

ತರುವಾಯ ಜನನಿಯು ನನ್ನನ್ನು ತನ್ನ ಸಮೀಪದಲ್ಲಿ ಕುಳ್ಳಿರಿಸಿಕೊಂಡು ಅನವರತವೂ ನನ್ನ ಮುಖವನ್ನೇ ನೋಡುತ್ತಾ ಪಾತ್ರೆಯಲ್ಲಿರುವ ಮೊಸರನ್ನು ಕಡೆಯುತ್ತಿದ್ದಳು. ॥೧೩೩॥

ಯಶೋದೆಯು ಉತ್ಸವದ ಸಮಯದಲ್ಲಿ, ವಿಷ್ಣುರೂಪಿಯಾದ ನಾನು ಕಳೆದ ಅನೇಕ ಯುಗಗಳಲ್ಲಿಯೂ ಕೈಗೊಂಡ ಮತ್ತು ಕಾಲತ್ರಯದಲ್ಲಿ ಮಾಡಿದ ನನ್ನ ಕಾರ್ಯಗಳನ್ನು ಗಾನಮಾಡುವಳು. ॥೧೩೪॥

ಆ ನನ್ನ ಮಾತೆಯು ಯಾವ ಯಾವ ಮನೆ ಕೆಲಸಗಳನ್ನು ಮಾಡುವಳೋ ಆಗ ನನ್ನ ಕಾರ್ಯಗಳನ್ನು ಗಾನಮಾಡುತ್ತಾ ತನ್ನ ಪಾಪಗಳನ್ನು ಹೋಗಲಾಡಿಸಿಕೊಳ್ಳುವಳು. ॥೧೩೫॥

ತಥೈವ ನಂದಗೋಪೋಽಪಿ ನ ಮಾಂ ವಿಸ್ಮರತಿ ಕ್ವಚಿತ್ ।
ಆಗತ್ಯಾನುದಿನಂ ತತ್ರ ಗೋಪ್ಯಃ ಸರ್ವಾಃ ಸಮಂತತಃ ॥೧೩೬॥

ಮುಖಂ ವಿಲೋಕಯಂತಿ ಸ್ಮ ಗಾಯಂತ್ಯೋ ನಂದಮಂದಿರಂ ।
ನ ತ್ಯಜಂತಿ ಕದಾಚಿದ್ವೈ ಬಾಲರೂಪ ವಿಮೋಹಿತಾಃ ॥೧೩೭॥

ಆನಯಂತಿ ಚ ಗೋಪ್ಯಸ್ತಾಃ ಸಿತಾಂ ಶ್ರೀಫಲಮಿಶ್ರಿತಾಂ ।
ವಸನಾನಿ ವಿಚಿತ್ರಾಣಿ ತಥೋಷ್ಣೀಷಂ ಚ ಕಂದುಕಂ ॥೧೩೮॥

ಅನ್ಯಚ್ಚ ಪರಿಧಾನೀಯಂ ತಾಂಬೂಲಂ ತಿಲಕಂ ತಥಾ ।
ತಥಾ ಕುಲೋಚಿತಂ ತಾಶ್ಚ ಪೂಜಿತಾಸ್ತು ಯಶೋದಯಾ ॥೧೩೯॥

ಯಾಂತಿ ಸ್ವಂ ಸ್ವಂ ಗೃಹಂ ಪ್ರಾತಃ ಪುನರಾಯಾಂತಿ ವೀಕ್ಷಿತುಂ ।
ಅನೇಕ ಸುಖಪೂರ್ಣೈಶ್ಚ ಗೋಪಾ ಗೋಪ್ಯಸ್ತಥಾ ವ್ರಜೇ ॥೧೪೦॥

ವಿಸ್ಮೃತ್ಯ ಗೃಹಕಾರ್ಯಾಣಿ ಮಾಂ ವಿಲೋಕಿತುಮಾಗತಾಃ ।
ಗಣಯಂತಿ ನ ವೈ ಕಿಂಚಿನ್ಮಮಾನಂದ ವಶೀಕೃತಾಃ ॥೧೪೧॥

---

ಅದರಂತೆಯೇ ನಂದಗೋಪನೂ ಸಹ, ನನ್ನನ್ನು ಎಂದಿಗೂ ಮರೆಯುತ್ತಿರಲಿಲ್ಲ. ಸಮಸ್ತ ಗೋಪಿಕಾ ಸ್ತ್ರೀಯರೂ ಕೂಡ ಪ್ರತಿದಿನವೂ ಅಲ್ಲಿಗೆ ಬಂದು ನನ್ನನ್ನು ಸುಖವಾಗಿ ನೋಡುವವರಾಗಿ ಬಾಲಕನಾದ ನನ್ನ ರೂಪದಿಂದ ಮೋಹಿತರಾಗಿ ನಂದನಗೃಹವನ್ನು ಎಂದಿಗೂ ಬಿಡಲಾರದವರಾಗಿದ್ದರು. ॥೧೩೬-೧೩೭॥

ಗೋಪಿಯರು ನನಗೋಸ್ಕರ ಶ್ರೀಫಲದಿಂದ ಮಿಶ್ರಿತವಾದ ಕಲ್ಲುಸಕ್ಕರೆಯನ್ನೂ ಚಿತ್ರವಿಚಿತ್ರವಾದ ವಸ್ತ್ರಗಳನ್ನೂ ಟೋಪಿಯನ್ನೂ ಮತ್ತು ಚೆಂಡನ್ನೂ ತರುವರು. ಮತ್ತೆ ಕೆಲವರು ಪರಿಧಾನೀಯ (ಮೇಲುಹೊದಿಯುವ ಬಟ್ಟೆ) ತಾಂಬೂಲ ತಿಲಕ ಮುಂತಾದುವುಗಳನ್ನೂ ನನಗೋಸ್ಕರ ತರುವರು. ॥೧೩೮॥

ನಮ್ಮ ಕುಲಧರ್ಮಾನುಸಾರವಾಗಿ ಯಶೋದೆಯಿಂದ ಸತ್ಕರಿಸಲ್ಪಟ್ಟವರಾಗಿ ತಮ್ಮ ತಮ್ಮ ಮನೆಗಳಿಗೆ ಹೋಗುತ್ತಿದ್ದರು. ಬೆಳಗಾಗಲು ಪುನಃ ನನ್ನನ್ನು ನೋಡಲು ಬರುವರು. ॥೧೩೯॥

ಗೋಕುಲದಲ್ಲಿ ಗೋಪಿಯರೂ ಮತ್ತು ಗೋಪಾಲಕರೂ ಅಪಾರವಾದ ಸುಖ

ನಿರೀಕ್ಷ್ಯ ಗೋಪಾನ್ಗೋಪೀಶ್ಚ ಕರೋಮಿ ಸುಖದಂ ಸ್ಮಿತಂ ।
ಏವಂ ದಿನಾನ್ಯತೀತಾನಿ ಏಕಾಶೀತಿರ್ಮಹಾಮುನೇ ॥೧೪೨॥

ಜನ್ಮರ್ಕ್ಷಯೋಗೇ ಚಾಯಾತೇ ಜ್ಯೋತಿರ್ವಿದ್ಭಿರ್ನಿವೇದಿತಂ ।
ಸಮಾಹೂತಾಸ್ತತ್ರ ಗೋಪ್ಯಃ ಕುಲಜಾ ಮಂಗಲಾನ್ವಿತಾಃ ॥೧೪೩॥

ಗಾಯಕಾ ನಾಮಕಾರಾಶ್ಚ ತಥಾಽನ್ಯೇ ಸೂತಮಾಗಧಾಃ ।
ಜಗುರುಚ್ಚೈಸ್ತಾಲಪೂರ್ವಂ ಮಮ ಮಾಹಾತ್ಮ್ಯಸೂಚಕಂ ॥೧೪೪॥

ಅನಂತಾನಂದ ಗೋವಿಂದ ಜಗದೀಶ ಜಗತ್ಪತೇ ।
ನಾರಾಯಣ ಹೃಷೀಕೇಶ ಕೃಷ್ಣ ದಾಮೋದರ ಪ್ರಿಯ ॥೧೪೫॥

ಪರೇಶ ಪರಮಾನಂದ ಜಗದೀಶ ಜಗತ್ಪತೇ ।
ಕೃಪಾಸಿಂಧೋ ಮನೋಜ್ಞಾಜ್ಞ ಮಾರಮೋಹನ ಪಾವನ ॥೧೪೬॥

---

ದಿಂದ ತಮ್ಮ ತಮ್ಮ ಮನೆಗೆಲಸಗಳನ್ನು ಮರೆತವರಾಗಿ ನನ್ನ ದರ್ಶನದಲ್ಲಿರುವ ಆನಂದದಿಂದ ವಶೀಭೂತರಾಗಿ ನನ್ನನ್ನು ನೋಡಲು ಬರುತ್ತಿದ್ದರು. ॥೧೪೦-೧೪೧॥

ನಾನಾದರೋ ಅ ಗೋಪಾಲಕರನ್ನೂ ಗೋಪಿಯರನ್ನೂ ನಿರೀಕ್ಷಿಸಿ ಸುಖದಾಯಕವಾದ ಮಂದಹಾಸವನ್ನು ಬೀರುವೆನು. ಎಲೈ ಮಹಾಮುನಿಯೇ, ಈ ರೀತಿಯಲ್ಲಿ ಎಂಬತ್ತೊಂದು ದಿವಸಗಳು ಕಳೆದು ಹೋದುವು. ॥೧೪೨॥

ಕಾಲವು ಈ ರೀತಿಯಲ್ಲಿ ಅತಿಕ್ರಮಿಸಲು, ಜನ್ಮ ನಕ್ಷತ್ರದ ಯೋಗವು ಬರಲು ಜ್ಯೋತಿಷ್ಕರು ಅದನ್ನು ತಿಳಿಸಿದರು. ಬಳಿಕ ಸತ್ಕುಲಪ್ರಸೂತರಾದ ಮತ್ತು ಮಂಗಳ ರೂಪಿಣಿಯರಾದ ಗೋಪಿಯರು ಆಹ್ವಾನಿಸಲ್ಪಟ್ಟರು. ಗಾಯಕರೂ, ನಾಮಕಾರರೂ (ನಾಮಕರಣವನ್ನು ಮಾಡುವವರು) ಮತ್ತು ಇನ್ನಿತರ ಸೂತರು, ವಂದಿಗಳು ಮೊದಲಾದವರು ಕಾಲಕ್ಕನುಗುಣವಾಗಿ ನನ್ನ ಮಹಿಮೆಯನ್ನು ಸೂಚಿಸುವ ಪದ್ಯಗಳನ್ನು ಗಟ್ಟಿಯಾಗಿ ಗಾನಮಾಡಿದರು. ॥೧೪೩-೧೪೪॥

ಅವರು ಹೀಗೆಂದು ಗಾನ ಮಾಡಿದರು. ಓ ಅನಂತನೇ (ನಾಶರಹಿತನು) ಆನಂದನೇ (ಆನಂದಸ್ವರೂಪನು) ಗೋವಿಂದನೇ, ಜಗದೀಶನೇ ಜಗತ್ಪತಿಯೇ, ನಾರಾಯಣನೇ (ಪ್ರಳಯ ಕಾಲದಲ್ಲಿ ನೀರನ್ನು ಆಶ್ರಯಿಸಿಕೊಂಡಿರುವವನು) ಹೃಷೀಕೇಶನೇ (ಇಂದ್ರಿಯಗಳಿಗೆ ನಿಯಾಮಕನು) ಕೃಷ್ಣ (ಭಕ್ತರ ಕ್ಲೇಶವನ್ನು ನಾಶಮಾಡು

ಶ್ರೀಪತೇ ಸರ್ವಕೃದ್ವಿಷ್ಣೋ ಚಿರಂ ವಿಭವದಾಚ್ಯುತ ।
ಭೂತಭಾವನ ಭೂತಾತ್ಮನ್ಭೂತಕೋಟ್ಯೇಕಪಾಲಕ ॥೧೪೭॥

ಮೀನ ವಾರಾಹ ಕೂರ್ಮಾಂಗ ನೃಸಿಂಹ ದ್ವಿಜನಾಯಕ ।
ಶ್ರೀರಾಮ ನೃಪತಿಶ್ರೇಷ್ಠ ಸರ್ವೇಶ್ವರ ನಮೋಽಸ್ತು ತೇ ॥೧೪೮॥

ಇತ್ಯಾದ್ಯುಚ್ಚೈರ್ಜಗುರ್ಗೋಪ್ಯೋ ನಾನಾರಾಗ ಮಹೋತ್ಸವೈಃ ॥೧೪೯॥

ಗೋಪಾ ಗೋಪ್ಯೋ ಗೋಕುಲೇ ಭ್ರಾಜಮಾನಾಃ
ಸರ್ವೈರ್ಭಾವೈರ್ಮೋದಮಾಪುರ್ಮುನೀಶ ।

---

ವವನು) ದಾಮೋದರನೇ (ವಿಸ್ತಾರವಾದ ಉದರವುಳ್ಳವನು) ಪ್ರಿಯನೇ, ಪರೇಶನೇ ಪರಮಾನಂದನೇ, ಓ ಜಗದೀಶನೇ, ಜಗತ್ಪತಿಯೇ, ಕೃಪಾಸಿಂಧೋ (ಕರುಣಾ ಸಾಗರನೇ) ಮನೋಜ್ಞಾಜ್ಞ (ಮನೋಹರವಾದ ಆಜ್ಞೆಯನ್ನು ಮಾಡುವವನು) ಮಾರಮೋಹನ (ಮನ್ಮಥನಿಗಿಂತಲೂ ಸುಂದರನು) ಪಾವನನೇ, ಶ್ರೀಪತಿಯೇ (ಲಕ್ಷ್ಮೀಪತಿಯೇ, ಸರ್ವಕೃತ್ (ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುವವನು) ಚಿರಂ ವಿಭವದ (ಶೀಘ್ರವಾದ ಅಥವಾ ಶಾಶ್ವತವಾದ ಫಲವನ್ನು ಕೊಡುವವನು) ಅಚ್ಯುತ (ನಾಶರಹಿತನು) ಭೂತಭಾವನ (ಪ್ರಳಯಕಾಲದಲ್ಲಿ ಸಕಲ ವಸ್ತುಗಳನ್ನೂ ತನ್ನಲ್ಲಿ ಸೇರಿಸಿಕೊಳ್ಳುವವನು) ಭೂತಾತ್ಮನ್ (ಸಕಲಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿ ನೆಲಸಿರುವವನು) ಭೂತಕೋಟ್ಯೇಕಪಾಲಕ (ಕೋಟ್ಯಂತರ ಭೂತಗಳನ್ನು ರಕ್ಷಿಸುವವನು). ||೧೪೫-೧೪೬-೧೪೭||

ಮತ್ಸ್ಯ, ಕೂರ್ಮ, ವಾರಾಹ, ನೃಸಿಂಹ, ವಾಮನ, ಪರುಶುರಾಮ, ಶ್ರೀರಾಮ ಈ ಅವತಾರಗಳನ್ನು ಮಾಡಿದ ಸರ್ವೇಶ್ವರನೇ, ನಿನಗೆ ನಮಸ್ಕಾರವು. ||೧೪೮||

ಇವೇ ಮೊದಲಾದ ನನ್ನ ನಾಮಗಳನ್ನು ಗೋಪಿಯರು ನಾನಾವಿಧವಾದ ರಾಗಗಳಿಂದ ಗಟ್ಟಿಯಾಗಿ ಗಾನಮಾಡಿದರು. ||೧೪೯||

ಎಲೈ ಮುನಿಶ್ವರನೇ, ಗೋಪಾಲಕರೂ ಮತ್ತು ಗೋಪಿಕಾಸ್ತ್ರೀಯರೂ ಗೋಕುಲದಲ್ಲಿ ಕಂಗೊಳಿಸುವವರಾಗಿ ಸಕಲ ವಿನೋದಗಳಿಂದಲೂ ಆನಂದವನ್ನು

ಬ್ರಹ್ಮಾದಯೋ ದೇವಗಣಾಶ್ಚ ತತ್ರ
ತಮುತ್ಸವಂ ದ್ರಷ್ಟು ಮುಪಾಗ ತಾಶ್ಚ ॥೧೫೦॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವ್ಯೈಯ್ಯಾಸಿಕೇ ನಾರದ ಶೌನಕ ಸಂವಾದೇ ಕೃಷ್ಣ ಜನ್ಮರ್ಕ್ಷಯೋಗೋತ್ಸವೋ ನಾಮ ಅಷ್ಟಾದಶೋಽಧ್ಯಾಯಃ

---

ಹೊಂದುವವರಾದರು. ನನ್ನ ಆ ಜನ್ಮನಕ್ಷತ್ರೋತ್ಸವವನ್ನು ನೋಡಲು ಬ್ರಹ್ಮನೇ ಮೊದಲಾದ ದೇವತೆಗಳೂ ಬಂದವರಾಗಿದ್ದರು. ॥೧೫೦॥

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ನಾರದ ಶೌನಕ ಸಂವಾದದಲ್ಲಿ ಶ್ರೀಕೃಷ್ಣನ ಜನ್ಮನಕ್ಷತ್ರಯೋಗೋತ್ಸವವೆಂಬ ಹದಿನೆಂಟನೆಯ ಅಧ್ಯಾಯವು ಸಮಾಪ್ತವಾಯಿತು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಏಕೋನವಿಂಶೋऽಧ್ಯಾಯಃ ||

### ಹತ್ತೊಂಬತ್ತನೆಯ ಅಧ್ಯಾಯವು

|| ಶ್ರೀ ಭಗವಾನುವಾಚ ||

**ಸ್ವಧಾಮ್ನಸ್ತತ್ಕ್ಷಣೇ ಭೂತ್ವಾ ವ್ರಜೇಶೈಃ ಸಂಯುತೋ ವಿಧಿಃ ।**
**ಶಿವಲೋಕಾದಥ ಶಿವಃ ಸಗಣಃ ಸಮುಗಾತ್ತತಃ ||೧||**

**ನಿರೀಕ್ಷ್ಯೋತ್ಸವಮಾಶ್ಚರ್ಯಂ ಸರ್ವೇ ವಿಸ್ಮಯಮಾಯಯುಃ ।**
**ಅಹೋ ಬ್ರಹ್ಮಾಂಡ ಕೋಟೀನಾಮೀಶೋ ಬಾಲಸ್ವರೂಪಧೃಕ್ ||೨||**

**ಅಲ್ಪಪರ್ಯಂಕ ಮಧ್ಯಸ್ಥಃ ಶೇತೇ ಛನ್ನಃ ಸ್ವಮಾಯಯಾ ।**
**ಶೋಭನಂ ಜನ್ಮ ಚಾಸ್ಮಾಕಂ ಕೃತಂ ಚ ಪರಮಂ ತಪಃ ||೩||**

---

ಶ್ರೀಕೃಷ್ಣನು ಹೇಳಿದನು— ಗೋಪಾಲಕರಿಂದ ತಮ್ಮ ಮನೆಗಳನ್ನು ನಿರ್ಮಿಸುವುದಕ್ಕೋಸ್ಕರ ಬ್ರಹ್ಮನು ಸಂಯೋಜಿಸಲ್ಪಟ್ಟನು. ಬಳಿಕ ಶಿವಲೋಕದಿಂದ ಶಿವನು ತನ್ನ ಗಣಗಳೊಂದಿಗೆ ಅಲ್ಲಿಗೆ ಬಂದವನಾದನು. ||೧||

ಅದ್ಭುತವಾದ ಆ ಉತ್ಸವವನ್ನು ನೋಡಿ ಸಮಸ್ತರೂ ಅತ್ಯಾಶ್ಚರ್ಯವನ್ನು ಹೊಂದಿದರು. ಕೋಟಿಬ್ರಹ್ಮಾಂಡಗಳಿಗೆ ಪ್ರಭುವಾದ ಪರಮಾತ್ಮನು ಬಾಲಕನ ಸ್ವರೂಪವನ್ನು ಧರಿಸಿ ತನ್ನ ಮಾಯೆಯೆಂಬ ಹೊದಿಕೆಯಿಂದ ಮುಚ್ಚಲ್ಪಟ್ಟವನಾಗಿ ಅಲ್ಪವಾದ ಮಂಚದಲ್ಲಿ ಮಲಗಿರುತ್ತಾನೆ. ಆಹಾ! ಆಶ್ಚರ್ಯವು. ನಮ್ಮ ಜನ್ಮವು ಸಾರ್ಥಕವಾಯಿತು. ನಾವು ಮಹತ್ತರವಾದ ತಪಸ್ಸನ್ನು ಅನುಷ್ಠಾನ ಮಾಡಿರುವೆವು. ||೨-೩||

ಯತ್ಪಶ್ಯಾಮಃ ಶುಭಂ ರೂಪಂ ಕೃತಬಾಲಸ್ವರೂಪಿಣಃ ।
ಏತಾವತ್ಕಾಲಪರ್ಯಂತಂ ವೃಥಾ ತಪ್ತಂ ತಪೋ ಮಯಾ ॥೪॥

ಯದಸ್ಯ ರೂಪಂ ನೋ ದೃಷ್ಟಮಿದಾನೀಂ ತತ್ಫಲಂ ಮಮ ।
ಧನ್ಯಾ ಗೋಪಾಶ್ಚ ಗೋಪ್ಯಶ್ಚ ತಥಾಽನ್ಯೇ ಚ ವ್ರಜೌಕಸಃ ॥೫॥

ಏಷಾಂ ಮೋಕ್ಷಪಥಂ ವಿಷ್ಣು ರ್ಜಾತೋ ಬಾಲಸ್ವರೂಪಧೃಕ್ ।
ಶ್ರುತಯೋ ಯನ್ನ ಪಶ್ಯಂತಿ ನೇತಿನೇತೀತಿ ಚಾಬ್ರುವನ್ ॥೬॥

ನ ಜಾನಂತಿ ಚಿರಂ ಸೋಽತ್ರ ಸಾಕ್ಷ್ಯಾತ್ಮಾ ಬಾಲರೂಪಧೃಕ್ ।
ಅಹೋ ಭಾಗ್ಯವತೀ ಹ್ಯೇಷು ಯಶೋದಾ ನಂದಗೇಹಿನೀ ॥೭॥
ಯದೇ ನಮಂಕಮಾರೋಪ್ಯ ಕೃಷ್ಣಂ ನಂದತಿ ನಿತ್ಯಶಃ ।

---

ಏಕೆಂದರೆ ಈ ದಿವಸ ಬಾಲಕನ ರೂಪವನ್ನು ಧರಿಸಿರುವ ಆ ವಿಷ್ಣುವನ್ನು ನೋಡುತ್ತಿರುವೆವು. ಇಷ್ಟುಕಾಲಪರ್ಯಂತ ನನ್ನಿಂದ ವ್ಯರ್ಥವಾಗಿ ವಿಷ್ಣುದರ್ಶನ ಕ್ಕೋಸ್ಕರ ತಪಸ್ಸು ಆಚರಿಸಲ್ಪಟ್ಟಿತು. ॥೪॥

ಏಕೆಂದರೆ ಇದುವರೆಗೆ ಇವನ ರೂಪವನ್ನು ನಾವು ನೋಡಿರಲಿಲ್ಲ. ಈಗ ಮಾತ್ರ ಆ ಫಲವು ದೊರಕಿದಂತಾಯಿತು. ಗೋಪಾಲಕರೂ ಗೋಪಿಯರೂ ಮತ್ತು ಗೋಕುಲದಲ್ಲಿ ವಾಸಿಸುವ ಇನ್ನಿತರರೂ ಧನ್ಯರು. ಬಾಲರೂಪಿಯಾದ ಆ ಸಾಕ್ಷಾನ್ಮಹಾವಿಷ್ಣುವೇ ಅವರ ಮೋಕ್ಷವನ್ನುಂಟುಮಾಡುತ್ತಾನೆ. ॥೫॥

ಯಾವ ಪರಮಾತ್ಮನ ಸ್ವರೂಪವನ್ನು ತಿಳಿಸಲು ಉಪನಿಷತ್ತುಗಳೂ ಸಹ ಅಸಮರ್ಥವಾಗಿರುವುವೋ, ಮತ್ತು ಯಾವ ಪರಮಾತ್ಮನನ್ನು ತಿಳಿಸಲಾರದೆ ಶ್ರುತಿಯು "ನೇತಿನೇತಿ" ಎಂದು ನಿಷೇಧಮುಖದಿಂದ ಪರಮಾತ್ಮಜ್ಞಾನವನ್ನುಂಟುಮಾಡಿ ಕೊಡುವುದೋ, ಮತ್ತು ಅಜ್ಞಾನಿಗಳು ಯಾವನನ್ನು ತಿಳಿದುಕೊಳ್ಳಲಾರರೋ, ಸಕಲ ಪ್ರಾಣಿಗಳಲ್ಲಿಯೂ ಸಾಕ್ಷಿರೂಪದಿಂದ ನೆಲಸಿರುವ ಆ ಪರಮಾತ್ಮನು ಬಾಲಕನ ರೂಪವನ್ನು ಧರಿಸಿರುವವನಾಗಿರುವನು. ॥೬॥

ಆಹಾ ! ನಂದನಗೃಹಿಣಿಯಾದ ಯಶೋದೆಯೇ ಭಾಗ್ಯವತಿಯು. ಏಕೆಂದರೆ ಶ್ರೀಕೃಷ್ಣನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ನಿರಂತರವೂ ಆನಂದ ವನ್ನು ಪಡೆಯುವಳು. ॥೭॥

ಯಜ್ಞೇಷು ದ್ವಿಜಮುಖ್ಯಾದ್ಯೈ ರಾಹೂತೋ ಮಂತ್ರಕೋಟಿಭಿಃ ॥೮॥
ನಾಯಾತಿ ಕರ್ಹಿಚಿತ್ಸಾಕ್ಷಾತ್ಸ ಏವಾಸ್ಯಾಃ ಸುತೋಽಭವತ್ ।
ಯೋಗಿಭಿಶ್ಚಿಂತಿತೋ ನಿತ್ಯಮಪ್ರಮತ್ತೈರ್ಜಿತೇಂದ್ರಿಯೈಃ ॥೯॥

ಬಹವಃ ಪುಣ್ಯಕರ್ಮಿಷ್ಠಾಃ ಕರ್ಮಕೃತ್ಯಕೃತಬುದ್ಧಯಃ ।
ಅನೇಕಯತ್ನ ನಿಚಯೈಃ ಶ್ರುತ್ಯುಕ್ತವಿಧಿವರ್ತಿನಃ ॥೧೦॥

ವಿಲೋಕಿತುಂ ನ ಶಕ್ತಾಸ್ತೇ ಸ್ವರೂಪಂ ಧೃತವನ್ಯೈಶ್ವರಮ್ ।
ಸ ಏವಾಸ್ಯಾಃ ಪುತ್ರಭಾವಂ ಪ್ರಾಪ್ತೋಽಸ್ಯಾ ಭಾಗ್ಯಮದ್ಭುತಮ್॥೧೧॥

ನಂದೋಽಯಂ ಕೃತಪುಣ್ಯಶ್ಚ ಪೂರ್ತೇಷ್ಟಮುಕರೋದ್ಬಹು ।
ಭಕ್ತಿಯುಕ್ತಸ್ಯ ದೇವಸ್ಯ ಯೋಽಸೌ ಪಶ್ಯತಿ ತನ್ಮುಖಂ ॥೧೨॥

---

ಯಾವ ಪರಮಹಾತ್ಮನು ದ್ವಿಜ ಮೊದಲಾದ ಕರ್ಮಿಗಳಿಂದ ಯಜ್ಞಯಾಗಾದಿ ಕರ್ಮಾನುಷ್ಠಾನ ಮಾಡುವ ಕಾಲದಲ್ಲಿ ಅನೇಕ ಮಂತ್ರಗಳಿಂದ ಆಹ್ವಾನಿಸಲ್ಪಟ್ಟವನಾದರೂ ಯಜ್ಞಶಾಲೆಯನ್ನು ಕುರಿತು ಎಂದಿಗೂ ಸುಲಭವಾಗಿ ಬರುವುದಿಲ್ಲವೋ ಅಂತಹ ಪರಮಾತ್ಮನೇ ಯಶೋದೆಯ ಪುತ್ರನಾಗಿ ಜನಿಸಿರುವನು. ||೮||

ಯಾವ ಪರಮಾತ್ಮನನ್ನು ಅಹಂಕಾರಶೂನ್ಯರೂ, ಜಿತೇಂದ್ರಿಯರೂ ಆದ ಯೋಗಿಗಳು ಅನವರತವೂ ಧ್ಯಾನಿಸುವರೋ ಆ ಸಾಕ್ಷಾತ್ಪರಮಾತ್ಮನೇ ಯಶೋದೆಯ ಪುತ್ರನಾಗಿರುವನು. ||೯||

ಅನೇಕ ಪುಣ್ಯಕರ್ಮಗಳನ್ನು ಆಚರಿಸುವವರೂ ಮತ್ತು ನಿಷ್ಕಾಮವಾಗಿ ಕರ್ಮಗಳನ್ನು ಆಚರಿಸಿ ಚಿತ್ತಶುದ್ಧಿಯನ್ನು ಹೊಂದಿರುವವರೂ ಆದ ಜನರು ವೇದೋಕ್ತವಾದ ವಿಧಿಯನ್ನೇ ಅನುಸರಿಸುವವರಾದರೂ ಸಹ ಅವರು ಯಾವ ಪರಮಾತ್ಮನ ಸ್ವರೂಪವನ್ನು ನೋಡಲು ಅಶಕ್ತರಾಗಿರುತ್ತಾರೋ ಆ ಪರಬ್ರಹ್ಮನೇ ಯಶೋದೆಯ ಪುತ್ರನಾಗಿ ಜನಿಸಿರುವನು. ಅವಳ ಭಾಗ್ಯವನ್ನು ಏನೆಂದು ಹೇಳೋಣ! ||೧೦-೧೧||

ಸುಕೃತಿಯಾದ ಈ ನಂದನು ಅನೇಕ ಇಷ್ಟಾಪೂರ್ತ ಕರ್ಮಗಳನ್ನು ಮಾಡಿರುವನು. (ಇಷ್ಟ ಎಂದರೆ ಕರ್ಮಕಾಂಡಬೋಧಿತವಾದ ಯಜ್ಞಯಾಗಾದಿ ಕರ್ಮಗಳು ಎಂದರ್ಥವು. ಪೂರ್ತಕರ್ಮವೆಂದರೆ ಭಾವಿ, ಸರೋವರ, ಕೆರೆ, ಅನ್ನಸತ್ರ ಧರ್ಮಶಾಲೆ ಮುಂತಾದುವುಗಳನ್ನು ಜನೋಪಕಾರಕ್ಕೋಸ್ಕರ ನಿರ್ಮಾಣಮಾಡು

ಧನ್ಯಾ ವ್ರಜೌಕಸ ಇಮೇ ಯೇ ಪಶ್ಯಂತಿ ಸ್ವರೂಪಿಣಂ ।
ಕೃಷ್ಣಂ ಚ ತದ್ಯಶೋ ನಿತ್ಯಂ ಗಾಯಂತಿ ತ್ವನುರಾಗತಃ ॥೧೩॥

ಯಥಾ ವ್ರಜೌಕಸಾಂ ಭಾಗ್ಯಂ ಭವೇತ್ಕೋ ವರ್ಣಿತುಂ ಕ್ಷಮಃ ।
ಸುರಾಸುರಾಣಾಮಾಧ್ಯೇಯಂ ಬಾಲರೂಪಿಣಮೀಶ್ವರಂ ॥೧೪॥

ಯೇ ಪಶ್ಯಂತ್ಯನುಗಾಯಂತಿ ಪ್ರೇಮ್ಣಾಽಽಲಿಂಗಂತ್ಯಭೀಕ್ಷ್ಣಶಃ ।
ಬ್ರಹ್ಮೇತಿ ಮಮ ಸಂಜ್ಞೇಯಂ ಪಿತೃಪಿತಾಮಹೌ ಚ ಯತ್ ॥೧೫॥

ಸ್ವಯಂಭೂಃ ಸತ್ಯಲೋಕೇಶೋ ವೃಥೈವ ನ ಹಿ ಚಾನ್ಯಥಾ ।
ಯತೋ ನಾಪ್ತಂ ನಂದವನ್ಮೇ ದರ್ಶನಾಲಿಂಗನಾದಿಕಂ ॥೧೬॥

---

ವುದು.) ಆದುದರಿಂದಲೇ ಈ ನಂದನು ಭಕ್ತಿಯುತನಾಗಿ ಈಗ ಬಾಲರೂಪಿಯಾದ ಆ ದೇವನ ಮುಖವನ್ನು ನೋಡುತ್ತಿರುವನು. ॥೧೨॥

ಈ ಗೋಕುಲವಾಸಿಗಳೂ ಧನ್ಯರಾಗಿರುವರು. ಏಕೆಂದರೆ ಅವರು ನಿತ್ಯವೂ ಸಾಕ್ಷಾದ್ವಿಷ್ಣುಸ್ವರೂಪನಾದ ಶ್ರೀಕೃಷ್ಣನನ್ನು ನೋಡುವರು. ಮತ್ತು ಅವನ ಕೀರ್ತಿಯನ್ನು ಪ್ರೇಮಪುರಸ್ಸರವಾಗಿ ಗಾನಮಾಡುವರು. ॥೧೩॥

ಗೋಕುಲವಾಸಿಗಳ ಭಾಗ್ಯಾತಿಶಯವನ್ನು ಯಾವನು ತಾನೇ ಪೂರ್ಣವಾಗಿ ವರ್ಣಿಸಲು ಸಮರ್ಥನು ?. ಆ ಗೋಕುಲವಾಸಿಗಳು ಸುರರಿಂದಲೂ ಮತ್ತು ದೈತ್ಯರಿಂದಲೂ ಧ್ಯಾನಮಾಡಲ್ಪಡುವ ಬಾಲರೂಪಧಾರಿಯಾದ ಆ ಪರಮಾತ್ಮನನ್ನು ಅನೇಕ ಬಾರಿ ನೋಡುತ್ತಾರೆ. ಅವನ ನಾಮಗಳನ್ನು ಗಾನಮಾಡುತ್ತಾರೆ. ಮತ್ತು ಪ್ರೇಮಪುರಸ್ಸರವಾಗಿ ಅವನನ್ನು ಆಲಿಂಗಿಸುತ್ತಾರೆ. ॥೧೪॥

ಕೃಷ್ಣನ ಜನ್ಮನಕ್ಷತ್ರೋತ್ಸವವನ್ನು ನೋಡಲು ಬಂದ ಬ್ರಹ್ಮನು ತನ್ನ ಮನಸ್ಸಿನಲ್ಲಿ ಹೀಗೆಂದು ಯೋಚಿಸಿದನು. ನನಗಿರುವ ಬ್ರಹ್ಮಾ, ಪಿತಾ, ಪಿತಾಮಹ, ಸ್ವಯಂಭೂ, ಸತ್ಯಲೋಕೇಶ ಎಂಬೀ ನಾಮಧೇಯಗಳು ವ್ಯರ್ಥವಾದುವುಗಳಾಗಿರುವುವು. ಏಕೆಂದರೆ, ನಂದನಂತೆ ನನಗೆ ಆ ಶ್ರೀಕೃಷ್ಣನ ದರ್ಶನ ಆಲಿಂಗನ ಮುಂತಾದುವುಗಳು ಲಭಿಸಲಿಲ್ಲವು. ॥೧೫-೧೬॥

ಈರ್ಷ್ಯಾ ಯುಕ್ತೋ ವಿಧಿಸ್ತತ್ರ ದೃಷ್ಟ್ವಾ ತ(ಂ)ಚ್ಚ ಮಹೋತ್ಸವಂ ।
ನ ಸಸ್ಮಾರ ತನುಂ ಸ್ವೀಯಾಂ ಚಿತ್ರಾರ್ಪಿತ ಇವಾಭವತ್ ॥೧೭॥

ಅಥ ತತ್ರ ಶಿವಃ ಪ್ರಾಹ ಕಂಪಯನ್ಸ್ವಶಿರೋ ಮುಹುಃ ।
ಮಹಾಮಹಾಯೋಗ ಚರ್ಯಾ ವಿದ್ಯಾಯಾಃ ಫಲಮೇವ ಚ ॥೧೮॥

ಕಿಮೇತದದ್ಭುತಂ ದೃಶ್ಯಂ ಮಾನವಂ ರೂಪಮಿಾಕ್ಷಿತಂ ।
ವ್ರಜವಾಸಿ ಜನೈರ್ನಿತ್ಯಂ ಕಿಮೇಭಿಃ ಸುಕೃತಂ ಕೃತಂ ॥೧೯॥

ಉದ್ಗಾಯತಿ ಚ ನೃಪತೇ ಯದ್ದೃಷ್ಟಂ ರೂಪಮದ್ಭುತಂ ।
ಪತ್ನ್ಯೈ ತ್ವೇವಂ ಸಮಾದಿಶ್ಯ ತ್ಯಕ್ತ್ವಾ ಭಸ್ಮವಿಲೇಪನಂ ॥೨೦॥

ಕೃತ್ವಾ ಘೋರಾಂ ಯೋಗಚರ್ಯಾಂ ವಿಚರಾಮಿ ಪ್ರಯತ್ನತಃ ।
ತ್ಯಕ್ತ್ವಾ ಭೋಗಾನ್ಪ್ರಿಯಾನೇವ ಧ್ರಿಯತೇ ಹೃದಯೇ ಮಯಾ ॥೨೧॥

---

ಈ ಪ್ರಕಾರವಾಗಿ ಬ್ರಹ್ಮನು ಯೋಚಿಸಿ ಆ ಉತ್ಸವವನ್ನು ನೋಡಿ ಈರ್ಷ್ಯಾ ಪರನಾಗಿ, ದೇಹದ ಮೇಲಿನ ಪರಿವೆಯಿಲ್ಲದೆ ಚಿತ್ರದಲ್ಲಿ ಬರೆದ ಗೊಂಬೆಯಂತೆ ಸ್ತಬ್ಧನಾಗಿ ನಿಂತನು. ॥೧೭॥

ಹೀಗಿರಲು ಶಿವನು ತನ್ನ ಶಿರಸ್ಸನ್ನು ಬಾರಿಬಾರಿಗೂ ಅಲ್ಲಾಡಿಸುತ್ತಾ ಹೀಗೆಂದು ಹೇಳಿದನು. ಮಹಾಯೋಗವಿದ್ಯೆಯ ಫಲಸ್ವರೂಪವಾಗಿಯೂ, ಅದ್ಭುತ ವಾಗಿಯೂ ಇರುವ, ನಮ್ಮಿಂದ ನೋಡಲ್ಪಟ್ಟ ಈ ಮಾನವರೂಪವು ಯಾವುದಾಗಿರ ಬಹುದು? ಗೋಕುಲವಾಸಿಗಳಾದ ಈ ಜನರಿಂದ ಯಾವ ವಿಧವಾದ ಸುಕೃತವು ಆಚರಿಸಲ್ಪಟ್ಟಿರುವುದು? ॥೧೮-೧೯॥

ಎಲೈ ಸೃಷ್ಟಿಕರ್ತನಾದ ಬ್ರಹ್ಮನೇ, ನಮ್ಮಿಂದ ನೋಡಲ್ಪಟ್ಟ ಅದ್ಭುತವಾದ ಈ ರೂಪವನ್ನು ಜನಸಮುದಾಯವು ಗಾನಮಾಡುತ್ತಿರುವುದು. ಎಂದು ಹೇಳಿ ಶಿವನು ಪತ್ನಿಯಾದ ಪಾರ್ವತಿಗೆ ಈ ವಿಷಯವನ್ನು ಹೀಗೆಂದು ತಿಳಿಸಿ, ಭಸ್ಮಧಾರಣೆಯನ್ನು ತ್ಯಜಿಸಿ, ಮಾಯೆಯಿಂದ ಕಠಿಣವಾದ ಯೋಗಮುದ್ರೆಯನ್ನು ಹೊಂದಿ ಸಂಚರಿಸು ವವನಾಗುತ್ತೇನೆ. ಪ್ರಿಯವಾದ ಭೋಗಗಳು ತ್ಯಜಿಸಲ್ಪಟ್ಟು ನನ್ನಿಂದ ಹೃದಯದಲ್ಲಿ ಯೋಗಮುದ್ರೆಯು ಧರಿಸಲ್ಪಡುತ್ತದೆ. ಎಂದನು. ॥೨೦-೨೧॥

ಕಾಮೋ ನೇತ್ರಾಗ್ನಿನಾ ದಗ್ಧೋಽದ್ಯ ದೃಷ್ಟೋಽಯಂ ಸ್ವರೂಪಧೃಕ್।
ಏತೇ ಗೃಹೋಚಿತಾನ್ಭೋಗಾನ್ಭುಂಜತೇ ಕಾಮಿನಃ ಪರಂ ॥೨೨॥

ಶ್ರುತಯೋ ಮುನಯಶ್ಚೈವ ಯೋಗಯುಕ್ತಾಶ್ಚ ಯೋಗಿನಃ ।
ನ ವಿದುರ್ದುರ್ಲಭಾಂ ಮೂರ್ತಿಂ ಪರೇಶರಚಿತಾಮಹೋ ॥೨೩॥

ವ್ರಜೌಕಸೋ ಧನ್ಯತಮಾಃ ತಾಂ ಪಶ್ಯಂತೀಹ ನಿತ್ಯಶಃ ।
ಧನ್ಯಾ ಯಶೋದಾ ನಂದಶ್ಚಧನ್ಯೋ ಧನ್ಯಾ ವ್ರಜೌಕಸಃ ॥೨೪॥

ಯೇಷಾಮುಕ್ಷಿಗತೋ ಭಾತಿ ತನುಜಃ ಪರಮೇಶ್ವರಃ ।
ಧಿಗ್ಜನ್ಮ ತೇಷಾಂ ಮನುಜೈಃ ಯೈರ್ನೈವಾರಾಧಿತೋ ಹರಿಃ ॥೨೫॥

ಭಕ್ತಿಹೀನೈರ್ಜನೈಃ ಕೈಶ್ಚಿತ್ ನಾಲೋಕಿ ಪರಮೇಶ್ವರಃ ।
ನ ಕೀರ್ತಿತೋ ಹರಿರ್ಯೇನ ಚಿಂತಿತೋ ಮನಸಾ ನ ಚ ॥೨೬॥

---

ಹಿಂದೆ ನನ್ನ ಹಣೆಗಣ್ಣಿನ ಅಗ್ನಿಯಿಂದ ದಹಿಸಲ್ಪಟ್ಟ ಮನ್ಮಥನು ಈಗ ಸಶರೀರನಾಗಿ ಬಂದಿರುವನೋ ಎಂಬಂತೆ ತೋರುತ್ತಿದೆ. ಕಾಮಿಗಳಾದ ಈ ಜನರು ಗೃಹಸ್ಥಾಶ್ರಮಕ್ಕೆ ಯೋಗ್ಯವಾದ ಭೋಗಗಳನ್ನು ಅನುಭವಿಸುತ್ತಲಿರುವರು. ॥೨೨॥

ಆ ಪರಬ್ರಹ್ಮನಿಂದ ನಿರ್ಮಿಸಲ್ಪಟ್ಟ ಈ ಕೃಷ್ಣರೂಪವಾದ ಮೂರ್ತಿಯನ್ನು ಉಪನಿಷತ್ತುಗಳೂ, ಮನನಶೀಲರಾದ ಮುನಿಗಳೂ ಮತ್ತು ಯೋಗಾಭ್ಯಾಸನಿರತರಾದ ಯೋಗಿಗಳೂ ಸಹ ಕಷ್ಟಪಡದೆ ತಿಳಿಯಲಾರರು. ಆದುದರಿಂದ ॥೨೩॥

ಗೋಕುಲವಾಸಿಗಳು ಧನ್ಯರಾಗಿರುವರು. ಅವರು ಇಲ್ಲಿ ನಿರಂತರವೂ ಆ ಮೂರ್ತಿಯನ್ನು ನೋಡುತ್ತಲಿರುವರು. ಯಶೋದಾ ಮತ್ತು ನಂದರು ಗೋಕುಲ ವಾಸಿಗಳಾದ ಜನರು ಕೃತಕೃತ್ಯರಾಗಿರುವರು. ಏಕೆಂದರೆ ಆ ಸಾಕ್ಷಾತ್ ಪರಮೇಶ್ವರನೇ ಯಶೋದಾ ನಂದರ ಪುತ್ರನಾಗಿದ್ದುಕೊಂಡು ಸದಾ ಅವರ ನೇತ್ರಗಳಿಗೆ ಗೋಚರನಾಗುತ್ತಿರುವನು. ಯಾರು ಶ್ರೀಹರಿಯನ್ನು ಆರಾಧಿಸುವುದಿಲ್ಲವೋ ಅವರ ಜನ್ಮಕ್ಕೆ ಧಿಕ್ಕಾರವಿರಲಿ. ॥೨೪-೨೫॥

ಭಕ್ತಿವಿಹೀನರಾದ ಕೆಲವು ಜನರು ಆ ಪರಮೇಶ್ವರನನ್ನು ನೋಡಿರುವುದಿಲ್ಲ. ಯಾವ ಮನುಷ್ಯನು ಹರಿಯ ನಾಮವನ್ನು ಉಚ್ಚರಿಸುವುದಿಲ್ಲವೋ, ಯಾವನು ಹರಿಯನ್ನು ಮನಸ್ಸಿನಲ್ಲಿ ಚಿಂತಿಸುವುದಿಲ್ಲವೋ ಅವನು ಹರಿಯನ್ನು ಹೇಗೆ ತಾನೇ ಸಾಕ್ಷಾತ್ಕರಿಸಬಲ್ಲನು ? ॥೨೬॥

ವೃಥಾ ಚ ಸಂತಿ ತೇ ಯೇಷಾಂ ಜೀವಿತಂ ಭಕ್ತಿವರ್ಜಿತಂ ।
ಏಭಿಸ್ತು ನವಧಾ ಭಕ್ತಿಃ ಕೃತಾ ವ್ವೈ ವ್ರಜವಾಸಿಭಿಃ ॥೨೭॥

ಯೇ ಪಶ್ಯಂತಿ ಪ್ರತಿದಿನಂ ರೂಪವದ್ಬ್ರಹ್ಮ ನಿರ್ಗುಣಮ್ ।
ಕೃಷ್ಣ ವಿಷ್ಣೋ ಪರೇಶಾದ್ಯ ಶಿವರೂಪಂ ವೃಥಾ ಮಮ ॥೨೮॥

ಆನಂದಭವಸಂಪ್ಲಾವ್ಯೈರ್ನ ಸಸ್ಮಾರ ನಿಜಾಂ ತನುಂ ।
ತತೋ ನ(ಮ)ರಾಧಿಪಃ ಪ್ರಾಹ ಧಿಗಸ್ಮಾನ್ದೇವರೂಪಿಣಃ ॥೨೯॥

ಸ್ವರ್ಗಸ್ಥೈರಪಿ ಯ್ಯೈರ್ನೈವ ಸುಖಮತ್ರಾನುಭೂಯತೇ ।
ಇತ್ಥಮನ್ಯೇಽಪಿ ಲೋಕೇಶಾ ಯಮಾಗ್ನಿವರುಣಾದಯಃ ॥೩೦॥

---

ಯಾರ ಜೀವಿತವು ಭಕ್ತಿಹೀನವಾಗಿರುವುದೋ ಅವರ ಜನ್ಮವು ವ್ಯರ್ಥವಾಗಿರುತ್ತದೆ. ಗೋಕುಲವಾಸಿಗಳಾದ ಇವರಾದರೋ ವಿಷ್ಣುವಿನಲ್ಲಿ ಕೀರ್ತನ, ಶ್ರವಣ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಎಂಬೀ ಒಂಬತ್ತು ವಿಧವಾದ ಭಕ್ತಿಯುಳ್ಳವರಾಗಿರುವರು. ॥೨೭॥

ವಾಸ್ತವಸ್ವರೂಪದಿಂದ ನಿರ್ಗುಣವಾಗಿಯೂ, ಮಾಯಾಸಂಬಂಧದಿಂದ ರೂಪವತ್ತಾಗಿ ತೋರುತ್ತಲೂ ಇರುವ ಆ ಬ್ರಹ್ಮಸ್ವರೂಪವನ್ನು ಅನವರತವೂ ಯಾವ ಈ ಗೋಕುಲವಾಸಿಗಳು ನೋಡುತ್ತಲಿರುವರೋ ಇಂತಹ ದರ್ಶನ ಪುಣ್ಯವಿಲ್ಲದಿರುವ ಓ ವ್ಯಾಪಕನಾದ ಪ್ರಭುಗಳಿಗೂ ಅಧಿಪತಿಯಾದ ಕೃಷ್ಣನೇ, ನನ್ನ ಈ ಶಿವರೂಪದರ್ಶನವು ವ್ಯರ್ಥವಾದದ್ದಾಗಿರುವುದು. ॥೨೮॥

ಶಿವನು ತನ್ನ ಮನಸ್ಸಿನಲ್ಲಿ ಈ ಪ್ರಕಾರವಾಗಿ ಯೋಚಿಸಿ, ಹೃದಯದಲ್ಲಿ ಉಕ್ಕಿಬರುತ್ತಿರುವ ಸಂತೋಷತರಂಗಗಳ ಪರಂಪರೆಗಳಿಂದ ದೇಹದ ಮೇಲಿನ ಎಚ್ಚರಿಕೆಯೇ ಇಲ್ಲದೆ ಇರುವವನಾದನು. ॥೨೯॥

ತರುವಾಯ ದೇವತೆಗಳಿಗೆ ಅಧಿಪತಿಯಾದ ಇಂದ್ರನು ಹೀಗೆಂದು ಹೇಳಿದನು. ದೇವತೆಗಳಾದ ನಾವು ಸ್ವರ್ಗದಲ್ಲಿ ವಾಸಿಸುವೆವಾದರೂ ಸಹ ಕೃಷ್ಣನ ಸನ್ನಿಧಿಯಲ್ಲಿ ಅನುಭವಿಸುತ್ತಲಿರುವ ಅಪಾರವಾದ ಈ ಸುಖವನ್ನು ಸ್ವರ್ಗಲೋಕದಲ್ಲಿ ಅನುಭವಿಸಲಾರೆವೋ ಅಂತಹ ದೇವತೆಗಳಾದ ನಮಗೆ ಧಿಕ್ಕಾರವಿರಲಿ. ಇನ್ನುಳಿದ ಯಮ,

**ಊಚುರ್ಮಯಾ ಕಟಾಕ್ಷೇಣ ವೀಕ್ಷಿತಾಸ್ತುಷ್ಟಿಮಾಗತಾಃ ।**
**ತತೋಽಹಂ ಬಾಲರೂಪೇಣ ಪ್ರಾರೋದನ್ಮೋಹಯಂಶ್ಚ ತಾನ್॥೩೧॥**

**ವಿಮೋಹಿತಾಸ್ತೇ ಪ್ರಯಯುಃ ಸ್ವಂಸ್ವಂ ಸ್ಥಾನಂ ಪ್ರಣಮ್ಯ ಮಾಂ ।**
**ಅದ್ಭುತಂ ಕಥಯಂಶ್ಚೈವ(ತಶ್ಚ)ಯದ್ದೃಷ್ಟಂ ಪರಮೋತ್ಸವಂ ॥೩೨॥**

॥ ಶ್ರೀಕೃಷ್ಣ ಉವಾಚ ॥

**ಮುನೇ ಗೋಪಾಶ್ಚ ಗೋಪ್ಯಶ್ಚ ಗಾಯಮಾನಾಃ ಪರಸ್ಪರಮ್ ।**
**ಆನಂದಸಂಪ್ಲವೇ ಮಗ್ನಾ ಗತಾ ದೂರಂ ಮಮಾಂತಿಕಂ ॥೩೩॥**

**ಪ್ರೇಂಖಸ್ಥಿತಂ ಮಾಂ ವಿಸ್ಮೃತ್ಯ ಪ್ರಸುಪ್ತಮಿವ ಮಾಂ ವಿದುಃ ।**
**ಆತ್ಮನೋ ಗುಣಗಾನಸ್ಯ ಶ್ರವಣೇಽಭೂನ್ಮನೋ ಮಮ ॥೩೪॥**

---

ಅಗ್ನಿ, ವರುಣ ಮುಂತಾದ ಲೋಕಪಾಲಕರೂ ಸಹ ನನ್ನ ಕಟಾಕ್ಷಕ್ಕೆ ಪಾತ್ರರಾಗಿ ಸಂತೋಷವನ್ನು ಪಡೆದವರಾದರು. ಮತ್ತು ಇಂದ್ರನು ಹೇಳಿದ ರೀತಿಯಲ್ಲಿಯೇ ತಾವೂ ಹೇಳಿದವರಾದರು. ಬಳಿಕ ನಾನು ನನ್ನ ಬಾಲರೂಪದಿಂದ ಆ ದೇವತೆಗಳನ್ನು ಮೋಹಗೊಳಿಸಲು ರೋದಿಸಿದೆನು. ॥೩೦-೩೧॥

ಈ ರೀತಿಯಲ್ಲಿ ಮೋಹಿತರಾದ ದೇವತೆಗಳು ನನ್ನನ್ನು ನಮಸ್ಕರಿಸಿ ತಾವು ಸಂದರ್ಶಿಸಿದ ಅದ್ಭುತವಾದ ಉತ್ಸವವನ್ನು ಕುರಿತು ಪರಸ್ಪರವಾಗಿ ಮಾತನಾಡುವವರಾಗಿ ತಮ್ಮ ತಮ್ಮ ಸ್ಥಾನವನ್ನು ಕುರಿತು ತೆರಳಿದವರಾದರು. ॥೩೨॥

ಶ್ರೀಕೃಷ್ಣನು ಹೇಳಿದನು—ಎಲೈ ನಾರದಮುನಿಯೇ, ಬಳಿಕ ಗೋಪಾಲಕರು ಮತ್ತು ಗೋಪಿಯರು ಅನ್ಯೋನ್ಯವಾಗಿ ಗಾನಮಾಡುತ್ತಾ ಆನಂದಾಂಬುಧಿಯಲ್ಲಿ ಮುಳುಗಿದವರಾಗಿ ನನ್ನ ಸನ್ನಿಧಿಯಿಂದ ದೂರವಾಗಿ ತೆರಳಿದರು. ॥೩೩॥

ಆ ಗೋಪಗೋಪಿಕೆಯರು ನಾನು ಉಯ್ಯಾಲೆ (ಎಲ್ಲೆಡೆ) ಯಲ್ಲಿ ಕುಳಿತಿರುವೆನೆಂಬುದನ್ನು ಮರೆತು ನಿದ್ರಿಸುತ್ತಿರುವೆನೆಂದು ತಿಳಿದರು. ಆಗ ನನ್ನ ಮನಸ್ಸು ನನ್ನ ಗುಣಗಾನವನ್ನು ಕೇಳುವುದರಲ್ಲಿ ಮಗ್ನವಾಗಿತ್ತು. ॥೩೪॥

ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ನ ಚ ।
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥೩೫॥

ನಿತ್ಯಂ ಶೃಣ್ವಂತಿ ಗಾಯಂತಿ ಮತ್ಕೀರ್ತಿಂ ಶೇ ವ್ರಜೌಕಸಃ ।
ಮನುಷ್ಯಬುದ್ಧ್ಯಾ ಪಶ್ಯಂತಿ ಲೋಕಾ ಮಾಮಂಧದೃಷ್ಟಯಃ ॥೩೬॥

ಮದ್ಭಕ್ತಸದೃಶೋ ಲೋಕೇ ಪಿತಾ ಮಾತಾ ಗುರುರ್ನಹಿ ।
ನ ಬಂಧುರ್ನಾಪರೇ ಚೈವ ಇತಿ ವೇದವಿದೋ ವಿದುಃ ॥೩೭॥

ಯೇ ಮತ್ಕೀರ್ತೌ ಜನಂ ಸಕ್ತಂ ಪೃಥಕ್ಕುರ್ವಂತಿ ಮಾನವಾಃ ।
ತಥಾ ಮದ್ದ್ವೇಷಿಣೋ ನಿತ್ಯಂ ಪತಂತಿ ನರಕೇಽಶುಚೌ ॥೩೮॥

ಶೃಣೋಮಿ ಸ್ವಯಶೋಗಾನಂ ಪ್ರೇಮ್ಣಾ ಭಕ್ತೈರುದಾಹೃತಮ್ ।
ಕೃತಂ ಗೋಪೈಶ್ಚ ಗೋಪೀಭಿರ್ಗಾನಂ ತ್ಯಕ್ತ್ವಾ ಚ ಕೌತುಕಮ್ ॥೩೯॥

---

ಎಲೈ ನಾರದನೇ, ನಾನು ವೈಕುಂಠದಲ್ಲಾಗಲೀ ಯೋಗಿಗಳ ಹೃದಯದಲ್ಲಾಗಲೀ ವಾಸಿಸುವುದಿಲ್ಲ. ಯಾವ ಸ್ಥಳದಲ್ಲಿ ನನ್ನ ಭಕ್ತರು ಗಾನಮಾಡುವರೋ ಆ ಸ್ಥಳದಲ್ಲಿ ನಾನು ನೆಲಸಿರುವೆನು. ॥೩೫॥

ಈ ಗೋಕುಲನಿವಾಸಿಗಳು ನಿರಂತರವೂ ನನ್ನ ಕೀರ್ತಿಯನ್ನು ಶ್ರವಣ ಮಾಡುತ್ತಾರೆ. ಮತ್ತು ಗಾನಮಾಡುತ್ತಾರೆ. ಹೀಗಿರುವಲ್ಲಿ ಅಜ್ಞಾನಿಗಳಾದ ಜನರು ನನ್ನನ್ನು ಮನುಷ್ಯನೆಂದು ಪರಿಗಣಿಸುತ್ತಾರೆ. ॥೩೬॥

ಲೋಕದಲ್ಲಿ ತಂದೆ ತಾಯಿ ಗುರು ಬಂಧು ಮತ್ತು ಇನ್ನಿತರರೇ ಆಗಲಿ ಅವರಾರೂ ನನ್ನ ಭಕ್ತನಿಗೆ ಸದೃಶರಾಗಿರುವುದಿಲ್ಲ. ಎಂದು ಶ್ರುತಿಯನ್ನು ಬಲ್ಲವರು ಹೇಳುವರು. ॥೩೭॥

ಯಾರು ನನ್ನ ಕೀರ್ತಿಶ್ರವಣದಲ್ಲಿ ಮಗ್ನರಾಗಿರುವವರನ್ನು ನನ್ನಿಂದ ವಿಮುಖರನ್ನಾಗಿ ಮಾಡುವರೋ ಮತ್ತು ಯಾರು ನನ್ನನ್ನು ದ್ವೇಷಿಸುವರೋ ಅವರು ಸರ್ವದಾ ಅಶುಚಿಯಾದ ನರಕದಲ್ಲಿ ಬೀಳುವರು. ॥೩೮॥

ನಾನು ನನ್ನ ಬಾಲಲೀಲೆಗಳನ್ನು ಬಿಟ್ಟು ಭಕ್ತರಿಂದ ಮಾಡಲ್ಪಟ್ಟ ನನ್ನ ಯಶೋಗಾನವನ್ನು ಕೇಳುತ್ತೇನೆ ಮತ್ತು ಗೋಪಾಲಕರಿಂದಲೂ ಗೋಪಿಕೆಯರಿಂದಲೂ ಮಾಡಲ್ಪಟ್ಟ ನನ್ನ ಗಾನವನ್ನು ಕೇಳುವೆನು. ॥೩೯॥

ತತಃ ಪ್ರರುದ್ಯ ರೋಷಾತ್ತು ಪದ್ಭ್ಯಾಂ ಚ ಶಕಟೋ ಹತಃ ।
ಶಕಟಃ ಪರ್ಯಗಾದ್ಭಿನ್ನಭಾಂಡೋಪಸ್ಕಾರ ಪೂಜಿತಃ ॥೪೦॥

ನಿಶಮ್ಯ ಶಕಟಂ ಭಗ್ನಂ ಕಿಮೇತದಿತಿ ವಿಸ್ಮಿತಾಃ ।
ತತ್ರಾಗತಾ ಮಾಂ ದದೃಶುರಕ್ಷತಂ ಹೃಷ್ಟ ಮಾನಸಮ್ ॥೪೧॥

ಉತ್ಥಾಯಾಂಕಗತಂ ಚಕ್ರುಸ್ತರ್ಕಯಂತಿ ಸಚಿತ್ರಧಾ ।
ಕೇನೇದಂ ಶಕಟಂ ಭಗ್ನಂ ದೃಶ್ಯತೇಽಸ್ಯ ನ ಕಾರಣಮ್ ॥೪೨॥

ಬಾಲಾ ಊಚುರನೇನೇತಿ ಶಕಟಃ ಪ್ರಪದಾ ಹತಃ ।
ವಿಪರ್ಯಗಾನ್ನ ಸಂದೇಹೋ ದೃಷ್ಟವಸ್ಮಾಭಿರತ್ರ ಹಿ ॥೪೩॥

---

ಬಳಿಕ ಅತಿಶಯವಾಗಿ ರೋದಿಸುತ್ತಾ ರೋಷದಿಂದ ಗಾಡಿಯ ರೂಪದಲ್ಲಿ ಬಂದ ಶಕಟಾಸುರನನ್ನು ನನ್ನ ಪಾದಗಳಿಂದ ಸಂಹರಿಸಿದೆನು. ಶಕಟಾಸುರನು ನನ್ನ ಕಾಲಿನ ಒದೆತದಿಂದ ಒಡೆದ ಮಡಕೆಯು ರೀತಿಯಲ್ಲಿ ಛಿನ್ನಭಿನ್ನವಾಗಿ ಓಡಿ ಹೋದನು. ॥೪೦॥

ಶಕಟವು ಮುರಿದುಹೋದ ವಾರ್ತೆಯನ್ನು ಕೇಳಿ ಜನರು ಇದೇನೆಂದು ವಿಸ್ಮಯಗೊಂಡವರಾಗಿ ನಾನಿದ್ದಲ್ಲಿಗೆ ಬಂದು ಯಾವ ಪೀಡೆಯನ್ನೂ ಹೊಂದದಿರುವ ಮತ್ತು ಹರ್ಷಚಿತ್ತನಾದ ನನ್ನನ್ನು ನೋಡಿದರು. ॥೪೧॥

ಅವರು ನನ್ನನ್ನು ಎತ್ತಿಕೊಂಡು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಈ ಶಕಟವು ಯಾರಿಂದ ನಾಶಮಾಡಲ್ಪಟ್ಟಿತು ? ಶಕಟದ ನಾಶಕ್ಕೆ ಯಾವ ಕಾರಣವೂ ಕಾಣುವುದಿಲ್ಲ. ಇದೇನಾಗಿರಬಹುದು ? ಎಂಬುದಾಗಿ ನಾನಾವಿಧವಾಗಿ ತರ್ಕಿಸ ತೊಡಗಿದರು. ॥೪೨॥

ಜನಗಳು ಈ ರೀತಿಯಲ್ಲಿ ಮಾತನಾಡಿಕೊಳ್ಳುತ್ತಿರಲು ಸಮೀಪದಲ್ಲಿದ್ದ ಬಾಲಕರು ಹೀಗೆಂದು ಹೇಳಿದರು. ಗಾಡಿಯ ರೂಪದಿಂದ ಭೂಮಿಯ ಮೇಲೆ ಉರುಳುತ್ತಿದ್ದ ಆ ಶಕಟಾಸುರನು ಶ್ರೀಕೃಷ್ಣನ ಪಾದಘಾತದಿಂದ ಕೊಲ್ಲಲ್ಪಟ್ಟನು. ಇದನ್ನು ನಾವು ನೋಡಿದೆವು. ಇದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ॥೪೩॥

ತೇಷಾಂ ನ ಶ್ರದ್ದಧುರ್ವಾಚೋ ಬಾಲಭಾಷಿತ ಮಿತ್ಯುತ ।
ಅನ್ಯಭಾವಾಸ್ತೇನ ತತ್ರ ಗೋಪಾ ಗೋಪ್ಯಃ ಸಮಂತತಃ ॥೪೪॥

ಸಮ್ಯಗ್ವಿಧಾಯ ಶಕಟಂ ತತೋ ದಾನಾನ್ಯದುರ್ಮುದಾ ।
ಗಾಃ ಸ್ವರ್ಣರೂಪ್ಯ ವಾಸಾಂಸಿ ರತ್ನಾನ್ಯನ್ನಾನಿ ಶ್ರದ್ಧಯಾ ॥೪೫॥

ಆಶಿಷಃ ಪ್ರದದು(ದೌ)ರ್ವಿಪ್ರಾಃ ಕೋಟೇಃ ಸಂತುಷ್ಟ ಮಾನಸಾಃ ।
ಯಶೋದಯಾ ಚ ನಂದೇನ ಗೋಪ್ಯೋ ಗೋಪಾಶ್ಚ ಪೂಜಿತಾಃ ॥೪೬॥

ಪ್ರಯಯುಃ ಸ್ವಗೃಹಾಣ್ಯೇವ ದತ್ವಾ ಚ ಪರಮಾಶಿಷಃ ।
ಆಗತ್ಯ ನಾನಾದೇಶೇಭ್ಯಃ ಯಾಚಕಾಸ್ತತ್ರ ಆವಸನ್ ॥೪೭॥

ಸಂಗೃಹ್ಯ ನಂದದಾನಾನಿ ಪರಂ ತೇ ಧನಿನೋಽಭವನ್ ।
ಶ್ರುತ್ವಾ ದಾನಂ ಮಹತ್ತತ್ರ ದೀನಾ ವಿದ್ಯೋಪಜೀವಿನಃ ॥೪೮॥

---

ಆದರೆ ಜನರು ಬಾಲಕರ ಮಾತನ್ನು ನಂಬಲಿಲ್ಲ. ಅಲ್ಲಿಗೆ ಬಂದ ಗೋಪ ಗೋಪಿಕೆಯರು ಶಕಟಸಂಹಾರದಲ್ಲಿ ಕಾರಣಾಂತರವಿರಬಹುದೆಂದು ತಿಳಿದವರಾಗಿ, ಹೇಗೂ ಶಕಟಾಸುರನು ಮೃತನಾದನೆಂದು ಸ್ಪಷ್ಟವಾಗಿ ತಿಳಿದು, ಸಂತೋಷದಿಂದ ದಾನಗಳನ್ನು ಮಾಡಿದರು. ॥೪೪॥

ಅವರು ಚಿನ್ನ, ಬೆಳ್ಳಿ, ವಸ್ತ್ರ, ರತ್ನ, ಅನ್ನ ಮುಂತಾದುವುಗಳನ್ನು ಶ್ರದ್ಧೆಯಿಂದ ದಾನಮಾಡಿದರು. ಇದರಿಂದ ಸಂತುಷ್ಟರಾದ ಬ್ರಾಹ್ಮಣರು ಬಹುವಿಧವಾಗಿ ಗೋಪಾಲಕರನ್ನು ಆಶೀರ್ವದಿಸಿದರು. ॥೪೫॥

ಗೋಪಾಲಕರೂ ಮತ್ತು ಗೋಪಿಯರೂ ಯಶೋದೆಯಿಂದಲೂ ಮತ್ತು ನಂದನಿಂದಲೂ ಪೂಜಿಸಲ್ಪಟ್ಟವರಾಗಿ ಅಮೋಘವಾದ ಆಶೀರ್ವಾದಗಳನ್ನು ಅರ್ಪಿಸಿ ತಮ್ಮ ತಮ್ಮ ಮನೆಗಳನ್ನು ಕುರಿತು ತೆರಳಿದವರಾದರು. ॥೪೬॥

ನಾನಾ ದೇಶಗಳಿಂದ ಯಾಚಕರು ಬಂದು ಅಲ್ಲಿ ವಾಸಮಾಡುತ್ತಿದ್ದರು. ಅವರೆಲ್ಲರೂ ನಂದನಿಂದ ಕೊಡಲ್ಪಟ್ಟ ದಾನಗಳನ್ನು ಸಂಗ್ರಹಿಸಿ ಅತ್ಯಂತ ಧನಿಕರಾದರು. ॥೪೭॥

ನಂದನು ನಾನಾ ವಿಧವಾದ ದಾನಗಳನ್ನು ಕೊಡುವನೆಂಬುದನ್ನು ತಿಳಿದು ತಮ್ಮ ವಿದ್ಯೆಯಿಂದಲೇ ಜೀವಿಸುವ ಅನೇಕ ಬಡಬಗ್ಗರು ಸದಾ ಗೋಕುಲದಲ್ಲಿಯೇ ವಾಸಿಸುತ್ತಿದ್ದರು. ಅವರು ಗೋಕುಲವನ್ನು ಬಿಟ್ಟು ಎಲ್ಲಿಗೂ ಹೋಗುತ್ತಿರಲಿಲ್ಲ. ॥೪೮॥

ವಸಂತಿಸ್ಮ ವ್ರಜೇ ನಿತ್ಯಂ ನ ಯಾಂತ್ಯನ್ಯತ್ರ ಕರ್ಹಿಚಿತ್
ಆಧಿವ್ಯಾಧಿವಿನಿರ್ಮುಕ್ತಾಸ್ತಾಪತ್ರಯವಿವರ್ಜಿತಾಃ ॥೪೯॥

ಆಸನ್‌ವ್ರಜೌಕಸಃ ಸರ್ವೇ ಮನ್ನಿವಾಸೇನ ನಾರದ
ಯತ್ರ ಮೇ ಶ್ರವಣಾದೀನಿ ಮಂಗಲಾನಿ ಭವಂತಿ ಹಿ ।
ತತ್ರ ಕಿಂಚಿನ್ನ ದುಃಖಂ ಸ್ಯಾತ್ಕಿಂ ಪುನರ್ಮಮ ವಾಸತಃ ॥೫೦॥

॥ ನಾರದ ಉವಾಚ ॥

ಭಗವನ್ದೇವದೇವೇಶ ಶ್ರೀಕೃಷ್ಣ ಕರುಣಾಕರ ।
ಶ್ರುತ್ವಾ ತೇ ಬಾಲಚರಿತಂ ನ ಮನಸ್ತೃಪ್ಯ ತೇ ಮಮ ॥೫೧॥

ಇಂದ್ರಾದ್ಯೈಃ ಸಂಸ್ತುತಂ ಕೋ ನು ತದ್ಬಾಲಚರಿತಂ ಹರೇ(ಃ) ।
ನ ಶೃಣೋತ್ಯಭಿತೋ ಮರ್ತ್ಯಃ ಶ್ರೋತವ್ಯಮಮರೋತ್ತಮೈಃ ॥೫೨॥

---

ಎಲೈ ನಾರದನೇ, ನಾನು ಈ ಗೋಕುಲದಲ್ಲಿ ವಾಸಮಾಡುತ್ತಿದ್ದುದರಿಂದ ಸಕಲ ಗೋಕುಲ ನಿವಾಸಿಗಳೂ ಸಹ ಮನೋವ್ಯಾಧಿ, ಶರೀರವ್ಯಾಧಿಗಳಿಂದಲೂ ಮತ್ತು ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬ ತಾಪತ್ರಯಗಳಿಂದಲೂ ಬಿಡಲ್ಪಟ್ಟವರಾಗಿ ವಾಸಿಸುತ್ತಿದ್ದರು. ॥೪೯॥

ಯಾವ ಸ್ಥಳದಲ್ಲಿ ಜನರು ಮಂಗಳಕರವಾದ ನನ್ನ ಕೀರ್ತಿಯನ್ನು ಶ್ರವಣ ಮಾಡುವರೋ ಅಲ್ಲಿ ಯಾವ ವಿಧವಾದ ದುಃಖವೂ ಇರುವುದಿಲ್ಲ. ಹೀಗಿರುತ್ತಿರಲು ಯಾವ ಸ್ಥಳದಲ್ಲಿ ಸಾಕ್ಷಾತ್ತಾಗಿ ನಾನೇ ವಾಸಿಸುವೆನೋ ಅಲ್ಲಿ ದುಃಖಗಳು ಸಂಭವಿಸುವುದಿಲ್ಲವೆಂದು ಹೇಗೆ ತಾನೇ ಹೇಳಲು ಅಸಾಧ್ಯವಾಗಿರುತ್ತದೆ? ಶ್ರೀಕೃಷ್ಣನು ತನ್ನ ಕಥೆಯನ್ನು ಈ ರೀತಿಯಾಗಿ ವಿವರಿಸಲು, ॥೫೦॥

ನಾರದನು ಹೇಳಿದನು—ಓ ಕರುಣಾಸಿಂಧುವೂ, ದೇವದೇವನೂ ಆದ ಶ್ರೀಕೃಷ್ಣನೇ, ನಿನ್ನ ಬಾಲ್ಯಚರಿತ್ರೆಯನ್ನು ಎಷ್ಟು ಕೇಳಿದರೂ ನನ್ನ ಮನಸ್ಸಿನಲ್ಲಿ ತೃಪ್ತಿಯುಂಟಾಗುವುದಿಲ್ಲ. ॥೫೧॥

ಇಂದ್ರಾದಿ ದೇವತೆಗಳಿಂದಲೂ ಸ್ತೋತ್ರಮಾಡಲ್ಪಡುವ ನಿನ್ನ ಬಾಲ್ಯಚರಿತ್ರೆಯನ್ನು ಯಾವ ಮನುಜನು ತಾನೇ ಶ್ರವಣಮಾಡುವುದಿಲ್ಲ? ॥೫೨॥

ಕೃಪಯಾ ಬ್ರೂಹಿ ಮೇ ನಾಥ ಆತ್ಮೀಯಂ ಬಾಲಚೇಷ್ಟಿತಮ್ ।
ಯಸ್ಯ ಶ್ರವಣಮಾತ್ರೇಣ ಶುದ್ಧ್ಯಂತಿ ಮಲಿನಾ ಜನಾಃ ॥೫೩॥

॥ ಭಗವಾನುವಾಚ ॥

ಶೃಣು ನಾರದ ವಕ್ಷ್ಯಾಮಿ ಬಾಲಚೇಷ್ಟಿತಮಾತ್ಮನಃ ।
ಶೃಣ್ವತಾಂ ಪರಮಾನಂದಕಾರಣಂ ಭಕ್ತಿಸಾಧನಂ ॥೫೪॥

ಅಂಕಮಾರೋಪ್ಯ ಜನನೀ ಯದಾ ಪಶ್ಯತಿ ಮೇ ಮುಖಂ ।
ಬ್ರವೀತಿ ಪುತ್ರ ವತ್ಸೇತಿ ತದಾ ಮೇ ಜಾಯತೇ ಸ್ಮಿತಂ ॥೫೫॥

ಅಹೋ ಬಲಂ ಮೇ ಮಾಯಾಯಾಃ ಸರ್ವೇಶಮಪಿ ಮಾಮಿಯಂ ।
ಜಾನಾತಿ ಪುತ್ರಂ ಬಾಲ್ಯೇನ ಸುಸ್ಮಿತಾಸ್ಯ ಸುಖಪ್ರದಂ ॥೫೬॥

---

ಓ ಪ್ರಭುವೇ, ಯಾವ ನಿನ್ನ ಬಾಲಲೀಲೆಗಳನ್ನು ನೋಡಿದಮಾತ್ರದಿಂದಲೇ ಪಾಪಿಷ್ಠರು ಪಾಪಮುಕ್ತರಾಗುವರೋ ಆ ನಿನ್ನ ಬಾಲಲೀಲೆಯನ್ನು ದಯಮಾಡಿ ಹೇಳುವವನಾಗು. ಎಂದು ನಾರದನು ಪ್ರಾರ್ಥಿಸಲು, ॥೫೩॥

ಎಲೈ ನಾರದನೇ, ಕೇಳುವ ಜನರಿಗೆ ಪರಮಾನಂದವನ್ನುಂಟುಮಾಡುವುದೂ ಭಕ್ತಿಗೆ ಸಾಧನವಾದುದೂ ಆದ ನನ್ನ ಬಾಲ್ಯ ಚರಿತ್ರೆಯನ್ನು ಹೇಳುವೆನು ಕೇಳುವವನಾಗು. ಎಂದು ಶ್ರೀಕೃಷ್ಣಭಗವಂತನು ಹೇಳಿದನು. ॥೫೪॥

ಜನನಿಯು ಯಾವಾಗ ನನ್ನನ್ನು ತನ್ನ ತೊಡೆಯಮೇಲೇರಿಸಿ, ನನ್ನ ಮುಖವನ್ನು ನೋಡಿ, ಪುತ್ರ, ವತ್ಸ, ಎಂದು ಹೇಳುವಳೋ ಆಗ ನನ್ನಲ್ಲಿ ಮಂದಹಾಸವು ಉಂಟಾಗುವುದು. ॥೫೫॥

ನನ್ನ ಮಾಯಾ ಶಕ್ತಿಯು ಅತ್ಯದ್ಭುತವಾದುದಾಗಿರುತ್ತದೆ. ಏಕೆಂದರೆ ನಾನು ಸಮಸ್ತ ಪ್ರಾಣಿಗಳಿಗೂ ನಿಯಾಮಕನಾಗಿದ್ದರೂ, ನನ್ನ ಜನನಿಯಾದ ಯಶೋದೆಯು ಇದನ್ನು ತಿಳಿಯದವಳಾಗಿ ನನ್ನನ್ನು ಸುಖದಾಯಕನಾದ ತನ್ನ ಪುತ್ರನೆಂದು ತಿಳಿಯುವಳು. ॥೫೬॥

ಇತಿ ಜ್ಞಾತ್ವಾ ಮಯಾ ಮಾತ್ರೇ ಪುತ್ರಪ್ರೇಮ ನಿಯೋಜಿತಮ್ ।
ಜಾನೂಪರಿ ತು ಸಂವೇಶ್ಯ ಸರ್ವಾಂಗಂ ವೀಕ್ಷ್ಯ ಮಾಮುಕಮ್ ॥೫೭॥

ಪೃಚ್ಛಂತ್ಯಾಂ ನಾನಾ ವಾರ್ತಾಂ ಮಾಂ ಮಮ ಸಂಜಾಯತೇ ಸ್ಮಿತಂ ।
ನ ವದಾಮ್ಯತಿ ಬಾಲತ್ವಾದ್ವಾಚ್ಯಮಾನೋ ನಿರಂತರಮ್ ॥೫೮॥

ತದ್ವೀಕ್ಷ್ಯ ಗೋಪಗೋಪೀನಾಂ ಜಾಯತೇ ಪರಮಂ ಸುಖಂ ।
ನ ಕುರ್ವಂತಿ ಕದಾಚಿದ್ವೈ ಮಾಂ ಹಿ ದೃಷ್ಟಿಪಥಾದ್ಬಹಿಃ ॥೫೯॥

ಸ್ವಪ್ನೇಽಪಿ ಮಾಂ ಲಾಲಯಂತಿ ಪಶ್ಯಂತ್ಯಾನಂದಕಾರಣಮ್ ।
ಏವಂ ವ್ರಜೌಕೋಭಿಃ ಸಾರ್ಧಂ ಬಾಲಲೀಲಾಂ ಕರೋಮ್ಯಹಂ॥೬೦॥

ಪೂತನಾಯಾಃ ಪತಿರ್ಗೇಹೇ ಆಜಗಾಮ ಘಟೋದರಃ ।
ಶ್ಯಾಲಾಭ್ಯಾಂ ಸಹ ಚಾನ್ಯಾಭ್ಯಾಂ ನಾನುಲೋಕ್ಯಾತ್ಮವಲ್ಲಭಾಂ ॥೬೧॥

---

ನಾನು ಹೀಗೆಂದು ತಿಳಿದು ನನ್ನ ಮಾತೃವಿಗೆ ನನ್ನಲ್ಲಿ ಪುತ್ರಪ್ರೇಮವುಂಟಾಗುವಂತೆ ಮಾಡಿರುವೆನು. ಜನನಿಯಾದ ಯಶೋದೆಯು ನನ್ನನ್ನು ತನ್ನ ತೊಡೆಯಮೇಲೆ ಮಲಗಿಸಿ ನನ್ನ ಸರ್ವಾಂಗವನ್ನೂ ನೋಡುತ್ತಾ ನನ್ನನ್ನು ನಾನಾ ವಿಧವಾಗಿ ಲಾಲಿಸುತ್ತಿರಲು ನನ್ನಲ್ಲಿ ಮಂದಹಾಸವುಂಟಾಗುವುದು. ||೫೭||

ಅವಳು ನಿರಂತರವೂ ನನ್ನನ್ನು ಮಾತನಾಡಿಸುತ್ತಿದ್ದಳಾದರೂ ಬಾಲಕನಾದ್ದರಿಂದ ನಾನು ಮಾತಾಡಲಾರದವನಾಗಿದ್ದೆನು. ||೫೮||

ಅದನ್ನು ನೋಡಿ ಗೋಪಗೋಪಿಯರಿಗೆ ಅಪಾರವಾದ ಆನಂದ ಉಂಟಾಗುತ್ತದೆ. ಆ ಗೋಪಗೋಪಿಯರು ಎಂದಿಗೂ ನನ್ನನ್ನು ತಮ್ಮ ದೃಷ್ಟಿಮಾರ್ಗದಿಂದ ಬಾಹಿರನನ್ನಾಗಿ ಮಾಡುತ್ತಿರಲಿಲ್ಲ. ಅನವರತವೂ ಅವರು ನನ್ನನ್ನೇ ನೋಡುತ್ತಿರುವರು! ಸ್ವಪ್ನದಲ್ಲಿಯೂ ಸಹ ನನ್ನನ್ನು ಲಾಲಿಸುವರು ಮತ್ತು ಆನಂದ ಕಾರಣನಾದ ನನ್ನನ್ನು ನೋಡುವರು. ||೫೯||

ಈ ರೀತಿಯಲ್ಲಿ ನಾನು ಆ ಗೋಕುಲ ನಿವಾಸಿಗಳಾದ ಜನಗಳಿಗೆ ನನ್ನ ಲೀಲೆಗಳನ್ನು ಪ್ರದರ್ಶಿಸುವೆನು. ||೬೦||

ಇತ್ತಲಾಗಿ ಪೂತನಿಯ ಪತಿಯಾದ ಘಟೋದರನು ತನ್ನ ಶ್ಯಾಲಕರೊಂದಿಗೆ (ಭಾವಮೈದಂದಿರು.-ಹೆಂಡತಿಯ ತಮ್ಮಂದಿರು) ಮನೆಗೆ ಬಂದನು. ಬಳಿಕ ತನ್ನ

ಸುಪ್ತಾಂ ವೃಕೋದರೀಂ ವೀಕ್ಷ್ಯ ತಾಮುತ್ಥಾಪ್ಯಾಹ ದುಃಖಿತಃ ।
ಅಘಾಸುರೋ ಬಕಶ್ಚೈವ ಭ್ರಾತರೌ ತೇ ಮಹಾಬಲೌ ॥೬೨॥

ವೃಕೋದರೀಹ ಮೇ ಭಾರ್ಯಾ ನಾಪಯಾತಿ ಗೃಹೇ ಕ್ವಚಿತ್ ।
ಕ್ವ ಗತಾ ಸಾ ವದಾಶು ತ್ವಂ ಮನೋ ಮೇಽತೀವ ಪೀಡಿತಮ್ ॥೬೩॥

ಯದಂಗ ಸಂಗಾದ್ಬಾಲಾನಾಂ ಮರಣಂ ವಿಧಿನಿರ್ಮಿತಂ ।
ಭವತ್ಯವಶ್ಯಂ ಸಾ ಬಾಲಾ ಕ್ವಗತಾ ವದ ತತ್ತ್ವತಃ ॥೬೪॥

ಶ್ರುತ್ವಾ ಘಟೋದರವಚೋ ಭಗಿನೀ ಶೋಕಪೀಡಿತಾ ।
ಉವಾಚಾಶ್ರುಮುಖೀಭೂತ್ವಾ ಸಂತಪ್ತಾ ಸಾ ವೃಕೋದರೀ ॥೬೫॥

---

ಹೆಂಡತಿಯಾದ ಪೂತನಿಯನ್ನು ಕಾಣದೆ ನಿದ್ದೆಮಾಡುತ್ತಿದ್ದ ವೃಕೋದರಿಯನ್ನು ಎಚ್ಚರಿಸಲು, ದುಃಖಿಯಾದ ಅವಳನ್ನು ನೋಡಿ, ಹೀಗೆಂದು ಹೇಳಿದನು. ॥೬೧॥

ಎಲೌ ವೃಕೋದರಿಯೇ, ನಿನ್ನ ಸಹೋದರರಾದ ಅಘಾಸುರನೂ ಮತ್ತು ಬಕನೂ ಮಹಾ ಬಲಿಷ್ಠರು. ॥೬೨॥

ಎಲೌ ವೃಕೋದರಿಯೇ, ನನ್ನ ಪತ್ನಿಯು ಎಂದಿಗೂ ಮನೆಯನ್ನು ಬಿಟ್ಟು ಹೊರಗೆ ಹೋಗುವವಳಲ್ಲ! ಈಗಲಾದರೋ ಅವಳು ಮನೆಯಲ್ಲಿ ಕಾಣುವುದಿಲ್ಲ. ಅವಳು ಎಲ್ಲಿಗೆ ಹೋದಳೆಂಬುದನ್ನು ಶೀಘ್ರವಾಗಿ ನನಗೆ ಹೇಳುವವಳಾಗು. ಅವಳು ಇಲ್ಲಿ ಇಲ್ಲದಿರುವುದರಿಂದ ನನ್ನ ಮನಸ್ಸು ಅತ್ಯಂತ ವ್ಯಥೆಯನ್ನು ಹೊಂದಿರುತ್ತದೆ. ॥೬೩॥

ವಿಧಿ ನಿಯಮದಂತೆ ಯಾವಳ ಅಂಗಸ್ಪರ್ಶಮಾತ್ರದಿಂದಲೇ ಬಾಲಕರು ಮರಣವನ್ನು ಹೊಂದುವರೋ ಆ ನನ್ನ ಪ್ರಿಯತಮೆಯು ಎಲ್ಲಿಗೆ ಹೋಗಿರುವಳು? ಎಂಬುದನ್ನು ನಿಜವಾಗಿ ಹೇಳುವವಳಾಗು. ॥೬೪॥

ಘಟೋದರನ ಈ ಮಾತನ್ನು ಕೇಳಿ ಶೋಕದಿಂದ ಪೀಡಿಸಲ್ಪಟ್ಟ, ಸಹೋದರಿಯಾದ ವೃಕೋದರಿಯು ಸಂತಪ್ತಳಾಗಿ ಕಣ್ಣೀರು ಸುರಿಸುತ್ತಾ ಹೀಗೆಂದು ಹೇಳಿದಳು. ॥೬೫॥

**ಘಟೋದರ ಮಹಾಬುದ್ಧೇ ಕಂಸೋ ದುಃಸ್ವಪ್ನದುರ್ಮನಾಃ ।**
**ಬಾಲಕಾನಾಂ ವಿನಾಶಾಯ ಪೂತನಾ ಪ್ರೇಷಿತಾ ವ್ರಜೇ ॥೬೬॥**

**ಮಯಾಽನುಮೋದಿತಾ ಸಾಽಪಿ ಕಂಸಪ್ರಿಯ ಚಿಕೀರ್ಷಯಾ ।**
**ಮೃತಾ ತತ್ರೈವ ನಾಯಾತಾ ಪರಾವೃತ್ಯ ಪ್ರಿಯಾ ತವ ॥೬೭॥**

**ಕಂಸಂ ಪೃಷ್ಟ್ವಾ ತತ್ರ ಗಚ್ಛ ಶ್ಯಾಲೌ ಬಾಹ್ಯಂ ನಿಯೋಜಯ ।**
**ವ್ರಜೌಕಸಾಂ ವಿನಾಶಾಯ ಯೈರ್ಭಾರ್ಯಾ ತೇ ವಿನಾಶಿತಾ ॥೬೮॥**

**ಸ ಇತ್ಥಂ ತದ್ವಚಃ ಶ್ರುತ್ವಾ ಕ್ರುದ್ಧಃ ಕಂಸಾಂತಿಕಂ ಯಯೌ ।**
**ಅಘಾಸುರ ಬಕಾಭ್ಯಾಂ ಚ ಸಹಿತಃ ಕಂಪಯನ್ಮಹೀಂ ॥೬೯॥**

**ಉವಾಚ ಕಂಸಮಾಸಾದ್ಯ ಭಾರ್ಯಾ ಮೇ ಕಿಂ ವಿನಾಶಿತಾ ।**
**ಅತಿಪ್ರಿಯಾ ನಿರಾಹಾರಾ ಬಲಿಷ್ಠಾ ಬಾಲಘಾತಿನೀ ॥೭೦॥**

---

ಎಲೈ ಬುದ್ಧಿಶಾಲಿಯಾದ ಘಟೋದರನೇ, ಕಂಸನು ಕೆಟ್ಟ ಸ್ವಪ್ನಗಳಿಂದ ಕಲುಷಿತವಾದ ಮನಸ್ಸುಳ್ಳವನಾಗಿರುವನು. ಅವನು ಮಕ್ಕಳನ್ನು ಕೊಲ್ಲುವುದ ಕ್ಕೋಸ್ಕರ, ನಿನ್ನ ಪತ್ನಿಯಾದ ಪೂತನಿಯನ್ನು ಗೋಕುಲಕ್ಕೆ ಕಳುಹಿಸಿದನು. ನನ್ನ ಅನುಮತಿಯನ್ನು ಪಡೆದ ಅವಳು ಕಂಸನಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಗೋಕುಲಕ್ಕೆ ಹೋದವಳಾಗಿ ಹಿಂತಿರುಗದೇ ಅಲ್ಲಿಯೇ ಮೃತಳಾದಳು. ॥೬೬-೬೭॥

ನಿನ್ನ ಭಾವಂದಿರಾದ ಘಟೋದರ ಮತ್ತು ಬಕ ಇವರನ್ನು, ಕಂಸನ ಅಪ್ಪಣೆ ಯಿಂದ ಪೂತನಿಯನ್ನು ಕೊಂದವರನ್ನು ಹುಡುಕಲು ಕಳುಹಿಸಿಕೊಟ್ಟು, ನೀನು ನಿನ್ನ ಪತ್ನಿಯ ವಿನಾಶಕ್ಕೆ ಕಾರಣರಾದ ಗೋಕುಲವಾಸಿಗಳನ್ನು ನಾಶಪಡಿಸಲು ಗೋಕು ಲಕ್ಕೆ ಹೊರಡು. ॥೬೮॥

ವೃಕೋದರಿಯು ಹೇಳಿದ ಈರೀತಿಯಾದ ವಚನವನ್ನು ಕೇಳಿ ಕೋಪ ಗೊಂಡ ಘಟೋದರನು, ಅಘಾಸುರ ಬಕರೊಂದಿಗೆ ಭೂಮಿಯನ್ನು ನಡುಗಿಸುವಂತೆ ಘರ್ಜಿಸುತ್ತಾ ಕಂಸನ ಬಳಿಗೆ ಬಂದನು. ಮತ್ತು ಅವನನ್ನು ಕುರಿತು ಹೀಗೆಂದು ಹೇಳಿದನು. ಎಲೈ ಕಂಸನೇ, ನನಗೆ ಅತಿಪ್ರಿಯಳಾಗಿಯೂ ಮನುಷ್ಯರೇ ಆಹಾರವುಳ್ಳ ವಳಾಗಿಯೂ, ಅತ್ಯಂತ ಬಲಶಾಲಿಯೂ ಮತ್ತು ಬಾಲಕರನ್ನು ಸಂಹರಿಸುವವಳೂ ಆದ ನನ್ನ ಭಾರ್ಯೆಯು ಏತಕ್ಕಾಗಿ ಕೊಲ್ಲಲ್ಪಟ್ಟಳು. ? ॥೬೯-೭೦॥

ಪೂತನಾಭ್ರಾತರೌ ಕ್ರುದ್ಧೌ ಊಚತುಃ ಕಂಸಮಾತುಲೌ ।
ಆವಾಂ ವ್ರಜವಿನಾಶಾಯ ವ್ರಜಾವ್ರೋ ಯ್ಯೈರ್ವಿನಾಶಿತಾಃ ॥೭೧॥

ಪ್ರೇಷ್ಯಾನೋ ಭಗಿನೀ ರಾಜಂ ಸ್ತ್ವಮಾಜ್ಞಾಪಯ ಮಾಕ್ರುಧಃ।
ಭಕ್ಷ್ಯಮಿಷ್ಟಂ ವಿನಿರ್ದಿಷ್ಟಂ ವಿಧಾತ್ರಾ ವ್ರಜಸಂಜ್ಞಿತಮ್ ॥೭೨॥

ತೇಷಾಂ ತದ್ವಚನಂ ಶ್ರುತ್ವಾ ಕಂಸೋಽಪ್ಯಾಹಾತಿಸಾಂತ್ವಯನ್ ।
ಘಟೋದರ ಮಹಾಬುದ್ಧೇ ಅಘಾಸುರ ಬಕಾಸುರೌ ॥೭೩॥

ಮಮೈವ ಪ್ರೇಷಿತಾ ಘೋಷಂ ಪೂತನಾ ಚಾತ್ಮಹೇತವೇ ।
ದುಃಖಪ್ರದರ್ಶನೇನಾಲಂ ಭೀತೇನಾ ಸುರಸತ್ತಮಾಃ ॥೭೪॥

ಬಾಲಕಾನಾಂ ವಿನಾಶಾಯ ತಯಾ ಚೈವಾನ್ಯಥಾ ಕೃತಮ್ ।
ಗರಲಂ ಸ್ವಸ್ತನೇ ಲಿಪ್ತ್ವಾ ಕೈತವಂ ರೂಪಮಾಶ್ರಿತಾ ॥೭೫॥

---

ಬಳಿಕ ಕಂಸನ ಸೋದರಮಾವಂದಿರೂ, ಪೂತನಿಯ ಸಹೋದರರೂ ಆದ ಅಘಾಸುರ ಮತ್ತು ಬಕ ಇವರು ಕಂಸನನ್ನು ಕುರಿತು ಹೀಗೆಂದು ಹೇಳಿದರು. ಎಲೈ ರಾಜನೇ, ಯಾವ ಗೋಕುಲವಾಸಿಗಳಿಂದ ಶ್ರೇಷ್ಠಳಾದ ನಮ್ಮ ಸಹೋದರಿಯು ನಾಶಮಾಡಲ್ಪಟ್ಟಳೋ ಅವರನ್ನು ಸಂಹರಿಸುವುದಕ್ಕೋಸ್ಕರ ನಾವೂ ಸಹ ಅಲ್ಲಿಗೆ ಹೋಗುವೆವು. ನಮಗೆ ಅನುಮತಿಯನ್ನೀಯುವವನಾಗು. ಕೋಪಗೊಳ್ಳಬೇಡ. ಗೋಕುಲವೆಂಬುದು ನಮಗೋಸ್ಕರ ಸೃಷ್ಟಿಕರ್ತನಾದ ಬ್ರಹ್ಮನಿಂದ ನಿರ್ಮಿಸಲ್ಪಟ್ಟು ನಮಗೆ ಇಷ್ಟವಾದ ಆಹಾರವಾಗಿರುವುದು. ॥೭೧-೭೨॥

ಅವರ ಆ ಮಾತನ್ನು ಕೇಳಿ ಕಂಸನೂ ಸಹ ಅವರನ್ನು ಸಮಾಧಾನಗೊಳಿಸುವವನಾಗಿ ಹೀಗೆಂದು ಹೇಳಿದನು. ಎಲೈ ಅತ್ಯಂತ ಬುದ್ಧಿಶಾಲಿಯಾದ ಘಟೋದರನೇ, ಮತ್ತು ಅಘಾಸುರ ಬಕಾಸುರರೇ, ಆ ಪೂತನಿಯು ನನ್ನಿಂದಲೇ ಆಜ್ಞೆ ಮಾಡಲ್ಪಟ್ಟು ನನಗೆ ಹಿತವನ್ನುಂಟುಮಾಡುವುದಕ್ಕೋಸ್ಕರ ಗೋಪಗ್ರಾಮಕ್ಕೆ ಕಳುಹಿಸಲ್ಪಟ್ಟಳು. ಎಲೈ ರಾಕ್ಷಸೋತ್ತಮರೇ, ದುಃಖಿತರಾಗಬೇಡಿರಿ. ಭಯಪಡಬೇಡಿರಿ. ॥೭೩-೭೪॥

ಮಕ್ಕಳನ್ನು ಕೊಲ್ಲುವುದಕ್ಕೋಸ್ಕರ ಆ ಪೂತನಿಯೇ ಅನ್ಯಥಾ ಆಚರಿಸಿದಳು. ಅವಳು ತನ್ನ ಸ್ತನಗಳಲ್ಲಿ ವಿಷವನ್ನು ಲೇಪಿಸಿಕೊಂಡು, ಕಪಟರೂಪವನ್ನು ಧರಿಸಿ

ವಿಚರಂತೀ ವ್ರಜೇ ಕಂಚಿಜ್ಜಗೃಹೇ ಬಾಲಕಂ ಪರಂ।
ಸ್ವಭಾವಾತ್ತೇನ ಬಾಲೇನ ಸ್ತನೇಽಕಾರಿ ನಖಕ್ಷತಂ ॥೨೬॥

ತತೋ ಗರಲದೋಷೋ ವೈ ಪ್ರವಿಷ್ಟೋ ರಕ್ತಮಾರ್ಗತಃ।
ಮೃತಾ ಗರೇಣ ಸಾ ಮೂಢಾ ಆತ್ಮಬುದ್ಧಿವಿಕಾರತಃ ॥೨೭॥

ಅತೋ ನ ಕಸ್ಯಚಿದ್ದೋಷೋ ವ್ರಜವಾಸಿಜನಸ್ಯ ಹಿ।
ಯದಿ ವೈರಂ ಕೃತಂ ವಸ್ತೈಃ ವ್ರಜವಾಸಿಜನೈರಲಂ ॥೨೮॥

ತದಾಽಹಂ ಪ್ರೇಷಯಾಮ್ಯದ್ಯ ತೃಣಾವರ್ತಂ ಮಹಾಬಲಂ।
ಮಹಾವಾತಸ್ವರೂಪೇಣ ಮಾನವಾನ್ನೇಷ್ಯತೇ ದಿವಮ್ ॥೨೯॥

ನಾನಾಽಽಕಾಶಪಥೇ ನೀತ್ವಾ ಮಾರಯತ್ಯಖಿಲಾಂಸ್ತತಃ।
ಘಾತಯಿಷ್ಯಾಮಿ ಯುಷ್ಮಾಕಂ ಪ್ರೀತಯೇ ನ ಚಿರೇಣಹಿ ॥೩೦॥

ಗೋಪಗ್ರಾಮದಲ್ಲಿ ಸಂಚರಿಸುವವಳಾಗಿ, ಸ್ತನ್ಯಪಾನವನ್ನು ಮಾಡಿಸುವ ವ್ಯಾಜದಿಂದ ಒಬ್ಬಾನೊಬ್ಬ ಬಾಲಕನನ್ನು ಎತ್ತಿಕೊಂಡಳು. ಆ ಬಾಲಕನು ತನ್ನ ಬಾಲಸ್ವಭಾವಕ್ಕೆ ಅನುಗುಣವಾಗಿ ತನ್ನ ಉಗುರುಗಳಿಂದ ಅವಳ ಸ್ತನಗಳನ್ನು ಗಾಯಗೊಳಿಸಿದನು. ॥೨೫-೨೬॥

ತರುವಾಯ ವಿಷವು ರಕ್ತದಮೂಲಕ ಅವಳ ದೇಹವನ್ನು ವ್ಯಾಪಿಸಿತು. ಈ ದೋಷದಿಂದ ಅವಿವೇಕಿಯಾದ ಪೂತನಿಯು ತನ್ನ ಬುದ್ಧಿಯ ದೋಷದಿಂದಲೇ ಮೃತಳಾದಳಲ್ಲದೇ ಬೇರೆ ಯಾವ ಕಾರಣವೂ ಇರುವುದಿಲ್ಲ. ॥೨೭॥

ಆದುದರಿಂದ ಗೋಪಗ್ರಾಮದಲ್ಲಿ ವಾಸಿಸುವ ಜನರ ಯಾವ ಅಪರಾಧವೂ ಇರುವುದಿಲ್ಲ. ಆ ಗೋಕುಲವಾಸಿಗಳು ನಿಮ್ಮ ಮೇಲಿರುವ ದ್ವೇಷಬುದ್ಧಿಯಿಂದಲೇ ಪೂತನಿಯನ್ನು ಸಂಹರಿಸಿರುವುದಾದರೆ, ಆಗ ನಾನು ಅತ್ಯಂತ ಬಲಶಾಲಿಯಾದ ತೃಣಾವರ್ತನನ್ನು ಗೋಕುಲಕ್ಕೆ ಕಳುಹಿಸುವೆನು. ಅವನು ಬಿರುಗಾಳಿಯ ಸ್ವರೂಪವನ್ನು ಧರಿಸಿ ಮನುಷ್ಯರನ್ನು ಅಂತರಿಕ್ಷಕ್ಕೆ ಹಾರಿಸಿಕೊಂಡು ಹೋಗಿ ಆಕಾಶದಲ್ಲಿ ನಾನಾಮಾರ್ಗಗಳಲ್ಲಿ ತಿರುಗಿಸಿ ಅನಂತರ ಅವರುಗಳೆಲ್ಲರನ್ನೂ ಕೊಲ್ಲುವನು. ಆದುದರಿಂದ ನಿಮಗೆ ಹಿತವನ್ನುಂಟುಮಾಡುವುದಕ್ಕೋಸ್ಕರ ಆ ಗೋಕುಲನಿವಾಸಿಗಳನ್ನು ತೃಣಾವರ್ತನಿಂದ ಕೊಲ್ಲಿಸುತ್ತೇನೆ. ॥೨೮-೨೯-೩೦॥

ಏವಂ ಕಂಸೋಽವಾರಯದ್ದೈತ್ಯಮುಖ್ಯಾಂ
ಸ್ತೇಽಪಿ ಶ್ರುತ್ವಾ ತೋಷಮಾಪುರ್ಮುನೀಂದ್ರ ।
ಜ್ಞಾತ್ವಾ ಚೈತಾನ್ಮಾನಸಂ ಸ್ವಪ್ರಿಯಂ ಹಿ
ಕಂಸಂ ಪ್ರೋಚುಃ ಸಾಧು ತೇ ಮಂತ್ರಿತಂ ವೈ ॥೮೧॥

**ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯ್ಯಾಸಿಕೇ ನಾರದ ಶೌನಕ ಸಂವಾದೇ ಅಘಾಸುರಾದಿಕಂಸವಿಚಾರೋ ನಾಮ ಏಕೋನವಿಂಶೋಽಧ್ಯಾಯಃ**

---

ಎಲೈ ನಾರದನೇ, ಈ ರೀತಿಯಲ್ಲಿ ಕಂಸನು ಆ ರಾಕ್ಷಸೋತ್ತಮರನ್ನು ಸಮಾಧಾನಗೊಳಿಸಿದನು. ಅವರೂ ಸಹ ಕಂಸನ ಮಾತನ್ನು ಕೇಳಿ ಸಂತೋಷಗೊಂಡವರಾದರು. ಮತ್ತು ಕಂಸನು ಮನಃಪೂರ್ವಕವಾಗಿ ತಮಗೆಲ್ಲರಿಗೂ ಹಿತವನ್ನೆಣಿಸುವನೆಂದು ತಿಳಿದು, ಅವರು ಕಂಸನ ಉಪಾಯಕೌಶಲಗಳನ್ನು ಕುರಿತು ಹೊಗಳಿದವರಾದರು. ॥೮೧॥

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ಅಘಾಸುರಾದಿ ಕಂಸ ಸಂವಾದವೆಂಬ ಹತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು.

॥ ಶ್ರೀಗಣೇಶಾಯನಮಃ॥

॥ ಓಂ ನಮೋ ಭಗವತೇ ವಾಸುದೇವಾಯ ॥

# ಆದಿಪುರಾಣಂ

॥ ವಿಂಶೋಽಧ್ಯಾಯಃ ॥

## ಇಪ್ಪತ್ತನೆಯ ಅಧ್ಯಾಯವು

॥ ಶ್ರೀಕೃಷ್ಣ ಉವಾಚ ॥

**ಆಕರ್ಣ್ಯ ತತ್ಕಂಸವಚಸ್ತ್ರಯಸ್ತೇಽತಿ ಪ್ರಹರ್ಷಿತಾಃ ।**
**ಆಹುಶ್ಚ ರಾಜಂಸ್ತ್ವಂ ಶೀಘ್ರಂ ತೃಣಾವರ್ತಂ ಸಮಾಹ್ವಯ ॥೧॥**

**ಅಥ ಕಂಸಃ ತೃಣಾವರ್ತಂ ಪ್ರಸುಪ್ತಂ ಬಹುಕಾಲತಃ ।**
**ದೂತೈರಾನಾಯಯಾಮಾಸ ದೃಷ್ಟ್ವಾ ತಂ ಪುರತಃಸ್ಥಿತಂ ॥೨॥**

**ಉವಾಚ ವಚನಂ ಘೋರಂ ತೀಕ್ಷ್ಣಬುದ್ಧಿರ್ಮಹಾಬಲಃ ।**
**ಉವಾಚೋಚ್ಚೈಸ್ತೃಣಾವರ್ತಂ ಭೂತಹಿಂಸಾ ಪರಾಯಣಮ್ ॥೩॥**

---

ಶ್ರೀಕೃಷ್ಣನು ಹೇಳಿದನು—ಕಂಸನ ಮಾತನ್ನು ಕೇಳಿ ಆ ಮೂವರೂ ಹರ್ಷಗೊಂಡವರಾಗಿ ತೃಣಾವರ್ತನನ್ನು ಜಾಗ್ರತೆಯಾಗಿ ಕರೆಯಿಸೆಂದು ರಾಜನಾದ ಕಂಸನಲ್ಲಿ ವಿಜ್ಞಾಪಿಸಿಕೊಂಡರು. ॥೧॥

ಅನಂತರದಲ್ಲಿ ತೀಕ್ಷ್ಣಬುದ್ಧಿಯುಳ್ಳವನೂ ಮತ್ತು ಮಹಾ ಬಲಶಾಲಿಯೂ ಆದ ಕಂಸನು ಬಹುಕಾಲದಿಂದಲೂ ನಿದ್ರೆಮಾಡುತ್ತಿದ್ದ ತೃಣಾವರ್ತನನ್ನು ತನ್ನ ದೂತರ ಮುಖಾಂತರ ಕರೆತರಿಸಿ, ಅವನನ್ನು ಕುರಿತು ಕಠಿಣವಾದ ಮಾತುಗಳನ್ನಾಡಿದನು. ॥೨॥

ಪ್ರಾಣಿಹಿಂಸೆಯಲ್ಲಿಯೇ ನಿರತನಾದ ತೃಣಾವರ್ತನನ್ನು ಕುರಿತು ಕಂಸನು ಉಚ್ಚಸ್ವರದಿಂದ ಹೀಗೆಂದು ಹೇಳಿದನು. ॥೩॥

ತೃಣಾವರ್ತ ಮಹಾಬಾಹೋ ಕಾರ್ಯಂ ಮೇ ಸಮುಪಾಗತಮ್ ।
ಅತ್ಯಲ್ಪಮಪಿ ತತ್ಕಾರ್ಯಂ ನಾನ್ಯಸ್ತ್ವತ್ತೋಽಸ್ತಿ ಮೇ ಪ್ರಿಯಃ ॥೪॥

ಇದಂ ತ್ವಲ್ಪತರಂ ತೇ ಹಿ ವ್ರಜಮಾನವಮಾರಣಂ ।
ಪೂರ್ವದುಃಸ್ವಪ್ನಯೋಗೇನ ಪೂತನಾ ಪ್ರೇಷಿತಾ ಮಯಾ ॥೫॥

ಸಾ ಪ್ರನಷ್ಟಾಽತ್ಮದೋಷೇಣ ಗರಲೇನ ಪ್ರಮಾದತಃ ।
ತಥಾಽಪಿ ತತ್ಪತಿರ್ದೋಷಂ ತ್ಯಜತೇ ನ ಘಟೋದರಃ ॥೬॥

ತತ್ಪಿತೃವ್ಯಾತ್ಮಜೌ ಘೋರಾವಘಾಸುರ ಬಕಾಸುರೌ ।
ಕ್ರುದ್ಧೌ ಮಾರಿತುಮುದ್ಯುಕ್ತೌ ದುರ್ಬಲವ್ರಜವಾಸಿನಃ ॥೭॥

ಮಯಾ ನಿವಾರಿತಾಸ್ತೇಽದ್ಯ ಪ್ರಜಾಘಾತಭಯೇನ ಹಿ ।
ಮಹಾ ವಾತಸ್ವರೂಪೇಣ ಬಾಲಕಂ ತತ ಆನಯ ॥೮॥

---

ಎಲೈ ಬಲಿಷ್ಠವಾದ ಬಾಹುಗಳುಳ್ಳ ತೃಣಾವರ್ತನೇ, ಈಗ ನನ್ನದೊಂದು ಕಾರ್ಯವು ಒದಗಿರುವುದು. ಆ ಚಿಕ್ಕಕಾರ್ಯವು ಸುಲಭಸಾಧ್ಯವಾದದ್ದಾದರೂ ಅದನ್ನು ಸಾಧಿಸುವವರಲ್ಲಿ ನಿನಗಿಂತಲೂ ಪ್ರಿಯನಾದ ಬೇರೊಬ್ಬನು ನನಗಿರುವುದಿಲ್ಲ. ||೪||

ನೀನು ಗೋಪಗ್ರಾಮ ವಾಸಿಗಳಾದ ಜನರನ್ನು ಸಂಹರಿಸಬೇಕಾಗಿರುವುದು. ಈ ಕಾರ್ಯವು ನಿನಗೆ ಅತ್ಯಲ್ಪವಾದದ್ದೇ ಸರಿ. ಪೂರ್ವದಲ್ಲಿ- ನನ್ನ ಕನಸಿನಲ್ಲಿ ನಾನು ಕಂಡ ದುಃಸ್ವಪ್ನದಿಂದ ನನ್ನ ಅನಿಷ್ಟವನ್ನು ಹೋಗಲಾಡಿಸಲು, ನನ್ನಿಂದ ಆಜ್ಞಾಪಿಸಲ್ಪಟ್ಟ ಪೂತನಿಯು ಗೋಪಗ್ರಾಮಕ್ಕೆ ಹೋಗಿದ್ದಳು. ಅವಳು ತನ್ನ ಸ್ವಂತವಾದ ಅಜ್ಞಾನದಿಂದಲೇ ಮಾಡಿಕೊಂಡ ತಪ್ಪಿನ ಫಲವಾಗಿ, ವಿಷಸಂಸರ್ಗದಿಂದ ಮರಣವನ್ನು ಹೊಂದಿದಳು. ಆದರೂ ಅವಳ ಪತಿಯಾದ ಘಟೋದರನು ಗೋಕುಲ ನಿವಾಸಿಗಳ ಮೇಲಿರುವ ತನ್ನ ಕೋಪವನ್ನು ಬಿಡಲೊಲ್ಲನು. ||೫-೬||

ಆಕೆಯ (ಪೂತನಿಯ) ತಂದೆಯ ಮಕ್ಕಳಾದ ಅಘಾಸುರ ಬಕಾಸುರರು ಪೂತನಿಯ ಮರಣದಿಂದ ಕೋಪಗೊಂಡು ಬಲಹೀನರಾದ ಆ ಗೋಕುಲವಾಸಿಗಳನ್ನು ಕೊಲ್ಲಲು ಉದ್ಯುಕ್ತರಾಗಿರುತ್ತಾರೆ. ||೭||

ಆದರೆ ನಾನು ಇದರಿಂದ ಪ್ರಜೆಗಳಿಗೆ ಹಾನಿಯಾಗುವುದೆಂಬ ಭಯದಿಂದ ಅವರನ್ನು ಸಮಾಧಾನಪಡಿಸಿರುವೆನು. ನೀನು ಬಿರುಗಾಳಿಯ ಸ್ವರೂಪವನ್ನು ತಾಳಿ

**ಅಥವಾ ಯೇನ ನೀತಾ ಸಾ ಪೂತನಾ ಬಾಲಘಾತಿನೀ ।**
**ದೃಷ್ಟ್ವಾ ಸೌಮ್ಯಸ್ವರೂಪೇಣ ಪೂರ್ವಮೇವ ವ್ರಜೌಕಸಾ ॥೯॥**

**ಕ್ವ ಗತಾ ಮಾರಿತಾ ಕೇನ ಮಾನವಂ ತಂ ವಿಲೋಕ್ಯ ಚ ।**
**ತತೋ ವಾತಸ್ವರೂಪೇಣ ಪೂತನಾಕಾಲಬಾಲಕಂ ॥೧೦॥**

**ನೀತ್ವಾ ನಾನ್ಯೇ ನಿಹಂತವ್ಯಾ ಆನೇಯಃ ಸ ಹಿ ಬಾಲಕಃ ।**
**ಪೂತನಾ ಯೇನ ನೀತಾಽಂತಂ ಸ ಹಿ ಮೃತ್ಯುಂ ಸಮರ್ಹತಿ ॥೧೧॥**

**ಅತಸ್ತ್ವಮೇವ ಗಚ್ಛಾದ್ಯ ಸರ್ವೇಷಾಂ ಪ್ರೀತಿಮಾವಹ ।**
**ಇತಿ ಶ್ರುತ್ವಾ ತೃಣಾವರ್ತೋ ಮುದಿತಃ ಕಂಸಮಬ್ರವೀತ್ ॥೧೨॥**

**ಯದಿ ತ್ರೈಲೋಕ್ಯಘಾತಾರ್ಥಂ ಮಾಮಾಜ್ಞಾಪಯಸಿ ಪ್ರಭೋ ।**
**ನ ದುಷ್ಕರಂ ನೈತದಪಿ ಕಿಂತು ವಿಜ್ಞಾಪಯಾಮಿ ತೇ ॥೧೩॥**

---

ಪೂತನಿಯನ್ನು ಕೊಂದ ಆ ಬಾಲಕನನ್ನು ಗೋಕುಲದಿಂದ ಇಲ್ಲಿಗೆ ತರುವವನಾಗು. ||೮||

ಅದಿಲ್ಲದಿದ್ದರೆ, ಬಾಲಕರನ್ನು ನಾಶಪಡಿಸುವ ಸ್ವಭಾವವುಳ್ಳ ಮತ್ತು ಮೊದಲು ಸೌಮ್ಯಸ್ವರೂಪದಿಂದ ಬಂದ ಪೂತನಿಯನ್ನು ಯಾವ ಗೋಕುಲ ನಿವಾಸಿಯು ನೋಡಿ ಬಾಲಕರಿದ್ದಲ್ಲಿಗೆ ಕರೆದುಕೊಂಡು ಹೋದನು? ಮತ್ತು ಅಲ್ಲಿಂದ ಅವಳು ಎಲ್ಲಿಗೆ ಹೋದಳು? ಮತ್ತು ಯಾರಿಂದ ಕೊಲ್ಲಲ್ಪಟ್ಟಳು? ಎಂಬುದನ್ನು ತಿಳಿದು, ಅವಳನ್ನು ಕೊಂದ ಮನುಷ್ಯನು ಯಾರು? ಎಂಬುದನ್ನೂ ಸಹ ತಿಳಿದು, ಅನಂತರ ದಲ್ಲಿ ಪೂತನಿಗೆ ಮೃತ್ಯುಸ್ವರೂಪನಾದ ಆ ಬಾಲಕನನ್ನು ನೀನು ವಾತ್ಯಾರೂಪದಿಂದ ಇಲ್ಲಿಗೆ ಕರೆದುಕೊಂಡು ಬರುವವನಾಗು. ಏಕೆಂದರೆ ಯಾವನು ಪೂತನಿಯನ್ನು ಕೊಂದನೋ ಅವನಿಗೆ ಮರಣದಂಡನೆಯನ್ನು ವಿಧಿಸುವುದು ಯುಕ್ತವಾದುದಾಗಿರುತ್ತದೆ. ಇತರರನ್ನು ಕೊಲ್ಲಬಾರದು. ||೯-೧೦-೧೧||

ಆದುದರಿಂದ ನೀನೇ ಈಗ ಅಲ್ಲಿಗೆ ಹೋಗಿ ಎಲ್ಲರ ಪ್ರೀತಿಯನ್ನೂ ಸಂಪಾದಿಸುವವನಾಗು. ಕಂಸನ ಈ ಮಾತುಗಳನ್ನು ಕೇಳಿ, ತೃಣಾವರ್ತನು ಹರ್ಷಗೊಂಡವನಾಗಿ ಕಂಸನನ್ನು ಕುರಿತು ಹೀಗೆಂದು ಹೇಳಿದನು. ||೧೨||

ಓ ಪ್ರಭುವೇ, ನೀನು ಮೂರು ಲೋಕಗಳನ್ನೂ ನಾಶಮಾಡೆಂದು ನನಗೆ ಆಜ್ಞಾಪಿಸಿದರೂ ನಾನು ಆ ಕೆಲಸವನ್ನು ನಿರ್ವಹಿಸಲು ಶಕ್ತನಾಗಿರುವೆನು. ಆ

ಅಕಸ್ಮಾದ್ವೇಪಥುಶ್ಚಾಸೀದ್ಧೃದಯೇ ಮಮ ಸಾಂಪ್ರತಮ್ ।
ಸೀದಂತಿ ಮಮ ಗಾತ್ರಾಣಿ ವಾಮಃ ಸ್ಫುರತಿ ಮೇ ಭುಜಃ ॥೧೪॥

ಸ್ವಪ್ನೇ ದೃಷ್ಟ್ವಾ ಚ ಜನನೀ ಮೃತಂ ಮಾಂ ಕಂಠ ಸಂಗಿನಂ ।
ಕೃತ್ವಾ ರುದದ್ಭೃಶಂ ಪುತ್ರ ಕೃಷ್ಣಸ್ತ್ವಾಂ ಮಾರಯಿಷ್ಯತಿ ॥೧೫॥

ಇತ್ಯುಕ್ತ್ವಾಽಂತರ್ಹಿತಾ ಸದ್ಯಃ ಸ್ವಪ್ನಾಚ್ಚಾಹಂ ಸಮುತ್ಥಿತಃ
ಪ್ರಾತರೇವ ತ್ವಯಾಽಽಹೂತ ಆಗತೋಽಸ್ಮಿ ತವಾಂತಿಕಂ ।
ಕಿಂ ಕರೋಮಿ ತವಾಜ್ಞಾ ಕಾ ಯದ್ಭಾವ್ಯಂ ತದ್ಭವಿಷ್ಯತಿ ॥೧೬॥

॥ ಕಂಸ ಉವಾಚ ॥

ತೃಣಾವರ್ತ ನ ತೇ ಮೃತ್ಯುರ್ಭವಿತಾ ದೈವತೈರಪಿ ।
ಕಿಂ ಪುನರ್ಮಾನುಷಾದೇವ ತತ್ರ ಚಾಪ್ಯತಿ ಬಾಲಕಾತ್ ॥೧೭॥

---

ಕಾರ್ಯವೂ ಸಹ ನನಗೆ ಅಸಾಧ್ಯವಾದುದಲ್ಲ. ಆದರೆ ನಿನ್ನಲ್ಲಿ ಒಂದು ವಚನವನ್ನು ವಿಜ್ಞಾಪಿಸಿಕೊಳ್ಳುವೆನು. ॥೧೩॥

ನಿನ್ನ ಮಾತನ್ನು ಕೇಳುತ್ತಿದ್ದ ಸಮಯದಲ್ಲಿ ಅಕಸ್ಮಾತ್ತಾಗಿ ನನ್ನ ಹೃದಯವು ಕಂಪಿಸಿತು. ನನ್ನ ಅಂಗಗಳು ಸೋಲುತ್ತಲಿವೆ. ಎಡದ ಭುಜವು ಅದುರುತ್ತಿದೆ. ॥೧೪॥

ಕಳೆದ ರಾತ್ರಿಯ ಸ್ವಪ್ನದಲ್ಲಿ ನನ್ನ ತಾಯಿಯು ಕಾಣಿಸಿಕೊಂಡು, ಮೃತನಾದ ನನ್ನನ್ನು ತನ್ನ ಕಂಠದಲ್ಲಿ ಅಪ್ಪಿಕೊಂಡು ಬಹುವಾಗಿ ರೋದನ ಮಾಡಿದಳು. ಹೀಗೆ ಅಳುತ್ತಾ ಅವಳು ನನ್ನನ್ನು ಕುರಿತು ಹೀಗೆಂದು ಹೇಳಿದಳು. ಎಲೈ ಪುತ್ರನೇ, ನಿನ್ನನ್ನು ಶ್ರೀಕೃಷ್ಣನು ಸಂಹರಿಸುವನು! ॥೧೫॥

ಹೀಗೆಂದು ಹೇಳಿ, ಆ ಕೂಡಲೇ ಅವಳು ಅಂತರ್ಧಾನವನ್ನು ಪಡೆದಳು. ಬಳಿಕ ನಾನೂ ಸಹ ಸ್ವಪ್ನದಿಂದ ಎಚ್ಚೆತ್ತೆನು. ಬೆಳಗಾಗುತ್ತಲು ನಿನ್ನಿಂದ ಆಹ್ವಾನಿಸಲ್ಪಟ್ಟವನಾಗಿ ನಿನ್ನ ಬಳಿಗೆ ಬಂದವನಾಗಿರುತ್ತೇನೆ. ಈಗ ನಾನು ಯಾವ ಕಾರ್ಯವನ್ನು ಮಾಡಲಿ? ನಿನ್ನ ಆಜ್ಞೆಯೇನು? ಅದೃಷ್ಟದ ಭಾವನೆಯು ಹೇಗಿರುವುದೊ ಹಾಗೆ ಆಗುತ್ತದೆ. ॥೧೬॥

ಕಂಸನು ಹೇಳಿದನು—ಎಲೈ ತೃಣಾವರ್ತನೇ, ದೇವತೆಗಳಿಂದಲೂ ನಿನಗೆ ಮರಣ ಸಂಭವಿಸುವುದಿಲ್ಲ. ಹೀಗಿರುವಲ್ಲಿ ಮನುಷ್ಯರೇನನ್ನು ಮಾಡುವರು? ಅದರ

**ಅಸುರಾಸ್ತೇ ಪ್ರಿಯಾಃ ಸರ್ವೇ ಸುರಾಸ್ತ್ವಲ್ಪಬಲಾಸ್ತವ ।**
**ಭಯಾಲ್ಲೋಕಾಂಸ್ತ್ಯಜಂತ್ಯಾಶು ನಿಲೀಯಂತ ಇತಸ್ತತಃ ॥೧೮॥**

**ಯದಿ ಸ್ವಪ್ನಗತಾ ವಾರ್ತಾ ಸತ್ಯಾ ಭವತಿ ನಿತ್ಯಶಃ ।**
**ತದಾ ಮೇ ಸ್ವಪ್ನವಾಕ್ಯಂ ತ್ವಂ ವಿಶ್ರಬ್ಧಂ ಚ ಶ್ರುಣುಷ್ವ ಹಿ ॥೧೯॥**

**ಪರ್ವತಾರೋಹಣಂ ಸ್ವಪ್ನೇ ದೂರದೇಶಗತಿಸ್ತಥಾ ।**
**ಸಂಗಮಃ ಪುತ್ರಭಾರ್ಯಾಭಿರ್ಬಂಧುಭಿರ್ನ ಹಿ ದೃಶ್ಯತೇ ॥೨೦॥**

**ಸುಪ್ತೇನ ಪುರುಷೇಣೇಹ ಭುಂಕ್ತೇ ಭೋಗಮನಲ್ಪಕಂ ।**
**ಕ್ಲೇಶಿತಂ ವಿವಿಧಂ ಪ್ರಾತಃ ಸ್ವಪ್ನೇ ದೃಷ್ಟಂ ಮೃತಂ ತತಃ ॥೨೧॥**

**ಅತೋ ಗಚ್ಛ ವ್ರಜಂ ಶೀಘ್ರಂ ಮದ್ವಾಕ್ಯಂ ಚ ವಿಧತ್ಸ್ವ ಭೋಃ ।**
**ದಾಸ್ಯೇಽಹಂ ವಿವಿಧಾನ್ಭೋಗಾನ್ಕಾರ್ಯಂ ಕೃತ್ವಾಽಽಗಮಿಷ್ಯಸಿ ॥೨೨॥**

---

ಲ್ಲಿಯೂ ಅಲ್ಪನಾದ ಬಾಲಕನು ಏನನ್ನು ತಾನೇ ಮಾಡಬಲ್ಲನು? ನಿನ್ನನ್ನು ಕೊಲ್ಲಲಾರನು. ॥೧೭॥

ರಾಕ್ಷಸರೆಲ್ಲರೂ ನಿನಗೆ ಪ್ರಿಯರಾಗಿರುವರು. ಅಲ್ಪವಾದ ಶಕ್ತಿಯುಳ್ಳ ದೇವತೆಗಳಾದರೋ ನಿನ್ನ ಹೆದರಿಕೆಯಿಂದ, ತ್ರಿಲೋಕಗಳನ್ನೇ ಬಿಟ್ಟು, ಹೋಗಿ ಇಲ್ಲಿ ಅಲ್ಲಿ ಅಡಗಿಕೊಳ್ಳುವರು. ॥೧೮॥

ಸ್ವಪ್ನವಾರ್ತೆಯು ಸತ್ಯವಾದುದೇ ಆದರೆ, ನಾನು ಹೇಳುವ ಸ್ವಪ್ನವಿಚಾರವನ್ನು ಕೇಳುವವನಾಗು. ॥೧೯॥

ಸ್ವಪ್ನದಲ್ಲಿ ಪರ್ವತವನ್ನು ಹತ್ತುವಿಕೆ, ದೂರದೇಶಕ್ಕೆ ಪ್ರಯಾಣ ಮಾಡೋಣ, ಪುತ್ರ, ಹೆಂಡತಿ, ಬಂಧು ಮುಂತಾದವರೊಂದಿಗೆ ಸೇರುವಿಕೆ ಇವು ಕಾಣಿಸುವುದಿಲ್ಲ. ॥೨೦॥

ನಿದ್ದೆಮಾಡುತ್ತಿರುವ ಪುರುಷನಿಂದ ಪ್ರಾತಃಕಾಲದ ಸ್ವಪ್ನದಲ್ಲಿ ಅನಲ್ಪವಾದ ಭೋಗವನ್ನು ಅನುಭವಿಸುವಿಕೆ, ನಾನಾ ವಿಧವಾದ ಕ್ಲೇಶಗಳು, ಇವುಗಳು ಕಾಣಲ್ಪಟ್ಟರೆ ಅದರಿಂದ ಮರಣವುಂಟಾಗುವುದು. ಇವುಗಳಲ್ಲಿ ಯಾವುದೂ ನಿನಗೆ ಕಾಣಲಿಲ್ಲವಾದುದರಿಂದ ನಿನಗೆ ಮರಣ ಭಯವಿಲ್ಲವೆಂದು ಭಾವವು. ॥೨೧॥

ಆದುದರಿಂದ ಜಾಗ್ರತೆಯಾಗಿ ಗೋಕುಲಕ್ಕೆ ಹೋಗಿ ನನ್ನ ವಚನವನ್ನು ಕಾರ್ಯರೂಪದಿಂದ ಸಾಧಿಸುವವನಾಗು. ನೀನು ಕಾರ್ಯವನ್ನು ಮುಗಿಸಿಕೊಂಡು

|| ಶ್ರೀಕೃಷ್ಣ ಉವಾಚ ||

ಇತಿ ಕಂಸ ವಚಃ ಶ್ರುತ್ವಾ ಹರ್ಷಿತೋಽಭೂನ್ಮಹಾಸುರಃ ।
ಉವಾಚ ಕಂಸಮಾಭಾಷ್ಯ ವೀಟಿಕಂ ದೇಹಿ ಮೇ ನೃಪ. ॥೨೩॥

ವ್ರಜಾಮ್ಯದ್ಯ ತವಾಜ್ಞಾ ಚೇನ್ನಿಹನ್ಮ್ಯೇವ ವ್ರಜೌಕಸಃ ।
ಇತ್ಯುಕ್ತಸ್ತೇನ ಕಂಸೋಽಪಿ ಪ್ರದದೌ ವೀಟಿಕಂ ಶುಭಂ ॥೨೪॥

ಸ ಗೃಹೀತ್ವಾ ಪ್ರಚಲಿತಸ್ತೃಣಾವರ್ತೋ ಮಹಾಬಲಃ ।
ತಥಾ ಪ್ರಚಲಿತೇ ದೈತ್ಯೇ ವಿಧವಾ ಮುಕ್ತ ಮೂರ್ಧಜಾ ॥೨೫॥

ಕಾಽಪಿ ಸ್ತ್ರೀ ಪಾವಕಂ ನೀತ್ವಾ ಸಧೂಮಂ ಪುರ ಆಯಯೌ ।
ತಥಾಽನ್ಯಾ ರುದತೀ ಕಾಚಿದಾಗತಾ ಪತಿಪೀ(ತಾ)ಡಿತಾ ॥೨೬॥

---

ಹಿಂತಿರುಗಿ ಬರುವವನಾಗು. ನಿನಗೆ ನಾನಾ ವಿಧವಾದ ಭೋಗ್ಯವಸ್ತುಗಳನ್ನು ಕೊಡುವೆನು. ||೨೨||

ಶ್ರೀಕೃಷ್ಣನು ಹೇಳಿದನು — ಕಂಸನ ಈ ವಚನವನ್ನು ಕೇಳಿ ಸಂತೋಷ ಗೊಂಡ ರಾಕ್ಷಸನು ಅವನನ್ನು ಕುರಿತು ಹೀಗೆಂದು ಹೇಳಿದನು. ಓ ನೃಪತಿಯೇ, ನನಗೆ ವೀಳಯವನ್ನು ಕೊಡುವವನಾಗು. ನಿನ್ನ ಅಪ್ಪಣೆಯ ಪ್ರಕಾರ ಈಗಲೇ ಗೋಕುಲಕ್ಕೆ ಹೋಗಿ ಅವರನ್ನು ಕೊಲ್ಲುವೆನು. ||೨೩||

ತೃಣಾವರ್ತನು ಹೀಗೆಂದು ಹೇಳಲು ಕಂಸನು ಅವನಿಗೆ ಒಳ್ಳೆಯ ವೀಳಯ ವನ್ನು ಕೊಟ್ಟವನಾದನು. ೨೪||

ಅತ್ಯಂತ ಬಲಶಾಲಿಯಾದ ಆ ತೃಣಾವರ್ತನು ಕಂಸನಿಂದ ವೀಳಯವನ್ನು ಸ್ವೀಕರಿಸಿ ಹೊರಟವನಾದನು. ರಾಕ್ಷಸನು ತನ್ನ ಕಾರ್ಯಸಾಧನೆಗೋಸ್ಕರ ಹೋಗು ತ್ತಿರಲು, ಒಬ್ಬಾಳೊಬ್ಬ ವಿಧವೆಯು ತನ್ನ ತಲೆಗೂದಲನ್ನು ಕೆದರಿಕೊಂಡು, ಹೊಗೆಯು ಸಮೇತವಾದ ಬೆಂಕಿಯನ್ನು ತೆಗೆದುಕೊಂಡು, ಆ ರಾಕ್ಷಸನ ಮುಂಭಾಗದಲ್ಲಿ ಬರುವವಳಾದಳು. ಮುಂದೆ ಸ್ವಲ್ಪ ದೂರ ಹೋಗಲು ಮತ್ತೊಬ್ಬ ಸ್ತ್ರೀಯು ತನ್ನ ಪತಿಯಿಂದ ಪೀಡಿಸಲ್ಪಟ್ಟವಳಾಗಿ ಅಳುತ್ತಾ ತನ್ನ ತಲೆಗೂದಲನ್ನು ಬಿಚ್ಚಿಕೊಂಡು ಹಾ ಹೂ ಎಂದು ಅಳುವ ಶಬ್ದಮಾಡುತ್ತಾ ಮುಂದೆ ಬರುವವಳಾದಳು. ||೨೫-೨೬||

ಹಾಹೇತಿ ಶಬ್ದಂ ಕುರ್ವಾಣಾ ಘ್ನತೀ ಸ್ವಶಿರ ಉತ್ಕಚಂ
ತಥಾಽಪಿ ಚಲಿತೋ ದೃಷ್ಟ್ವಾ ದುಷ್ಟೋಽಪ್ಯಶಕುನಂ ಪುರಃ ।
ಗಣಯಿತ್ವಾ ನ ದುರ್ಬುದ್ಧಿಃ ಪ್ರವಿವೇಶ ವ್ರಜಾಂತರಮ್ ॥೨೭॥

ಪೃಚ್ಛಮಾನೋ ಮಹಾದುಷ್ಟಃ ಪೂತನಾಗಮನಾದಿಕಮ್ ।
ತತ್ರಾವಿಶನ್ನಂದಗೃಹಂ ಶ್ರುತ್ವಾ ತತ್ರ ವಿಚೇಷ್ಟಿತಮ್ ॥೨೮॥

ಅಂಕೇ ಪ್ರಾಪ್ತಂ ಯಶೋದಾಯಾ ಮಾಂ ದೃಷ್ಟ್ವಾ ಸ ಗತೋ ವನೇ ।
ವ್ರಜಾದಥ ವಿನಿರ್ಗತ್ಯ ತತೋ ವಾತಸ್ವರೂಪಧೃಕ್ ॥೨೯॥

ದೈತ್ಯೋಽಭೂತ್ಸ ಪ್ರಚಂಡೋಽತಿ ಭೀಷಯಂಶ್ಚ ವ್ರಜೌಕಸಃ ।
ತೃತೀಯಪ್ರಹರೇ ಚಾಥ ಪ್ರವಿವೇಶ ಮಹಾಬಲಃ ॥೩೦॥

ತದಾಽಹಂ ಮಾತುರಂಕಸ್ಥೋ ವಿಚಾರ್ಯಾಸುರಸಂಕ್ಷಯಂ ।
ಅಂಗಾತಿಭಾರಂ ಕೃತವಾನ್ಸಾ ಮೇನೇ ಗಿರಿಗೌರವಂ ॥೩೧॥

---

ಈ ರೀತಿಯಾದ ಅಪಶಕುನಗಳು ತನ್ನ ಮುಂದೆ ತೋರಿದರೂ ಸಹ ಆ ದುಷ್ಟನಾದ ರಾಕ್ಷಸನು ಅವೊಂದನ್ನೂ ಲಕ್ಷಿಸದೆ ಗೋಕುಲವನ್ನು ಪ್ರವೇಶಿಸುವವನಾದನು. ॥೨೭॥

ಅತ್ಯಂತ ದುಷ್ಟನಾದ ಆ ರಾಕ್ಷಸನು ಅಲ್ಲಲ್ಲಿ ಪೂತನಿಯು ಹೋದಸ್ಥಳಗಳನ್ನು ವಿಚಾರಿಸುತ್ತಾ ನಂದನ ಗೃಹವನ್ನು ಪ್ರವೇಶಿಸಿ, ಪೂತನಿಯು ಅಲ್ಲಿ ಮಾಡಿದ ಕೆಲಸಗಳನ್ನು ಕೇಳಿ ತಿಳಿದುಕೊಂಡು ಯಶೋದೆಯ ತೊಡೆಯಮೇಲೆ ಮಲಗಿದ್ದ ನನ್ನನ್ನು ನೋಡಿ ಬಳಿಕ ಅರಣ್ಯಕ್ಕೆ ಹೋದನು. ಆ ದೈತ್ಯನು ಗೋಕುಲದಿಂದ ಹೊರಬಿದ್ದು ಮಹಾವಾತಸ್ವರೂಪವನ್ನು ಧರಿಸಿದವನಾದನು. ಮತ್ತು ಭಯಂಕರನಾಗಿಯೂ, ಆ ಗೋಕುಲದ ಜನರನ್ನು ಭಯಪಡಿಸುವವನಾಗಿಯೂ ತೋರಿದನು. ತರುವಾಯ ಅತ್ಯಂತ ಬಲಿಷ್ಠನಾದ ಆ ದೈತ್ಯನು ಮೂರನೆಯ ಯಾಮದಲ್ಲಿ ಪ್ರವೇಶಿಸಿದನು. ॥೨೮-೨೯-೩೦॥

ಆಗ ಜನನಿಯ ತೊಡೆಯಮೇಲೆ ಮಲಗಿದ್ದ ನಾನು ಆ ರಾಕ್ಷಸನನ್ನು ಕೊಲ್ಲಬೇಕೆಂದು ಯೋಚಿಸಿ ನನ್ನ ದೇಹವನ್ನು ಅತಿ ಭಾರವಾದುದನ್ನಾಗಿ ಮಾಡಿದೆನು. ಹೀಗೆ ದೇಹದ ಭಾರವನ್ನು ಹೊರಲು ಅಶಕ್ತಳಾಗಿ, ಒಂದು ಪರ್ವತವೇ ತನ್ನ

ಭುವಿ ತತ್ಯಾಜ ಸಹಸಾ ದೈತ್ಯೋಽಪಿ ಜಗೃಹೇಽಥಮಾಂ ।
ಆವೃತ್ಯ ರೋದಸೀ ಪಾಂಸುನಿಚಯೇಸ್ಸ್ವೈವ ಚೋತ್ಪತತ್ ॥೩೨॥

ಮುಂಚನ್ಘೋರತರಂ ನಾದಂ ರುಂಧನ್ ಚಕ್ಷೂಂಷಿ ರೇಣುಭಿಃ ।
ನಾಪಶ್ಯತ್ಕಶ್ಚಿದಾತ್ಮಾನಂ ಪರಂ ವಾ ರೇಣುಬದ್ಧದೃಕ್ ॥೩೩॥

ಅಂಧಕಾರೇ ಪ್ರವೃತ್ತೇ ಸ ಮಾಂ ಜಹಾರ ನಭೋಗತಃ ।
ನ ಶಶಾಕ ತತೋ ಗಂತುಂ ಭೂರಿಭಾರ ಪ್ರಪೀಡಿತಃ ॥೩೪॥

ಮಯಾ ಗೃಹೀತಕಂಠೋಽಸೌ ಕಲ್ಪೋ ವೋಚಯಿತುಂ ನಹಿ ।
ಪಾತಿತಶ್ಚ ಶಿಲಾಪೃಷ್ಠೇ ವಿಶೀರ್ಣಾವಯವೋ ಹ್ಯಭೂತ್ ॥೩೫॥

ಅಹಂ ತೇನ ಯದಾ ನೀತೋ ಯಶೋದಾ ಮಾಮಪಶ್ಯತೀ ।
ರುರೋದ ಕರುಣಂ ತೂಚ್ಚೈಃ ಧಾವಂತೀ ಚ ಇತಸ್ತತಃ ॥೩೬॥

---

ತೊಡೆಯಮೇಲೆ ಕೂತಿರುವುದೋ ಎಂದು ತಿಳಿದು, ಯಶೋದೆಯು ನನ್ನನ್ನು ಕೆಳಕ್ಕಿಳಿಸಿದಳು. ಆಗ ಆ ದೈತ್ಯನು ಅತಿಸಾಹಸದಿಂದ ನನ್ನನ್ನು ಹಿಡಿದುಕೊಂಡನು. ಮತ್ತು ಭೂಮ್ಯಾಕಾಶಗಳನ್ನು ಆವರಿಸಿ ರೇಣುವಿನಿಂದ ಮೇಲೆ ಹಾರಿದನು.॥೩೧-೩೨॥

ಅವನು ಭಯಂಕರವಾದ ಶಬ್ದವನ್ನು ಮಾಡುತ್ತಾ, ಮೇಲಕ್ಕೆ ಹಾರಿಸಲ್ಪಟ್ಟ ಧೂಳುಗಳಿಂದ ಜನರ ಕಣ್ಣುಗಳನ್ನು ಮುಚ್ಚುವವನಾಗಿ ಮೇಲಕ್ಕೆ ಹಾರಿದನು. ಕಣ್ಣುಗಳು ಕಾಣಿಸದಿರಲು, ಯಾವ ಮನುಷ್ಯನೂ ಸಹ ತಾನು ಎಲ್ಲಿರುವೆನೆಂದು ತಿಳಿಯಲಾರದೆ ಮತ್ತು ಬೇರೆಯವರನ್ನೂ ನೋಡದಾದನು. ॥೩೩॥

ಎಲ್ಲೆಡೆಯಲ್ಲಿಯೂ ಅಂಧಕಾರವು ವ್ಯಾಪಿಸಿರಲು, ಆ ರಾಕ್ಷಸನು ನನ್ನನ್ನು ಅಪಹರಿಸಿಕೊಂಡು ಅಂತರಿಕ್ಷಕ್ಕೆ ಹೋದನು. ಆದರೆ ನನ್ನ ದೇಹದ ಭಾರವನ್ನು ಹೊರಲಾರದವನಾಗಿ, ಅಲ್ಲಿಂದ ಮುಂದಕ್ಕೆ ಹೋಗಲು ಅಶಕ್ತನಾದನು. ॥೩೪॥

ಆ ರಾಕ್ಷಸನು ನನ್ನಿಂದ ಹಿಡಿಯಲ್ಪಟ್ಟ ಅವನ ಕಂಠವನ್ನು ಬಿಡಿಸಿಕೊಳ್ಳಲು ಅಶಕ್ತನಾಗಿ ಒಂದಾನೊಂದು ಶಿಲೆಯ ಮೇಲೆ ಬೀಳಿಸಲ್ಪಟ್ಟು, ಚೂರ್ಣೀಕೃತವಾದ ಅಂಗವುಳ್ಳವನಾದನು. ॥೩೫॥

ಇತ್ತಲಾಗಿ, ಆ ರಾಕ್ಷಸನು ನನ್ನನ್ನು ಎತ್ತಿಕೊಂಡು ಹೋಗಲು, ಯಶೋದೆಯು ನನ್ನನ್ನು ಎಲ್ಲೆಲ್ಲಿಯೂ ಕಾಣದೆ, ವಿಷಾದಪೂರಿತಭಾವದಿಂದ ಘಟ್ಟಿಯಾಗಿ ಅಳುತ್ತಾ ಇಲ್ಲಿಂದಲ್ಲಿಗೆ ಓಡುವವಳಾದಳು. ॥೩೬॥

ನಿಶಮ್ಯ ರುದಿತಂ ತಸ್ಯಾ ಹಾ ಪುತ್ರ ಕ್ವ ಗತಃ ಸ್ಥಿತಃ ।
ಗೋಪ್ಯಃ ಸಮಂತಾದಾಜಗ್ಮು(ಗ್ಮೂ)ರುರುದುಃ ಸಮದುಃಖಿತಾಃ ॥೩೭॥

ಮುಹೂರ್ತಮಾತ್ರಂ ತತ್ರಾಸೀನ್ಮಹಾಪೀಡಾಕರಂ ವ್ರಜೇ ।
ಗತೇ ತಸ್ಮಿನ್ನಂಧಕಾರೇ ತತಃ ಸರ್ವೇ ವ್ರಜೌಕಸಃ ॥೩೮॥

ಮಾಮನ್ವೇಷಿತುಮುದ್ಯುಕ್ತಾಃ ಶುಶ್ರುವುಶ್ಚ ಮಹಾಸ್ವನಂ ॥೩೯॥

ಶಿಲಾಯಾಂ ಪತತಸ್ತಸ್ಯ ತತ್ರ ಜಗ್ಮುಃ ಸಮಾಕುಲಾಃ ।
ದದೃಶುಸ್ತಂ ತು ಪತಿತಂ ಮಹಾಕಾಯಂ ಮಹಾಸುರಂ ॥೪೦॥

ವಿಶೀರ್ಣ ಸರ್ವಾವಯವಂ ಮದ್ಗೃಹೀತಗಲಂ ಮೃತಂ ।
ದೃಷ್ಟ್ವಾ ತಂ ತಾದೃಶಂ ಭೀತಾ ವಿಸ್ಮಿತಾಶ್ಚ ಪರಸ್ಪರಂ ॥೪೧॥

ನ ಜಾನೀಮಃ ಕುತೋ ದುಷ್ಟಃ ಸಮಾಗತ್ಯಾಽಪತದ್ವ್ರಜೇ ।
ಕೇನ ವಾ ಘಾತಿತೋಽಯಂ ವಾ ಬಾಲಕೋ ರಕ್ಷಿತಃ ಕಥಂ ॥೪೨॥

---

ಹಾ ಪುತ್ರನೇ, ನೀನು ಎಲ್ಲಿಗೆ ಹೋದೆ? ಮತ್ತು ಎಲ್ಲಿರುವೆ? ಎಂದು ಪ್ರಲಾಪಿಸುತ್ತಿರುವ ಯಶೋದೆಯ ಕರುಣಾಜನಕವಾದ ನಾದವನ್ನು ಕೇಳಿ, ಗೋಪಿಯರೆಲ್ಲರೂ ಅಲ್ಲಿಗೆ ಬಂದು ಸುತ್ತಲೂ ನಿಂತವರಾಗಿ ದುಃಖಗೊಂಡು ಅವಳ ಜೊತೆಗೆ ತಾವೂ ಅಳಲಾರಂಭಿಸಿದರು. ॥೩೭॥

ಮುಹೂರ್ತಮಾತ್ರಪರ್ಯಂತ ಆ ಗೋಕುಲದಲ್ಲಿ ಅತ್ಯಂತ ಪೀಡೆಯುಂಟಾಯಿತು. ಆ ಭೀಷಣವಾದ ಅಂಧಕಾರದಲ್ಲಿ ಗೋಕುಲವಾಸಿಗಳಾದ ಜನರೆಲ್ಲರೂ ನನ್ನನ್ನು ಹುಡುಕಲು ಉದ್ಯುಕ್ತರಾಗಿ ರಾಕ್ಷಸನು ಶಿಲೆಯಮೇಲೆ ಬಿದ್ದುದರಿಂದುಂಟಾದ ಶಬ್ದವನ್ನು ಕೇಳಿದರು. ಆಗ ಅವರೆಲ್ಲರೂ ಆ ಸ್ಥಳಕ್ಕೆ ಬಂದವರಾಗಿ ಅಲ್ಲಿ ಬಿದ್ದಿರುವ ರಾಕ್ಷಸನ ಬೃಹದಾಕಾರವಾದ ದೇಹವನ್ನು ನೋಡಿದರು. ॥೩೮-೩೯-೪೦॥

ಜರ್ಝರಿತವಾದ ಅವಯವಗಳುಳ್ಳವನೂ, ನನ್ನಿಂದ ಹಿಡಿಯಲ್ಪಟ್ಟ ಕಂಠವುಳ್ಳವನೂ ಆದ ಆ ರಾಕ್ಷಸನನ್ನು ನೋಡಿ, ಜನರೆಲ್ಲರೂ ಹೆದರಿದವರಾಗಿ ಆಶ್ಚರ್ಯದಿಂದ ಒಬ್ಬರನ್ನೊಬ್ಬರು ನೋಡುತ್ತಾ ತಮ್ಮ ತಮ್ಮಲ್ಲಿಯೇ ಹೀಗೆಂದು ಮಾತನಾಡಿಕೊಂಡರು. ॥೪೧॥

ಈ ದುಷ್ಟನಾದ ರಾಕ್ಷಸನು ಯಾರು? ಇಲ್ಲಿ ಬಂದು ಬೀಳಲು ಕಾರಣವೇನು?

**ನಂದ ಪುಣ್ಯೋದಯಸ್ತೇಽದ್ಯ ಜಾತಃ ಸರ್ವೈಃ ವ್ರಜಾಲಯೈಃ ।**
**ಸಮಾಗತಃ ಪುನರ್ಬಾಲೋ ದೃಷ್ಟಸ್ತ್ವಸ್ಮಾನ್ನಿರಾಮಯಃ ॥೪೩॥**

**ಅಹೋ ಅತ್ಯದ್ಭುತಂ ಚೈವ ನಾಶಂ ಕರ್ತುಮಿಹಾ ಗತಃ ।**
**ಬಾಲಕಸ್ಯಾಸುರೋಽಯಂ ವೈ ಸ್ವಯಂ ಮೃತ್ಯುವಶಂಗತಃ ॥೪೪॥**

**ಗೃಹೇಽರಣ್ಯೇ ಜಲೇ ಚಾಗ್ನೌ ಪರ್ವತೇ ರಿಪುಸಂಕಟೇ ।**
**ಸ ಏವ ರಕ್ಷಿತಾ ಶಶ್ವದ್ಗರ್ಭೇ ರಕ್ಷತಿ ಯೋ ವಿಭುಃ ॥೪೫॥**

**ನಾಯಂ ಬಾಲೋ ಹಿ ಸಾಮಾನ್ಯೋ ನಂದ ಭಾಗ್ಯೋದಯಸ್ತವ ।**
**ವಿಷ್ಣುರ್ವಾ ವಿಷ್ಣುಸದೃಶೋ ಜಾತೋಽಯಂ ಕಶ್ಚಿದೀಶ್ವರಃ ॥೪೬॥**

---

ಇವನು ಯಾರಿಂದ ಕೊಲ್ಲಲ್ಪಟ್ಟನು? ಅಥವಾ ಈ ಬಾಲಕನು ರಕ್ಷಿಸಲ್ಪಟ್ಟದ್ದು ಹೇಗೆ? ಇವು ಯಾವುದನ್ನೂ ನಾವು ಕಾಣೆವು! ॥೪೨॥

ಓ ನಂದನೇ, ನಿನ್ನ ಭಾಗ್ಯವು ಈ ದಿವಸ ಫಲಿಸಿತು. ಏಕೆಂದರೆ ಆಕಸ್ಮಾತ್ತಾಗಿ ಕಣ್ಮರೆಯಾದ ನಿನ್ನ ಬಾಲಕನು, ವಿಪದ್ಗ್ರಸ್ತರಾದ ವ್ರಜವಾಸಿಗಳೊಂದಿಗೆ ಅಪಾಯವಿಲ್ಲದವನಾಗಿ ಹಿಂತಿರುಗಿ ಬಂದವನಾಗಿರುತ್ತಾನೆ. ಮತ್ತು ನೀನು ಈಗ ಅವನನ್ನು ನೋಡುತ್ತಿರುತ್ತೀಯೆ! ॥೪೩॥

ಅಹೋ! ಇದು ಅತ್ಯಾಶ್ಚರ್ಯಕರವಾಗಿರುವುದು. ಓರ್ವ ಬಾಲಕನನ್ನು ನಾಶಮಾಡಲು ಇಲ್ಲಿಗೆ ಬಂದ ಈ ರಾಕ್ಷಸನು, ತಾನಾಗಿಯೇ ಮೃತ್ಯುವಿನ ಬಾಯಿಗೆ ತುತ್ತಾಗಿರುವನು. ॥೪೪॥

ಪ್ರಾಣಿಗಳು ಗರ್ಭದಲ್ಲಿರುವಾಗ ಅವುಗಳನ್ನು ವ್ಯಾಪಕನಾದ ಯಾವ ಪರಮೇಶ್ವರನು ರಕ್ಷಿಸುವನೋ ಅವನೇ, ಮನೆಯಲ್ಲಿಯೂ ಅರಣ್ಯದಲ್ಲಿಯೂ, ಜಲದಲ್ಲಿಯೂ, ಬೆಂಕಿಯಲ್ಲಿಯೂ ಮತ್ತು ಶತ್ರು ಪೀಡೆಯಿಂದಲೂ ರಕ್ಷಿಸುವವನಾಗುತ್ತಾನೆ! ॥೪೫॥

ಎಲೈ ನಂದನೇ, ಈ ಬಾಲಕನು ಸಾಮಾನ್ಯನಲ್ಲ. ವಿಷ್ಣುವೋ ಅಥವಾ ವಿಷ್ಣು ಸಮಾನನಾದ ಮತ್ತೆ ಯಾವನೋ ಒಬ್ಬ ದೇವತೆಯೋ ನಿನ್ನ ಉದರದಲ್ಲಿ ಜನಿಸಿರುವನು. ಇದು ನಿನ್ನ ಭಾಗ್ಯೋದಯವೇ ಸರಿ. ॥೪೬॥

ಪಿತಾ ಪಾಲಯ ಪುತ್ರಂ ತ್ವಂ ಲಾಲಯೇತಿ ಚಿರಂ ಭೃಶಂ ।
ತ್ರೈಲೋಕ್ಯನಾಥೋ ಭಗವಾನ್ ವಿಷ್ಣುಶ್ಚೈತ್ತವ ಬಾಲಕಃ ॥೪೭॥

ಕೃತಾರ್ಥಸ್ತ್ವಂ ಕಿಮಿತ್ಯತ್ರ ವಯಂ ಚಾಪಿ ಸಮೇಧಿತಾಃ ।
ಇತ್ಯುಕ್ತ್ವಾ ತೇಽಖಿಲಾ ಗೋಪಾಸ್ತಮಾಲೋಕ್ಯ ಸುವಿಸ್ಮಿತಾಃ ॥೪೮॥

ವಿಶೀರ್ಣ ಸರ್ವಾವಯವಂ ತಂ ಚ ದೂರಂ ವಿಚಿಕ್ಷುಪುಃ ।
ತಂ ಜ್ಯೋತಿರದ್ಭುತತನುಮುತ್ಥಿತಂ ಚಾಪಿ ಚಾವಿಶತ್ ॥೪೯॥

ಸುರಾ ಜಯಜಯೇತ್ಯೂಚುರ್ಧನ್ಯಧನ್ಯೇತಿ ವೈ ಪುನಃ ।
ಪಾಪೋಽಸುರೋ ಮತ್ಸಂಸ್ಪರ್ಶಾನ್ಮದೀಯಂ ಪ್ರಾಪ ಸಂಗಮಂ ।
ಚಿತ್ರಂ ನೈತನ್ಮತ್ಪ್ರಭಾವಾತ್ಸರ್ವೇಷಾಮುತ್ತಮಾ ಗತಿಃ ॥೫೦॥

---

ಇಂಥಾ ಬಾಲಕನ ತಂದೆಯಾದ ನಂದನೇ, ನಿನ್ನ ಪುತ್ರನು ತ್ರಿಲೋಕನಾಥನಾದ ಸಾಕ್ಷಾತ್ ಶ್ರೀಮನ್ನಾರಾಯಣನು. ನೀನು ಈ ಪುತ್ರನನ್ನು ಪಾಲಿಸು ಮತ್ತು ಅತಿಶಯವಾಗಿ ಲಾಲಿಸುವವನಾಗು. ॥೪೭॥

ನೀನು ಕೃತಕೃತ್ಯನಾಗಿರುವೆ. ನಾವು ಸಹ ಧನ್ಯರಾಗಿರುವೆವು. ಇದರಲ್ಲಿ ಸಂದೇಹವೇನಿರುವುದು ? ಹೀಗೆಂದು ಹೇಳಿ ಸಕಲ ಗೋಪಾಲಕರೂ ಅವನನ್ನು ನೋಡಿ ವಿಸ್ಮಿತರಾದರು. ಮತ್ತು ಜರ್ಝರಿತವಾದ ಆ ರಾಕ್ಷಸನ ಅವಯವಗಳನ್ನು ದೂರವಾಗಿ ಎಸೆದರು. ಆಗ ಆ ರಾಕ್ಷಸನ ದೇಹದಿಂದ ಅದ್ಭುತವಾದ ಒಂದು ಬೆಳಕು ಹೊರಟು ಶ್ರೀಕೃಷ್ಣನ (ನನ್ನ) ಶರೀರವನ್ನು ಪ್ರವೇಶಿಸಿತು ॥೪೮-೪೯॥

ಅದ್ಭುತವಾದ ಈ ಘಟನೆಯನ್ನು ನೋಡಿ ದೇವತೆಗಳು ಜಯ ಜಯ ಎಂದು ಹೊಗಳಿ ಪುನಃ ಧನ್ಯ ಧನ್ಯ ಎಂದು ಸಂತೋಷದ ಶಬ್ದಮಾಡಿದರು. ಆ ರಾಕ್ಷಸನು ಪಾಪಿಷ್ಠನಾಗಿದ್ದರೂ ನನ್ನ ದೇಹಸ್ಪರ್ಶದಿಂದ ನನ್ನ ಸಾಯುಜ್ಯವನ್ನೇ ಹೊಂದಿದವನಾದನು. ನನ್ನ ಸಹವಾಸದಿಂದ ಉತ್ತಮವಾದ ಸ್ಥಾನವು ಲಭಿಸುವುದೆಂಬುದು ವಿಚಿತ್ರವಾಗಿರುವುದಿಲ್ಲ. ಇದು ಸಾಧಾರಣವಾದ ವಿಷಯವಾಗಿರುತ್ತದೆ. ॥೫೦॥

|| ನಾರದ ಉವಾಚ ||

**ತೃಣಾವರ್ತೋಽಸುರಃ ಪಾಪಃ ಭೃಶಂ ರುಧಿರಭೋಜನಃ ।**
**ಕಥಂ ತ್ವಯಾ ವಿನಿಹತೋ ಗೃಹೀತ್ವಾ ಕಂಠ ಏವ ಹಿ ॥೫೧॥**

**ಸ್ಪರ್ಶೋ ಯಸ್ಯ ನ ಕರ್ತವ್ಯಃ ತಂ ಮೃತಂ ಚಾಸ್ಪೃಶದ್ಭೃಶಂ ।**
**ಉಚಿತಾ ಕುತ್ಸಿತಾ ಯಸ್ಯ ಸ್ಪ್ರಾಪ್ತೋಽಸೌ ತಾಂ ಗತಿಂ ಕಥಂ ॥೫೨॥**

**ಕಿಂ ಪ್ರಾಕ್ತನಂ ಶುಭಂ ತಸ್ಯ ಪೂರ್ವಜನ್ಮನಿ ತತ್ಕೃತಮ್ ।**
**ಸಂಶಯೋ ಮೇ ಮಹಾನ್ ಜಾತಸ್ತ್ವಂ ತಚ್ಛೇತ್ತುಮಿಹಾರ್ಹಸಿ॥೫೩॥**

|| ಶ್ರೀಕೃಷ್ಣ ಉವಾಚ ||

**ಶೃಣು ವಿಪ್ರ ಮಹಚ್ಚಿತ್ರಂ ಯಜ್ಜಾತಂ ಪ್ರಾಗ್ಭವೇಽಸ್ಯ ವೈ ।**
**ಮದ್ಭಕ್ತಿಕಾರ್ಯಂ ಸುಮಹದ್ಯಯೌ ತತ್ಫಲಮುತ್ತಮಂ ॥೫೪॥**

---

ನಾರದನು ಹೇಳಿದನು—ಓ ಕೃಷ್ಣನೇ, ಪಾಪಿಷ್ಠನೂ, ಸದಾ ರಕ್ತವನ್ನು ಪಾನಮಾಡುವವನೂ ಆದ ತೃಣಾವರ್ತನು ನಿನ್ನಿಂದ ಕಂಠದಲ್ಲಿ ಬಿಗಿಯಲ್ಪಟ್ಟವನಾದ ಮಾತ್ರದಿಂದಲೇ ಹೇಗೆ ಮೃತನಾದನು? ||೫೧||

ಯಾವನನ್ನು ಮುಟ್ಟಬಾರದೋ ಅಂಥ ರಾಕ್ಷಸನು ಸತ್ತಿದ್ದರೂ ಸಹ ಅವನನ್ನು ನೀನು ಹೇಗೆ ಸ್ಪರ್ಶಿಸಿದೆ? ಮತ್ತು ಯಾವನಿಗೆ ದುರ್ಗತಿಯೇ ಉಚಿತವಾಗಿದ್ದಿತೋ, ಅಂತಹ ತೃಣಾವರ್ತನಿಗೆ ಸದ್ಗತಿಯು ಹೇಗೆ ತಾನೇ ಪ್ರಾಪ್ತವಾಯಿತು? ||೫೨||

ಅವನು ಪೂರ್ವ ಜನ್ಮದಲ್ಲಿ ಯಾವ ವಿಧವಾದ ಪುಣ್ಯಕರ್ಮವನ್ನಾಚರಿಸಿದ್ದನು? ಈ ವಿಷಯದಲ್ಲಿ ನನಗೆ ಸಂದೇಹವುಂಟಾಗಿರುವುದು. ಅದನ್ನು ಹೋಗಲಾಡಿಸಲು ನೀನೇ ಸಮರ್ಥನು. ಅದುದರಿಂದ ಈ ವಿಷಯವನ್ನು ನನಗೆ ತಿಳಿಸುವವನಾಗು. ನಾರದನು ಹೀಗೆಂದು ಪ್ರಾರ್ಥಿಸಲು ||೫೩||

ಶ್ರೀಕೃಷ್ಣನು ಹೇಳಿದನು—ಎಲೈ ಮುನಿಯೇ, ಕೇಳು. ಈ ರಾಕ್ಷಸನು ನನ್ನಲ್ಲಿ ಭಕ್ತಿಯಿಂದ ಯಾವ ಕರ್ಮವನ್ನು ಪೂರ್ವದಲ್ಲಿ ಆಚರಿಸಿ ಅದಕ್ಕೆ ಅನುಗುಣವಾದ ಈ ಉತ್ತಮ ಫಲವನ್ನು ಹೊಂದಿದನೋ ಆ ಸತ್ಕರ್ಮವು ಯಾವುದೆಂಬುದನ್ನು ಹೇಳುವೆನು. ಅದು ಮಹದಾಶ್ಚರ್ಯಕರವಾಗಿರುವುದು. ||೫೪||

**ಪುರಾಽಽಸೀದ್ದ್ರವಿಡೇ ಕಶ್ಚಿದ್ಭೂತೋ ಭಾಗವತಃ ಕೃತೀ ।**
**ನಾಮ್ನಾ ವಿಶ್ವರಥಃ ಖ್ಯಾತೋ ಹರೇರ್ಭಜನವಲ್ಲಭಃ ॥೫೫॥**

**ಬಲವಾನ್ಬಂಧುಸತ್ಕರ್ತಾ ವಿದ್ವಾನ್ಭಾಗವತಃ ಕೃತೀ ।**
**ತಸ್ಯ ರಾಷ್ಟ್ರೇ ಪ್ರಜಾಃ ಸರ್ವಾ ಮಮ ಭಕ್ತಿ ಪರಾಯಣಾಃ ॥೫೬॥**

**ವಸಂತಿ ಸ್ವಸುಖಂ ಸೌಖ್ಯಂ ಯಥೋಕ್ತಕರದಾಯಿನಃ ।**
**ಆಧಯೋ ವ್ಯಾಧಯಶ್ಚೈವ ನ ಭವಂತಿ ಕದಾಚನ ॥೫೭॥**

**ಪ್ರತಾಪಾನ್ಮಮ ಭಕ್ತಸ್ಯ ಕಾಲೋ ಗ್ರಾಸ ಪರಾಙ್ಮುಖಃ ।**
**ಅಹರ್ನಿಶಂ ಪುರೇ ದೇಶೇ ಭೇರಿದುಂದುಭಿ ನಿಸ್ವನೈಃ ।**
**ನಿವೇದಯತಿ ಲೋಕೇಭ್ಯೋ ಭಜತಾಲಂ ಪ್ರಜಾ ಹರಿಂ ॥೫೮॥**

---

ಹಿಂದೆ ಒಂದಾನೊಂದು ಕಾಲದಲ್ಲಿ, ದ್ರವಿಡದೇಶದಲ್ಲಿ, ಭಗವದ್ಭಕ್ತನೂ, ಪುಣ್ಯಶಾಲಿಯೂ, ಹರಿಯ ಸೇವೆಯಲ್ಲಿ ಪ್ರೀತಿಯುಳ್ಳವನೂ, ಬಲಿಷ್ಠನೂ ಬಂಧುಗಳನ್ನು ಸತ್ಕರಿಸುವವನೂ ಮತ್ತು ವಿದ್ವಾಂಸನೂ ಆದ ವಿಶ್ವರಥನೆಂಬ ಪ್ರಸಿದ್ಧನಾದ ಒಬ್ಬಾನೊಬ್ಬ ರಾಜನಿದ್ದನು. ॥೫೫॥

ಅವನ ರಾಜ್ಯದಲ್ಲಿ ಪ್ರಜೆಗಳೆಲ್ಲರೂ ನನ್ನಲ್ಲಿ ಭಕ್ತಿಯುಳ್ಳವರಾಗಿ, ನ್ಯಾಯವಾಗಿ ರಾಜನಿಗೆ ಸಲ್ಲಬೇಕಾದ ಕಪ್ಪವನ್ನು ಕೊಡುವವರಾಗಿದ್ದು, ಸುಖದಿಂದ ವಾಸಮಾಡುತ್ತಿದ್ದರು. (ಪ್ರಜೆಗಳು ತಮ್ಮ ಆದಾಯದಲ್ಲಿ ಆರನೆಯ ಒಂದು ಭಾಗವನ್ನು ರಾಜನ ಬೊಕ್ಕಸಕ್ಕೆ ಕೊಡಬೇಕೆಂದು ಮನುಧರ್ಮಶಾಸ್ತ್ರದಲ್ಲಿ ಹೇಳಿರುತ್ತದೆ.) ॥೫೬॥

ಅವನ ರಾಜ್ಯದಲ್ಲಿ ಪ್ರಜೆಗಳಿಗೆ ಯಾವ ವಿಧವಾದ ಮನೋವ್ಯಾಧಿಗಳೇ ಆಗಲೀ ಅಥವಾ ಶಾರೀರಕ ವ್ಯಾಧಿಗಳೇ ಆಗಲಿ ಇರುತ್ತಿರಲಿಲ್ಲ. ॥೫೭॥

ನನ್ನ ಭಕ್ತನಾದ ಆ ರಾಜನ ಪ್ರಭಾವದಿಂದ ಮೃತ್ಯುವು ಆ ದೇಶದ ಕಡೆಗೆ ತಿರುಗಿಕೂಡ ನೋಡುತ್ತಿರಲಿಲ್ಲ. ಪ್ರಜೆಗಳಿಗೆ ಮೃತ್ಯುಭಯವಿರಲಿಲ್ಲವೆಂದು ಭಾವವು. ಅಲ್ಲಿಯ ದೇಶ ಮತ್ತು ಪುರಗಳಲ್ಲಿ ಹಗಲೂ ಮತ್ತು ರಾತ್ರಿಯಲ್ಲಿ ಯಾವಾಗಲೂ ಭೇರಿ ಮತ್ತು ದುಂದುಭಿಗಳನ್ನು ಬಡಿದು ಶಬ್ದಮಾಡುತ್ತಾ ಜನಗಳನ್ನು ಕುರಿತು ಸರ್ವರೂ ಶ್ರೀಹರಿಯನ್ನು ಭಜಿಸಬೇಕೆಂದು ಸಾರುತ್ತಿದ್ದರು. ॥೫೮॥

ಉದ್ಧಾರಂ ನ ಚ ವೈ ವಿದ್ಧಿ ಲೋಕಾನಾಂ ಭಜನಂ ವಿನಾ।
ಗತಿಃ ಸ ಪರಮಾ ಚೈವ ಆಶ್ರಯಶ್ಚ ತತಃ ಪರಂ ॥೫೯॥

ಏವಂ ಪ್ರವರ್ತಮಾನೇ ವೈ ನರದೇವ ಶಿರೋಮಣೌ।
ಸಮಾಜಃ ಸಮಭೂತ್ಕ್ವಾಪಿ ಕೀರ್ತನಾತುರ ಚೇತಸಾಮ್ ॥೬೦॥

ತತ್ರ ಕಶ್ಚಿದ್ವೈಷ್ಣವಾಗ್ರ್ಯೋಬ್ರಾಹ್ಮಣೋ ದ್ರಷ್ಟುಮಾಗತಃ।
ಸ ದೃಷ್ಟ್ವಾ ಕೀರ್ತನಂ ವಿಪ್ರಃ ಚಲಿತಃ ಸ್ವಗೃಹಂ ಪ್ರತಿ ॥೬೧॥

ಏತಸ್ಮಿನ್ ಸಮಯೇ ಚೌರಾಃ ಕಸ್ಯ ಚಿತ್ಪುರವಾಸಿನಃ।
ಚೋರಯಿತ್ವಾ ಧನಂ ಭೂರಿ ಚಲಿತಾಸ್ತ ಇತಸ್ತತಃ ॥೬೨॥

ಜ್ಞಾತ್ವಾ ರಾಜಭಟಾಸ್ತಾಂಶ್ಚ ಪುರಪೃಷ್ಠೇಷ್ವನುದ್ರುತಾಃ।
ಚೌರಾಃ ಕೇಽಪಿ ನ ಲಬ್ಧಾಸ್ತೈರ್ದೃಷ್ಟಃ ಸ ದ್ವಿಜಸತ್ತಮಃ ॥೬೩॥

---

ಶ್ರೀಹರಿಯ ಭಜನೆಯಿಂದ ವಿನಾ ಲೋಕವು ಉದ್ಧಾರವಾಗುವುದಿಲ್ಲವೆಂಬುದನ್ನು ತಿಳಿಯಿರಿ. ವಿಷ್ಣು ಸೇವೆಯೇ ನಿತ್ಯವಾದ ಸದ್ಗತಿಯೂ, ಮತ್ತು ಶಾಶ್ವತವಾದ ವಿಷ್ಣುವಿನ ಆಶ್ರಯವೂ, ದೊರೆಯುವಂತೆ ಮಾಡುವ ಉಪಾಯವು. ॥೫೯॥

ಈರೀತಿಯಲ್ಲಿ ಶ್ರೇಷ್ಠನಾದ ಆ ರಾಜನು ವಿಷ್ಣುಸೇವೆಯಲ್ಲಿಯೇ ಆಸಕ್ತನಾಗಿರುತ್ತಿರಲು ಒಂದಾನೊಂದು ಸ್ಥಳದಲ್ಲಿ ವಿಷ್ಣುಕೀರ್ತನೆಯಲ್ಲಿಯೇ ಆಸಕ್ತವಾದ ಮನಸ್ಸುಳ್ಳ ಒಂದು ಜನರ ಸಂಗಡವು ಸೇರಿತು. ॥೬೦॥

ಆ ಭಕ್ತವೃಂದವು ನೆರೆದಿದ್ದ ಸ್ಥಳಕ್ಕೆ ವಿಷ್ಣುಭಕ್ತರಲ್ಲಿ ಅಗ್ರಗಣ್ಯನಾದ ಒಬ್ಬಾನೊಬ್ಬ ಬ್ರಾಹ್ಮಣನು ವಿಷ್ಣುಕೀರ್ತನವನ್ನು ನೋಡಲು ಬಂದನು. ಕೀರ್ತನವನ್ನು ನೋಡಿ ಆ ಬ್ರಾಹ್ಮಣನು ತನ್ನ ಮನೆಯನ್ನು ಕುರಿತು ತೆರಳಿದನು. ॥೬೧॥

ಆ ಸಮಯದಲ್ಲಿ ಕೆಲವು ಮಂದಿ ಕಳ್ಳರು ಓರ್ವ ಪಟ್ಟಣಿಗನ ಬಹುವಾದ ಧನವನ್ನು ಅಪಹರಿಸಿ ಬಳಿಕ ಇಲ್ಲಿಂದಲ್ಲಿಗೆ ಸಂಚರಿಸುತ್ತಲಿದ್ದರು. ॥೬೨॥

ಪಟ್ಟಣದ ಹೊರಬಾಗಿಲಿನಿಂದ ಓಡಿಹೋಗುತ್ತಿರುವ ಕಳ್ಳರನ್ನು ರಾಜಭಟರು ಹಿಡಿಯಲು ಅನುಸರಿಸಿದವರಾದರೂ ಸಹ ಕೆಲವುಮಂದಿ ಕಳ್ಳರು ಇವರ ಕೈಗೆ ಸಿಕ್ಕಲಿಲ್ಲ. ಮತ್ತು ಅದೇಸಮಯದಲ್ಲಿ ವಿಷ್ಣುಕೀರ್ತನೆಯನ್ನು ಕೇಳಿ ಮನೆಗೆ ಹಿಂತಿರುಗುತ್ತಿದ್ದ ಆ ಬ್ರಾಹ್ಮಣನು ಭಟರ ದೃಷ್ಟಿಗೆ ಗೋಚರನಾದನು. ॥೬೩॥

**ಚೌರೋಽಯಮಿತಿ ಮತ್ವಾ ತೈರ್ಗೃಹೀತಸ್ತಾಡಿತಃ ಪಥಿ ।**
**ತತಸ್ತೈರ್ನಿರ್ದಯೈರ್ಭೃತ್ಯೈ ಸ್ತಾಡಿತೋ ಬದ್ಧ ಏವಚ ॥೬೪॥**

**ಕಾರಾಗೃಹೇ ನಿಬದ್ಧಶ್ಚ ರಕ್ಷಿತೋಽತೀವ ಕಷ್ಟತಃ ।**
**ತಸ್ಯಾಪಿ ಪೂರ್ವಜನ್ಮೋತ್ಥಕರ್ಮಪಾಕಫಲೇನ ಹಿ ॥೬೫॥**

**ತರ್ಜಿತಂ ರಾಜಭೃತ್ಯೈರ್ಯತ್ತಾಡನಂ ಬಂಧನಾತ್ಯಯೇ ।**
**ಯಮಲೋಕೇ ಸ ಸಂಗಮ್ಯ ಹ್ಯ ಸಂಖ್ಯೈರ್ವತ್ಸರೈಃ ಸ್ಥಿತಃ ॥೬೬॥**

**ತನ್ಮೇಽತ್ಯನುಗ್ರಹಾತ್ತಸ್ಯ ಜಾತಂ ಯತ್ಸ್ವಲ್ಪ ದುಃಖದಮ್ ।**
**ನಾಭುಕ್ತಂ ಕ್ಷೀಯತೇ ಕರ್ಮ ಜನ್ಮಾಂತರಶತೈರಪಿ ॥೬೭॥**

**ಮದ್ಭಕ್ತ್ಯಾ ತದ್ಬಹು ಸ್ವಲ್ಪಂ ವಿಪರೀತಮಭಕ್ತಿತಃ ।**
**ಸ ಕಾರಾಗೃಹ ಬದ್ಧೋಽಪಿ ನ ವಿಷಾದಂ ಚಕಾರ ಹ ॥೬೮॥**

---

ದಾರಿಯಲ್ಲಿ ಹೋಗುತ್ತಿದ್ದ ಆ ಬ್ರಾಹ್ಮಣನನ್ನು ಕಳ್ಳನೆಂದು ತಿಳಿದು ಚಾರರು ಹಿಡಿದು ಚೆನ್ನಾಗಿ ಹೊಡೆದರು. ಬಳಿಕ ಆ ಬ್ರಾಹ್ಮಣನು ದಯಾಶೂನ್ಯರಾದ ರಾಜ ಭಟರಿಂದ ಹೊಡೆಯಲ್ಪಟ್ಟು ಹಗ್ಗಗಳಿಂದ ಬಂಧಿಸಲ್ಪಟ್ಟನು. ||೬೪||

ಹೀಗೆ ಬಂಧಿಸಲ್ಪಟ್ಟ ರಾಕ್ಷಸನನ್ನು ಕಾರಾಗೃಹದಲ್ಲಿ ಕೂಡಿ ಬಹು ಕಷ್ಟದಿಂದ ರಕ್ಷಿಸಿದರು. ಬ್ರಾಹ್ಮಣನಾದರೂ ತಾನು ಪೂರ್ವಜನ್ಮದಲ್ಲಿ ಮಾಡಿದ ಕರ್ಮಪರಿ ಪಾಕದ ಫಲದಿಂದಲೇ ರಾಜಭಟರಿಂದ ಹೊಡೆಯಲ್ಪಟ್ಟನು. ಮತ್ತು ಅವನಿಗೆ ಕಾರಾಗೃಹ ಪ್ರಾಪ್ತಿಯೂ ಆಯಿತು. ||೬೫-೬೬||

ಪೂರ್ವಜನ್ಮದಲ್ಲಿ ಪಾಪಕರ್ಮವನ್ನು ಆಚರಿಸಿದ್ದರೂ ಆ ಬ್ರಾಹ್ಮಣನು ನನ್ನ ಭಕ್ತನಾದ್ದರಿಂದ ನನ್ನ ಅನುಗ್ರಹದಿಂದ ಅವನು ಈ ಜನ್ಮದಲ್ಲಿ ಅಲ್ಪವಾದ ದುಃಖವನ್ನು ಅನುಭವಿಸಿದನು. ನೂರುಜನ್ಮಗಳಾದರೂ ಕರ್ಮಫಲವನ್ನು ಅನು ಭವಿಸಿದುದಲ್ಲದೆ ಅದು ನಾಶವನ್ನು ಹೊಂದುವುದಿಲ್ಲ. ||೬೭||

ಪೂರ್ವಜನ್ಮದಲ್ಲಿ ಮಾಡಿದ ಪಾಪಕರ್ಮವು ಘೋರವಾಗಿದ್ದರೂ ನನ್ನಲ್ಲಿ ಭಕ್ತಿಯನ್ನಿಡುವುದರಿಂದ ಫಲಾನುಭವಕಾಲದಲ್ಲಿ ಅಲ್ಪವಾದ ದುಃಖವುಂಟಾಗುವುದು. ನನ್ನಲ್ಲಿ ಭಕ್ತಿಯನ್ನಿಡದೆ ಪೂರ್ವದಂತೆಯೇ ಪಾಪಾಚರಣೆಯಲ್ಲಿಯೇ ಆಸಕ್ತಿಯುಳ್ಳವ

**ಗಾಯನ್ಮಮ ಯಶೋಽತೀವ ವಿಸ್ಮಿತಶ್ಚ ಸ್ಮರನ್ಮುಹುಃ ।**
**ಗತೋಽಹಂ ಕೀರ್ತನಂ ದ್ರಷ್ಟುಂ ಧೃತಶ್ಚೌರಭ್ರಮಾದ್ಭಟೈಃ ॥೬೯॥**

**ಅಹೋ ಬಲವತೀ ವಿಷ್ಣೋಃ ಮಾಯೇಯಂ ಸುಖದುಃಖದಾ ।**
**ಯದತ್ರ ಕೃತಮೇ ತರ್ಹಿ ತತ್ಪ್ರಾಪ್ತಂ ಕರ್ಮಣಃ ಫಲಂ ॥೭೦॥**

**ನೃಣಾಂ ಸುಖಸ್ಯ ದುಃಖಸ್ಯ ನ ದಾತಾ ಕೋಽಪಿ ವರ್ತತೇ ।**
**ಇತ್ಥಂ ಚಿಂತಯತಸ್ತಸ್ಯ ರಾತ್ರಿಶೇಷಃ ಕ್ಷಯಂ ಗತಃ ॥೭೧॥**

**ಪ್ರಾತಸ್ತೇ ನೃಪತಿಂ ಪ್ರೋಚುಃ ತೇನಾಜ್ಞಪ್ತಾಶ್ಚ ರಾಸ್ತತಃ ।**
**ತತೋ ಮಾರಯಿತುಂ ನಿನ್ಯುರ್ಬದ್ಧ್ವಾ ಚ ದ್ವಿಜಸತ್ತಮಂ ॥೭೨॥**

---

ನಾಗಿದ್ದರೆ ಅವನಿಗೆ ಅಸಹನೀಯವಾದ ದುಃಖವುಂಟಾಗುವುದು. ಆ ಬ್ರಾಹ್ಮಣನು ಕಾರಾಗೃಹದಲ್ಲಿ ಬಂಧಿಸಲ್ಪಟ್ಟರೂ ಸಹ, ಅದಕ್ಕಾಗಿ ಹೆಚ್ಚು ದುಃಖಪಡಲಿಲ್ಲ. ಮಹತ್ತಾದ ನನ್ನ ಕೀರ್ತಿಯನ್ನು ಗಾನಮಾಡುವವನಾಗಿ ಅಡಿಗಡಿಗೆ ನನ್ನನ್ನು ಸ್ಮರಿಸುತ್ತಾ, ನಿರಪರಾಧಿಯಾದ ತನಗೆ ಉಂಟಾದ ಅಕಾರಣ ಕಾರಾಗೃಹವಾಸಕ್ಕಾಗಿ ಆಶ್ಚರ್ಯಪಟ್ಟನು. ಬಳಿಕ ಬ್ರಾಹ್ಮಣನು ಹೀಗೆಂದು ಚಿಂತಿಸಿದನು. ಶ್ರೀಹರಿಯ ಕೀರ್ತನವನ್ನು ಕೇಳಲು ಹೋಗಿದ್ದ ನನ್ನನ್ನು ರಾಜಭಟರು ಕಳ್ಳನೆಂಬ ಭ್ರಾಂತಿಯಿಂದ ಬಂಧಿಸಿದರು. ಪ್ರಾಣಿಗಳಿಗೆ ಸುಖದುಃಖವನ್ನು ಕೊಡುವ ವಿಷ್ಣುವಿನ ಮಾಯೆಯು ಬಹು ಸಾಮರ್ಥ್ಯವುಳ್ಳದ್ದಾಗಿರುವುದು. ಇದು ಆಶ್ಚರ್ಯವೇ ಸರಿ. (ಜನರು ವಿಷ್ಣುಮಾಯೆಯಿಂದ ಮೋಹಿಸಲ್ಪಟ್ಟು ಮುಂದೆ ತಮಗೆ ಒದಗುವ ಸುಖದುಃಖಗಳನ್ನು ಅರಿಯದೆ ಅಹಂಕಾರಪಡುತ್ತಿರುವರು. ಇದು ಆಶ್ಚರ್ಯವು ಎಂದು ಭಾವವು.) ಪೂರ್ವಜನ್ಮದಲ್ಲಿ ನನ್ನಿಂದ ಯಾವ ಪಾಪಕರ್ಮವು ಆಚರಿಸಲ್ಪಟ್ಟಿದ್ದಿತೋ ಅದರ ಫಲವನ್ನು ನಾನು ಈಗ ಅನುಭವಿಸುತ್ತಲಿರುವೆನು. ||೬೮-೬೯-೭೦||

ಮನುಷ್ಯರಿಗೆ ಯಾವನೂ ಸುಖದುಃಖಗಳನ್ನುಂಟುಮಾಡಲಾರನು. ಅವನ ಪೂರ್ವಕರ್ಮಾನುಸಾರವಾಗಿ ಸುಖದುಃಖಾದಿಫಲವುಂಟಾಗುತ್ತದೆ. ಬ್ರಾಹ್ಮಣನು ಹೀಗೆಂದು ಚಿಂತಿಸುತ್ತಿರಲು ಉಳಿದಿದ್ದ ರಾತ್ರಿಯು ಕಳೆದುಹೋಯಿತು. ||೭೧||

ಬೆಳಗಾಗುತ್ತಲೇ ರಾಜಭಟರು ಹಿಂದಿನರಾತ್ರಿ ನಡೆದ ವಿಷಯವನ್ನು ರಾಜನಿಗೆ ವಿಜ್ಞಾಪಿಸಿದರು. ಬಳಿಕ ರಾಜನಿಂದ ಆಜ್ಞಾಪಿಸಲ್ಪಟ್ಟ ಆ ರಾಜಭಟರ

**ಪೌರಾಃ ಖಲು ದ್ವಿಜಂ ರಾತ್ರೌ ಧೃತಂ ಚೋರವಿಶಂಕಯಾ ।**
**ಅಪಶ್ಯಂಸ್ತತ್ರ ತೇ ಗತ್ವಾ ವಿಷ್ಣುಭಕ್ತಂ ಧೃತಂ ಬಲಾತ್ ॥೭೩॥**

**ಊಚುಶ್ಚ ಕಿಂಕರಾನ್ರಾಜ್ಞೋ ನಿಗೃಹೀತಃ ಕಥಂ ದ್ವಿಜಃ ।**
**ಚೌರೋ ನಾಯಂ ವಿಷ್ಣುಭಕ್ತಃ ಜಾನೀಮಃ ಸರ್ವ ಏವ ಹಿ ॥೭೪॥**

**ಸಮಾಜೋಽಭೂದ್ವೈಷ್ಣವಾನಾಂ ಕೀರ್ತನಾರ್ಥಂ ಹರೇರ್ನಿಶಿ ।**
**ತತ್ರ ಸ್ಥಿತೋಽಸೌ ಸಂಹೃಷ್ಟೋ ವೃತ್ತೇ ಪ್ರಚಲಿತೋ ಗೃಹಂ ॥೭೫॥**

**ಗಚ್ಛನ್ಪಥಿ ಧೃತಃ ಸಾಧುರ್ಭವದ್ಭಿಶ್ಚೋರಬುದ್ಧಿತಃ ।**
**ಅಸ್ಯ ಧರ್ಮವತೋ ರಾಜ್ಞಃ ಕಥಂ ನೋಽಸದೃಶೋ ನಯಃ ॥೭೬॥**

---

ಆ ಬ್ರಾಹ್ಮಣವನ್ನು ಬಂಧಿಸಿ ಶೂಲಕ್ಕೇರಿಸುವುದಕ್ಕೋಸ್ಕರ ಕರೆದುಕೊಂಡು ಬಂದರು. ||೭೨||

ಅದೇ ಸಮಯದಲ್ಲಿ ವಿಷ್ಣುಕೀರ್ತನೆಯನ್ನು ಮುಗಿಸಿಕೊಂಡು ತಮ್ಮ ತಮ್ಮ ಮನೆಗೆ ಹಿಂತಿರುಗುತ್ತಿದ್ದ ಪಟ್ಟಣಿಗರು ಕಳ್ಳನೆಂಬ ಶಂಕೆಯಿಂದ ಬಂಧಿಸಲ್ಪಟ್ಟಿರುವ ಆ ಬ್ರಾಹ್ಮಣನನ್ನು ನೋಡಿದರು. ಬಳಿಕ ಶೂಲದ ಸಮೀಪಕ್ಕೆ ಹೋಗಿ ವಿಷ್ಣುಭಕ್ತನಾದ ಬ್ರಾಹ್ಮಣನನ್ನು ರಾಜಭಟರು ಬಲಾತ್ಕಾರದಿಂದ ಬಂಧಿಸಿರುವರೆಂಬುದನ್ನು ತಿಳಿದರು. ಮತ್ತು ||೭೩||

ರಾಜಭಟರನ್ನು ಕುರಿತು ಹೀಗೆಂದು ಹೇಳಿದರು — ಎಲೈ ರಾಜಸೇವಕರೇ, ನೀವು ಈ ಬ್ರಾಹ್ಮಣನನ್ನು ಏತಕ್ಕೋಸ್ಕರ ಹಿಡಿದಿರುವಿರಿ? ಇವನು ಕಳ್ಳನಲ್ಲವು. ವಿಷ್ಣುಭಕ್ತನಾಗಿರುವನು. ಇದನ್ನು ನಾವೆಲ್ಲರೂ ಬಲ್ಲೆವು. ||೭೪||

ಕಳೆದ ರಾತ್ರಿಯಲ್ಲಿ ವಿಷ್ಣುವಿನ ಕೀರ್ತನೆಯನ್ನು ಆಚರಿಸಲು ವಿಷ್ಣುಭಕ್ತರ ಒಂದು ಸಭೆಯು ಕೂಡಿದ್ದಿತು. ಈ ಬ್ರಾಹ್ಮಣನು ಆ ಸಭೆಯಲ್ಲಿ ಇದ್ದವನಾಗಿ ವಿಷ್ಣು ಕೀರ್ತನವನ್ನು ಕೇಳಿ ಸಂತೋಷಪಟ್ಟು ಕೀರ್ತನವು ಸಮಾಪ್ತವಾಗುತ್ತಿರಲು ತನ್ನ ಮನೆಯನ್ನು ಕುರಿತು ಹಿಂತಿರುಗುವವನಾಗಿದ್ದನು. ||೭೫||

ದಾರಿಯಲ್ಲಿ ಹೋಗುತ್ತಿದ್ದ ಈ ಸಜ್ಜನನಾದ ಬ್ರಾಹ್ಮಣನನ್ನು ನೀವು ಕಳ್ಳನೆಂಬ ಭ್ರಾಂತಿಯಿಂದ ಹಿಡಿದಿರುತ್ತೀರಿ. ಧರ್ಮಿಷ್ಠನಾದ ದೊರೆಗೆ ಈ ಅನುಚಿತವಾದ ನೀತಿಯು ಹೇಗೆತಾನೆ ಶೋಭಿಸುವುದು? ||೭೬||

ಪೀಡನಂ ತು ದ್ವಿಜೇ ಯತ್ರ ತತ್ರ ಸ್ಯಾತ್ಸರ್ವ ಸಂಕ್ಷಯಃ ।
ಕಿಂ ಪುನರ್ಮಾರಣೇಽಸ್ಯಸ್ಯ ಶುಭಂ ರಾಜ್ಞೋ ಭವಿಷ್ಯತಿ ॥೭೭॥

ಮುಚ್ಯತಾಂ ಮುಚ್ಯತಾಮಾಶು ನ ವಿಪ್ರೋ ವಧಮರ್ಹತಿ ।
ವಪನಂ ದ್ರವಿಣಾದಾನಂ ದೇಶಾನ್ನಿಸ್ಸಾರಣಂ ತಥಾ ॥೭೮॥

ಏಷ ಹಿ ಬ್ರಹ್ಮಬಂಧೂನಾಂ ವಧೋ ನಾನ್ಯೋಽಸ್ತಿ ದೈಹಿಕಃ ।
ಬ್ರಹ್ಮಬಂಧುರ್ನ ಹಂತವ್ಯ ಆತತಾಯಿ ವಿವರ್ಜಿತಃ ॥೭೯॥

ತಥಾ ಭವದ್ಭಿರ್ನಿರ್ಧೃತಶ್ಚಾಸ್ಯ ದೋಷೋ ನ ಕಶ್ಚನ ।
ಇತಿ ಶ್ರುತ್ವಾ ರಾಜಭೃತ್ಯೋ ರಾಜ್ಞೇ ತದ್ವನ್ನ್ಯವೇದಯತ್ ॥೮೦॥

---

ಯಾವ ರಾಜ್ಯದಲ್ಲಿ ಬ್ರಾಹ್ಮಣನನ್ನು ಪೀಡಿಸುವರೋ, ಆ ರಾಜ್ಯದಲ್ಲಿ ಸಕಲ ವಿನಾಶವೂ ಉಂಟಾಗುವುದು. ಹೀಗಿರುವಲ್ಲಿ ಈ ಬ್ರಾಹ್ಮಣನನ್ನು ಕೊಂದರೆ ರಾಜನಿಗೆ ಶುಭವು ಹೇಗೆತಾನೇ ಆಗುವುದು? ಬ್ರಾಹ್ಮಣನನ್ನು ಕೊಲ್ಲುವುದರಿಂದ ರಾಜ್ಯಸಹಿತ ವಾಗಿ ರಾಜನು ನಾಶವನ್ನೈದುವನು! ಎಂದು ಭಾವವು. ॥೭೭॥

ಆದುದರಿಂದ ಇವನನ್ನು ಸೆರೆಯಿಂದ ಬಿಟ್ಟುಬಿಡಿರಿ. ಬ್ರಾಹ್ಮಣನಿಗೆ ಮರಣ ದಂಡನೆಯು ಉಚಿತವಾದುದಲ್ಲ. ಬ್ರಾಹ್ಮಣನು ತಪ್ಪಿತಸ್ಥನಾಗಿದ್ದ ಪಕ್ಷದಲ್ಲಿ ಅವನಿಗೆ ವಪನಮಾಡಿಸುವುದು (ತಲೆ ಬೋಳಿಸಿ ಅವಮಾನಮಾಡುವುದು). ಸರ್ವಧನ ವನ್ನೂ ವಶಪಡಿಸಿಕೊಳ್ಳುವುದು. ಮತ್ತು ದೇಶಭ್ರಷ್ಟನನ್ನಾಗಿ ಮಾಡುವುದು. ಇವೇ ಬ್ರಾಹ್ಮಣರಿಗೆ ವಿಧಿಸತಕ್ಕ ವಧೆಯಾಗಿರುವುವು. ಇದು ಹೊರತು ಮರಣ ದಂಡನೆಯು ದೇಹಕ್ಕೋಸ್ಕರ ವಿಧಿಸುವ ಯಾವ ಶಿಕ್ಷೆಯಲ್ಲೂ ಬ್ರಾಹ್ಮಣನಿಗೆ ಉಕ್ತ ವಾದುದಲ್ಲ. ॥೭೮॥

ಬ್ರಾಹ್ಮಣನನ್ನು ಎಂದಿಗೂ ಕೊಲ್ಲಬಾರದು. ಅವನು ಮಹಾಪಾತಕಿಯಾಗಿ ದ್ದರೆ ಮಾತ್ರ ವಧಾರ್ಹನಾಗುತ್ತಾನೆ. ಮಹಾಪಾತಕಿಯಲ್ಲದೆ ಸಾಮಾನ್ಯ ಅಪರಾಧ ಮಾಡಿದವನಾಗಿದ್ದರೆ ಅಂಥವನು ಹಿಂಸಾರೂಪವಲ್ಲದ ಶಿಕ್ಷೆಗೆ ಅರ್ಹನಾಗುತ್ತಾನೆ. ಮಹಾಪಾತಕಿ ಎಂದರೆ—ವಿಷವನ್ನು ಕೊಡುವವನು, ಮನೆಗೆ ಬೆಂಕಿಯನ್ನಿಡುವ ವನು ಇತ್ಯಾದಿ ಘೋರಕೃತ್ಯವನ್ನೆಸಗುವವನು. ॥೭೯॥

ನೀವು ಹಿಡಿದಿರುವ ಈ ಬ್ರಾಹ್ಮಣನು ಮಹಾಪಾತಕವನ್ನಾಗಲೀ ಅಥವಾ ಸಾಮಾನ್ಯ ಅಪರಾಧವನ್ನಾಗಲೀ ಮಾಡಿರುವುದಿಲ್ಲ. ಇವನು ನಿರಪರಾಧಿಯಾಗಿರು

ರಾಜನ್ನಸೌ ಮಹಾಭಾಗಃ ಪರಸ್ವೇಷು ಪರಾಙ್ಮುಖಃ ।
ವೈಷ್ಣವೋ ರಕ್ಷಿತಃ ಸ್ವಾಮಿನ್ಚದ್ಭ್ವಕಾರಾಗೃಹೇ ನಿಶಿ ॥೮೧॥

ನ ದಂಡ್ಯಾಶ್ಚ ವಯಂ ರಾಜಂಸ್ತವಾದೇಶಾನುವರ್ತಿನಃ ।
ಬಿಭೀಮಶ್ಚೌರದಂಡೇನ ತದ್ದೇಯಮಭಯಂ ನೃಪ ॥೮೨॥

ಅತಃ ಪರಂ ತು ಕಿಂ ಕುರ್ಮೋ ಹನ್ಮೋ ವಾ ರಕ್ಷಯಾಮಹೇ ।
ಇತ್ಥಂ ನಿಶಮ್ಯ ಭೀತಸ್ತು ತಾನುವಾಚ ಮಹೀಪ(ಹಾವು)ತಿಃ ॥೮೩॥

ವಿಕ್ರೃಶ್ಯ ಕೃಷ್ಣಕೃಷ್ಣೇತಿ ಮಮಾಗಃ ಪ್ರಶಮಃ ಕಥಮ್ ।
ಆನಯಧ್ವಂ ಮಮಾದೇಶಾದ್ಭೃಶಂ ಭೃತ್ಯಾ ಹರೇಃ ಪ್ರಿಯಂ ॥೮೪॥

ವಿಷ್ಣುರೇವ ಪುಣ್ಯನಾಮಾ ಖ್ಯಾತಃ ಪತಿತಪಾವನಃ ।
ಇತ್ಯಾಜ್ಞಾತಾ ರಾಜಭೃತ್ಯಾ ವಿಷ್ಣುಭಕ್ತ ಮಥಾನಯನ್ ॥೮೫॥

---

ತ್ತಾನೆ. ಇವನನ್ನು ಸೆರೆಯಿಂದ ಬಿಡುಗಡೆಮಾಡಿರಿ. ಎಂದು ಪಟ್ಟಣಿಗರು ಹೇಳಿದರು. ಪುರಜನರು ಹೇಳಿದ ಈ ಮಾತನ್ನು ಕೇಳಿದ ರಾಜಭಟನು ಅವರು ಹೇಳಿದ ವಿಷಯವನ್ನು ರಾಜನಿಗೆ ಹೀಗೆಂದು ತಿಳಿಸಿದನು. ॥೮೦॥

ಓ ರಾಜನೇ, ಪೂಜ್ಯನಾದ ಈ ಬ್ರಾಹ್ಮಣನು ಪರದ್ರವ್ಯದಲ್ಲಿ ಆಶೆಯುಳ್ಳವನಲ್ಲ. ನಾವು ಕಳ್ಳನೆಂಬ ಭ್ರಾಂತಿಯಿಂದ ವಿಷ್ಣುಭಕ್ತನಾದ ಈತನನ್ನು ಕಳೆದರಾತ್ರಿ ಕಾರಾಗೃಹದಲ್ಲಿ ರಕ್ಷಿಸಿರುವೆವು. ॥೮೧॥

ಓ ರಾಜನೇ, ನಾವು ನಿನ್ನ ಆಜ್ಞಾನುಸಾರವಾಗಿ ವರ್ತಿಸಿದೆವಾದುದರಿಂದ ನಮ್ಮನ್ನು ದಂಡಿಸಬೇಡ. ನಾವು ಈ ಬ್ರಾಹ್ಮಣನನ್ನು ಕಳ್ಳನೆಂಬ ಭ್ರಾಂತಿಯಿಂದ ಕಳ್ಳನಿಗೆ ವಿಧಿಸತಕ್ಕ ಮರಣದಂಡನೆಯನ್ನು ವಿಧಿಸಲುದ್ಯುಕ್ತರಾದುದರಿಂದ ಈಗ ಅತ್ಯಂತ ಭಯಗೊಂಡಿರುವೆವು. ಆದುದರಿಂದ ನಮಗೆ ಅಭಯವನ್ನೀಯುವವನಾಗು. ॥೮೨॥

ಇನ್ನುಮುಂದೆ ನಾವು ಏನನ್ನು ಮಾಡೋಣ. ಅವನನ್ನು ಕೊಲ್ಲಲೂ ಅಥವಾ ರಕ್ಷಿಸಲೂ ಸಿದ್ಧರಿದ್ದೇವೆ. ಅಪ್ಪಣೆಯಾಗಲಿ. ರಾಜಭಟರು ಹೇಳಿದ ಮಾತನ್ನು ಕೇಳಿ ರಾಜನು ಭಯದಿಂದ ಕೂಡಿ ಕೃಷ್ಣ ಕೃಷ್ಣ ಎಂದು ದೇವನನ್ನು (ನನ್ನನ್ನು) ಸ್ಮರಿಸುತ್ತಾ "ಓ ದೇವರೇ, ನನ್ನ ಈ ಅಪರಾಧವು ಯಾವ ಉಪಾಯದಿಂದ ದೂರವಾದೀತು ?" ಎಂದು ಚಿಂತಿಸುವವನಾಗಿ ಆ ಸೇವಕರನ್ನು ಕುರಿತು

**ದೃಷ್ಟ್ವಾssಯಾಂತಂ ನೃಪಶ್ರೇಷ್ಠೋ ನನಾಮ ಶಿರಸಾ ಭುವಿ ।**
**ತಮುವಾಚ ಮುನಿಶ್ರೇಷ್ಠಂ ಜಹಿ ಮಾಂ ಪಾಪಕಾರಿಣಮ್ ॥೮೬॥**

**ಅಥೋಪದೇಶಂ ಶ್ರುತ್ವಾ ಚ ಪ್ರಾಯಶ್ಚಿತ್ತಂ ಭವಿಷ್ಯತಿ ।**
**ಕಥಂ ಮಮ ಭವೇನ್ಮೋಕ್ಷೋ ವೈಷ್ಣವಾಜ್ಞವಿಧಾನತಃ ॥೮೭॥**

**ವಿಷ್ಣುಭಕ್ತಕೃತಂ ದ್ರೋಹಂ ನಿರಾಕರ್ತುಂ ನ ಶಕ್ನುಯಾತ್ ।**
**ಜನೋ ಜನ್ಮಶತೋದ್ಭೂತೈಃ ಸುಕೃತೈರ್ವಿವಿಧೈರಪಿ ॥೮೮॥**

**ಮಯಾ ಯತ್ಕ್ರಿಯತೇ ಪಾಪಂ ಪಾರಾವಾರೋ ನ ತಸ್ಯ ಹಿ ।**
**ಅತಸ್ತ್ರಾಹಿ ಕೃಪಾಸಿಂಧೋ ತ್ವಾಮಹಂ ಶರಣಂ ಗತಃ ॥೮೯॥**

---

ಹೀಗೆಂದು ಹೇಳಿದನು. ಎಲೈ ಭಟರೇ, ನನ್ನ ಆಜ್ಞೆಯಿಂದ ಹರಿಭಕ್ತನಾದ ಆ ಬ್ರಾಹ್ಮಣೋತ್ತಮನನ್ನು ಇಲ್ಲಿಗೆ ಕರೆತನ್ನಿರಿ. ಪೂಜ್ಯನೂ, ಪ್ರಸಿದ್ಧನೂ ಆದ ಅವನು ಪಾಪಿಷ್ಠರನ್ನು ಶುದ್ಧರನ್ನಾಗಿ ಮಾಡುವ ಸಾಕ್ಷಾದ್ವಿಷ್ಣುವೇ ಆಗಿರುತ್ತಾನೆ. ಈ ಪ್ರಕಾರವಾಗಿ ರಾಜನಿಂದ ಆಜ್ಞಪ್ತರಾದ ಆ ಸೇವಕರು ವಿಷ್ಣುಭಕ್ತನಾದ ಆ ಬ್ರಾಹ್ಮಣನನ್ನು ರಾಜನಬಳಿಗೆ ಕರೆದುಕೊಂಡು ಬರುವವರಾದರು.॥೮೩-೮೪-೮೫॥

ರಾಜಭಟರೊಂದಿಗೆ ಬಂದ ಅವನನ್ನು ನೋಡಿ ನೃಪತಿಶ್ರೇಷ್ಠನು ತನ್ನ ಶಿರಸ್ಸನ್ನು ಭೂಮಿಗೆ ತಾಗುವಂತೆ ಬಗ್ಗಿಸಿ ನಮಸ್ಕರಿಸಿದನು ಮತ್ತು ಮುನಿಶ್ರೇಷ್ಠನಾದ ಆತನನ್ನು ಕುರಿತು ಓ ವಿಪ್ರೋತ್ತಮನೇ, ಮಹಾಪಾಪಕರ್ಮವನ್ನಾಚರಿಸಿದ ನನ್ನನ್ನು ಕೊಂದು ಕ್ಷಮಿಸುವವನಾಗು. ಎಂದು ಬೇಡಿಕೊಂಡು ಮತ್ತೆ ಇಂತೆಂದನು. ॥೮೬॥

ನೀನು ಮಾಡುವ ಉಪದೇಶದಿಂದ ನನ್ನ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತವು ಉಂಟಾಗುವುದು. ಅದಿಲ್ಲದಿದ್ದರೆ ವಿಷ್ಣುಭಕ್ತನಾದ ನಿನಗೆ ದ್ರೋಹವನ್ನೆಣಿಸಿದ ನನಗೆ ಪಾಪದಿಂದ ಹೇಗೆತಾನೇ ಬಿಡುಗಡೆಯಾಗುವುದು ? ॥೮೭॥

ಮನುಷ್ಯನು ವಿಷ್ಣುಭಕ್ತರಿಗೆ ಎಣಿಸಿದ ದ್ರೋಹವನ್ನು ನೂರಾರು ಜನ್ಮಗಳಲ್ಲಿ ಆಚರಿಸಿದ ಪುಣ್ಯಕರ್ಮಗಳಿಂದಲೂ ಸಹ ಹೋಗಲಾಡಿಸಿಕೊಳ್ಳಲು ಅಸಮರ್ಥನಾಗಿರುವನು. ॥೮೮॥

ನನ್ನಿಂದ ಮಾಡಲ್ಪಟ್ಟ ಈ ಪಾಪಕರ್ಮವಾದರೋ ಮಿತಿಯಿಲ್ಲದುದಾಗಿರುವುದು. ಆದುದರಿಂದ ಕರುಣಾನಿಧಿಯಾದ ಓ ವಿಪ್ರನೇ,! ನಾನು ನಿನ್ನನ್ನು ಮರೆಹೊಕ್ಕಿರುವೆನು. ನನ್ನನ್ನು ಕಾಪಾಡು. ॥೮೯॥

**ಕಿಮತ್ರ ವಿಹಿತಂ ಬ್ರಹ್ಮನ್ನಮಾನೃಣ್ಯಮನುತ್ತಮಮ್ ।**
**ಯತ್ಕೃತ್ವಾಽಹಂ ತಮೋ ಘೋರಂ ನ ಗಚ್ಛೇಯಂ ಕದಾಚನ ॥೯೦॥**

**ಇತಿ ರಾಜ್ಞೋ ವಚಃ ಶ್ರುತ್ವಾ ಪ್ರೋವಾಚ ದ್ವಿಜಸತ್ತಮಃ ।**
**ಶ್ರುತಿಸ್ಮೃತಿಪುರಾಣೋಕ್ತಂ ವೈಷ್ಣವದ್ರೋಹಮುಲ್ಬಣಂ ॥೯೧॥**

**ನ ಶಕ್ಯತೇ ವಾರಯಿತುಂ ಕಲ್ಪಕೋಟಿ ಶತೈರಪಿ ।**
**ಸ ಇತ್ಥಮುಕ್ತ್ವಾ ರಾಜಾನಂ ಗತೋ ವಿಪ್ರಃ ಸ್ವಮಾಲಯಂ ॥೯೨॥**

**ದೇಹಮುತ್ಸೃಜ್ಯ ರಾಜಾಽಭೂತ್ತೃಣಾವರ್ತೋ ಮಹಾಸುರಃ ॥೯೩॥**
**ಹತೋ ಮಯಾಽತ್ರ ವಿಪಿನೇ ಗತಃ ಸ ಪರಮಂ ಪದಮ್ ॥೯೪॥**

**ತೃಣಾವರ್ತವಧಂ ಶ್ರುತ್ವಾ ಕಂಸೋಽಮನ್ಯತ ಚಾಶುಭಂ ।**
**ಸ್ವಪ್ನದೃಷ್ಟಂ ಭವೇತ್ಸತ್ಯಂ ಯಥಾಽಯಂ ನಿಹತೋಽಸುರಃ ॥೯೫॥**

---

ಓ ಬ್ರಾಹ್ಮಣೋತ್ತಮನೇ, ಯಾವ ಉಪಾಯವನ್ನು ಕೈಗೊಂಡರೆ ನಾನು ಈ ಘೋರವಾದ ಪಾಪವೆಂಬ ಋಣದಿಂದ ಮುಕ್ತನಾಗುವೆನೋ ಮತ್ತು ಏನನ್ನು ಮಾಡಿದರೆ ಮಹಾಘೋರವಾದ ನರಕಕ್ಕೆ ಬೀಳುವುದಿಲ್ಲವೋ, ಆ ಕಾರ್ಯವನ್ನು, ಆ ಉಪಾಯವನ್ನು ನನಗೆ ಕೃಪೆಯಿಂದ ತಿಳಿಸುವವನಾಗು. ॥೯೦॥

ಎಲೈ ರಾಜನೇ, ಕೋಟಿಸಂಖ್ಯಾಕವಾದ ಕಲ್ಪಗಳಲ್ಲಿ ಜನ್ಮಗಳನ್ನೆತ್ತಿದರೂ ಸಹ ವಿಷ್ಣುಭಕ್ತನಲ್ಲಿ ಎಣಿಸಿರುವ ದ್ರೋಹವನ್ನು ಹೋಗಲಾಡಿಸಲು ಸಾಧ್ಯವಿಲ್ಲ ವೆಂದು ಶ್ರುತಿ, ಸ್ಮೃತಿ, ಪುರಾಣಗಳಲ್ಲಿ ಹೇಳಲ್ಪಟ್ಟಿರುತ್ತದೆ. ॥೯೧॥

ಹೀಗೆಂದು ರಾಜನನ್ನು ಕುರಿತು ಹೇಳಿ, ಆ ಬ್ರಾಹ್ಮಣನು ತನ್ನ ಮನೆಯನ್ನು ಕುರಿತು ಹೋದವನಾದನು. ॥೯೨॥

ಬಳಿಕ ಆ ರಾಜನು ತನ್ನ ಆ ದೇಹವನ್ನು ತ್ಯಜಿಸಿ ತೃಣಾವರ್ತನೆಂಬ ಹೆಸರನ್ನು ಹೊಂದಿ ಭಯಂಕರನಾದ ರಾಕ್ಷಸನಾಗಿ ಜನಿಸಿದನು. ॥೯೩॥

ತರುವಾಯ ಆ ರಾಕ್ಷಸನು ಅರಣ್ಯದಲ್ಲಿ ನನ್ನಿಂದ ಕೊಲ್ಲಲ್ಪಟ್ಟವನಾಗಿ ಶಾಶ್ವತವಾದ ವಿಷ್ಣುಪದವಿಯನ್ನು ಹೊಂದಿದನು. ॥೯೪॥

ಇತ್ತ ಕಂಸನು ತೃಣಾವರ್ತನ ಮರಣವಾರ್ತೆಯನ್ನು ಕೇಳಿ ಇದೊಂದು ತನಗೆ ಉಂಟಾದ ಅಮಂಗಳವೆಂದು ಮನಗಂಡನು. ಮತ್ತು ತೃಣಾವರ್ತನು

**ಪಾರ್ಷದಾಶ್ಚ ಹರೇರ್ಲೋಕೇ ಚರಂತಿ ಛನ್ನರೂಪಿಣಃ ।**
**ಬಾಲಂ ನೀತ್ವಾ ಯದಾ ವ್ಯೋಮ್ನಿ ಸ್ಥಿತಸ್ತೈರ್ನಿಹತೋ ಧ್ರುವಂ ॥೯೬॥**

**ಅತೋಽನ್ಯಥಾ ಬಾಲಕತೋ ಮೃತಿಃ ಕಥಂ**
**ಭವೇದಮುಷ್ಯಾಮಿತವಿಕ್ರಮಸ್ಯ ।**
**ಸ್ವರ್ಗೇಽಪಿ ವಿಖ್ಯಾತಗತೇರ್ಮಹಾದ್ಭುತಂ**
**ಸಮ್ಯಗ್ವಿಚಾರ್ಯಾಹಮತೋ ವಿಧಾಸ್ಯೇ ॥೯೭॥**

**ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯ್ಯಾಸಿಕೇ ನಾರದ ಶೌನಕ ಸಂವಾದೇ ತೃಣಾವರ್ತವಧೋ ನಾಮ ವಿಂಶೋಽಧ್ಯಾಯಃ**

---

ಕೃಷ್ಣನಿಂದ ಸಂಹರಿಸಲ್ಪಟ್ಟನಾದ್ದರಿಂದ, ಸ್ವಪ್ನವೃತ್ತಾಂತವು ಸತ್ಯವಾಗಿಯೇ ಪರಿಣಮಿಸುತ್ತದೆಂಬುದನ್ನೂ ಮನಗಂಡನು. ॥೯೫॥

ಕಂಸನು ತೃಣಾವರ್ತನ ವಿಷಯವನ್ನು ಹೀಗೆಂದು ನಿಶ್ಚಯಿಸಿದನು. ಹರಿಯು ಲೋಕವಾದ ಗೋಕುಲದಲ್ಲಿ ಅವನ ಅಂಗರಕ್ಷಕರಾದ ದೂತರು (ವಿಷ್ಣು ದೂತರು) ತಮ್ಮ ವೇಷವನ್ನು ಮರೆಸಿಕೊಂಡು ಅಲ್ಲಲ್ಲಿ ಸಂಚರಿಸುತ್ತಲಿರುವರು. ಯಾವಾಗ ತೃಣಾವರ್ತನು ಬಾಲಕನನ್ನು ಅಂತರಿಕ್ಷಕ್ಕೆ ತೆಗೆದುಕೊಂಡು ಹೋದನೋ, ಆಹಾಗ ಅವನು ಅಂಗರಕ್ಷಕಭಟರಿಂದ ಕೊಲ್ಲಲ್ಪಟ್ಟಿರುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಕೇವಲ ಒಬ್ಬ ಬಾಲಕನಿಂದ ತೃಣಾವರ್ತನು ಕೊಲ್ಲಲ್ಪಡಲಾರನು. ಎಂದು ಭಾವವು. ॥೯೬॥

ಹಾಗಿಲ್ಲದಿದ್ದರೆ, ಸ್ವರ್ಗದಲ್ಲಿಯೂ ಸಹ ಅಪ್ರತಿಹತವಾದ ಗಮನವುಳ್ಳ ಮತ್ತು ಅಮಿತವಾದ ಪರಾಕ್ರಮವುಳ್ಳ ಆ ತೃಣಾವರ್ತನಿಗೆ ಬಾಲಕನಿಂದ ಹೇಗೆ ತಾನೇ ಮರಣವು ಸಂಭವಿಸೀತು? ಇದು ಅತ್ಯಂತ ಆಶ್ಚರ್ಯವಾಗಿರುತ್ತದೆ. ಆದುದರಿಂದ ನಾನು ಈ ವಿಷಯವನ್ನು ಚೆನ್ನಾಗಿ ಯೋಚಿಸಿ ಮುಂದಿನ ಕಾರ್ಯವನ್ನು ನೆರವೇರಿಸುತ್ತೇನೆ. ಹೀಗೆಂದು ಕಂಸನು ಚಿಂತಿಸುತ್ತಿದ್ದನು. ॥೯೭॥

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ನಾರದ ಶೌನಕ ಸಂವಾದದಲ್ಲಿ ತೃಣಾವರ್ತವಧವೆಂಬ ಇಪ್ಪತ್ತನೆಯ ಅಧ್ಯಾಯವು ಸಮಾಪ್ತವಾಯಿತು.



॥ ಶ್ರೀಗಣೇಶಾಯನಮಃ॥

॥ ಓಂ ನಮೋ ಭಗವತೇ ವಾಸುದೇವಾಯ ॥

# ಆದಿಪುರಾಣಂ

## ॥ ಏಕವಿಂಶೋಽಧ್ಯಾಯಃ ॥

## ಇಪ್ಪತ್ತೊಂದನೆಯ ಅಧ್ಯಾಯವು

॥ ಶ್ರೀಕೃಷ್ಣ ಉವಾಚ ॥

**ಶ್ರುತ್ವಾ ತೃಣಾವರ್ತವಧಂ ಕಂಸೋಽಭೂದತಿ ದುರ್ಮನಾಃ ।**
**ಸಮಾಹೂಯ ಭೃತ್ಯವರ್ಗಾನಬ್ರವಿತ್ತಾನ್ಸುರದ್ವಿಷಃ ॥೧॥**

**ಯೂಯಂ ಮಮ ಪ್ರಿಯಾಃ ಸರ್ವೇ ತಥಾಚಾತಿ ಹಿತೈಷಿಣಃ ।**
**ಗತ್ವಾ ತತ್ರ ತೃಣಾವರ್ತವಧೋ ನಿಶ್ಚೀಯತಾಮಿತಿ ॥೨॥**

**ಕಥಂ ಮೃತೋ ಹತಃ ಕೇನ ಕುತ್ರ ವಾ ಪತಿತೋಽಭವತ್ ।**
**ದೃಷ್ಟ್ವಾ ವ್ರಜೌಕಸೋ ಲೋಕಾನ್ಸಮಾಗಚ್ಛತ ಮಾಚಿರಮ್ ॥೩॥**

ಶ್ರೀಕೃಷ್ಣನು ಹೇಳಿದನು— ತೃಣಾವರ್ತನ ಮರಣವಾರ್ತೆಯನ್ನು ಕೇಳಿದ ಕಂಸನು ಅತ್ಯಂತ ಖೇದಗೊಂಡನು. ಅವನು ತನ್ನ ಸೇವಕರನ್ನು ಕರೆಸಿ, ದೇವತೆಗಳ ಶತ್ರುಗಳಾದ ಆ ರಾಕ್ಷಸರನ್ನು ಕುರಿತು ಹೀಗೆಂದು ಹೇಳಿದನು. ॥೧॥

ಎಲೈ ಸೇವಕರೇ, ನೀವು ನನಗೆ ಪ್ರಿಯರಾಗಿಯೂ ಮತ್ತು ಹಿತವನ್ನು ಬಯಸುವವರಾಗಿಯೂ ಇರುತ್ತೀರಿ. ಆದುದರಿಂದ ನೀವು ನಂದಗೋಕುಲಕ್ಕೆ ಹೋಗಿ ತೃಣಾವರ್ತನ ವಧೆಯು ನಡೆದುದು ಸತ್ಯವೇ ಎಂಬುದನ್ನು ನಿಶ್ಚಯಿಸುವವರಾಗಿರಿ. ॥೨॥

ಹಾಗೆ ಅವನು ಮರಣ ಹೊಂದಿದುದು ಸತ್ಯವಾದರೆ, ಅವನು ಹೇಗೆ ಮರಣವನ್ನೈದಿದನು ? ಅವನನ್ನು ಕೊಂದವರು ಯಾರು ? ಮತ್ತು ಅವನು ಯಾವ

ತೇ ಯಥಾರ್ಥಂ ವದಿಷ್ಯಂತಿ ವಿಧೇಯಂತು ಸಮಾಹಿತಂ ।
ತಥೇತ್ಯುಕ್ತ್ವಾ ವ್ರಜಂ ಸರ್ವೇ ಸಮಾಗತ್ಯ ವ್ರಜೌಕಸಃ ॥೪॥

ಅಪೃಚ್ಛಂಸ್ತೇಽಬ್ರುವಂಸ್ತೇಭ್ಯಸ್ತೃಣಾವರ್ತೋ ಯಥಾಗತಃ ।
ವಾತ್ಯಾರೂಪಧರೋ ದುಷ್ಟೋ ಧೃತ್ವಾ ಬಾಲಂ ಗತೋ ನಭಃ ॥೫॥

ಕ್ಷಣಾದಕಸ್ಮಾತ್ಪತಿತೋ ಬಾಲಕೇನ ಸಹೈವತು ।
ವಿಶೀರ್ಣಸರ್ವಾವಯವೋ ಮಮಾರಾಶ್ಮನಿ ಪಾತಿತಃ ॥೬॥

ಕೋ ವೇದ ಕೇನ ನಿಹತಃ ಕಥಂ ವಾ ಪತಿತಃ ಕ್ಷಿತೌ ।
ಬಾಲಕೋ ನಂದಪುಣ್ಯೇನ ಮೃತ್ಯೋರ್ನ ಹಿ ವಶಂಗತಃ ॥೭॥

ಏವಂ ನಿಶಮ್ಯ ಕಂಸಾಯ ಪ್ರೋಚ್ಯ ಜಗ್ಮುಃ ಸ್ವಮಾಲಯಂ ।
ಕಂಸೋ ಮೇನೇ ತಸ್ಯ ವಧೋ ದುಸ್ಸ್ವಪ್ನಾದಭವತ್ ಧ್ರುವಂ ॥೮॥

---

ಸ್ಥಳದಲ್ಲಿ ಬಿದ್ದು ಮರಣವನ್ನೈದಿದನು ? ಎಂಬೀ ವಿಷಯಗಳನ್ನು ತಿಳಿದು, ಗೋಕುಲ ವಾಸಿಗಳನ್ನು ನೋಡಿ ವಿಚಾರಿಸಿ ಜಾಗ್ರತೆಯಾಗಿ ಹಿಂತಿರುಗಿಬರುವವರಾಗಿರಿ. ||೩||

ನೀವು ಅಲ್ಲಿಯ ಜನಗಳನ್ನು ಕಂಡು ಬಹು ವಿಧೇಯರಂತೆ ನಡೆದುಕೊಂಡು ಈ ವಿಷಯಗಳನ್ನು ಪ್ರಶ್ನಿಸಿದರೆ ಅವರು ನಿಜವಾದ ವಿಷಯವನ್ನು ಹೇಳುವರು. ಭೃತ್ಯರು ಹಾಗೆಯೇ ಆಗಲೆಂದು ಹೇಳಿ ಗೋಕುಲವನ್ನು ಸೇರಿದರು. ಅಲ್ಲಿಯ ಜನರನ್ನು ಕಂಡು ತೃಣಾವರ್ತನ ಮರಣವಿವರವನ್ನು ಪ್ರಶ್ನಿಸಿದರು. ಆಗ ಆ ಗೋಕುಲವಾಸಿಗಳು ಕಂಸನ ಭೃತ್ಯರಿಗೆ ತೃಣಾವರ್ತನು ಯಾವ ರೀತಿಯಲ್ಲಿ ಕೊಲ್ಲಲ್ಪಟ್ಟನು ಎಂಬ ವಿಷಯವನ್ನು ಈರೀತಿಯಲ್ಲಿ ವಿವರಿಸಿ ಹೇಳಿದರು. ||೪||

ದುಷ್ಟನಾದ ಆ ರಾಕ್ಷಸನು ವಾತ್ಯಾರೂಪವನ್ನು ತಾಳಿದವನಾಗಿ ಬಾಲಕನನ್ನು ಎತ್ತಿಕೊಂಡು ಅಂತರಿಕ್ಷಕ್ಕೆ ಹಾರಿದನು. ಮತ್ತು ಕ್ಷಣಮಾತ್ರದಲ್ಲಿ ಬಾಲಕನೊಂದಿಗೆ ಜರ್ಝರಿತವಾದ ಅವಯವವುಳ್ಳವನಾಗಿ ಒಂದಾನೊಂದು ಶಿಲೆಯ ಮೇಲೆ ಬಿದ್ದು ಮರಣವನ್ನೈದಿದನು. ಅವನು ಯಾರಿಂದ ಕೊಲ್ಲಲ್ಪಟ್ಟನು ? ಮತ್ತು ಹೇಗೆ ಭೂಮಿಯ ಮೇಲೆ ಬಿದ್ದನು ? ಎಂಬುದನ್ನು ಯಾವನು ತಾನೆ ತಿಳಿದಿರುತ್ತಾನೆ ? ಬಾಲಕನಾದರೋ ಆ ನಂದನ ಸುಕೃತವಿಶೇಷದಿಂದ ಮೃತ್ಯುವಶನಾಗಲಿಲ್ಲ. ||೫-೬-೭||

ಹೀಗೆಂದು ಹೇಳಿದ ಜನರ ಮಾತನ್ನು ಕೇಳಿ ಕಂಸನ ದೂತರು, ಹಿಂತಿರುಗಿ ಕಂಸನ ಬಳಿಗೆ ಬಂದು ಅವನಿಗೆ ಆ ವಿಷಯವನ್ನು ತಿಳಿಸಿ ತಮ್ಮ ತಮ್ಮ ಮನೆಗಳಿಗೆ

ವಿಧಾತ್ರಾ ನಿಹಿತಂ ಮೃತ್ಯುಂ ಕೋಽಪನೇತುಂ ಕ್ಷಮೋ ಭವೇತ್ ।
ವ್ರಜೇ ತು ಸಾಧವೋ ಗೋಪಾ ನಿವಸಂತಿ ಚ ವೇದ್ಮ್ಯಹಂ ॥೯॥

ತೇಷಾಂ ನ ದೋಷಶ್ಚಾಸ್ತೀಹ ಕಾಲಗ್ರಸ್ತೋ ಮೃತೋಽಸುರಃ ।
ಅತ್ರ ಶೋಕೋ ನ ಕರ್ತವ್ಯೋ ಮೃತ್ಯುರ್ನೋಲ್ಲಂಘ್ಯತೇ ಕ್ವಚಿತ್ ॥೧೦॥

ಘಟೋದರೋ ಬಕಾದ್ಯಾಶ್ಚ ಯದಾ ಯಾಸ್ಯಂತಿ ತೇ ಗೃಹಾನ್
ತದಾ ವಿಚಾರಃ ಕರ್ತವ್ಯೋ ಹಿತಾಹಿತವಿಧೌ ಸ್ವಕೇ ।
ವಿಚಾರ್ಯೈವಂ ತದಾ ಕಂಸಃ ಸ್ವಗೇಹಮವಿಶದ್ದ್ರುತಂ ॥೧೧॥

॥ ಶ್ರೀ ನಾರದ ಉವಾಚ ॥

ತೃಣಾವರ್ತ ವಧಾತ್ಕೃಷ್ಣ ಕಿಮಕಾರ್ಷೀನ್ಮಹಾಪ್ರಭೋ ।
ತವಲೀಲಾ ಕಥಾಃ ಶ್ರೋತುರ್ಮನಸೋಽತಿಸುಖಪ್ರದಾಃ ॥೧೨॥

---

ತೆರಳಿದರು. ಬಳಿಕ ಕಂಸನು ತೃಣಾವರ್ತನಿಗಾದ ದುಸ್ಸ್ವಪ್ನದಿಂದಲೇ ಅವನಿಗೆ ಮರಣವುಂಟಾಯಿತೆಂದು ತಿಳಿದು ಮತ್ತೆ ಹೀಗೆಂದು ಚಿಂತಿಸಿದನು. ॥೮॥

ಸೃಷ್ಟಿಕರ್ತನಾದ ಬ್ರಹ್ಮನು ವಿಧಿಸಲ್ಪಟ್ಟಿರುವ ಮರಣವನ್ನು ತಪ್ಪಿಸಲು ಯಾವನು ತಾನೇ ಸಮರ್ಥನಾಗಿರುವನು ? ಗೋಕುಲದಲ್ಲಿ ವಾಸಿಸುವ ಗೋಪಾಲಕರಾದರೋ ಸಜ್ಜನರಾಗಿರುವರು. ಇದನ್ನು ನಾನು ತಿಳಿದಿರುವೆನು. ಆದುದರಿಂದ ತೃಣಾವರ್ತನ ಮರಣ ವಿಷಯದಲ್ಲಿ ಆ ಗೋಕುಲನಿವಾಸಿಗಳ ಯಾವ ಅಪರಾಧವೂ ಇರುವುದಿಲ್ಲ. ಆ ಅಸುರನು ಮೃತ್ಯುಗ್ರಸ್ತನಾಗಿ ಸ್ವಾಭಾವಿಕವಾಗಿಯೇ ಮರಣವನ್ನೈದಿರುವನು. ಈ ವಿಷಯದಲ್ಲಿ ದುಃಖಪಡುವುದು ಯುಕ್ತವಾದುವಲ್ಲ. ಮೃತ್ಯುವನ್ನು ಅತಿಕ್ರಮಿಸಲು ಅಶಕ್ಯವಾಗಿರುವುದು. ಆದುದರಿಂದ ಘಟೋದರ ಬಕ ಮುಂತಾದ ಅಸುರರು ಮನೆಯನ್ನು ಕುರಿತು ತೆರಳಿದ ಮೇಲೆ, ನನ್ನ ಹಿತಾಹಿತಗಳ ವಿಷಯದಲ್ಲಿ ಯುಕ್ತವಾದುದನ್ನು ಯೋಚಿಸಬೇಕಾಗಿರುತ್ತದೆ. ಹೀಗೆಂದು ಯೋಚಿಸಿ ಕಂಸನು ಜಾಗ್ರತೆಯಾಗಿ ತನ್ನ ಮನೆಯನ್ನು ಪ್ರವೇಶಿಸಿದನು. ॥೯-೧೦-೧೧॥

ಶ್ರೀ ನಾರದನು ಹೇಳಿದನು—ಓ ಪ್ರಭುವಾದ ಕೃಷ್ಣನೇ, ತೃಣಾವರ್ತನ ವಧೆಯಾದ ಬಳಿಕ ಕಂಸನು ಮುಂದೆ ಏನನ್ನು ಮಾಡಿದನೆಂಬುದನ್ನು ಹೇಳುವವನಾಗು. ಲೀಲೆಗಳಿಂದ ಒಳಗೊಂಡಿರತಕ್ಕ ನಿನ್ನ ಕಥೆಯು ಶ್ರೋತೃವಿನ ಮನಸ್ಸಿಗೆ ಅತ್ಯಂತ ಸುಖವನ್ನುಂಟುಮಾಡುವುದಾಗಿರುತ್ತದೆ. ॥೧೨॥

ತ್ವತ್ಕೀರ್ತನಂ ಫಲಂ ವಾಚಾಂ ತ್ವದ್ಗುಣಶ್ರವಣಂ ಶ್ರುತೇಃ ;
ನೇತ್ರಯೋಸ್ತವ ಸಂದರ್ಶಸ್ತ್ವದ್ಭಕ್ತಾನಾಂ ಚ ದರ್ಶನಂ ॥೧೩॥

ಪಾದಯೋರ್ವ್ರಜನಂ ತದ್ವತ್ತವ ತೀರ್ಥಮಹೋತ್ಸವೇ ।
ನಾಸಿಕಾಯಾಃ ತವೋತ್ತೀರ್ಣ ತುಲಸೀಗಂಧ ಸೇವನಂ ॥೧೪॥

ಅಜ್ಞಾನಾಂ ತವ ಪಾದಾಬ್ಜಜಲಸೇಕೋಽಖಿಲಂ ಫಲಂ ।
ಅನ್ಯಥಾ ನಿಷ್ಫಲಂ ಸರ್ವಂ ತವ ಪ್ರೇಮವಿವರ್ಜಿತಂ ॥೧೫॥

ದೇಹಗೇಹಾದಿಕಂ ವ್ಯರ್ಥಂ ಶ್ಮಶಾನಸದೃಶಂ ಖಲು ।
ದುರ್ಲಭಂ ಮಾನುಷಂ ಜನ್ಮ ಸತ್ಸಂಗಸ್ತ್ವತಿ ದುರ್ಲಭಃ ॥೧೬॥

---

ನಿನ್ನ ಕೀರ್ತನವೇ ವಾಗಿಂದ್ರಿಯವಿರುವುದಕ್ಕೆ ಫಲವು. ನಿನ್ನ ಗುಣ ಶ್ರವಣವೇ ಶ್ರೋತ್ರೇಂದ್ರಿಯದ ಫಲವು. ಕಣ್ಣುಗಳಿಗೆ ನಿನ್ನ ದರ್ಶನವೂ ಮತ್ತು ನಿನ್ನ ಭಕ್ತರ ದರ್ಶನವೂ ಫಲವಾಗಿರುತ್ತದೆ. ॥೧೩॥

ಹಾಗೆಯೇ ನೀನು ನೆಲಸಿರುವ ಕ್ಷೇತ್ರ ಮತ್ತು ನಿನ್ನ ಸಂಬಂಧವಾದ ಉತ್ಸವ ಇವುಗಳನ್ನು ನೋಡುವುದಕ್ಕೋಸ್ಕರ ನಡೆದುಹೋಗುವುದೇ ಕಾಲುಗಳಿಗೆ ಫಲವಾಗಿರುತ್ತದೆ. ನೀನು ಧರಿಸಿದ ತಲಸೀಮಾಲೆಯನ್ನು ತೆಗೆದು ಅದನ್ನು ಗೌರವಿಸಿ ಅದರ ಪರಿಮಳವನ್ನು ಆಘ್ರಾಣಿಸುವುದೇ ಘ್ರಾಣೇಂದ್ರಿಯವಿರುವುದಕ್ಕೆ ಫಲವಾಗಿರುತ್ತದೆ. ॥೧೪॥

ಅಜ್ಞಾನಿಗಳಿಗೆ ನಿನ್ನ ಪಾದಕಮಲಗಳನ್ನು ನೀರಿನಿಂದ ಕ್ಷಾಲನಮಾಡುವುದೇ ಫಲವಾಗಿರುತ್ತದೆ. ನಿನ್ನ ಸೇವೆಯಲ್ಲದೆ ಮಿಕ್ಕ ಎಲ್ಲಾ ಕಾರ್ಯಗಳೂ ವ್ಯರ್ಥವಾಗುವುವಲ್ಲದೆ ನಿನ್ನ ಪ್ರೀತಿಯೂ ಉಂಟಾಗುವುದಿಲ್ಲ. ॥೧೫॥

ಮನುಷ್ಯನಿಗೆ ಶರೀರ, ಗೃಹ, ಆರಾಮ, ಕ್ಷೇತ್ರ, ಪತ್ನೀ, ಪುತ್ರ, ಮಿತ್ರ, ಬಂಧುಬಾಂಧವರು ಮೊದಲಾದ ಪರಿವಾರವು ಇದ್ದರೂ ಅದು ನಶ್ವರವಾದುದರಿಂದ ಅಂತ್ಯದಲ್ಲಿ ಸ್ಮಶಾನವು ಹೇಗೆ ಶೂನ್ಯವಾಗಿರುವುದೋ ಅದರಂತೆ ಇವುಗಳೂ ನಿರರ್ಥಕಗಳಾಗಿರುತ್ತವೆ. ಆದರೆ ಮನುಷ್ಯ ಜನ್ಮವು ದುರ್ಲಭವಾಗಿರುವುದು. ಅದರಲ್ಲಿಯೂ ಸತ್ಪುರುಷರ ಸಹವಾಸವು ಅತಿ ದುರ್ಲಭವಾಗಿರುವುದು. ॥೧೬॥

**ತ್ವತ್ಕಥಾಶ್ರವಣಂ ಸದ್ಭಿಸ್ತತ್ರ ನಾಽಸ್ಯತಿದುರ್ಲಭಂ ।**
**ವಕ್ತಾರೋ ಬಹವಃ ಸಂತಿ ಪರೇಷಾಂ ವೃದ್ಧಿದಾ ಭುವಿ ॥೧೭॥**

**ದಾಮೋದರ ವಶೋ ಭಕ್ತೋ ದುರ್ಲಭಂ ಖಲು ಭೂತಲೇ**
**ತ್ವಮೇವ ಕೃಷ್ಣ ಸರ್ವಜ್ಞ ತ್ವಂ ಮೇ ಬ್ರೂಹಿ ದಯಾನಿಧೇ ॥೧೮॥**

॥ ಶ್ರೀ ಭಗವಾನುವಾಚ ॥

**ಧನ್ಯೋಽಸಿ ತ್ವಂ ಮುನಿಶ್ರೇಷ್ಠ ಮತ್ಕಥಾಶ್ರವಣೇ ರತಃ ।**
**ಅತಸ್ತೇಽಹಂ ಪ್ರವಕ್ಷ್ಯಾಮಿ ಶೃಣುಷ್ವಾವಹಿತೋ ಮಮ ॥೧೯॥**

**ಕಂಸಃ ಸ ಭಾವನಾವಿಷ್ಟಃ ಸುಪ್ತಶ್ಚ ಕಶಿಪೌ ಶುಭೇ ।**
**ಚಿಂತಯಾಮಾಸ ಕಿಂ ಕಾರ್ಯಂ ಮಯಾ ಸ್ವಹಿತಸಿದ್ಧಯೇ ॥೨೦॥**

---

ಸತ್ಪುರುಷರ ಸಹವಾಸವು ದೊರಕಿದರೂ ಅವರ ಮೂಲಕ ನಿನ್ನ ಕಥಾಶ್ರವಣವು ಲಭಿಸುವುದಂತೂ ಅತಿ ದುಷ್ಕರವು. ಲೋಕದಲ್ಲಿ ಇತರರನ್ನು ವಿಷ್ಣುಕಥಾ ಶ್ರವಣದಲ್ಲಿ ಆಸಕ್ತರಾಗುವಂತೆ ಹುರಿದುಂಬಿಸುವ ಮಾತುಗಳನ್ನಾಡುವ ಜನರು ಅನೇಕಮಂದಿ ಇರುವರು. ಆದರೆ ಪ್ರಪಂಚಕ್ಕೆ ಆಧಾರಭೂತನಾದ ಆ ವಿಷ್ಣುವಿನ ಪ್ರೀತಿಗೆ ಪಾತ್ರನಾದ ಭಕ್ತನು ದೊರಕುವುದು ದುರ್ಲಭವು. ಓ ಕರುಣಾಸಾಗರನಾದ ಶ್ರೀಕೃಷ್ಣನೇ, ನೀನು ಸರ್ವಜ್ಞನು, ನೀನೇ ನನಗೆ ನಿನ್ನ ಕಥಾಮೃತವನ್ನು ಹೇಳುವವನಾಗು. ॥೧೭-೧೮॥

ಶ್ರೀಭಗವಂತನಾದ ಶ್ರೀಕೃಷ್ಣನು ಹೇಳಿದನು -- ಎಲೈ ಮುನಿಶ್ರೇಷ್ಠನೇ, ನನ್ನ ಕಥೆಯನ್ನು ಕೇಳುವುದರಲ್ಲಿ ಆಸಕ್ತನಾದ ನೀನು ಧನ್ಯನು. ಆದುದರಿಂದ ನಿನಗೆ ನನ್ನ ಕಥೆಯನ್ನು ಹೇಳುವೆನು. ಸಾವಧಾನದಿಂದ ಕೇಳುವವನಾಗು. ॥೧೯॥

ತೃಣಾವರ್ತನು ಮರಣಹೊಂದಿದನೆಂಬ ವೃತ್ತಾಂತವನ್ನು ಕೇಳಿ ಚಿಂತಾಸಕ್ತನಾದ ಕಂಸನು ಮೃದುವಾದ ಸುಪ್ಪತ್ತಿಗೆಯ ಮೇಲೆ ಮಲಗಿದವನಾಗಿ “ನನಗೆ ಹಿತವುಂಟಾಗಬೇಕಾದರೆ ಇನ್ನುಮುಂದೆ ಕೈಗೊಳ್ಳಬೇಕಾದ ಉಪಾಯವೇನು ?” ಎಂಬುದಾಗಿ ಚಿಂತಿಸತೊಡಗಿದನು. ॥೨೦॥

**ಸಸ್ಮಾರ ವಚನಂ ತಸ್ಯಾಃ ಹತಾ ಸಾ ಕನ್ಯಕಾ ಮಯಾ ।**
**ತಯಾ ಯದುಕ್ತಂ ಭೋ ಮಂದ ಕಿಂ ಮಯಾ ಹತಯಾ ಬತ॥೨೧॥**

**ಯತ್ರ ಕ್ವಾಪಿ ಸಮುತ್ಪನ್ನೋ ಯಸ್ತ್ವಾಂ ಮಾರಯಿತಾ ಧ್ರುವಂ॥೨೨॥**

|| ನಾರದ ಉವಾಚ ||

**ಕಿಂ ಜಾತಂ ಕಿಂ ಕೃತಂ ತೇನ ಕಂಸೇನಾತ್ಮಹಿತೇಚ್ಛುನಾ ॥೨೩॥**

|| ಶ್ರೀಕೃಷ್ಣ ಉವಾಚ ||

**ಮುನೇ ಕನ್ಯಾಂ ಗೃಹೀತ್ವಾ ಸ ನಿಶೀಥೇ ಸ್ವಗೃಹಂ ಗತಃ ।**
**ವಸುದೇವಸ್ತಥೈವಾಸೀದ್ಬದ್ಧಃ ಶೃಂಖಲಯಾಽಭವತ್ ॥೨೪॥**

---

ಹಿಂದೆ ತಾನು ದೇವಕಿಯ ಎಂಟನೆಯ ಗರ್ಭದಲ್ಲಿ ಜನಿಸಿದ ಕನ್ನಿಕೆಯನ್ನು ಸಂಹರಿಸುವಾಗ ಆ ಸಮಯದಲ್ಲಿ ಆ ಸ್ತ್ರೀಶಿಶುವು ತನ್ನನ್ನು ಕುರಿತು ನುಡಿದ ವಚನವನ್ನು ಸ್ಮರಿಸಿದನು. ಆ ಕನ್ನಿಕೆಯು ನನ್ನಿಂದ ಕೊಲ್ಲಲ್ಪಡುವ ಸಮಯದಲ್ಲಿ, "ಎಲೈ ಮೂಢನೇ, ನನ್ನನ್ನು ಕೊಲ್ಲುವುದರಿಂದ ನಿನಗೆ ಉಂಟಾಗುವ ಪ್ರಯೋಜನವೇನು ? ಎಲ್ಲಿಯೋ ಜನಿಸಿರುವ ಯಾವನೋ ಒಬ್ಬನು ನಿನ್ನನ್ನು ಸಂಹರಿಸುವನು. ಇದು ನಿಜವು. ನೀನು ಅವನನ್ನು ಕೊಲ್ಲಲು ಶಕ್ತನಾಗಿರುವೆಯಾ ?" ಎಂದು ಹೇಳಿತು. ||೨೧-೨೨||

ನಾರದನು ಹೇಳಿದನು—ಓ ಶ್ರೀಕೃಷ್ಣನೇ, ಈ ವಿಷಯವು ಮುಂದೇನಾಯಿತು ? ತನ್ನ ಹಿತವನ್ನೇ ಬಯಸಿದ ಆ ಕಂಸನು ಏನನ್ನು ಮಾಡಿದನು ? ಅದನ್ನು ಹೇಳುವವನಾಗು ? ||೨೩||

ಶ್ರೀಕೃಷ್ಣನು ಹೇಳಿದನು—ಎಲೈ ನಾರದ ಮುನಿಯೇ, ವಸುದೇವನು ರಾತ್ರಿಯಲ್ಲಿ (ಗೋಕುಲದಿಂದ) ಆ ಹೆಣ್ಣುಶಿಶುವನ್ನು ಎತ್ತಿಕೊಂಡು ತನ್ನ ಮನೆಯನ್ನು ಸೇರಿದನು. ವಸುದೇವನಾದರೋ ಎಂದಿನಂತೆ ಕಾರಾಗೃಹದಲ್ಲಿ ಮುಂಚಿನಂತೆಯೇ ಶೃಂಖಲಾಬದ್ಧನಾಗಿದ್ದನು. ||೨೪||

**ತತೋ ರುರೋದ ಸಾ ಕನ್ಯಾ ಸ್ವರೇಣೋಚ್ಚೈರ್ನಿಶಮ್ಯ ತತ್ ।**
**ಸಮುತ್ಥಿತಾ ದ್ವಾರಪಾಲಾಃ ಕಂಸೇನೈವ ನಿಯೋಜಿತಾಃ ॥೨೫॥**

**ಶೀಘ್ರಂ ಕಂಸಭಿಯಾ ಗತ್ವಾ ತದುತ್ಪತ್ತಿಂ ಚಚಕ್ಷಿರೇ ।**
**ಕಂಸಃ ಶ್ರುತ್ವಾ ಖಡ್ಗಪಾಣಿಃ ಸಹಸಾ ಸಮುಪಸ್ಥಿತಃ ॥೨೬॥**

**ತ್ಯಕ್ತ್ವಾ ತು ಶಯನೇ ಮೂಢಃ ಸುಪ್ತಾಂ ಪತ್ನೀಂ ಸಮಾಯಯೌ ।**
**ತ್ವರಯಾ ಧಾವಮಾನೋಽಸೌ ಸ್ಖಲಿತೋ ನ್ಯಪತದ್ಭುವಿ ॥೨೭॥**

**ಶಿರಸಃ ಪತಿತಂ ದೂರಮುಷ್ಣೀಷಮಸುರಸ್ಯ ಹಿ ।**
**ತಥಾಽಧರೋಷ್ಠಭಂಗೇನ ರಕ್ತಸ್ರಾವಸ್ತತೋಽಭವತ್ ॥೨೮॥**

**ತಥಾಽಪಿ ಮಾರ್ಗಯನ್ಗತ್ವಾ ಜಗೃಹೇ ಕನ್ಯಕಾಂ ಚ ತಾಂ ।**
**ದೇವಕೀ ವಿನಯೇನೋಚ್ಚೈರ್ನಿಜಗಾದ ತಮಗ್ರಜಮ್ ॥೨೯॥**

---

ಅನಂತರದಲ್ಲಿ ಆ ಸ್ತ್ರೀಶಿಶುವು, ದೇವಕಿಯು ಪ್ರಸವಿಸಿದಳು ಎಂಬುದನ್ನು ತಿಳಿಸುವುದಕ್ಕಾಗಿ ಎಂಬಂತೆ ಉಚ್ಚಸ್ವರದಿಂದ ರೋದನ ಮಾಡಿತು. ಇದನ್ನು ಕೇಳಿ, ಕಂಸನಿಂದಲೇ ನಿಯುಕ್ತರಾದ ದ್ವಾರಪಾಲಕರು, ನನ್ನ ಮಾಯೆಯಿಂದ ನಿದ್ರೆ ಮಾಡುತ್ತಿದ್ದವರು, ಎಚ್ಚತ್ತರು ||||೨೫||

ಬಳಿಕ, ತ್ವರೆಯಿಂದ ಕಂಸನ ಬಳಿಗೆ ಹೋಗಿ ಮಗುವು ಜನಿಸಿದ ವಿಷಯವನ್ನು ಅವನಿಗೆ ತಿಳಿಸಿದರು. ಆ ವೃತ್ತಾಂತವನ್ನು ಕೇಳಿದ ಮೂಢನಾದ ಕಂಸನು ನಿದ್ರೆಮಾಡುತ್ತಿದ್ದ ತನ್ನ ಪತ್ನಿಯನ್ನು ಬಿಟ್ಟು ಹಾಸಿಗೆಯಿಂದ ಎದ್ದು ಖಡ್ಗಪಾಣಿಯಾಗಿ ಹೊರಟನು. ಹೀಗೆ ಹೊರಟ ಕಂಸನು ಆತುರದಿಂದ ಓಡುತ್ತಾ ಕಾಲುಜಾರಿ ನೆಲಕ್ಕೆ ಬಿದ್ದನು. ||೨೬-೨೭||

ಈರೀತಿಯಲ್ಲಿ ಭೂಮಿಯಲ್ಲಿ ಬಿದ್ದ ಆ ರಾಕ್ಷಸನ ತಲೆಯಿಂದ ಉಷ್ಣೀಷವು (ಪೇಟ) ದೂರಕ್ಕೆ ಹೋಗಿ ಬಿದ್ದಿತು. ಮತ್ತು ಕೆಳತುಟಿಯು ಒಡೆದು ಅದರಿಂದ ರಕ್ತವು ಸುರಿಯತೊಡಗಿತು. ಹಾಗಿದ್ದರೂ ಸಹ ಅವನು ಮೇಲಕ್ಕೆದ್ದು ಕಾರಾಗೃಹಕ್ಕೆ ಬಂದು ಅಲ್ಲಿದ್ದ ಹೆಣ್ಣುಮಗುವನ್ನು ಹಿಡಿದುಕೊಂಡನು. ||೨೮||

ದೇವಕಿಯು ಅಣ್ಣನಾದ ಕಂಸನನ್ನು ಕುರಿತು ವಿನಯದಿಂದ ಉಚ್ಚಸ್ವರದಲ್ಲಿ ಹೀಗೆಂದು ಹೇಳಿದಳು. ||೨೯||

ಭ್ರಾತಸ್ತವಾನುಜಾಽಹಂ ವೈ ಕೃಪಾಪಾತ್ರಂ ದಯಾನಿಧೇ ।
ಹತಾ ಮೇ ಬಹವಃ ಪುತ್ರಾಃ ಕನ್ಯಕೈಕಾ ಪ್ರದೀಯತಾಂ ॥೩೦॥

ನಿರ್ಭರ್ತ್ಸ್ಯ ಭಗಿನೀಂ ಕಂಸೋ ಹಸ್ತಾದಾಚ್ಛಿದ್ಯ ಕನ್ಯಕಾಮ್ ।
ಪ್ರೋವಾಚೇಯಂ ನಿಹಂತವ್ಯಾ ಮುಚ್ಯತಾಮಿತಿ ಮಾ ವದ ॥೩೧॥

ತವಗರ್ಭಸಮುದ್ಭೂತಾಷ್ಟಮಾಪತ್ಯೇನ ಮೇ ವಧಃ ।
ಇತ್ಯುಕ್ತ್ವಾ ತಾಂ ಸಮಾದಾಯ ಪದ್ಭ್ಯಾ ಮುತ್ಥಾಯ ನಿರ್ದಯಃ ॥೩೨॥

ಯಾವತ್ಪ್ರಕ್ಷೇಪ್ತು ಕಾಮೋಽಭೂಚ್ಛಿಲಾಪೃಷ್ಠೇ ಸ ದುರ್ಮತಿಃ ।
ತಾವದ್ಧಸ್ತಾದ್ವಿನಿರ್ಗತ್ಯ ಸಾ ದೇವ್ಯಂಬರಮಾಸ್ಥಿತಾ ॥೩೩॥

ಬಭೂವ ದರ್ಶನೀಯಾಂಗೀ ಸಾಯುಧಾಷ್ಟಮಹಾಭುಜಾ ।
ಯಯಾ ಸಂಮೋಹಿತಂ ವಿಶ್ವಂ ದೇಹಗೇಹ ಸುತಾದಿಷು ॥೩೪॥

---

ಎಲೈ ಕರುಣಾಳುವೇ, ನಾನು ನಿನ್ನ ತಂಗಿಯು ಮತ್ತು ನಿನ್ನ ಕೃಪೆಗೆ ಪಾತ್ರಳು. ಇದುವರೆಗೆ ನನ್ನ ಅನೇಕ ಮಕ್ಕಳು ನಿನ್ನಿಂದ ಹತವಾದುವು. ಆದುದರಿಂದ ಈ ಒಂದು ಕನ್ನಿಕೆಯನ್ನಾದರೂ ನನಗೋಸ್ಕರ ಕೊಡುವವನಾಗು. ॥೩೦॥

ಕಂಸನು, ತಂಗಿಯ ಕೋರಿಕೆಯನ್ನು ಲೆಕ್ಕಿಸದೆ ಅವಳನ್ನು ಹೆದರಿಸಿ ಕನ್ಯೆಯನ್ನು ಅವಳ ಕೈಯಿಂದ ಕಸಿದುಕೊಂಡು ಹೀಗೆಂದು ಹೇಳಿದನು. ಈ ಕನ್ಯೆಯನ್ನು ಖಂಡಿತವಾಗಿಯೂ ಕೊಲ್ಲುವೆನು. ಕೊಲ್ಲದೇ ಬಿಟ್ಟುಬಿಡೆಂದು ಹೇಳಬೇಡ. ॥೩೧॥

ನಿನ್ನ ಗರ್ಭದಿಂದ ಜನಿಸುವ ಎಂಟನೆಯ ಶಿಶುವಿನಿಂದ ನನಗೆ ಮರಣವೆಂದು ಗೊತ್ತಾಗಿರುವುದು. ಈ ಶಿಶುವು ನಿನ್ನ ಎಂಟನೆಯ ಗರ್ಭವಾದುದರಿಂದ ಇದು ನನಗೆ ಮೃತ್ಯುವೇ ಸರಿ. ಆದುದರಿಂದ ಇದನ್ನು ಕೊಂದೇತೀರುವೆನು. ಹೀಗೆಂದು ಹೇಳಿ ದಯಾರಹಿತನಾದ ಆ ಕಂಸನು ಆ ಕನ್ನಿಕೆಯ ಕಾಲುಗಳನ್ನು ಹಿಡಿದು ಮೇಲಕ್ಕೆ ಎತ್ತಿ ಕಲ್ಲುಬಂಡೆಯಮೇಲೆ ಅಪ್ಪಳಿಸಬೇಕೆಂದು ಇಚ್ಛೆಯುಳ್ಳವನಾಗಿರಲು, ಅಷ್ಟರೊಳಗೆ ಆ ಕನ್ನಿಕೆಯು ಅವನ ಕೈಯಿಂದ ತಪ್ಪಿಸಿಕೊಂಡು ಹಾರಿ ಅಂತರಿಕ್ಷವನ್ನು ಸೇರಿದಳು. ॥೩೨-೩೩॥

ಅಂತರಿಕ್ಷವನ್ನು ಪಡೆದ ಆ ಕನ್ನಿಕೆಯು, ಈಶ್ವರನ ಶಕ್ತಿಸ್ವರೂಪಿಣಿಯಾದ ಯಾವ ದೇವಿಯಿಂದ ಈ ಸಕಲಪ್ರಾಣಿವರ್ಗವೂ ಮೋಹಿಸಲ್ಪಟ್ಟದ್ದಾಗಿ, ಶರೀರ, ಗೃಹ,

ಕೃತಸ್ನೇಹಮುದೋ ಯಾತಿ ಭೋಕ್ತುಂ ನರಕಯಾತನಾಃ ।
ಸಂಸ್ತೂಯಮಾನಾ ದೇವೌಘೈಃ ಸಾ ಪ್ರೋವಾಚ ಮಹಾಶಠಂ ॥೩೫॥

ಕಂಸಮುತ್ಕ್ರುಷ್ಟಯಾ ವಾಚಾ ಸಮಾಭಾಷ್ಯ ನರಾಧಮಂ ।
ಕಿಂ ಮಯಾ ಹತಯಾ ಮಂದ ಕಿಂ ಕಾರ್ಯಮಭವತ್ತವ ॥೩೬॥

ಯತ್ರ ಕ್ವ ಚಿತ್ಪೂರ್ವಶತ್ರುಃ ಜಾತಃ ಖಲು ತವಾಂತಕೃತ್ ।
ಇತ್ಯುಕ್ತ್ವಾಽಂತರ್ಹಿತಾ ಸದ್ಯಸ್ತತಃ ಕಂಸೋಽತಿ ವಿಸ್ಮಯಃ ॥೩೭॥

ದೇವಕೀಂ ವಸುದೇವಂ ಚ ಗತ್ವಾ ಪಾಪ ಉವಾಚ ಹ ।
ವಸುದೇವ ಮಹಾಬುದ್ಧೇ ಶೃಣು ದೇವಕಿ ಮೇ ವಚಃ ॥೩೮॥
ಸಾಧೂ ಯುವಾಂ ಸುಖಂ ದಾತು ಮುಚಿತೌ ದುಃಖಿತೌ ಮಯಾ ।

---

ಪುತ್ರ, ಕಲತ್ರ, ಕ್ಷೇತ್ರ ಮುಂತಾದ ಭೋಗ್ಯವಸ್ತುಗಳಲ್ಲಿ ಆತ್ಮೀಯಭಾವನೆಯುಳ್ಳದ್ದಾಗಿ, ದೇಹಾಂತ್ಯದಲ್ಲಿ ನರಕಯಾತನೆಯನ್ನನುಭವಿಸಲು ಪರಲೋಕವನ್ನು ಕುರಿತು ಹೋಗುವುದೋ, ಮತ್ತು ಯಾವ ದೇವಿಯು ಸದಾ ದೇವತೆಗಳಿಂದ ಸ್ತೋತ್ರ ಮಾಡಲ್ಪಡುತ್ತಿರುವಳೋ, ಮನೋಹರವಾದ ಶರೀರವನ್ನು ಧರಿಸಿರುವವಳೂ, ಆಯುಧಗಳನ್ನುಳ್ಳ ಅಷ್ಟಮಹಾಭುಜಗಳಿಂದ ಕೂಡಿರುವವಳೂ ಆದ ಆದೇವಿಯು ದಿವ್ಯರೂಪದಿಂದ ಕಾಣಿಸಿಕೊಂಡಳು. ಹೀಗೆ ದೇವಿಯ ರೂಪವನ್ನು ತಾಳಿದ ಅವಳು, ದುಷ್ಟನಾದ ಕಂಸನನ್ನು ಕುರಿತು ಹೀಗೆಂದು ಹೇಳಿದಳು. ||೩೪-೩೫||

ದೇವಿಯು, ಮನುಷ್ಯರಲ್ಲೆಲ್ಲಾ ನೀಚನಾದ ಆ ಕಂಸನನ್ನು ಕುರಿತು ಗಟ್ಟಿಯಾದ ಮಾತಿನಿಂದ ಹೀಗೆಂದು ಹೇಳಿದಳು. ಎಲೈ ಮೂಢನೇ, ನನ್ನನ್ನು ಕೊಂದುದರಿಂದ ನಿನಗೆ ಯಾವ ಪ್ರಯೋಜನವಿರುತ್ತದೆ? ಇದರಿಂದ ನಿನ್ನ ಯಾವ ಕಾರ್ಯವನ್ನು ಸಾಧಿಸಿದಂತಾಗುತ್ತದೆ? ಇದಕ್ಕೆ ಮೊದಲೇ ನಿನ್ನನ್ನು ನಾಶಮಾಡುವ ನಿನ್ನ ಶತ್ರುವು ಯಾವುದೋ ಒಂದು ಪ್ರದೇಶದಲ್ಲಿ ಜನಿಸಿರುವನು. ||೩೬||

ಹೀಗೆಂದು ಹೇಳಿ ಬಳಿಕ ಆ ದೇವಿಯು ಅಂತರ್ಧಾನವನ್ನೈದಿದಳು. ತರುವಾಯ ಕಂಸನು ಅತ್ಯಾಶ್ಚರ್ಯಯುಕ್ತನಾಗಿ, ದೇವಕೀ ವಸುದೇವರಿದ್ದಲ್ಲಿಗೆ ಹೋಗಿ ಅವರನ್ನು ಕುರಿತು ಹೀಗೆಂದು ಹೇಳಿದನು. ||೩೭||

ಅತ್ಯಂತ ಬುದ್ಧಿಶಾಲಿಯಾದ ವಸುದೇವನೇ, ಮತ್ತು ಎಲೌ ದೇವಕಿಯೇ, ನೀವು ನನ್ನ ಮಾತನ್ನು ಕೇಳಿರಿ. ಸಜ್ಜನರಾದ ನಿಮಗೆ ಸುಖವನ್ನುಂಟುಮಾಡು

ಅನೃತಂ ಕೇವಲಂ ಮರ್ತ್ಯೋ ವದೇದಿತಿ ವಿನಿಶ್ಚಯಃ ॥೩೯॥

ದೇವತಾಽಪ್ಯನೃತಂ ವಕ್ತಿ ಕಿಂ ಕರೋಮಿ ಪ್ರತಾರಿತಃ ।
ಮಹಾ ಪಾಪಸ್ಯ ಮೇ ಘೋರಾ ಭವಿತ್ರೀ ಗತಿರುಲ್ಬಣಾ ॥೪೦॥

ವಸುದೇವಾಪರಾಧೋ ಮೇ ಕ್ಷಂತವ್ಯಃ ಸಾಧುಬುದ್ಧಿನಾ ॥೪೧॥

ನ ಸಾಧುರ್ದೂಷಣಂ ಪಶ್ಯೇದ್ಗುಣದೃಷ್ಟಿರನುತ್ತಮಃ ।
ಸಾಧೂನಾಂ ಸಮಚಿತ್ತಾನಾಮಮಿತ್ರೇ ದಾಸ್ತವಿದ್ವಿಷಾಂ ॥೪೨॥
ಪ್ರಸಾದಃ ಸರ್ವದಾ ತೇಷಾಮಘಕಾರಿಷ್ವಪಿ ಸ್ಫುಟಂ ।

---

ವುದು ಉಚಿತವಾಗಿರುತ್ತದೆ. ಇದು ನನ್ನ ಕರ್ತವ್ಯವಾಗಿರುತ್ತದೆ. ಹಾಗಿದ್ದರೂ ಸಹ ನೀವು ನನ್ನಿಂದ ದುಃಖವನ್ನು ಅನುಭವಿಸುವವರಾದಿರಿ. ॥೩೮॥

ಲೋಕದಲ್ಲಿ ಮನುಷ್ಯ ಸಾಮಾನ್ಯನೂ ಸುಳ್ಳನ್ನು ಹೇಳುತ್ತಾನೆ. ಇದು ನಿಜವಾದ ವಿಷಯವಾಗಿರುತ್ತದೆ. ಸುಳ್ಳು ಹೇಳದೇ ಇರುವ ಮನುಷ್ಯನೇ ಇರುವುದಿಲ್ಲವು. ದೇವತೆಗಳೂ ಸುಳ್ಳನ್ನು ಹೇಳುತ್ತಾರೆ. ನಾನು ಆ ದೇವತೆಯ ಆ ಅಸತ್ಯವಾದ ಮಾತಿನಲ್ಲಿ ವಿಶ್ವಾಸವುಳ್ಳವನಾಗಿ ಅದರಿಂದ ವಂಚಿತನಾದೆನು. ಈಗ ಏನನ್ನು ಮಾಡಲಿ? ॥೩೯॥

ಇದುವರೆಗೆ ಮಹತ್ತರವಾದ ಪಾಪವನ್ನೆಸಗಿದ ನನಗೆ ಅತ್ಯಂತ ದಾರುಣವಾದ ಫಲಕಾಲದ ಅವಸ್ಥೆಯು ಉಂಟಾಗುವುದು. ಇದರಲ್ಲಿ ಸಂಶಯವಿಲ್ಲ. ॥೪೦॥

ಓ ವಸುದೇವನೇ, ಸದ್ಬುದ್ಧಿಯುಳ್ಳ ನೀನು ನನ್ನ ಅಪರಾಧವನ್ನು ಮನ್ನಿಸುವವನಾಗು. ಸರ್ವಶ್ರೇಷ್ಠನೂ, ಗುಣೈಕಪಕ್ಷಪಾತಿಯೂ (ಗುಣಗಳನ್ನೇ ಪರಿಗಣಿಸುವವನು) ಆದ ಸತ್ಪುರುಷನು ದೋಷವನ್ನು ಎಂದಿಗೂ ಪರಿಗಣಿಸುವುದಿಲ್ಲ. ॥೪೧॥

ಗುಣದೋಷಗಳಲ್ಲಿ ಸಮತ್ವ ಬುದ್ಧಿಯುಳ್ಳ ಎಂದರೆ, ಗುಣಶಾಲಿಯಾದವನನ್ನು ಹೊಗಳುವುದು, ಮತ್ತು ದೋಷಿಯನ್ನು ನಿಂದಿಸುವುದು ಇವೆರಡರಿಂದ ರಹಿತರಾದ, ಮತ್ತು ಶತ್ರುಗಳಲ್ಲಿಯೂ ದ್ವೇಷಭಾವನೆಯಿಲ್ಲದವರಾದ ಸತ್ಪುರುಷರಿಗೆ ನಿರಂತರವೂ ಪಾಪಕರ್ಮವನ್ನೆಸಗಿದವರಲ್ಲಿಯೂ ಸಹ ಅನುಗ್ರಹ ಬುದ್ಧಿಯೇ ಇರುವುದೆಂಬುದು ಲೋಕಪ್ರಸಿದ್ಧವಾದ ವಿಷಯವಾಗಿರುತ್ತದೆ. ॥೪೨॥

ಭಗಿನೀತ್ಥಂ ತ್ವಯಾ ದುಃಖಂ ನ ಕರ್ತವ್ಯಂ ಕದಾಚನ ॥೪೩॥

ಮೃತಾಃ ಪುತ್ರಾಸ್ತ್ವವ ಶುಭೇ ಕೋ ಲಂಘೇದಂತಕಂ ನರಃ ।
ಗರ್ಭಾವಿಷ್ಟಂ ಜಾಯಮಾನಂ ಬಾಲಂ ಯೌವನ ಸಂಸ್ಥಿತಂ ।
ವೃದ್ಧಶ್ಚ ಮಾನವಂ ಕಾಲೋ ಗ್ರಸತ್ಯೇವ ನ ಸಂಶಯಃ ॥೪೪॥

ಇತ್ಥಂ ಜ್ಞಾತ್ವಾ ನೈವ ಶೋಕಃ ಕರ್ತವ್ಯೋ ಜ್ಞಾನಿಭಿರ್ನರೈಃ ।
ಧಾತ್ರಾ ವಿನಿರ್ಮಿತಂ ಕರ್ಮಫಲಂ ಮಾರ್ಷ್ಟುಂ ಕ ಈಶ್ವರಃ ॥೪೫॥

|| ಶ್ರೀಶ್ವರ ಉವಾಚ ||

ಏವಂ ಶ್ರುತ್ವಾ ಕಂಸವಾಕ್ಯಂ ವಸುದೇವೋಽಥ ದೇವಕೀ ।
ಕಂಸಮಾಭಾಷ್ಯ ವಚನಂ ಸುಪ್ರಸನ್ನಾ ಬಭೂವತುಃ ॥೪೬॥

---

ಎಂದು ಹೇಳಿ ಬಳಿಕ ತನ್ನ ತಂಗಿಯಾದ ದೇವಕಿಯನ್ನು ಕುರಿತು ಇಂತೆಂದನು. ಎಲೌ ಸಹೋದರಿಯೇ, ನೀನು ಎಂದಿಗೂ ಈರೀತಿಯಾಗಿ ದುಃಖ ಪಡಬೇಡ. ಎಲೌ ಮಂಗಳಕರಳೇ, ನಿನ್ನ ಪುತ್ರರು ಮೃತರಾಗಿರುತ್ತಾರೆ. ಇದು ನಿಜವು. ಆದರೆ ಯಾವ ಮನುಷ್ಯನು ತಾನೇ ಮೃತ್ಯುವನ್ನು ಮೀರಲು ಸಮರ್ಥ ನಾಗುವನು ? ||೪೩||

ಗರ್ಭದಲ್ಲಿರುವವನು, ಜನಿಸಿರುವವನು, ಬಾಲಕನು, ಯುವಕನು, ವೃದ್ಧನು ಎಂಬ ಪರಿಗಣನೆಯಿಲ್ಲದೆ, ಎಲ್ಲರನ್ನೂ ಮೃತ್ಯುವು ನಾಶಮಾಡಿಯೇ ಮಾಡುತ್ತಾನೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ||೪೪||

ಹೀಗೆಂದು ತಿಳಿದು, ಜ್ಞಾನಿಗಳಾದ ಮನುಷ್ಯರಿಂದ ಎಂದಿಗೂ ಶೋಕವು ಮಾಡಲ್ಪಡತಕ್ಕುದಲ್ಲ. ಬ್ರಹ್ಮನಿಂದ ನಿಯಮಿಸಲ್ಪಟ್ಟ ಕರ್ಮಫಲವನ್ನು ನಿವಾರಿಸಲು ಯಾವನು ತಾನೇ ಸಮರ್ಥನಾಗಿರುವನು ? ||೪೫||

ಲಕ್ಷ್ಮೀಪತಿಯಾದ ಕೃಷ್ಣನು ಹೇಳಿದನು— ಕಂಸನು ಹೇಳಿದ ಮಾತನ್ನು ಕೇಳಿ, ವಸುದೇವ ದೇವಕಿಯರು, ಸಮಾಧಾನವನ್ನು ಹೊಂದಿದವರಾಗಿ ಅವನನ್ನು ಕುರಿತು ಇಂತೆಂದರು. ||೪೬||

**ಕಂಸ ನಾತ್ರಾಪರಾಧಸ್ತೇ ಯದ್ಭಾವ್ಯಮುಭವತ್ಫಲು ।**
**ತ್ವಯ್ಯೈವೋಕ್ತಂ ವಿಧಾತುರ್ಹಿ ವಿಧಾನಂ ಕೋಽತಿಲಂಘಯೇತ್॥೪೭॥**

**ಧಾತ್ರಾ ದತ್ತಂ ಕರ್ಮಫಲಂ ಭೋಕ್ತವ್ಯಂ ಸರ್ವದೇಹಿನಾಂ ।**
**ನಾನ್ಯೋಽನ್ಯದುಃಖಂ ಭುಂಕ್ತೇಽತ್ರ ಸ್ವಯಮೇವ ಹಿ ಸೃಜ್ಯತೇ॥೪೮॥**

**ವಿಚಾರ್ಯೈವಂ ಜ್ಞಾನವತಾ ಪರದೋಷೋ ನ ಮನ್ಯತೇ ।**
**ಕಂಸಸ್ತಯೋರ್ವಚಃ ಶ್ರುತ್ವಾ ತುಷ್ಟೋಽಗಚ್ಛನ್ನಿಜಾಲಯಂ ॥೪೯॥**
**ರಾಜ್ಯಾಭಿಮಾನತೋ ಜ್ಞಾನಂ ಕ್ಷಣಾನ್ನಷ್ಟಮಭೂತ್ಪುನಃ ।**

---

ಎಲೈ ಕಂಸನೇ, ಈ ವಿಷಯದಲ್ಲಿ ನಿನ್ನ ಯಾವ ಅಪರಾಧವೂ ಇರುವುದಿಲ್ಲ. ನೀನು ಹೇಳಿದಂತೆ, ಯಾವ ಕಾರ್ಯವು ಅವಶ್ಯವಾಗಿ ಆಗಲೇಬೇಕೆಂದು ದೈವ ಸಂಕಲ್ಪವಿರುವುದೋ ಅದನ್ನು ಮೀರಲು ಯಾವನುತಾನೇ ಸಮರ್ಥನು? ॥೪೭॥

ದೇಹಧಾರಿಗಳಾದ ಸಕಲ ಪ್ರಾಣಿಗಳೂ, ಬ್ರಹ್ಮನಿಂದ ನಿಯಮಿಸಲ್ಪಟ್ಟ ಕರ್ಮಫಲವನ್ನು ಉಪಭೋಗಿಸಲೇ ಬೇಕು. ಇದು ವಿಧಿನಿಯಮವು. ಲೋಕದಲ್ಲಿ ಒಬ್ಬನು ಇನ್ನೊಬ್ಬನ ದುಃಖವನ್ನು ಅನುಭವಿಸಲು ಸಮರ್ಥನಾಗಿರುವುದಿಲ್ಲ. ಏಕೆಂದರೆ ಅವನವನೇ ಮಾಡಿದ ಕರ್ಮಕ್ಕೆ ಫಲವಾದ ದುಃಖವನ್ನು ಅವನವನೇ ಅನುಭವಿಸಬೇಕೆಂಬುದು ಸ್ವಾಭಾವಿಕವಾದ ನಿಯಮವಾಗಿದೆ. ಹೀಗೆಯೇ ಮನುಷ್ಯನು ಸೃಷ್ಟಿಸಲ್ಪಟ್ಟಿರುವನು. ॥೪೮॥

ಹೀಗೆಂದು ತಿಳಿದೇ ಜ್ಞಾನಿಯಾದವನು ಪರರ ದೋಷವನ್ನು ಪರಿಗಣಿಸುವುದಿಲ್ಲ. (ಏಕೆಂದರೆ "ತೇನವಿನಾ ತೃಣಮಪಿ ನಚಲತಿ" ಎಂದಿರುವುದರಿಂದ ಒಬ್ಬನು ಮತ್ತೊಬ್ಬನಿಗೆ ದುಃಖವನ್ನಾಗಲೀ ಸುಖವನ್ನಾಗಲೀ ಉಂಟುಮಾಡಬೇಕಾದರೆ ಪರಮಾತ್ಮನ ಸಂಕಲ್ಪವಿದ್ದ ಹೊರತು ಸಾಧ್ಯವಿಲ್ಲವು. ಆದುದರಿಂದ ಅಸ್ವತಂತ್ರನಾದ ಮನುಷ್ಯನ ದೋಷವನ್ನು, ಮೇಲೆ ಹೇಳಿದ ತತ್ವವನ್ನು ತಿಳಿದ ಸತ್ಪುರುಷರು ಪರಿಗಣಿಸುವುದಿಲ್ಲ ಎಂದು ಭಾವವು.) ಅವರ ಮಾತನ್ನು ಕೇಳಿ ಕಂಸನು ಸಂತೋಷಗೊಂಡವನಾಗಿ, ತನ್ನ ಮನೆಯನ್ನು ಕುರಿತು ತೆರಳಿದನು. ಆದರೆ ಅವನಿಗೆ ಉಂಟಾದ ಆ ವಿವೇಕಜ್ಞಾನವು ರಾಜ್ಯದಲ್ಲಿರುವ ಅಭಿಮಾನದ ದೆಸೆಯಿಂದ ಕೊಂಚಕಾಲದಲ್ಲಿಯೇ ನಷ್ಟವಾಯಿತು! ॥೪೯॥

**ಕದಾಚಿಚ್ಛಯನಾರೂಢಃ ಸುಪ್ತಃ ಕಾಂತಾಸ್ತನಾಂತರೇ ॥೫೦॥**

**ಸಸ್ಮಾರ ದೇವ್ಯಾ ವಚನಂ ಬಾಲಿಕಾಯಾ ಭಯಂ ಗತಃ ।**
**ತ್ವಂ ಮಾರಯಿಷ್ಯತೇ ಮೂಢ ವೃಥೈವೋದ್ಯಮನಂ ತವ ॥೫೧॥**

**ಇತಿ ಸಂಚಿಂತ್ಯ ಮನಸಾ ಸ ವಿಚಾರಪರೋಽಭವತ್ ।**
**ಬಕೀಪತಿಶ್ಚೇದಾಯಾತಿ ಹ್ಯಘಾಸುರ ಬಕಾಸುರೌ ॥೫೨॥**

**ಆಗಚ್ಛತಸ್ತದಾ ಕಾರ್ಯಂ ವಿಚಾರ್ಯ ಸುಹಿತಂಮಿಥಃ ।**
**ಬಕೀವಧ ವಿಷಾದೇನ ತೇ ಸ್ವಪಂತಿ ವಿಮೋಹಿತಾಃ ॥೫೩॥**

**ಏವಂ ನಿಶ್ಚಿತ್ಯ ಸಂಸುಪ್ತಃ ಪುನರೇವ ಮಹಾಬಲಃ ।**
**ಏಕದಾಽಹಂ ತದುತ್ಸಂಗೇ ವರ್ತಮಾನೋ ಮಹಾಮುನೇ ॥೫೪॥**
**ಅಚಿಂತಯಂ ದರ್ಶಯಾಮಿ ನಿಜಾಂಗಸ್ಯಾತಿ ಗೌರವಂ ।**

---

ಹೀಗಿರುತ್ತಿರಲು ಒಂದಾನೊಂದು ರಾತ್ರಿಯಲ್ಲಿ, ತನ್ನ ಪ್ರಿಯತಮೆಯೊಂದಿಗೆ ಶಯನಾರೂಢನಾಗಿ ನಿದ್ರಿಸುತ್ತಿರಲು, ದೇವಿಯು ರೂಪವನ್ನು ಧರಿಸಿದ ಬಾಲಿಕೆಯು ಹಿಂದೆ ತನ್ನನ್ನು ಕುರಿತು "ಎಲೈ ಮೂಢನಾದ ಕಂಸನೇ, ನೀನು ಖಂಡಿತವಾಗಿಯೂ ಕೊಲ್ಲಲ್ಪಡುವೆ. ಆದುದರಿಂದ ಶಿಶುವಾದ ನನ್ನನ್ನು ಕೊಲ್ಲುವ ನಿನ್ನ ಪ್ರಯತ್ನವು ವ್ಯರ್ಥವಾದುದಾಗಿರುತ್ತದೆ" ಎಂದು ಹೇಳಿದ ಆ ವಚನವನ್ನು ಸ್ಮರಿಸಿದನು. ಮತ್ತು ಆದರಿಂದ ಭಯಗೊಂಡವನಾದನು. ॥೫೦-೫೧॥

ಅವನು ತನ್ನ ಮನಸ್ಸಿನಲ್ಲಿ ಹೀಗೆಂದು ಯೋಚಿಸಿ ವಿಚಾರಮಗ್ನನಾದನು. ತೃಣಾವರ್ತನು ವಧಿಸಲ್ಪಟ್ಟ ಅನಂತರದಲ್ಲಿ ಕಂಸನು ಹೀಗೆ ಆಗಾಗ್ಗೆ ಚಿಂತಿಸುತ್ತಿದ್ದನು ಎಂಬುವರ ಮುಂದಿನ ಭಾಗವಾಗಿ ಇದನ್ನು ತಿಳಿಯಬೇಕು. ಬಕಿಯ ಪತಿಯೂ ಮತ್ತು ಅಘಾಸುರ ಬಕಾಸುರರು ಇಲ್ಲಿಗೆ ಬಂದರೆ ಅವರೊಂದಿಗೆ ಆಲೋಚಿಸಿ ಹಿತವಾದುದನ್ನು ಗೊತ್ತುಮಾಡಿ ಆಚರಿಸಬೇಕು. ॥೫೨॥

ಘಟೋದರ, ಬಕ ಮತ್ತು ಅಘಾಸುರ ಈ ಮೂವರೂ ಪೂತನಿಯ ಮರಣದಿಂದುಂಟಾದ ವಿಷಾದದಿಂದ ಮುಂದೆ ಏನನ್ನು ಮಾಡಬೇಕೆಂಬುದನ್ನು ತಿಳಿಯದವರಾಗಿ ನಿದ್ರಿತರಾಗಿದ್ದಾರೆ. ॥೫೩॥

ಹೀಗೆಂದು ನಿಶ್ಚಯಿಸಿ ಅತಿದುಷ್ಟನಾದ ಅವನು ಪುನಃ ನಿದ್ರಿಸಿದನು. ಎಲೈ ನಾರದನೇ, ಒಂದಾನೊಂದು ದಿನ ನಾನು ಜನನಿಯಾದ ಯಶೋದೆಯ ತೊಡೆಯ

ಸಾ ಪಶ್ಯಂತೀ ಮಮ ಮುಖಂ ಚುಂಬಂತೀ ಚ ಪುನಃ ಪುನಃ ॥೫೫॥

ಲಾಲಯಂತೀ ವಚೋಭಿಶ್ಚ ಹಸತೋ ವದನಂ ಮಮ ।
ಯಾವಚ್ಚುಂಬಿತು ಮುದ್ಯುಕ್ತಾ ಪುನಃ ಸ್ನೇಹಭರಾಪ್ಲುತಾ ॥೫೬॥

ತಾವದ್ದದರ್ಶ ವದನೇ ಬ್ರಹ್ಮಾಂಡಮಖಿಲಂ ತತಃ ।
ಜಂಗಮಂ ಸ್ಥಾವರಂ ವಿಶ್ವಂ ಭುವನಾನಿ ಚತುರ್ದಶ ॥೫೭॥

ಸಾದ್ರಿ ದ್ವೀಪಾಬ್ಧಿಭೂಗೋಲಂ ಖಗೋಲಂ ಜ್ಯೋತಿಷಾಂ ಗಣಂ ।
ವನಾನ್ಯುಪವನಾನ್ಯೇವ ನದೀ ನಗರಸಂಘಕಾನ್ ॥೫೮॥

ದೃಷ್ಟ್ವಾ ಮಮ ಮುಖೇ ಮಾತಾ ಸದ್ಯ ಆಸೀತ್ಸುವಿಸ್ಮಿತಾ ।
ನಿಮೀಲ್ಯ ನಯನೇ ಚೈವ ಭೀತಾ ದಧ್ಯೌ ಪರಂ ಚ ಮಾಮ್ ॥೫೯॥

---

ಮೇಲೆ ಮಲಗಿದವನಾಗಿ, ನನ್ನ ದೇಹದ ಭಾರವು ಎಷ್ಟು ಪರಿಮಾಣವುಳ್ಳದ್ದಾಗಿರುವು ದೆಂಬುದನ್ನು ನನ್ನ ಜನನಿಗೆ ತೋರಿಸೋಣವೆಂದು ಯೋಚಿಸಿದೆನು. ||೫೪||

ಅವಳು ನನ್ನ ಮುಖವನ್ನು ನೋಡುತ್ತಾ, ಬಾರಿಬಾರಿಗೂ ಚುಂಬಿಸುತ್ತಾ, ಪ್ರಿಯವಾದ ಮಾತುಗಳಿಂದ ನನ್ನನ್ನು ಲಾಲಿಸುತ್ತಾ ನಾನು ನಗುವಂತೆ ಮಾಡು ತ್ತಿದ್ದಳು. ಹೀಗೆ ಚುಂಬನ ಮತ್ತು ಲಾಲನೆಗಳಿಂದ ಸಂತೋಷವನ್ನು ಹೊಂದಿ ನಗುತ್ತಿದ್ದ ನನ್ನ ಮುಖವನ್ನು ಆನಂದಾಧಿಕ್ಯದಿಂದ ಮತ್ತೊಮ್ಮೆ ಚುಂಬಿಸುವುದ ಕ್ಕೋಸ್ಕರ ಉದ್ಯುಕ್ತಳಾಗಲು ಅಷ್ಟರಲ್ಲಿಯೇ ನನ್ನ ಬಾಯಿಯಲ್ಲಿ ಸಮಸ್ತ ಬ್ರಹ್ಮಾಂಡ ವನ್ನು ನೋಡಿದವಳಾದಳು. ||೫೫-೫೬||

ಸಕಲ ಸ್ಥಾವರ ಎಂದರೆ ಕಲ್ಲು, ಮಣ್ಣು, ಗಿಡ, ಮರ, ಬಳ್ಳಿ ಮೊದಲಾದ ಚಲಿಸಲಾರದಪದಾರ್ಥಗಳೂ, ಜಂಗಮ ಎಂದರೆ ಮನುಷ್ಯ, ಮೃಗ, ಪಕ್ಷಿ ಮೊದಲಾದ ಚೇತನವಸ್ತುಗಳೂ, ಭೂಲೋಕವೇ ಮೊದಲಾದ ಹದಿನಾಲ್ಕು ಲೋಕಗಳೂ, ಅವುಗಳಲ್ಲಿರುವ ದ್ವೀಪ, ಸಮುದ್ರ, ಪರ್ವತ ಮುಂತಾದುವುಗಳಿಂದ ಕೂಡಿದ ಭೂಗೋಳವೂ, ಖಗೋಲವೂ ನಕ್ಷತ್ರ ಸಮುದಾಯವೂ ವನ ಮತ್ತು ಉಪವನಗಳೂ, ಪಟ್ಟಣಗಳೂ ಮೊದಲಾದ ಈ ಸಮಸ್ತ ಬ್ರಹ್ಮಾಂಡವೇ ನನ್ನ ಬಾಯಿಯಲ್ಲಿ ಕಾಣಿಸಿತು. ||೫೭-೫೮||

ಜನನಿಯು ಇವೆಲ್ಲವನ್ನೂ ನನ್ನ ಬಾಯಿಯಲ್ಲಿ ನೋಡಿದವಳಾಗಿ ಕೂಡಲೇ

**ಬುದ್ಧ್ವಾ ನಿಶ್ಚಿತ್ಯ ತನುಜಂ ಭಾರಾಶಕ್ತಾ ತದಾ ಜಹೌ ।**
**ಅತಃ ಪರಂ ಚ ಜಾನುಭ್ಯಾಂ ಸಪಾಣಿಭ್ಯಾಂ ಚಲನ್ನಹಮ್ ॥೬೦॥**

**ಸುಖಮತ್ಯಂತಮಗಮಮಕಥ್ಯಂ ವಚನೇನ ಹಿ ।**
**ಮಾತ್ರಾ ಮೇ ಕಿಂಕಿಣೀಜಾಲಮಾಬದ್ಧಂ ಕಟಿ ಪಾದಯೋಃ ॥೬೧॥**

**ಗಚ್ಛಂಸ್ತದ್ರವಮಾಶ್ರುತ್ಯ ಪ್ರಾದ್ರವಂ ದ್ರುತಮುದ್ಧತಂ ।**
**ತಾದೃಶಂ ಮಾಂ ಚ ಪಶ್ಯಂತ್ಯೋ ಗೋಪ್ಯೋ ಮುಮುದಿರೇ ಭೃಶಂ ॥೬೨॥**

**ಧಾವನ್ಪಾತ್ರಂ ಜಲಂ ಚಾನ್ಯ ದ್ವಸ್ತು ಜಾತಂ ಸ್ಪೃಶಾಮ್ಯಹಂ ।**
**ತತ್ರ ತತ್ರ ಜನನ್ಯಾ ಮೇ ಹಾಹಾ ಶಬ್ದ ಮುಥೋಚ್ಯತೇ ॥೬೩॥**

---

ಅತ್ಯಂತ ಆಶ್ಚರ್ಯಚಕಿತಳಾದಳು. ಮತ್ತು ಭಯಗೊಂಡು ಕಣ್ಣುಗಳನ್ನು ಮುಚ್ಚಿ, ಅತಿಮಾನುಷನಾದ ನನ್ನನ್ನು ಧ್ಯಾನಿಸಿದಳು. ॥೫೯॥

ಆ ನನ್ನ ಜನನಿಯು ಮಗನಾದ (ನನ್ನ) ಸ್ವರೂಪವನ್ನು ತಾತ್ವಿಕವಾಗಿ ನಿಶ್ಚಯಿಸಿ ನನ್ನ ದೇಹದ ಭಾರವನ್ನು ಹೊರಲು ಅಶಕ್ತಳಾಗಿ ತನ್ನ ತೊಡೆಯಿಂದ ಕೆಳಕ್ಕೆ ಇಳಿಸಿದಳು. ಬಳಿಕ ನಾನು ಕೈಗಳಿಂದಲೂ ಮತ್ತು ಕಾಲುಗಳಿಂದಲೂ ಚಲಿಸುವವನಾಗಿ ಮಾತಿನಿಂದ ಹೇಳಲಾರದ ಅನಿರ್ವಚನೀಯವಾದ ಸುಖವನ್ನು ಹೊಂದಿದೆನು. ॥೬೦॥

ಜನನಿಯು ನನ್ನ ಸೊಂಟ ಮತ್ತು ಕಾಲುಗಳಲ್ಲಿ ಗೆಜ್ಜೆಗಳನ್ನು ಕಟ್ಟಿದ್ದಳು. ನಾನು ಆ ಗೆಜ್ಜೆಗಳ ಮನೋಹರವಾದ ಶಬ್ದವನ್ನು ಕೇಳಿ ಆನಂದದಿಂದ ಓಡಾಡುತ್ತಿರಲು, ಗೆಜ್ಜೆಗಳಿಂದ ಅಲಂಕೃತನಾದ ನನ್ನನ್ನು ನೋಡಿ ಗೋಪಿಕಾಸ್ತ್ರೀಯರು ಆನಂದತುಂದಿಲರಾಗುತ್ತಿದ್ದರು. ॥೬೧-೬೨॥

ನಾನು ಓಡುವವನಾಗಿ ಮನೆಯಲ್ಲಿದ್ದ ಪಾತ್ರೆ, ನೀರು ಮತ್ತು ಇನ್ನಿತರ ಪದಾರ್ಥಗಳನ್ನು ಮುಟ್ಟುತ್ತಿದ್ದೆನು. ಆಗ ನನ್ನ ಜನನಿಯು (ಅವುಗಳಿಂದ ನನಗೆಲ್ಲಿ ಅಪಾಯ ಉಂಟಾಗುವುದೋ ಎಂಬ ಶಂಕೆಯಿಂದ) ನನ್ನನ್ನುದ್ದೇಶಿಸಿ ಹಾಹಾಕಾರ ಮಾಡುತ್ತಿದ್ದಳು. ॥೬೩॥

ಇದಂ ಚ ಸ್ಥಾಪಿತಂ ವಸ್ತು ದೇವಪೂಜಾರ್ಥಮೇವ ಹಿ ।
ಸಮಾಪ್ಯ ಪಶ್ಚಾದ್ದಾಸ್ಯಾಮಿ ತಿಷ್ಠ ಮಾ ಸ್ಪರ್ಶನಂ ಕುರು ॥೬೪॥

ಏವಂ ಮಾತುರ್ವಚಃ ಶ್ರುತ್ವಾ ನಿವೃತ್ತೋಽಪಿ ಪುನರ್ಮುನೇ ।
ತದ್ದೃಷ್ಟಿಮಂತರೇ ಣೈವ ತದ್ದ್ರವ್ಯಮಸ್ಪೃಶಂ ತಥಾ ॥೬೫॥

ಸಮಾಗತ್ಯ ವದೇನ್ಮಾತಾ ಕಿಂ ಕೃತಂ ತಾತ ತೇ ದ್ರುತಂ ।
ಮಮಾಕ್ರೋಶ ಭಯಾನ್ಮಾತಾ ನ ತಾಡಯತಿ ಮಾಂ ಕ್ವಚಿತ್ ॥೬೬॥

ಅತಿಸ್ನೇಹವತೀ ಯಸ್ಮಾದೇಕಪುತ್ರ ಪರಾಯಣಾ ।
ಮೇತಿ ವಾಕ್ಯಂ ಸ್ಫುಟಂ ವಚ್ಮಿ ಅಸ್ಪಷ್ಟಮಖಿಲಂ ಪುನಃ ॥೬೭॥
ಮಮ ವಾಕ್ಯ ವಿನೋದೈಶ್ಚ ಪಿತರೌ ಮುದಮಾಪತುಃ ।

---

ಗೃಹದಲ್ಲಿ ಇದ್ದ ವಸ್ತುಗಳನ್ನು ಸ್ಪರ್ಶಿಸುತ್ತಿದ್ದ ನನ್ನನ್ನುದ್ದೇಶಿಸಿ ನನ್ನ ಜನನಿಯು ಹೀಗೆಂದು ಸಮಾಧಾನಗೊಳಿಸುತ್ತಿದ್ದಳು. ಎಲೈ ಕಂದನೇ, ಈ ಪದಾರ್ಥಗಳು ದೇವರ ಅರ್ಚನೆಗೋಸ್ಕರ ಇಡಲ್ಪಟ್ಟಿರುತ್ತವೆ. ಆದುದರಿಂದ ದೇವರ ಪೂಜೆಯು ಮುಗಿದ ಬಳಿಕ ನಿನಗೆ ಅವುಗಳನ್ನು ಕೊಡುವೆನು. ಅದುವರೆಗೆ ಇವುಗಳನ್ನು ಸ್ಪರ್ಶಿಸದೆ ಸುಮ್ಮನಿರುವವನಾಗು. ॥೬೪॥

ಎಲೈ ನಾರದನೇ, ಜನನಿಯು ಹೇಳಿದ ಈ ಮಾತನ್ನು ಕೇಳಿ ನಾನು ನನ್ನ ಚೇಷ್ಟೆಯನ್ನು ನಿಲ್ಲಿಸಿದರೂ ಸಹ ಅವಳ ದೃಷ್ಟಿಯನ್ನು ಮರೆಮಾಚಿಸಿ, ಆ ವಸ್ತುಗಳನ್ನು ಮೊದಲಿನಂತೆಯೇ ಮುಟ್ಟುತ್ತಿದ್ದೆನು. ॥೬೫॥

ನನ್ನ ಚೇಷ್ಟೆಯನ್ನು ನೋಡಿ ಪುನಃ ಜನನಿಯು ನನ್ನ ಬಳಿಗೆ ಬಂದು ಎಲೈ ವತ್ಸನೇ, ನಾನು ನಿನಗೆ ಎಷ್ಟೆಂದು ಸಮಾಧಾನ ಪಡಿಸಿದರೂ ಪುನಃ ಅಷ್ಟರಲ್ಲಿಯೇ ಏನನ್ನು ಮಾಡಿರುವೆ ? ಎಂದು ಉದ್ಗಾರವನ್ನು ತೆಗೆಯುತ್ತಿದ್ದಳು. ಆದರೂ ನಾನು ಎಲ್ಲಿ ಅಳುವೆನೋ ಎಂಬ ಹೆದರಿಕೆಯಿಂದ ಜನನಿಯು ನನ್ನನ್ನು ಎಂದಿಗೂ ಹೊಡೆಯುತ್ತಿರಲಿಲ್ಲ. ॥೬೬॥

ಏಕೆಂದರೆ ಒಬ್ಬನೇ ಒಬ್ಬ ಮಗನನ್ನು ಪಡೆದಿರುವ ಅವಳು ನನ್ನಲ್ಲಿ ಅತ್ಯಂತ ಪ್ರೀತಿಯುಳ್ಳವಳಾಗಿದ್ದಳು. "ಮಾ" ಎಂಬ ಶಬ್ದವನ್ನು ಮಾತ್ರ ಸ್ಪಷ್ಟವಾಗಿ ಉಚ್ಚರಿಸುತ್ತಿದ್ದೆನು. (ಮಾ ಎಂದರೆ ಅಮ್ಮ ಎಂಬುದರ ಬಾಲಭಾಷೆಯ ಅನುಕರಣವು)

**ಕದಾಚಿದ್ರೋಷಮಾದಾಯ ವಿಲುಂಠಾಮಿ ಧರಾತಲೇ ॥೬೮॥**

**ಅಲ್ಪೇನ ಪ್ರತಿವಾಕ್ಯೇನ ಸುಪ್ರಸನ್ನೋ ಭವಾಮ್ಯಹಂ ।**
**ಜನನೀ ಪ್ರೀತಿಸಂಯುಕ್ತಾ ನ ತ್ಯಜತ್ಯೇವ ಮಾಂ ಕ್ವಚಿತ್ ॥೬೯॥**

**ಕೃಶಾನು ಕಂಟಕ ಫಣಿಸ್ಪರ್ಶಭೀತಾ ನಿರಂತರಂ ।**
**ಭುಂಜಾನಾ ಮಾಂ ಭೋಜಯತೇ ಪಿಬಂತೀ ಪಾಯಯತ್ಯಪಿ ॥೭೦॥**

**ಮಯ್ಯರ್ಪ್ಯ ಪೂರ್ವಂ ಸಾ ಭುಂಕ್ತೇ ಯತ್ಕಿಂಚಿತ್ಪ್ರಿಯಮಾತ್ಮನಃ ।**
**ತಥಾ ನಂದೋಽಪಿ ನೋ ಭುಂಕ್ತೇ ಮಾಂ ವಿನಾ ವಸ್ತು ಕಿಂಚನ ॥೭೧॥**

**ಸ್ವಾಭಾವಿಕೀ ತಯೋರ್ಭಕ್ತಿರಾಸೀತ್ಪ್ರೇಮಾತಿಯಂತ್ರಿತಾ ।**
**ಆಗಚ್ಛಂತಿ ಯದಾ ಗೋಪ್ಯೋ ವಿಲೋಕ್ಯ ವದನಂ ಮಮ ॥೭೨॥**
**ಪ್ರಾಪ್ನುವಂತಿ ಮುದಂ ನೂನಂ ಪಶ್ಯಂತ್ಯೋಽಪಿ ಪುನಃ ಪುನಃ ।**

---

ಇನ್ನಿತರ ಸಕಲ ಶಬ್ದಗಳನ್ನೂ ಅಸ್ಪಷ್ಟವಾಗಿ ಉಚ್ಚರಿಸುತ್ತಿದ್ದೆನು. ಆ ನನ್ನ ವಿನೋದಕರವಾದ ಮಾತುಗಳಿಂದ ಮಾತಾಪಿತೃಗಳು ಸಂತೋಷವನ್ನು ಹೊಂದುತ್ತಿದ್ದರು. ॥೬೭॥

ಕೆಲವು ಸಮಯಗಳಲ್ಲಿ ನಾನು ಸಿಟ್ಟಿನಿಂದ ನೆಲದಮೇಲೆ ಹೊರಳಾಡುತ್ತಿದ್ದೆನು. ಆದರೆ ಚಿಕ್ಕದಾದ ಒಂದು ಪ್ರೀತಿಪೂರ್ವಕಮದ ಪ್ರತಿವಚನದಿಂದ ಸಮಾಧಾನವನ್ನು ಹೊಂದುತ್ತಿದ್ದೆನು. ॥೬೯॥

ನಾನು ಎಲ್ಲಿ ಬೆಂಕಿ, ಮುಳ್ಳು, ಹಾವು ಮುಂತಾದ ವಸ್ತುಗಳನ್ನು ಮುಟ್ಟಿ ತೊಂದರೆಗೀಡಾಗುವೆನೋ ಎಂಬ ಹೆದರಿಕೆಯಿಂದ ನನ್ನ ಜನನಿಯು ಕ್ಷಣಕಾಲವೂ ನನ್ನನ್ನಗಲದೇ ಅನವರತವೂ ನನ್ನೊಂದಿಗೆ ಇರುತ್ತಿದ್ದಳು. ಅವಳು ಊಟಮಾಡುವಾಗ ನನಗೂ ಉಣಿಸುವಳು. ಕುಡಿಯುವಾಗ ನನಗೂ ಕುಡಿಸುವಳು. ॥೬೯-೭೦॥

ಜನನಿಯು ತನಗೆ ಪ್ರಿಯವಾದ ಯಾವ ವಸ್ತುವೇ ಆಗಲೀ ಅದನ್ನು ಮೊದಲು ನನಗೆ ತಿನ್ನಿಸಿ ಬಳಿಕ ತಾನು ಭುಂಜಿಸುವಳು. ಹಾಗೆಯೇ ನಂದನೂ ನನ್ನನ್ನು ಬಿಟ್ಟು ಯಾವ ವಸ್ತುವನ್ನೂ ತಿನ್ನುವುದಿಲ್ಲ. ॥೭೧॥

ಮಾತಾಪಿತೃಗಳಾದ ಯಶೋದಾ ನಂದರಿಗೆ ನನ್ನಲ್ಲಿ ಪ್ರೇಮಪಾಶದಿಂದ ಕಟ್ಟಲ್ಪಟ್ಟ ಸ್ವಭಾವಸಿದ್ಧವಾದ ಪುತ್ರವಾತ್ಸಲ್ಯವು ಇದ್ದಿತು. ಗೋಪಿಯರು ಆಗಾಗೆ

ದೃಷ್ಟ್ವಾ ಚಿರಂ ಪ್ರಗಚ್ಛಂತಿ ತಾಸಾಂ ಪಶ್ಚಾದ್ವ್ರಜಾಮ್ಯಹಂ ॥೭೩॥

ಕಿಂಕಿಣೀರವ ಮಾಶ್ರುತ್ಯ ಪಶ್ಯಂತ್ಯಾವೃತ್ಯ ಗೋಪಿಕಾಃ ।
ತದಾ ಪಲಾಯನಂ ಕೃತ್ವಾ ಮಾತುರಂಕೇ ವಿಶಾಮಿ ಚ ॥೭೪॥

ಪರೀತ್ಯ ಕೌತುಕೇನಾಲಂ ಪುನರಾಯಾಂತಿ ಗೋಪಿಕಾಃ ।
ಇತಿ ವ್ರಜೇಽನೇಕವಿಧಾಂ ಕುರ್ವನ್ ಲೀಲಾಂ ವ್ರಜೌಕಸಃ ॥೭೫॥

ಸುಖಯಾಮಿ ಮುನೇ ನಿತ್ಯಂ ಗೋಪಾನ್ಗೋಪೀಂಶ್ಚ ಗೋಕುಲೇ ।
ಅಚಿರೇಣೈವ ಕಾಲೇನ ಪದ್ಭ್ಯಾಮೇವಾಚರಂ ಪುನಃ ॥೭೬॥

ತದಾ ಚಲಸ್ವಭಾವೇನ ಗೋಪಿಕಾಗೃಹಮಾವಿಶಂ ।
ಪ್ರತಿಗೇಹಂ ಸ್ವಭಾವೇನ ಯದ್ಯತ್ಕರ್ಮ ಕೃತಂ ಮಯಾ ॥೭೭॥
ತತ್ತದ್ಗೋಪ್ಯೋ ಯಶೋದಾಯೈ ಕಥಯಂತಿ ಪುನಃ ಪುನಃ ।

---

ನನ್ನ ಮುಖವನ್ನು ನೋಡಿ ಕೂಡಲೇ ಸಮೀಪಕ್ಕೆ ಬರುವರು. ಹೀಗೆಯೇ ಪುನಃ ಪುನಃ ನನ್ನನ್ನು ನೋಡಿದರೂ ಸಹ ಆನಂದವನ್ನು ಹೊಂದುವರು. ||೭೨||

ಹೀಗೆ ಮತ್ತೊಮ್ಮೆ ನನ್ನನ್ನು ನೋಡಿ ಹಿಂತಿರುಗುವರು. ನಾನೂ ಸಹ ಅವರನ್ನು ಹಿಂಬಾಲಿಸುವೆನು. ||೭೩||

ನಾನು ಅವರನ್ನು ಅನುಸರಿಸಲು ನನ್ನ ಗೆಜ್ಜೆಗಳ ಧ್ವನಿಯನ್ನು ಕೇಳಿ ಆ ಗೋಪಿಕಾಸ್ತ್ರೀಯರು ಹಿಂತಿರುಗಿ ನನ್ನನ್ನು ನೋಡುವರು. ಆಗ ನಾನು ಓಡಿ ಬಂದು ಜನನಿಯ ತೊಡೆಯನ್ನೇರುತ್ತಿರುವೆನು. ||೭೪||

ಎಲೈ ನಾರದನೇ, ಈ ಪ್ರಕಾರವಾಗಿ ನಾನು, ಆ ಗೋಕುಲದಲ್ಲಿ ನಾನಾವಿಧ ವಾದ ಲೀಲೆಗಳನ್ನು ಪ್ರದರ್ಶಿಸುವವನಾಗಿ, ಅಲ್ಲಿದ್ದ ಗೋಪಾಲಕರನ್ನೂ ಮತ್ತು ಗೋಪಿಯರನ್ನೂ ಅನವರತವೂ ಆನಂದಗೊಳಿಸುತ್ತಿರುವೆನು. ||೭೫||

ಹೀಗಿರುತ್ತಿರಲು ಸ್ವಲ್ಪ ಕಾಲದಲ್ಲಿಯೇ ನಾನು ಕಾಲುಗಳಿಂದ ಸಂಚರಿಸಲು ಪ್ರಾರಂಭಿಸಿದೆನು. ||೭೬||

ಆಗ ಬಾಲಕರಿಗೆ ಉಚಿತವಾಗಿರುವ ಚಾಪಲ್ಯದಿಂದ ಗೋಪಿಕಾಸ್ತ್ರೀಯರ ಮನೆಗಳನ್ನು ಪ್ರವೇಶಿಸುತ್ತಿದ್ದೆನು. ಪ್ರತಿ ಮನೆಯಲ್ಲಿಯೂ ಸ್ವಾಭಾವಿಕವಾಗಿ

ಗರ್ಗೋ ಯದೂನಾಂ ಹಿ ಗುರುಃ ಪೂಜ್ಯಃ ಸರ್ವಪ್ರಭಾಮುನಿಃ॥೭೮॥

ಕದಾಚಿದ್ವಸುದೇವೇನ ಸಮಾಹೂಯ ನಿಯಂತ್ರಿತಃ ।
ಭೋಜಿತಃ ಪರಮಾನ್ನೇನ ದತ್ವಾ ತಾಂಬೂಲದಕ್ಷಿಣಾಂ ॥೭೯॥

ತುಷ್ಟಂ ಗುರುಂ ನಿರೀಕ್ಷ್ಯಾಥ ಪ್ರಾಹ ಶೌರಿಃ ಪರಂ ವಚಃ ।
ಯಥಾ ಕೃಷ್ಣಸ್ಯ ಜನನಂ ನಂದೋ ವೇತ್ತಿ ನ ಮದ್ಗೃಹೇ ॥೮೦॥

ನ ಕೋಽಪಿ ನಾಮಕರಣಂ ಮುನೇ ವೇತ್ತು ತ್ವಯಾ ಕೃತಮ್ ।
(ತಥಾ ತ್ವಯಾ ವಿಧಾತವ್ಯಂ ತತ್ರ ಗತ್ವಾ ಮಹಾಮುನೇ ।)
ತಥೈವ ತೇ ಕರಿಷ್ಯಾಮೀತ್ಯುಕ್ತ್ವಾ ಪ್ರಚಲಿತೋ ಮುನಿಃ ॥೮೧॥
ವ್ರಜಮೇತ್ಯಾಥ ನಂದಸ್ಯ ವಿವೇಶ ಭವನೋತ್ತಮಮ್ ।

---

ಯಾವ ಯಾವ ಚೇಷ್ಟೆಯನ್ನು ನಾನು ಮಾಡುವೆನೋ, ಆಯಾ ಚೇಷ್ಟೆಯನ್ನು ಗೋಪಿಯರು ಮತ್ತೆ ಮತ್ತೆ ಯಶೋದೆಗೆ ತಿಳಿಸುವರು. ॥೭೭॥

ಒಂದಾನೊಂದು ದಿವಸ ವಸುದೇವನು ಯದುವಂಶೋತ್ಪನ್ನರಾದ ಜನರಿಗೆ ಗುರುವೂ, ಪೂಜ್ಯನೂ, ಸಕಲ ಗೋಕುಲವಾಸಿಗಳ ಪ್ರಭುವೂ ಮುನಿಯೂ ಆದ ಗರ್ಗನನ್ನು ತನ್ನ ಮನೆಗೆ ಆತಿಥ್ಯಕ್ಕೋಸ್ಕರ ಆಹ್ವಾನಿಸಿ ಪರಮಾನ್ನವನ್ನು ಉಣಿಸಿ ಭೋಜನವಾದ ಬಳಿಕ ತಾಂಬೂಲ ಮತ್ತು ದಕ್ಷಿಣೆಯನ್ನು ಕೊಟ್ಟು ಪುರಸ್ಕರಿಸಿದನು. ॥೭೮-೭೯॥

ವಸುದೇವನು, ತಾನು ಮಾಡಿದ ಸತ್ಕಾರದಿಂದ ಸಂತುಷ್ಟನಾದ ಗುರುವನ್ನು ನೋಡಿ, ಉತ್ತಮವಾದ ಮಾತನ್ನು ಹೀಗೆಂದು ಹೇಳಿದನು.—ಓ ಮುನಿಯೇ, ನಂದನು ತನ್ನ ಗೃಹದಲ್ಲಿ ಕೃಷ್ಣನು ಜನಿಸಿರುವುದನ್ನು ಹೇಗೆ ತಿಳಿದಿರುವುದಿಲ್ಲವೋ ಅದರಂತೆ, ಕೃಷ್ಣನಿಗೆ ನೀನು ಮಾಡಲಿರುವ ನಾಮಕರಣವನ್ನು ಯಾರೂ ತಿಳಿಯದೇ ಇರಲಿ. ॥೮೦॥

(ನೀನು ಈಗ ಅಲ್ಲಿಗೆ ಹೋಗಿ ನಾಮಕರಣವನ್ನು ಮಾಡುವವನಾಗಿರುವೆ ಯಾದುದರಿಂದ ನಿನಗೆ ಈ ವಿಚಾರವನ್ನು ಈಗ ತಿಳಿಸಿರುವೆನು.) ಹೀಗೆಂದು ಹೇಳಿದ ವಸುದೇವನ ಮಾತನ್ನು ಕೇಳಿ ಗರ್ಗಮುನಿಯು ಹಾಗೆಯೇ ಆಗಲಿ. ನಿನ್ನ ವಚನಕ್ಕನುಸಾರವಾಗಿ ಕಾರ್ಯವನ್ನು ನೆರವೇರಿಸುತ್ತೇನೆ. ಎಂದು ಹೇಳಿದವನಾಗಿ

ನಂದೋಽಪಿ ದೂರಾತ್ತಂ ವೀಕ್ಷ್ಯ ಸರ್ವವಿದ್ಯಾ ವಿಶಾರದಮ್ ॥೮೨॥

ಸಮುತ್ಥಾಯ ತತಃ ಶೀಘ್ರಂ ನನಾಮ ಭುವಿ ದಂಡವತ್ ।
ದತ್ವಾಽಽಸನಂ ಚ ಪಾದ್ಯಾದ್ಯೈಃ ಪೂಜಯಮಾಸ ತತ್ವವಿತ್ ॥೮೩॥

ಭೋಜಿತಂ ಪರಮಾನ್ನೇನ ತಥಾಽನ್ಯ ದ್ರವ್ಯಸಂಪದಾ ।
ತಾಂಬೂಲಂ ದಕ್ಷಿಣಾಂ ದತ್ವಾ ತದೋವಾಚ ಹಿ ತಂ ಮುನಿಂ ॥೮೪॥

|| ನಂದ ಉವಾಚ ||

ಸತಾಂ ಪ್ರವೇಶಮಾತ್ರೇಣ ಶುದ್ಧ್ಯಂತಿ ಮಲಿನಾ ಇಹ ।
ದರ್ಶನೈಃ ಸ್ಪರ್ಶಸಂಲಾಪಕರಣೈಃ ಪಾಪಿನೋ ಜನಾಃ ॥೮೫॥

---

ಅಲ್ಲಿಂದ ಹೊರಟು ಗೋಕುಲದಲ್ಲಿರುವ ನಂದನ ಶ್ರೇಷ್ಠವಾದ ಮನೆಯನ್ನು ಪ್ರವೇಶ ಮಾಡಿದನು. ||೮೧||

ನಂದನು ಸಕಲ ವಿದ್ಯೆಗಳಲ್ಲಿ ನಿಪುಣನಾದ ಗರ್ಗಮುನಿಯನ್ನು ದೂರದಿಂದಲೇ ನೋಡಿ ಪ್ರತ್ಯುತ್ಥಾನಮಾಡಿ ಬಳಿಕ ಜಾಗ್ರತೆಯಾಗಿ ಭೂಮಿಯಲ್ಲಿ ದಂಡದಂತೆ ನಮಸ್ಕರಿಸದನು. ವೃದ್ಧವ್ಯವಹಾರವನ್ನು ಬಲ್ಲ ನಂದನು ಗರ್ಗಮುನಿಗೆ ಕುಳಿತು ಕೊಳ್ಳಲು ಆಸನವನ್ನು ಕೊಟ್ಟು ಆತನನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದನು. ||೮೨-೮೩||

ಮತ್ತು ಪರಮಾನ್ನವೇನು, ಇನ್ನಿತರ ಭಕ್ಷ್ಯಭೋಜ್ಯಗಳೇನು ಇವುಗಳಿಂದ ಅವನಿಗೆ ಭೋಜನವನ್ನು ಮಾಡಿಸಿ, ಭೋಜನೋತ್ತರದಲ್ಲಿ ತಾಂಬೂಲವನ್ನೂ ದಕ್ಷಿಣೆಯನ್ನೂ ಕೊಟ್ಟು ಬಳಿಕ ಮುನಿಯನ್ನು ಕುರಿತು ಹೀಗೆಂದು ಹೇಳಿದನು. ||೮೪||

ನಂದನು ಹೇಳಿದನು—ಓ ಮುನಿಯೇ, ಲೋಕದಲ್ಲಿ ಸತ್ಪುರುಷರು ಗೃಹ ವನ್ನು ಪ್ರವೇಶಿಸಿದ ಮಾತ್ರದಿಂದಲೇ ಮಲಿನವೆಂಬುದು ನಶಿಸಿ ಶುದ್ಧಿಯಾಗುತ್ತದೆ. ಮತ್ತು ಅವರ ದರ್ಶನದಿಂದಲೂ, ಸ್ಪರ್ಶದಿಂದಲೂ ಮತ್ತು ಅವರೊಂದಿಗೆ ಸಂಭಾಷಣೆ ಗಳನ್ನು ಮಾಡುವುದರಿಂದಲೂ ಪಾಪಕರ್ಮಾಸಕ್ತರಾದ ಅಜ್ಞಾನಿಗಳು ಪರಿಶುದ್ಧ ರಾಗುತ್ತಾರೆ. ||೮೫||

**ತೇಷಾಂ ಗೃಹಾಭಿಗಮನಂ ಗೃಹಸ್ಥಾನಾಂ ಶುಭೋದಯಮ್ ।**
**ಭವೇದ್ಬ್ರಹ್ಮನ್ಭಾಗ್ಯಚಯೈರನಾಹೂತಾ ವಿಶಂತಿ ಹಿ ॥೮೬॥**

**ಕೃಪಾಪರಾ ಭವಂತಶ್ಚಾಪುಣ್ಯಕರ್ಮಫಲಂ ತತಃ ।**
**ಆವಶ್ಯಕ ಕುಟುಂಬಾದಿ ಪೋಷಣಾಕುಲ ಚೇತಸಾಂ ॥೮೭॥**

**ನಾಶಯಂತಿ ಸಮಾಗತ್ಯ ತತೋಽತ್ಯಂತಂ ಸುಖಂ ಭವೇತ್ ।**
**ಗೃಹಸ್ಥಕರ್ಮ ಸಂಸಕ್ತೈರಪೂರ್ಣೈರಸ್ಮದಾದಿಭಿಃ ॥೮೮॥**

**ಕಿಂ ಪೂಜ್ಯಸೇ ಮಹಾಭಾಗ ತಥಾಽಪ್ಯಾಜ್ಞಾಪಯಸ್ವ ಮಾಮ್ ।**
**ಕರವಾಣಿ ತವಾಜ್ಞಾಂ ಕಾಂ ವದಸ್ವ ಮುನಿಸತ್ತಮ ॥೮೯॥**

---

ಅಂಥಾ ಸತ್ಪುರುಷರು ಗೃಹಸ್ಥನ ಮನೆಯನ್ನು ಕುರಿತು ಬರುವವರಾದರೆ ಆಗ ಗೃಹಸ್ಥನಿಗೆ ಪುಣ್ಯೋದಯವುಂಟಾಗುವುದು. ಏಕೆಂದರೆ ಗೃಹಸ್ಥನು ಪುಣ್ಯಶಾಲಿಯಾಗಿದ್ದರೆ ಸತ್ಪುರುಷರು ಅಭ್ಯಾಗತರಾಗಿ ಬರುತ್ತಾರೆ. ॥೮೬॥

ದಯಾಪರರಾದ ನೀವು ಗೃಹಸ್ಥರ ಅಧರ್ಮಕಾರ್ಯಗಳಿಂದ ಉಂಟಾಗುವ ದುಃಖವನ್ನು ಹೋಗಲಾಡಿಸುವವರಾಗಿರುವಿರಿ. ಗೃಹಸ್ಥರು ತಮ್ಮ ವರ್ಣಾಶ್ರಮ ಧರ್ಮವಾದ ಕುಟುಂಬ ಪೋಷಣ, ಅತಿಥಿಸತ್ಕಾರ ಮುಂತಾದ ಕರ್ಮಗಳಲ್ಲಿ ನಿರತರಾಗಿರುತ್ತಾರೆ. ಈ ರೀತಿಯಲ್ಲಿ ಕುಟುಂಬ ಪೋಷಣದಲ್ಲಿಯೇ ಆಸಕ್ತರಾಗಿರುವ ಅವರ ಅಧರ್ಮಕಾರ್ಯದಿಂದ ಸಂಭವಿಸಬಹುದಾದ ದುಃಖವನ್ನು ನೀವು ನಿಮ್ಮ ಆಗಮನದಿಂದ ನಾಶಪಡಿಸುವವರಾಗಿರುವಿರಿ. ಅದರಿಂದ ಅತ್ಯಂತ ಸುಖವು ಲಭಿಸುವುದು. ॥೮೭॥

ಓ ಮುನಿಪುಂಗವನೇ, ಕೇವಲ ಗೃಹಸ್ಥರಿಗೆ ಉಚಿತವಾದ ಕುಟುಂಬ ಪೋಷಣೆಯೇ ಮೊದಲಾದ ಕಾರ್ಯಗಳಲ್ಲಿ ಆಸಕ್ತರಾಗಿರುವ ನಮ್ಮಂತಹವರು ಪೂಜ್ಯನಾದ ನಿನ್ನನ್ನು ಸತ್ಕರಿಸಲು ಅಸಮರ್ಥರಾಗಿರುವೆವು. ಆದರೂ ಸಹ ನೀನು ಅಪ್ಪಣೆಮಾಡುವ ಯಾವ ಕೆಲಸವನ್ನಾದರೂ ಮಾಡಲು ಸಿದ್ಧನಿದ್ದೇನೆ. ಅನುಜ್ಞೆ ಅಪ್ಪಣೆಯನ್ನು ಕೊಡುವವನಾಗು. ॥೮೮-೮೯॥

ಜ್ಯೋತಿಃಶಾಸ್ತ್ರಂ ಪ್ರದೀಪಂ ಹಿ ಜನ್ಮತ್ರಯ ಪ್ರಕಾಶಕಂ ।
ಶ್ರಿಮತಾಂ ತತ್ತು ವಿದಿತಂ ಕೃತಂ ಚಾನೇಕಧಾ ಹಿ ತತ್ ॥೯೦॥

ವಸುದೇವಸ್ಯ ರೋಹಿಣ್ಯಾಂ ಜಾತಃ ಪುತ್ರೋಽತ್ರ ವರ್ತತೇ ।
ಮಮಾಪಿ ತನಯೋ ಜಾತ ಉಭಯೋಃ ಪಶ್ಯ ಜಾತಕಮ್ ॥೯೧॥

ಗರ್ಗೋಽಥ ನಂದಸ್ಯ ವಚೋ ನಿಶಮ್ಯ
ಪ್ರೋವಾಚ ಕಂಸೋಽತಿತರಾಮ ಸಾಧುಃ ।
ಕದಾಚಿದಾಶಂಕ್ಯ ನಿಪತ್ಯ ಹನ್ಯಾತ್
ಭವೇತ್ತದಾನೀ ಮನಯೋ ಮಹಾಂಶ್ಚ ॥೯೨॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯ್ಯಾಸಿಕೇ ನಾರದ ಶೌನಕ ಸಂವಾದೇ ಗರ್ಗಾಗಮನಂ ನಾಮ ಏಕವಿಂಶೋಽಧ್ಯಾಯಃ

---

ದೀಪವು ಹೇಗೆ ತನಗಿಂತಲೂ ಇತರ ಪದಾರ್ಥಗಳನ್ನು ಪ್ರಕಾಶಿಸುವುದೋ ಆದರಂತೆ ಜ್ಯೋತಿಶ್ಶಾಸ್ತ್ರವೆಂಬ ದೀಪವು ಪ್ರಾಣಿಗಳ ಭೂತಭವಿಷ್ಯದ್ವರ್ತಮಾನ ಕಾಲದ ಜನ್ಮಗಳನ್ನೂ ಪ್ರಕಾಶಿಸುವದಾಗಿರುತ್ತದೆ (ಎಂದರೆ ಯಾವ ಮನುಷ್ಯನು ಯಾವ ಜನ್ಮದಲ್ಲಿ ಯಾವ ದೇಹವನ್ನು ಧರಿಸಿದ್ದನು. ಮತ್ತು ಆ ದೇಹವನ್ನು ಧರಿಸಿದ ಅವನು ಯಾವ ಯಾವ ಧರ್ಮಾಚರಣೆಗಳನ್ನು ಆಚರಿಸಿದನು. ಎಂಬುದನ್ನು ತಿಳಿಯಪಡಿಸತಕ್ಕುದಾಗಿರುತ್ತದೆ ಎಂದು ಭಾವವು). ಆ ಶಾಸ್ತ್ರವನ್ನಾದರೋ ನೀವು ತಿಳಿದೇ ಇರುವಿರಿ. ಅದಲ್ಲದೇ ಆ ಶಾಸ್ತ್ರವನ್ನು ಅನೇಕರೀತಿಗಳಿಂದ ನೀವು ವಿಸ್ತಾರಗೊಳಿಸಿರುವಿರಿ. ॥೯೦॥

ವಸುದೇವನಿಗೆ ರೋಹಿಣಿಯಲ್ಲಿ ಪುತ್ರನು ಜನಿಸಿರುವನು. ಅವನು ಇಲ್ಲಿಯೇ ಇರುವನು. ಆದುದರಿಂದ ಅವನು ನನಗೂ ಪುತ್ರನಾಗಿರುವನು. ನನಗೂ ಸಹ ಒಬ್ಬ ಪುತ್ರನು ಉದಯಿಸಿರುವನು. ಇವರೀರ್ವರ ಜಾತಕವನ್ನೂ ಪರಿಶೀಲಿಸಿ ಫಲವನ್ನು ಹೇಳುವವರಾಗಿರಿ. ॥೯೧॥

ಗರ್ಗಮುನಿಯು ನಂದನ ಈ ಮಾತನ್ನು ಕೇಳಿ ಬಳಿಕ ಅವನನ್ನು ಕುರಿತು ಹೀಗೆಂದು ಹೇಳಿದನು. ಎಲೈ ನಂದನೇ, ಕಂಸನು ಅತ್ಯಂತ ದುಷ್ಟನಾಗಿರುವನ.

ವಸುದೇವನ ಪುತ್ರನು ಇಲ್ಲಿರುವನೆಂದು ಅನುಮಾನದಿಂದ ಇವನನ್ನು ಕೊಲ್ಲುವ ಸಂಭವವುಂಟು. ಆಗ ಇವರಿಬ್ಬರಿಗೂ ಮಹತ್ತರವಾದ ಆಪತ್ತು ಒದಗುವ ಸಂಭವ ವುಂಟು. ||೯೨||

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ನಾರದ ಶೌನಕ ಸಂವಾದದಲ್ಲಿ ಗರ್ಗಮುನಿಯ ಆಗಮನವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಸಮಾಪ್ತವಾಯಿತು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ದ್ವಾವಿಂಶೋಽಧ್ಯಾಯಃ ||

## ಇಪ್ಪತ್ತೆರಡನೆಯ ಅಧ್ಯಾಯವು

|| ನಂದ ಉವಾಚ ||

**ರಹಃಸ್ಥಿತೋ ಮಾಮಕೈಶ್ಚ ಹ್ಯಜ್ಞಾತೋಽಸ್ಮಿನ್ಗೃಹೇ ಮಮ ।**
**ಅನಯೋರ್ನಾಮಕರ್ಮಾದಿ ಕುರುಷ್ವ ಸುಸಮಾಹಿತಃ ॥೧॥**

|| ಗರ್ಗ ಉವಾಚ ||

**ಏವಂ ಚೇತ್ತರ್ಹಿ ನಿಶ್ಚಿತ್ಯ ಸಂಸ್ಕಾರಮನಯೋರ್ದ್ವಯೋಃ ।**
**ಕರೋಮಿ ಕುಲಯೋಗ್ಯಂ ವೈ ಮಾ ವಿಲಂಬಂ ವೃಥಾ ಕೃಥಾಃ ॥೨॥**

---

ನಂದನು ಹೇಳಿದನು—ಓ ಗರ್ಗಮುನಿಯೇ, ಈ ಬಾಲಕನು ನಮ್ಮ ಜನರಿಂದ ಗುಪ್ತವಾಗಿ ಇರಿಸಲ್ಪಟ್ಟು ಇತರರಿಗೆ ತಿಳಿಯದಂತೆ ಈ ಗೃಹದಲ್ಲಿ ಇರುವನು. ಸಮಾಧಾನಯುಕ್ತವಾದ ಮನಸ್ಸುಳ್ಳ ನೀನು ಈ ಈರ್ವರಿಗೂ (ಕೃಷ್ಣ, ಬಲರಾಮ) ನಾಮಕರಣವನ್ನು ಮಾಡುವವನಾಗು. ಎಂದು ಹೇಳಲು, ||೧||

ಗರ್ಗಮುನಿಯು ಹೇಳಿದನು—ಎಲೈ ನಂದನೇ, ಹೀಗಾಗಿದ್ದಲ್ಲಿ ಇವರಿಬ್ಬರಿಗೂ ನಾಮಕರಣ ಸಂಸ್ಕಾರವನ್ನು ಮಾಡಬೇಕೆಂಬುದನ್ನು ನಿಶ್ಚಯಿಸಿ ಮುಂದಿನ ಕಾರ್ಯವನ್ನು ನೆರವೇರಿಸುತ್ತೇನೆ. ನಾಮಕರಣವೆಂಬ ಈ ಸಂಸ್ಕಾರವು ನಿನ್ನ ವಂಶಪರಂಪರೆಯಿಂದ ಕ್ರಮವಾಗಿ ಮುಂದುವರಿದಿರುವುದಷ್ಟೆ! ಹಾಗೆ ಕುಲಕ್ರಮವಾಗಿ ನಡೆದುಬಂದಿರುವ ಆ ಕರ್ಮವನ್ನು ನೆರವೇರಿಸಲು ವ್ಯರ್ಥವಾಗಿ ವಿಲಂಬವನ್ನು ಮಾಡಬೇಡ. ||೨||

**ಕನ್ಯಕಾವಚನಂ ಶ್ರುತ್ವಾ ಸ್ಮೃತ್ವಾ ಬಾಲೌ ಚ ಸಂಸ್ಕೃತೌ ।**
**ಮನ್ಯತೇ ವಸುದೇವಸ್ಯ ಪುತ್ರಾವತ್ರ ವ್ರಜೇ ಸ್ಥಿತೌ ॥೩॥**

**ಆಗತ್ಯ ಕ್ರೋಧಪೂರ್ಣಶ್ಚ ಮಾರಯೇದನಯೋ ಮಹಾನ್ ।**
**ಅತೋ ರಹಸ್ಸ್ಥಿತೇ ಗೇಹೇ ಸಂಸ್ಕಾರ್ಯಾವರ್ಭಕಾವಿಮೌ ॥೪॥**

**ಪರಂ ಸುದಿನಮದ್ಯೈವ ಭವಾದ್ಯ ಕೃತಮಂಗಲಃ ।**
**ಪತ್ನ್ಯಾ ಸಹ ಸಮಾಗಚ್ಛ ಆರಭಸ್ವೋಚಿತಾಂ ಕ್ರಿಯಾಂ ॥೫॥**

॥ ಭಗವಾನುವಾಚ ॥

**ಶ್ರುತ್ವಾ ನಂದೋಽಪಿ ಗರ್ಗಸ್ಯ ವಚನಂ ಸರ್ವಮಾಚರನ್ ।**
**ರಹೋ ಯಶೋದಯಾ ಸಾರ್ಧಂ ಗರ್ಗಾಂತಿಕಮುಪಾಗಮತ್॥೬॥**

---

ಈ ಶುಭಕಾರ್ಯವು ಬಾಹ್ಯಾಡಂಬರಗಳಿಲ್ಲದೆ ಗೋಪ್ಯವಾಗಿ ನೆರವೇರಿಸಲ್ಪಡಬೇಕು. ಅದಿಲ್ಲದಿದ್ದರೆ ನೀತಿಬಾಹಿರನಾದ ಮತ್ತು ಪ್ರಭುವೆಂಬ ದುರಹಂಕಾರವುಳ್ಳ ಆ ಕಂಸನು ಈ ಬಾಲಕರ ಸಂಸ್ಕಾರವಾರ್ತೆಯನ್ನು ಕೇಳಿ, ಈ ಹಿಂದೆ ದೇವಿಯ ರೂಪವನ್ನು ಧರಿಸಿದ ಆ ಕನ್ನಿಕೆಯು ಹೇಳಿದ ವಚನವನ್ನು ಸ್ಮರಿಸಿ, ವಸುದೇವನ ಪುತ್ರರು ಈ ಗೋಕುಲದಲ್ಲಿ ವಾಸವಾಗಿರುವರು, ಎಂದು ತಿಳಿಯುವನು ಮತ್ತು ಕೋಪಗೊಂಡು ಇಲ್ಲಿಗೆ ಬಂದು ಇವರಿಬ್ಬರನ್ನೂ ಕೊಲ್ಲುವನು. ಆದುದರಿಂದ ಗುಪ್ತವಾದ ಗೃಹದಲ್ಲಿ ಈ ಇಬ್ಬರು ಬಾಲಕರ ನಾಮಕರಣಸಂಸ್ಕಾರವನ್ನು ನೆರವೇರಿಸಬೇಕು. ॥೩-೪॥

ಈ ಶುಭಕಾರ್ಯವನ್ನಾಚರಿಸಲು ಈ ದಿನವೇ ಶುಭದಿನವಾಗಿರುತ್ತದೆ. ಆದುದರಿಂದ ಈ ದಿವಸವೇ ನೀನು ಮಂಗಲಸ್ನಾನವನ್ನಾಚರಿಸಿ ಪತ್ನಿಯೊಂದಿಗೆ ಬರುವವನಾಗು ಮತ್ತು ಸಮಯೋಚಿತವಾದ ಈ ಕರ್ಮವನ್ನು ಆರಂಭಿಸು. ॥೫॥

ಶ್ರೀಕೃಷ್ಣನು ಹೇಳಿದನು--ನಂದನೂ ಸಹ ಗರ್ಗಮುನಿಯ ವಚನವನ್ನು ಕೇಳಿ ಅದರಂತೆಯೇ ಗುಪ್ತವಾಗಿ ಕರ್ಮವನ್ನು ಆಚರಿಸುವ ಮನೋಭಾವನೆಯುಳ್ಳವನಾಗಿ ಮಂಗಲಸ್ನಾನವನ್ನಾಚರಿಸಿ ಯಶೋದೆಯೊಂದಿಗೆ ಗರ್ಗಮುನಿಯ ಸಮೀಪಕ್ಕೆ ಬಂದವನಾದನು. ॥೬॥

ಗರ್ಗೋಽಪಿ ಬಾಲಕಂ ವೀಕ್ಷ್ಯ ಉವಾಚ ಪರಮಂ ವಚಃ ।
ಏತಯೋರ್ಜನ್ಮಭಂ ಸರ್ವಗುಣಯುಕ್ತಂ ಸಮೀಕ್ಷ್ಯ ಚ ॥೭॥

ಗ್ರಹಾಶ್ಚ ಶೋಭನಫಲಸೂಚಕಾಃ ಸರ್ವ ಏವ ಹಿ ।
ಅವತಾರೇ ಯಥಾ ವಿಷ್ಣೋಸ್ಸುಶುಭಗ್ರಹರಾಶಯಃ ॥೮॥

ವಿಷ್ಣುರಾತ್ಮನಿ ಸಂಲೀನಂ ವಿಶ್ವಮೀಕ್ಷ್ಯ ಸಿಸೃಕ್ಷಯಾ ।
ಸುಪ್ತ ಶಕ್ತಿಷು ಸರ್ವಾಸು ಜಗೃಹೇ ರೂಪಮೈಶ್ವರಮ್ ॥೯॥

ವೀಕ್ಷ್ಯ ಭೂಮಿಂ ಭರಾಕ್ರಾಂತಾ ಮಸುರೈರ್ನೃಪರೂಪಿಭಿಃ ।
ಸ್ತುತೋ ಬ್ರಹ್ಮಾದಿಭಿರ್ದೇವೈಃ ಸೂಕ್ತೈಃ ಪುರುಷಸಂಜ್ಞಿತೈಃ ॥೧೦॥

---

ಗರ್ಗನೂ ಸಹ ಬಾಲಕನನ್ನು ನೋಡಿ ಮತ್ತು ಇವರಿಬ್ಬರ ಸಕಲ ಶುಭ ಸೂಚಕವಾದ ಚಿಹ್ನೆಗಳಿಂದ ಯುಕ್ತವಾದ ಜನ್ಮನಕ್ಷತ್ರವನ್ನೀಕ್ಷಿಸಿ ಹೀಗೆಂದು ಶೋಭನವಾದ ವಚನವನ್ನು ನುಡಿದನು. ॥೭॥

ಈ ಬಾಲಕರ ಜಾತಕದಲ್ಲಿರುವ ಸಮಸ್ತಗ್ರಹಗಳೂ ವಿಷ್ಣುವಿನ ಅವತಾರ ಕಾಲದಲ್ಲಿ ಹೇಗೆ ಸಮಸ್ತ ಗ್ರಹಗಳೂ ಶುಭಫಲವನ್ನು ಕೊಡುವುವುಗಳಾಗಿರುವುವೋ ಅದರಂತೆಯೇ ಶುಭವಾದ ಫಲಗಳನ್ನು ಸೂಚಿಸುತ್ತಲಿವೆ. ॥೮॥

ವಿಷ್ಣುವು ಪ್ರಲಯಕಾಲದಲ್ಲಿ ಪ್ರಪಂಚವೆಲ್ಲವೂ ತನ್ನಲ್ಲಿಯೇ ಲಯಹೊಂದಿರುವುದನ್ನು ನೋಡಿ ಪುನಃ ಪ್ರಪಂಚವನ್ನು ಸೃಷ್ಟಿಸುವ ಇಚ್ಛೆಯಿಂದ ಸಕಲ ಶಕ್ತಿಗಳೂ ಲೀನವಾಗಿರಲು, ಮಾಯಾಸಂಬಂಧದಿಂದ ಕೂಡಿರುವ ತನ್ನ ರೂಪವನ್ನು ಧರಿಸಿದನು. ॥೯॥

ಪ್ರಪಂಚದ ಸೃಷ್ಟಿಯಾದ ಬಳಿಕ ಬರಬರುತ್ತಾ ಅಸುರರು ರಾಜರಾಗಿ ಆಕ್ರಮಿಸಲು ಭೂಮಿಯು ಅತ್ಯಂತ ಭಾರವನ್ನು ಹೊರುವ ಪ್ರಸಂಗವು ಒದಗಿತು. ಅದನ್ನು ನೋಡಿ ಬ್ರಹ್ಮನೇ ಮೊದಲಾದ ದೇವತೆಗಳು ವಿಷ್ಣುವಿನ ಸಮೀಪವನ್ನು ಪಡೆದು ಅವನನ್ನು ಪುರುಷಸೂಕ್ತಮಂತ್ರಗಳಿಂದ ಸ್ತುತಿಸಿದರು. ॥೧೦॥

ತದಾ ಪ್ರಸನ್ನೋ ಭಗವಾನುವಾಚಾಥ ನಭೋಗಿರಾ ।
ಭೋದೇವಾಃ ಸರ್ವಮೇ ವೈತದ್ದುಃಖಂ ಜ್ಞಾತಂ ಮಯಾ ಭುವಃ॥೧೧॥

ತದರ್ಥಂ ಯತ್ನವಾನಸ್ಮಿ ಯೂಯಂ ಶೃಣುತ ಮೇ ವಚಃ ।
ಅವತೀರ್ಣಾ ಯದೋರ್ವಂಶೇ ಭವಂತು ಸಹ ಭಾರ್ಯಯಾ ॥೧೨॥

ಅಹಮಪ್ಯಾತ್ಮನೋಽಂಶೇನ ಶೇಷೇಣ ಧರಣೀತಲೇ ।
ಅವತಾರಂ ವಿಧಾಯಾಶು ಹರಿಷ್ಯಾಮಿ ಭುವೋ ಭರಂ ॥೧೩॥

ಕೀರ್ತಿಂ ವಿತತ್ಯ ಲೋಕೇಷು ಗಮಿಷ್ಯಾಮಿ ನಿಜಂ ಪದಂ ।
ಮತ್ಕೀರ್ತೇಃ ಶ್ರವಣಂ ಕೃತ್ವಾ ನರಾಣಾಂ ಪಾಪರಾಶಯಃ ॥೧೪॥

ವಿಲಯಂ ಯಾಂತ್ಯತೋ ಲೋಕೇ ಹ್ಯವತಾರಾನ್ಕರೋಮ್ಯಹಮ್ ।
ವಿಚರಿಷ್ಯಾಮ್ಯಹಂ ಯಾವತ್ತಾವದ್ರೂಪಮುಪಸ್ಥಿತಃ ॥೧೫॥

---

ದೇವತೆಗಳು ಹೀಗೆ ಸ್ತುತಿಸಲು ವಿಷ್ಣುವು ಅವರ ಸ್ತೋತ್ರದಿಂದ ಪ್ರಸನ್ನನಾಗಿ, ಅಶರೀರವಾಣಿಯಿಂದ ಹೀಗೆಂದು ಹೇಳಿದನು. ಎಲೈ ದೇವತೆಗಳಿರಾ, ಭೂಮಿಗೆ ಪ್ರಾಪ್ತವಾಗಿರುವ ಈ ಸಕಲ ದುಃಖವನ್ನೂ ನಾನು ಬಲ್ಲೆನು. ನಾನು ಸಹ ಆ ದುಃಖವನ್ನು ಹೋಗಲಾಡಿಸಲು ಪ್ರಯತ್ನಿಸುತ್ತಿರುವೆನು. ಆದುದರಿಂದ ನಾನು ಹೇಳುವ ಮಾತನ್ನು ಕೇಳಿರಿ. ||೧೧||

ನೀವುಗಳೆಲ್ಲರೂ, ನಿಮ್ಮ ನಿಮ್ಮ ಪತ್ನಿಯರೊಂದಿಗೆ ಭೂಲೋಕದಲ್ಲಿ ಯದುವಂಶದಲ್ಲಿ ಅವತರಿಸಿರಿ. ನಾನೂ ಸಹ ನನ್ನ ಅಂಶದಿಂದಲೂ, ಶೇಷನ ಅಂಶದಿಂದಲೂ, ಭೂಲೋಕದಲ್ಲಿ ಅವತರಿಸಿ ಶೀಘ್ರವಾಗಿ ಭೂಭಾರವನ್ನು ಹೋಗಲಾಡಿಸುತ್ತೇನೆ. ||೧೩||

ಹೀಗೆ ಅವತರಿಸಿದ ನಾನು ನನ್ನ ಯಶಸ್ಸನ್ನು ವಿಸ್ತರಿಸಿ ಬಳಿಕ ನಿಜಸ್ಥಾನವನ್ನು ಕುರಿತು ತೆರಳುವೆನು. ಭೂಲೋಕದಲ್ಲಿ ನನ್ನ ಕೀರ್ತಿಯನ್ನು ಶ್ರವಣ ಮಾಡಿದರೆ ಮನುಷ್ಯನ ಪಾಪರಾಶಿಗಳೂ ನಾಶವನ್ನು ಹೊಂದುತ್ತವೆ. ಆದುದರಿಂದ ನಾನು ಭೂಲೋಕದಲ್ಲಿ ಅವತರಿಸುತ್ತೇನೆ. ನಾನು ಭೂಲೋಕದಲ್ಲಿ ಇರುವವರೆಗೂ ಮಾನುಷರೂಪವನ್ನು ಧರಿಸಿಯೇ ಇರುವೆನು. ||೧೪-೧೫||

**ಸಾ ಯೋಗಮಾಯಾ ದೇವಕ್ಯಾ ಗರ್ಭಮಾಕೃಷ್ಯ ಬಾಲಕಮ್ ।**
**ಸನ್ನಿಧಾಸ್ಯತಿ ರೋಹಿಣ್ಯಾಂ ಮಾಂ ಚ ನಂದಾಲಯೇ ಶುಭೇ ॥೧೬॥**

**ತತ್ರಾನೇಕವಿಧಾಂ ಲೀಲಾಂ ಕೃತ್ವಾ ಗೋಕುಲಮಧ್ಯಗಃ ।**
**ಪುನಶ್ಚ ಯಮುನಾವಾರಿ ಬೃಹದ್ವೃಂದಾವನಾದಿಷು ॥೧೭॥**

**ಯಾಂ ಶ್ರುತ್ವಾಽಪಿ ಮುದಂ ಗಚ್ಛೇತ್ಕಿಂ ಪುನರ್ದರ್ಶನೇನ ಹಿ ।**
**ಏವಂ ನಿಶಮ್ಯಾಥ ವಿಧಿರ್ದೇವಾನಾಹ ಪುರಃ ಸ್ಥಿತಾನ್ ॥೧೮॥**

**ದೇವಾಃ ಶೃಣುತ ವಾಕ್ಯಂ ಮೇ ಯದಾಹ ಪರಮೇಶ್ವರಃ ।**
**ಶ್ರುತ್ವಾ ಕುರುತ ತದ್ವಾಕ್ಯಂ ಜಾಯಂತಾಂ ಯಾದವೇ ಕುಲೇ ॥೧೯॥**

**ತತ್ರೈವ ಭಗವಾನ್ವಿಷ್ಣುರಂಶೇನಾವತರಿಷ್ಯತಿ ।**
**ಇತ್ಯುಪಾದಿಶ್ಯ ಧಾತಾಽಪಿ ದೇವಾನ್ಸ್ವಂ ಲೋಕಮಾಗಮತ್ ॥೨೦॥**

---

ನನ್ನ ಆ ಯೋಗಮಾಯೆಯು ದೇವಕಿಯ ಗರ್ಭದಲ್ಲಿರುವ ಬಾಲಕನನ್ನು ತೆಗೆದುಕೊಂಡುಹೋಗಿ ರೋಹಿಣಿಯ ಗರ್ಭದಲ್ಲಿಡುವಳು ಮತ್ತು ನನ್ನನ್ನೂ ಸಹ ಶೋಭನವಾದ ಆ ನಂದನ ಮನೆಯಲ್ಲಿಡುವಳು. ||೧೬||

ನಾನು ನಂದನ ಮನೆಯಲ್ಲಿದ್ದು ಗೋಕುಲದಲ್ಲಿಯೂ, ಯಮುನಾನದೀ ಮತ್ತು ಬೃಂದವನ ಮೊದಲಾದ ಸ್ಥಳಗಳಲ್ಲಿ ನನ್ನ ಬಾಲಲೀಲೆಗಳನ್ನು ಪ್ರದರ್ಶಿಸಿ ಗೋಕುಲದಲ್ಲಿ ನೆಲಸುವೆನು. ಎಲೈ ದೇವತೆಗಳಿರಾ, ಆ ನನ್ನ ಬಾಲಲೀಲೆಗಳನ್ನು ಶ್ರವಣಮಾಡಿದ ಮಾತ್ರದಿಂದಲೇ ಮನುಷ್ಯನು ಸಂತೋಷವನ್ನು ಹೊಂದುವನು. ಹೀಗಿರುವಲ್ಲಿ ನನ್ನ ದರ್ಶನವಾದಲ್ಲಿ ಹೇಳತಕ್ಕದ್ದೇನಿರುವುದು ? (ಶಾಶ್ವತವಾದ ನಿತ್ಯಾನಂದವೇ ದೊರಕುವುದು ! ಎಂದು ಭಾವವು). ವಿಷ್ಣುವಿನ ವಚನವನ್ನು ಕೇಳಿ ಬ್ರಹ್ಮನು ತನ್ನ ಮುಂಭಾಗದಲ್ಲಿರುವ ದೇವತೆಗಳನ್ನು ಕುರಿತು ಇಂತೆಂದನು. ||೧೭-೧೮||

ಎಲೈ ದೇವತೆಗಳಿರಾ, ನನ್ನ ವಚನವನ್ನು ಕೇಳಿರಿ. ಪರಮೇಶ್ವರನು ನನ್ನನ್ನು ಕುರಿತು ಯಾವ ಮಾತನ್ನು ಹೇಳಿದನೋ ಆ ವಾಕ್ಯವನ್ನು ನೀವೂ ಲಾಲಿಸಿ ಅದರಂತೆ ಯದುವಂಶದಲ್ಲಿ ಜನ್ಮವನ್ನು ತಾಳಿರಿ. ||೧೯||

ಷಡ್ಗುಣೈಶ್ವರ್ಯ ಸಂಪತ್ತಿನಿಂದ ಕೂಡಿದ ಶ್ರೀವಿಷ್ಣುವೂ ಸಹ ಆ ಯದು ವಂಶದಲ್ಲಿಯೇ ತನ್ನ ಒಂದು ಅಂಶದಿಂದ ಅವತರಿಸುವನು. ಈ ಪ್ರಕಾರವಾಗಿ

**ತತೋ ಯದುಕುಲೇ ದೇವಾಃ ಅವತೀರ್ಣಾ ವಸಂತಿ ಹಿ ।**
**ವಸುದೇವಸುತೋ ಯೋ ವೈ ಗರ್ಭಸಂಕರ್ಷಣಾದ್ಭುವಿ ॥೨೧॥**

**ಸಂಕರ್ಷಣೇತಿ ನಾಮ್ನಾ ಚ ಬಲಾಧಿಕ್ಯಾದ್ಬಲಸ್ತಥಾ ।**
**ಬಲಭದ್ರೋ ಬಲದೇವಃ ಸೀರಪಾಣಿರ್ಹಲಾಯುಧಃ ॥೨೨॥**

**ಲೋಕಾನಾಂ ರಮಣಾದ್ರಾಮಸ್ತಾಲಾಂಕೋ ಮುಸಲಾಯುಧಃ ।**
**ಬಾಲಸ್ತವಾನಂದಕರೋ ಲೋಕಾನಾಂ ಯದ್ಭವಿಷ್ಯತಿ ॥೨೩॥**

---

ದೇವತೆಗಳಿಗೆ ಉಪದೇಶವನ್ನು ಮಾಡಿ ಬ್ರಹ್ಮನೂ ಸಹ ತನ್ನ ಲೋಕವನ್ನು ಕುರಿತು ತೆರಳಿದನು. ॥೨೦॥

ಬಳಿಕ ಬ್ರಹ್ಮನ ಆಜ್ಞೆಯಮೇರೆಗೆ ದೇವತೆಗಳು ಯಾದವ ವಂಶದಲ್ಲಿ ಅವತರಿಸಿ ವಾಸಮಾಡುತ್ತಲಿರುವರು. (ನನ್ನ ಆ ಯೋಗಮಾಯೆಯು ದೇವಕಿಯ ಗರ್ಭದಿಂದ ಶಿಶುವನ್ನು ತೆಗೆದುಕೊಂಡು ಹೋಗಿ ರೋಹಿಣಿಯ ಗರ್ಭದಲ್ಲಿ ಸ್ಥಾಪಿಸುವುದು. ಎಂಬ ಅಂಶವನ್ನು ಹಿಂದೆಯೇ ತಿಳಿಸಿರುತ್ತದೆ. -- ಮಾಯೆಯು ದೇವಕಿಯ ಗರ್ಭವನ್ನು ಸಂಕರ್ಷಿಸಿ ಎಂದರೆ ಆಕರ್ಷಿಸಿ ಬೇರೆಯ ಕಡೆಯಲ್ಲಿ ಸ್ಥಾಪಿಸಿದುದರಿಂದ ಆ ಶಿಶುವಿಗೆ ಸಂಕರ್ಷಣನೆಂಬ ಹೆಸರಾಯಿತು ಎಂದು ತಿಳಿಯತಕ್ಕದ್ದು.) ವಸುದೇವಸುತನಾದ ಆ ಬಾಲಕನೇ "ಸಂಕರ್ಷಣ" ಎಂಬ ಅನ್ವರ್ಥಸಂಜ್ಞೆಯಿಂದ ಕೂಡಿದವನಾಗಿಯೂ, ಅತ್ಯಂತ ಬಲಶಾಲಿಯಾದುದರಿಂದ "ಬಲ" ಎಂಬ ಹೆಸರನ್ನು ಪಡೆದವನಾಗಿಯೂ, ಇದಲ್ಲದೆ "ಬಲಭದ್ರ" ಬಲದೇವ ಎಂಬ ಹೆಸರನ್ನು ಹೊಂದಿದವನಾಗಿಯೂ ಮತ್ತು ಸೀರಪಾಣಿ (ನೇಗಿಲನ್ನು ಧರಿಸಿರುವವನು) ಹಲಾಯುಧನು (ನೇಗಿಲನ್ನೇ ಆಯುಧವನ್ನಾಗಿ ಉಪಯೋಗಿಸುವವನು) ಎಂಬ ಹೆಸರುಳ್ಳವನೂ, ಜನರನ್ನು ಆನಂದಗೊಳಿಸುವವನಾದುದರಿಂದ ರಾಮ ಎಂಬ ಹೆಸರನ್ನು ಪಡೆದವನಾಗಿಯೂ, ತಾಲಾಂಕಃ (ತಾಳೆಯ ಮರದಂತೆ ನೇರವಾಗಿಯೂ ದೃಢವಾಗಿಯೂ ಇರುವ ತೊಡೆಗಳಿಂದ ಶೋಭಿಸುವವನು) ಮುಸಲಾಯುಧ (ಒನಕೆಯನ್ನೆ ಆಯುಧವನ್ನಾಗಿ ಉಳ್ಳವನು) ಎಂಬ ನಾನಾವಿಧವಾದ ಹೆಸರುಗಳಿಂದ ಕೂಡಿದವನಾಗಿರುತ್ತಾನೆ. ॥೨೧-೨೨॥

ಎಲೈ ನಂದನೇ, ಈ ನಿನ್ನ ಬಾಲಕನು ನಿನಗೂ ಮತ್ತು ಇನ್ನಿತರ ಬಾಲಕರಿಗೂ ಜನರಿಗೂ ಆನಂದವನ್ನುಂಟುಮಾಡುವನು. ಆದುದರಿಂದ ಈ ಬಾಲಕನು

ನಂದನಂದನ ಇತ್ಯೇಷೋಽನಂತೋಽನಂತಗುಣಾದಪಿ ।
ಹೃದಯೇ ಸರ್ವಭೂತಾನಾಂ ಪ್ರೇಮ್ಣಾ ವಸತಿ ಸರ್ವದಾ ॥೨೪॥

ವಾಸುದೇವ ಇತಿಖ್ಯಾತೋ ಭವಿಷ್ಯತಿ ನ ಸಂಶಯಃ ।
ನಾರಾಣಾಮಾಶ್ರಯತ್ವಾಚ್ಚ ನಾರಾಯಣ ಇತಿಸ್ಮೃತಃ ॥೨೫॥

ಪ್ರವೃತ್ತಿಶ್ಚ ನಿವೃತ್ತಿಶ್ಚಾಪ್ಯುಭೇ ವೈ ಕೃಷ್ಣ ಸಂಜ್ಞಿತೇ ।
ಕರ್ಷಣಾತ್ಕೃಷ್ಣನಾಮಾಽಯಂ ವಿಖ್ಯಾತೋ ವಿಷ್ಣುಸಂಜ್ಞಕಃ ॥೨೬॥

---

ನಂದ ನಂದನ (ತಂದೆಯಾದ ನಂದನನ್ನು ಆನಂದಗೊಳಿಸುವವನು.) ಎಂಬ ಹೆಸರನ್ನು ಪಡೆಯುವವನೂ, ಅನಂತ ಎಂದರೆ ಅಸಂಖ್ಯಾತವಾದ ಕಲ್ಯಾಣ ಗುಣಯುಕ್ತನಾದುದರಿಂದ "ಅನಂತ" ಎಂಬ ಹೆಸರನ್ನು ಹೊಂದುವವನೂ, ಆಗಿ ರಾಗದ್ವೇಷಗಳಿಲ್ಲದೇ ಸಕಲ ಪ್ರಾಣಿಗಳಲ್ಲಿಯೂ ಸಮಭಾವನೆಯಿಂದ ಸಕಲ ಪ್ರಾಣಿಗಳ ಹೃದಯದಲ್ಲಿಯೂ ವಾಸವಾಗಿರುವವನೂ ಆಗಿರುವುದರಿಂದಲೂ.॥೨೩-೨೪॥

ಮತ್ತು (ವಸುದೇವನ ಅಂಶದಿಂದ ಜನಿಸಿದುದರಿಂದ) "ವಾಸುದೇವ" ಎಂಬ ಹೆಸರನ್ನು ಹೊಂದಿ ಪ್ರಸಿದ್ಧನಾಗುವನು. ಮನುಷ್ಯರಿಗೆ ಆಶ್ರಯನಾದುದರಿಂದಲೂ, ನೀರಿನಮೇಲೆ ಮಲಗಿರುವುದರಿಂದಲೂ "ನಾರಾಯಣ" ಎಂಬ ಹೆಸರಿನಿಂದ ವಿಖ್ಯಾತನಾಗಿರುವನು. ಎಂದರೆ ಮುಮುಕ್ಷುಗಳಿಗೆ ಪ್ರಾಪ್ಯಸ್ಥಾನನು ಎಂದು ಒಂದು ಅರ್ಥವು. ಸಂಕಟಕ್ಕೆ ಗುರಿಯಾಗಿರುವ ಸಕಲರೂ ವಿಷ್ಣುವನ್ನು ಭಜಿಸುವುದರಿಂದ ಅವರಿಗೆ ಆಶ್ರಯನಾಗಿರುವನು. ಎಂಬುದಾಗಿ ಮತ್ತೊಂದು ಅರ್ಥವು. ॥೨೫॥

ಪ್ರವೃತ್ತಿ ಮತ್ತು ನಿವೃತ್ತಿ ಇವೆರಡೂ ಕೃಷ್ಣ ಎಂಬ ಸಂಜ್ಞೆಯನ್ನು ಹೊಂದಿರುವುವು. (ಪ್ರವೃತ್ತಿ ಎಂದರೆ ಪ್ರಾಣಿಗಳಿಗೆ ಆಯಾ ಕಾರ್ಯಗಳಲ್ಲಿ ಅವುಗಳನ್ನು ಸಾಧಿಸಬೇಕೆಂಬ ಉದ್ದೇಶದಿಂದ ಪ್ರವರ್ತಿಸುವಿಕೆ ಎಂದೂ, ನಿವೃತ್ತಿ ಎಂದರೆ ತಮಗೆ ಅನಿಷ್ಟವಾದ ಕಾರ್ಯಗಳಲ್ಲಿ ದ್ವೇಷಭಾವನೆಯಿಂದ ಪ್ರವರ್ತಿಸದೇ ಇರುವಿಕೆ. ಈ ಪ್ರವೃತ್ತಿ ಮತ್ತು ನಿವೃತ್ತಿಗಳೆಂಬ ಪ್ರಯತ್ನಗಳಿಗೆ ಪರಮಾತ್ಮನ ಅಂಶದಿಂದ ಅವತರಿಸಿದ ಶ್ರೀಕೃಷ್ಣನೇ ನಿಯಾಮಕನಾದುದರಿಂದ ಅವನಿಂದ ನಿಯಮ್ಯವಾದ ಆ ಪ್ರವೃತ್ತಿ ನಿವೃತ್ತಿಗಳೂ ಕೃಷ್ಣನೆಂಬ ಸಂಜ್ಞೆಯಿಂದ ಗೌಣವಾಗಿ ವ್ಯವಹರಿಸಲ್ಪಡುತ್ತವೆ ಎಂದರ್ಥವು) ವಿಷ್ಣುಸಂಜ್ಞೆಯುಳ್ಳ ಇವನು ಭಕ್ತರ ಕ್ಲೇಶಗಳನ್ನು ನಿವಾರಿಸುವವನಾದುದರಿಂದ "ಕೃಷ್ಣನೆಂಬ" ನಾಮಧೇಯವುಳ್ಳವನಾಗಿರುವನು. ॥೨೬॥

ಹೃಷೀಕಾಣಾಮಿಂದ್ರಿಯಾಣಾ ಮಾನಂದಕರಣಾದ್ವಿಭುಃ ।
ಹೃಷೀಕೇಶೋ ಗೋಷು ಗಚ್ಛನ್ಗೋವಿಂದ ಇತಿ ವಿಶ್ರುತಃ ॥೨೭॥

ದಾಮ ಚೈವಾತಿವಿತತ ಮುದರೇ ಯಸ್ಯ ವರ್ತತೇ ।
ದಾಮೋದರ ಇತಿಖ್ಯಾತೋ ವಿಗತಾ ಕುಂಠತಾಽಸ್ಯ ಚ ॥೨೮॥

ವಿಕುಂಠ ಏವ ವೈಕುಂಠಃ ಸರ್ವಾರ್ತಿಹರಣಾದ್ಧರಿಃ ।
ಉರುಭಿರ್ಗೀಯಮಾನಂ ಚ ಯದ್ಯಶೋಽಸ್ಯ ಭವಿಷ್ಯತಿ ॥೨೯॥

ಉರುಗಾಯ ಇತಿ ಸ್ಥಾನಾಚ್ಚ್ಯವನಾದಚ್ಯುತಾಭಿಧಃ ।
ಬಹುನಾ ಕಿಮಿಹೋಕ್ತೇನ ನಾನಾನಂತಗುಣೋ ಹ್ಯಸೌ ॥೩೦॥

ಅನಂತಕರ್ಮಾಽನಂತಶ್ರೀಸ್ತಥೈವಾನಂತರೂಪವಾನ್ ।
ನಾಮಾನ್ಯಸ್ಯ ಭವಿಷ್ಯಂತಿ ಗುಣಃ ಕರ್ಮಾಕೃತಿರ್ಯಥಾ ॥೩೧॥

---

ವ್ಯಾಪಕನಾದ ಆ ಪರಮಾತ್ಮನು ಆಯಾ ಅವತಾರವನ್ನು ಧರಿಸಿ ಜನಗಳ ಇಂದ್ರಿಯಗಳಿಗೆ ಆನಂದವನ್ನುಂಟುಮಾಡುವುದರಿಂದ ಮತ್ತು ಅವನ್ನು ನಿಯಮಿಸುವುದರಿಂದ "ಹೃಷೀಕೇಶ" ಎಂಬ ಸಂಜ್ಞೆಯುಳ್ಳವನೂ, ಗೋವುಗಳನ್ನು ಪ್ರೀತಿಸುವವನಾದುದರಿಂದ "ಗೋವಿಂದ" ಎಂಬ ಸಂಜ್ಞೆಯುಳ್ಳವನೂ ಆಗಿರುವನು. ॥೨೭॥

ಯಾವ ದೇವನ ಸೊಂಟದಲ್ಲಿ ತುಂಬ ಉದ್ದವಾದ ಉಡಿದಾರವು ಇದೆಯೋ, ಅಂತಹ ಪ್ರಭುವು ದಾಮೋದರನೆಂದು ಪ್ರಸಿದ್ಧನಾಗಿದಾನೆ. ಈ ದೇವನು ಧರ್ಮಮಾರ್ಗದಿಂದ ಯಾವಾಗಲೂ ಜಾರುವುದಿಲ್ಲವಾದುದರಿಂದ ಇವನು ವೈಕುಂಠನೆನ್ನಿಸಿರುತ್ತಾನೆ. ಹಾಗೆಯೇ ಎಲ್ಲ ಪ್ರಾಣಿಗಳ ಸಂಕಟಗಳನ್ನು ನಿವಾರಿಸುವವನಾದ ಇವನಿಗೆ ಹರಿ ಎಂದು ಹೆಸರು. ಹೀಗೆ ಬಹುಜನರಿಂದ ಇವನ ಕೀರ್ತಿಯು ಹೊಗಳಲ್ಪಡುತ್ತಿರುವುದರಿಂದ ಇವನಿಗೆ ಉರುಗಾಯ ಎಂದೂ, ಮೇಲಾದ ನೀತಿಯ ಸ್ಥಾನದಿಂದ ಇವನು ಯಾವಾಗಲೂ ತಪ್ಪುವುದಿಲ್ಲವಾದುದರಿಂದ ಇವನಿಗೆ ಅಚ್ಯುತ ಎಂದೂ, ಇವೇ ಮುಂತಾದ ಹೆಸರುಗಳಿಂದ ಪ್ರಸಿದ್ಧನಾಗಿರುತ್ತಾನೆ. ॥೨೮-೨೯॥

ಬಹಳವಾಗಿ ಹೇಳಿ ಏನು ಪ್ರಯೋಜನ? ಈ ಬಾಲಕನು ನಾನಾವಿಧವಾದ ಮತ್ತು ಅಸಂಖ್ಯಾತವಾದ ಕಲ್ಯಾಣಗುಣಗಳಿಂದ ಯುಕ್ತನಾಗಿರುವನು. ॥೩೦॥

ಅದರಂತೆಯೇ ಈ ಬಾಲಕನು ಅಸಂಖ್ಯಾತವಾದ ಕರ್ಮಗಳಿಂದಲೂ, ಗುಣಗಳಿಂದಲೂ ಮತ್ತು ಆಕಾರಗಳಿಂದಲೂ ಯುಕ್ತನಾಗಿರುವನು. ಇವನ ಗುಣ,

ಯುಗೇ ಯುಗೇಽವತಾರಸ್ಯ ತ್ರಯೋ ವರ್ಣಾ ಯುಗಾನುಗಾಃ ।
ಕೃತೇ ಶುಕ್ಲೋ ಧರ್ಮಮೂರ್ತೀ ರಕ್ತಸ್ತ್ರೇತಾಯುಗೇ ಕ್ರತುಃ ॥೩೨॥

ವಿರ(ರಿ)ಂಚಿ ಭವಮುಖ್ಯಾಶ್ಚ ಯಸ್ಯ ಮಾಯಾ ವಶೀಕೃತಾಃ ।
ಸ ಏವಾಯಂ ವಶೇ ಭಕ್ತೈಃ ಕೃತೋ ಭಕ್ತ್ಯಾ ನಿರಂತರಂ ॥೩೩॥

ತಸ್ಮಾದೀಶ್ವರ ಏವಾಸೌ ಯದಿ ತೇ ಪುತ್ರತಾಂ ಗತಃ ।
ಪರಿತ್ಯಜೇಶ್ವರ ಜ್ಞಾನಂ ಪುತ್ರಪುತ್ರೇತಿ ತಂ ಶುಭಂ ।
ಈಶ್ವರೇಚ್ಛೈವ ಭಕ್ತಾನಾಂ ಪಾಲನೀಯಾ ಪ್ರಯತ್ನತಃ ॥೩೪॥

---

ಕರ್ಮ ಮತ್ತು ಆಕೃತಿ ಇವುಗಳಿಗನುಸಾರವಾಗಿ ಇವನ ನಾಮಗಳೂ ಸಹ ಅನಂತವಾಗಿರುತ್ತವೆ. ॥೩೧॥

ಪ್ರತಿ ಯುಗದಲ್ಲಿಯೂ ಮಹಾವಿಷ್ಣುರೂಪಿಯಾದ ಇವನು ಮೂರು ವಿಧವಾದ ಬಣ್ಣಗಳಿಂದ ಯುಕ್ತನಾಗಿ ಅವತರಿಸುವನು. ಕೃತಯುಗದಲ್ಲಿ ಧರ್ಮಮೂರ್ತಿ ಎಂಬ ಸಂಜ್ಞೆಯುಳ್ಳವನಾಗಿ ಶುಕ್ಲ (ಬಿಳುಪು) ವರ್ಣದಿಂದ ಯುಕ್ತನಾಗಿಯೂ, ತ್ರೇತಾಯುಗದಲ್ಲಿ ಕ್ರತು (ಯಜ್ಞ) ಸ್ವರೂಪವುಳ್ಳವನಾಗಿ ಕೆಂಪು ವರ್ಣದಿಂದ ಯುಕ್ತನಾಗಿಯೂ ಅವತರಿಸುವನು. (ವರ್ತಮಾನದ ದ್ವಾಪರಯುಗದಲ್ಲಿ ಕೃಷ್ಣ ಸಂಜ್ಞೆಯಿಂದ ಕೃಷ್ಣ (ನೀಲವರ್ಣ) ವರ್ಣದಿಂದಲೂ ಅವತರಿಸುವನು.) ॥೩೨॥

ಬ್ರಹ್ಮಾ ಈಶ್ವರ ಮೊದಲಾದ ಪ್ರಮುಖರಾದ ದೇವತೆಗಳೂ ಯಾವ ವಿಷ್ಣುವಿನ ಮಾಯೆಗೆ ಅಧೀನರಾಗಿರುವರೋ ಅಂಥಾ ಶ್ರೀ ಮಹಾವಿಷ್ಣುವೇ ಈ ಬಾಲಕನ ಸ್ವರೂಪದಿಂದ ಅವತರಿಸಿ ತನ್ನ ಭಕ್ತರಿಂದ ಮಾಡಲ್ಪಡುವ ಭಕ್ತಿಗೆ ಮೆಚ್ಚಿ ಅವರ ವಶವರ್ತಿಯಾಗಿರುವನು. ॥೩೩॥

ಆದುದರಿಂದ ಈ ಬಾಲಕನು ಸಾಕ್ಷಾದೀಶ್ವರನೇ ಆಗಿರುವನು. ಅವನೇ ನಿನಗೆ ಪುತ್ರನಾಗಿ ತೋರುತ್ತಿರುವನು. ಆದುದರಿಂದ "ಪುತ್ರ, ಪುತ್ರ" ಎಂಬ ಶುಭವಾದ ನಾಮಧೇಯದಿಂದ ಇವನನ್ನು ವ್ಯವಹರಿಸುವುದನ್ನು ಬಿಟ್ಟು ಇವನಲ್ಲಿ ಈಶ್ವರಜ್ಞಾನವನ್ನು ಇಡುವವನಾಗು. (ಎಂದರೆ ಇವನನ್ನು ಈಶ್ವರನೆಂದೇ ತಿಳಿದುಕೋ ಎಂದು ಭಾವವು.) ಭಕ್ತರಿಗೆ ಈಶ್ವರಪ್ರಾಪ್ತಿಯಲ್ಲಿರುವ ಇಚ್ಛೆಯನ್ನು ಪ್ರಯತ್ನಪೂರ್ವಕವಾಗಿ ಪಾಲಿಸಬೇಕು. ॥೩೪॥

|| ಶ್ರೀ ಕೃಷ್ಣ ಉವಾಚ ||

**ಇತಿ ನಂದಮುಪಾದಿಶ್ಯ ಪೂಜಿತೋಽಭಿಯಯೌ ಮುನಿಃ ।**
**ನಂದೋ ಮಾಂ ಮುದಿತೋ ವಿಶ್ವಂ ಜ್ಞಾತವಾನ್ಪರಮೇಶ್ವರಂ ॥೩೫॥**

**ಮುನೌ ವಿನಿರ್ಗತೇ ನಂದ ಆತ್ಮಾನಂ ಪೂರ್ಣಮಾಶಿಷಾಂ ।**
**ಮೇನೇ ಮಯಾ ಯದ್ವಿಹಿತಂ ಶೃಣುಷ್ವ ಮುನಿಸತ್ತಮ ॥೩೬॥**

**ಯದಾ ಪ್ರಚಲಿತಃ ಪದ್ಭ್ಯಾಂ ಗೋಪಿಕಾ ಪ್ರೇಮಯಂತ್ರಿತಃ ।**
**ತಾಸಾಂ ಪ್ರತಿಗೃಹಂ ಗಚ್ಛನ್ನಾನಾಚೇಷ್ಟಾಮಚೀಕರಂ ॥೩೭॥**

**ತಾಸಾಂ ತು ಮಯ್ಯಭೂತ್ಪ್ರೇಮ ದಿನಾನುದಿನವೃದ್ಧಿಮತ್ ।**
**ನಂದಾಲಯೇ ಚ ಗಮನಂ ವಿನಾ ಕಾರ್ಯಂ ವಿನಾಽಽದರಮ್ ॥೩೮॥**

---

ಶ್ರೀ ಕೃಷ್ಣನು ಹೇಳಿದನು--ಗರ್ಗಮುನಿಯು, ನಂದನಿಗೆ ಈರೀತಿಯಲ್ಲಿ ಉಪದೇಶಮಾಡಿ ಅವನಿಂದ ಪೂಜಿಸಲ್ಪಟ್ಟವನಾಗಿ ಅಲ್ಲಿಂದ ಹೊರಟವನಾದನು. ಎಲೈ ನಾರದ ಮುನಿಯೇ, ಗರ್ಗಮುನಿಯು ನಂದನಿಗೆ ಉಪದೇಶಿಸಿ ಹೊರಟು ಹೋಗಲು, ನಂದನು ಅವನ ಉಪದೇಶದಿಂದ ಹರ್ಷಗೊಂಡವನಾಗಿ ನನ್ನನ್ನು ಪರಮೇಶ್ವರಸ್ವರೂಪನನ್ನಾಗಿ ತಿಳಿದುಕೊಂಡನು. ಮತ್ತು ತಾನು ಪರಮೇಶ್ವರನ ಅನುಗ್ರಹಕ್ಕೆ ಪಾತ್ರನಾದನೆಂದು ತಿಳಿದುಕೊಂಡನು. ಅನಂತರದಲ್ಲಿ ನನ್ನಿಂದ ಯಾವ ಕಾರ್ಯಗಳು ಮಾಡಲ್ಪಟ್ಟವೋ ಅವುಗಳನ್ನು ಕೇಳುವವನಾಗು. ||೩೫-೩೬||

ಆ ಗೋಪಿಕಾಸ್ತ್ರೀಯರ ಪ್ರೇಮಪಾಶಕ್ಕೆ ಒಳಗಾದ ನಾನು ಕಾಲುಗಳಿಂದ ಸಂಚರಿಸತೊಡಗಲು, ಗೋಪಿಯರ ಪ್ರತಿಯೊಂದು ಮನೆಗೂ ಹೋಗಿ ನಾನಾವಿಧ ವಾದ ಚೇಷ್ಟೆಗಳನ್ನು ಮಾಡಿದೆನು. ||೩೭||

ಆ ಗೋಪಿಕಾಸ್ತ್ರೀಯರಿಗೆ ದಿನದಿನಕ್ಕೂ ನನ್ನಲ್ಲಿ ಪ್ರೇಮವು ಹೆಚ್ಚುತ್ತಿತ್ತು. ಮತ್ತು ಯಾವ ಕಾರ್ಯವೂ ಇಲ್ಲದೆಯೂ ಮತ್ತು ಆಹ್ವಾನವಿಲ್ಲದೆಯೂ ಸಹ ಅವರು ಕೇವಲ ನನ್ನನ್ನು ನೋಡುವ ಉದ್ದೇಶದಿಂದಲೇ ನಂದನ ಮನೆಯನ್ನು ಕುರಿತು ಬರುತ್ತಿದ್ದರು. ||೩೮||

ನಿಧಾಯ ಭಾಂಡಮನ್ಯತ್ರ ತ್ವದಾನಯನ ಕೈತವಾತ್ ।
ಭಿತ್ವಾ ಪಾತ್ರಂ ಮಯಾ ಭುಕ್ತಂ ಗುಪ್ತಂ ದಧ್ಯಾದಿಕಂಚ ಯತ್॥೩೯॥

ಪುನಃ ಪಾತ್ರಮಭಗ್ನಂ ತದ್ದೃಷ್ಟಂ ಗೋರಸಪೂರಿತಂ ।
ನಾನಾ ಬಾಲವಿನೋದೇನ ತಾಸಾಂ ಹೃಷ್ಟಮಭೂನ್ಮನಃ ॥೪೦॥

ಯಶೋದಾ ಬಾಲರೂಪಂ ಮಾಂ ನಿಶ್ಚಿನೋತಿ ನಿರಂತರಂ ।
ಕದಾಚಿದಹಮೇ ವಾಸಾಂ ಗೃಹಂ ಗಚ್ಛಾಮಿ ನಾರದ ॥೪೧॥

ಬಾಲಕೈರ್ಗೋಪಕೈಃ ಸಾರ್ಧಂ ವಿನೋದಾಧಿಕ್ಯ ಸಿದ್ಧಯೇ ।
ಯಾ ನಾರ್ಪಯತ್ಯಹಂ ತಸ್ಯಾ ಬಲಾದಪ್ಯದ್ಮಿ ಗೋರಸಂ ॥೪೨॥
ಭಕ್ತಾ ಮಹ್ಯಂ ಪ್ರಯಚ್ಛಂತಿ ಭಕ್ತೇ ಭೋಗಂ ದದಾಮ್ಯತಿ ।

---

ಯಾವುದೋ ಪದಾರ್ಥವನ್ನು ತರುವ ವ್ಯಾಜದಿಂದ ನಾನು ಭಾಂಡ(ಮಡಕೆ)ವನ್ನು ನಿಯಮಿತ ಸ್ಥಳದಿಂದ ಬೇರೆಯ ಸ್ಥಳದಲ್ಲಿಟ್ಟು ಮೊಸರಿನ ಪಾತ್ರೆಯನ್ನು ಒಡೆದು ಆ ಪಾತ್ರೆಯಲ್ಲಿದ್ದ ಮೊಸರು, ಹಾಲು ಮತ್ತು ಬೆಣ್ಣೆ ಮುಂತಾದುವುಗಳನ್ನು ಗುಟ್ಟಿನಲ್ಲಿ ತಿನ್ನುತ್ತಿದ್ದೆನು. ||೩೯||

ಆದರೂ ಸಹ ಗೋಪಿಯರು ಬಂದು ನೋಡಲು ಆ ಪಾತ್ರೆಯು ಒಡೆಯದೇ ಹಾಲು ಮೊಸರುಗಳಿಂದ ತುಂಬಿರುವುದನ್ನು ನೋಡಿ ಅದ್ಭುತವಾದ ನನ್ನ ಬಾಲ್ಯ ಚೇಷ್ಟೆಗಳಿಂದ ಗೋಪಿಯರ ಮನಸ್ಸು ಹರ್ಷಪೂರಿತವಾಗುತ್ತಿತ್ತು. ||೪೦||

ಯಶೋದೆಯು ನನ್ನನ್ನು ಸಾಮಾನ್ಯ ಬಾಲಕನನ್ನಾಗಿಯೇ ತಿಳಿದುಕೊಂಡಿದ್ದಳು. ಎಂದರೆ ತಿಳಿವಳಿಕೆಯಿಲ್ಲದಿರುವ ಬಾಲಕರು ಅದ್ಭುತವಾದ ಚೇಷ್ಟೆಗಳನ್ನು ಮಾಡಲಾರರು. ಆದರಂತೆಯೇ ನಾನೂ ಸಹ ತಿಳಿವಳಿಕೆ ಇಲ್ಲದವನೆಂದೂ, ಅಂತಹ ಅದ್ಭುತವಾದ ಚೇಷ್ಟೆಗಳನ್ನು ಮಾಡಲಾರೆನೆಂದೂ ಅವಳು ತಿಳಿಯುತ್ತಿದ್ದಳು. ಎಲೈ ನಾರದನೇ, ಆಗಿಂದಾಗ್ಯೆ ವಿನೋದಗಳನ್ನು ಹೆಚ್ಚಿಸಬೇಕೆಂಬ ಉದ್ದೇಶದಿಂದ ಗೋಪಬಾಲಕರೊಂದಿಗೆ ಆಟವಾಡುವುದಕ್ಕೋಸ್ಕರ ನಾನೇ ಗೋಪಿಯರ ಮನೆಯನ್ನು ಕುರಿತು ತೆರಳುತ್ತಿದ್ದೆನು. ||೪೧||

ಯಾವ ಗೋಪಿಯು ನನಗೆ ಹಾಲು ಮೊಸರುಗಳನ್ನು ಅರ್ಪಿಸುವುದಿಲ್ಲವೋ ಅವಳ ಹಾಲು ಮೊಸರು ಬೆಣ್ಣೆ ಮುಂತಾದುವುಗಳನ್ನು ಬಲಾತ್ಕಾರದಿಂದ ಭಕ್ಷಿಸು

ಪೂರ್ವಂ ನಿವೇದಿತಂ ಭಕ್ತೈರ್ದೇಹಾಗಾರ ಸುತಾದಿಕಂ ॥೪೩॥

ತೇಷಾಂ ಯತ್ಕಿಂಚಿದಸ್ತೀಹ ಧನಂ ಮೇ ತನ್ನ ಚಾನ್ಯಥಾ ।
ವ್ರಜೇ ಬಾಲ ವಿನೋದೇನ ಸರ್ವಂ ಗೃಹ್ಣಾಮಿ ತದ್ವಸು ॥೪೪॥

ಮೋಹಶೋಕೌ ಕ್ರೋಧಲೋಭೌ ಕ್ರೂರತ್ವಂ ಮದಮತ್ಸರೌ ।
ನ ಸಂತಿ ಮಮ ಭಕ್ತಾನಾಮತೋ ಮೋದೋ ವ್ರಜೌಕಸಾಂ ॥೪೫॥

ಶಿಕ್ಯಸ್ಥಿತಂ ಸಮಾಲೋಕ್ಯ ಗೋರಸಂ ತಜ್ಜಿಘೃಕ್ಷಯಾ ।
ಪೀಠೋಲೂಖಲಮಾಶ್ರಿತ್ಯ ತದಾರುಹ್ಯ ಮಯಾ ಹೃತಂ ॥೪೬॥

---

ತ್ತಿದ್ದೆನು. ಭಕ್ತರಾದವರು ನನಗೆ ಕ್ಷೀರಾದಿಗಳನ್ನು ಅರ್ಪಿಸುವರು. ಅವರಿಗೆ ನಾನು ಅತ್ಯಂತ ಸುಖವನ್ನುಂಟುಮಾಡುತ್ತೇನೆ. ॥೪೨॥

ನನ್ನ ಭಕ್ತರು ಹಿಂದಿನ ಜನ್ಮದಲ್ಲಿ ಅವರ ಶರೀರ, ಪುತ್ರ, ಕಳತ್ರಾದಿ ಸಂಪತ್ತುಗಳನ್ನು ನನ್ನಲ್ಲಿಯೇ ಅರ್ಪಿಸಿ ಅನವರತವೂ ನನ್ನ ಸೇವೆಯಲ್ಲಿಯೇ ನಿರತರಾಗಿದ್ದರು. ಈ ಜನ್ಮದಲ್ಲಿ ಆ ನನ್ನ ಭಕ್ತರಿಗೆ ಯಾವ ವಿಧವಾದ ಸಂಪತ್ತು ಇದ್ದರೂ ಅದು ನನ್ನದೇ ಆಗಿರುತ್ತದೆ. (ಎಂದರೆ ಪೂರ್ವಜನ್ಮದಲ್ಲಿ ಅವರು ತಮ್ಮ ಸಂಪತ್ತನ್ನು ನನ್ನಲ್ಲಿ ಅರ್ಪಿಸಿದುದರಿಂದ ಈ ಜನ್ಮದಲ್ಲಿ ನಾನು ಅವರಿಗೆ ಸಕಲ ಸೌಭಾಗ್ಯಗಳನ್ನೂ ದಯಪಾಲಿಸುವೆನು ಎಂದರ್ಥವು.) ॥೪೩॥

ಗೋಕುಲದಲ್ಲಿ ಬಾಲಲೀಲೆಗಳನ್ನು ಪ್ರದರ್ಶಿಸುವುದರ ಮೂಲಕ ನನ್ನ ಭಕ್ತರು ನನಗೆ ಸಮರ್ಪಿಸುವ ಎಲ್ಲ ಸಂಪತ್ತುಗಳನ್ನೂ ನಾನು ಸ್ವೀಕರಿಸುವೆನು. ॥೪೪॥

ನನ್ನ ಭಕ್ತರಿಗೆ ಮೋಹ, ಶೋಕ, ಕ್ರೋಧ, ಲೋಭ, ಕ್ರೌರ್ಯ, ಮದ, ಮಾತ್ಸರ್ಯ ಇವುಗಳು ಇರುವುದಿಲ್ಲ. ಆದುದರಿಂದಲೇ ನನ್ನ ಭಕ್ತರಾದ ಈ ಗೋಕುಲವಾಸಿಗಳು ಸದಾ ಸಂತೋಷವುಳ್ಳವರಾಗಿರುತ್ತಾರೆ. ॥೪೫॥

ನಾನು, ನೆಲುವಿನಲ್ಲಿದ್ದ ಮೊಸರನ್ನು ನೋಡಿ ಅದನ್ನು ಕುಡಿಯುವ ಅಪೇಕ್ಷೆಯಿಂದ ಪೀಠ (ಮೇಲ್ಭಾಗದಲ್ಲಿರುವ ವಸ್ತುವನ್ನು ತೆಗೆದುಕೊಳ್ಳಲು ನೆಲದ ಮೇಲೆ ಎತ್ತರವಾದ ಪದಾರ್ಥವನ್ನಿಟ್ಟು ಅದರ ಮೇಲೇರಿ ವಸ್ತುವನ್ನು ತೆಗೆದುಕೊಳ್ಳುವರು. ಮೇಲೇರಲು ಸಾಧನವಾದ ಪದಾರ್ಥ) ಒರಳುಕಲ್ಲು ಕಾಲುಮಣೆ ಇವುಗಳ ಆಧಾರದಿಂದ ಮೇಲೇರಿ, ಹಾಲು, ಮೊಸರು ಮೊದಲಾದುವುಗಳನ್ನು ಅಪಹರಿಸುತ್ತಿದ್ದೆನು. ॥೪೬॥

**ಭುಕ್ತಂ ಕಿಂಚಿತ್ತಥಾ ದತ್ತಂ ಬಾಲಕೇಭ್ಯಸ್ತದೇವ ಚ**
**ಶೇಷಂ ನಿಕ್ಷಿಪ್ಯ ಭೂಮೌ ವಾಽಗಮಂ ತತ್ರ ಗೃಹಾದ್ಗೃಹಂ ೪೭॥**

**ಗೃಹೇಶ್ವರೀ ಗೃಹಸ್ಥೋ ವಾ ಪ್ರವಿಶ್ಯಾಲೋಕ್ಯ ಚೇಷ್ಟಿತಮ್ ।**
**ಭಗ್ನಂ ಕ್ಷಿಪ್ತಂ ಹೃತಂ ದ್ರವ್ಯಂ ದೃಷ್ಟ್ವಾ ಸಂಕ್ರೋಶತೇ ಭೃಶಮ್ ॥೪೮॥**

**ಕೇನ ಮೇಽಪಹೃತಂ ದ್ರವ್ಯಂ ದಧಿ ದುಗ್ಧಾದಿಕಂ ಸಖಿ ।**
**ಸಮೀಪಸ್ಥಾ ವದತ್ಯೇಷಾ ನಂದ ಪುತ್ರೋ ಗತೋಽಧುನಾ ॥೪೯॥**

**ಆಗತಃ ಸಖಿಭಿಃ ಸಾರ್ಧಂ ಬಾಲಕೈಶ್ಚ ಸಮನ್ವಿತಃ ।**
**ಭುಕ್ತ್ವಾ ಪೀತ್ವಾಽಥ ದತ್ವಾ ಚ ಗತೋ ನೂನಂ ವಿಲೋಕ್ಯತೇ ॥೫೦॥**

---

ಅದರಲ್ಲಿ ಸ್ವಲ್ಪ ಭಾಗವನ್ನು ನಾನು ತಿನ್ನುತ್ತಿದ್ದೆನು. ಇನ್ನೂ ಸ್ವಲ್ಪ ಭಾಗವನ್ನು ನನ್ನ ಸಂಗಡಿಗರಾದ ಮಕ್ಕಳಿಗೆ ಕೊಡುತ್ತಿದ್ದೆನು. ಮತ್ತು ಉಳಿದು ದನ್ನು ಭೂಮಿಯಲ್ಲಿ ಚೆಲ್ಲುತ್ತಿದ್ದೆನು. ಹೀಗೆ ಮನೆಯಿಂದ ಮನೆಗೆ ಹೋಗು ತ್ತಿದ್ದೆನು. ||೪೭||

ಮನೆಯ ಯಜಮಾನಿಯಾಗಲೀ ಅಥವಾ ಯಜಮಾನನಾಗಲೀ ಮನೆಯನ್ನು ಪ್ರವೇಶಿಸಿ ನನ್ನ ಚೇಷ್ಟೆಯನ್ನು ನೋಡಿದರೆ, ಎಂದರೆ ಒಡೆದುಹೋಗಿರುವ ಮಡಕೆ ಚೆಲ್ಲಿರುವ ಹಾಲು ಮೊಸರು ಬೆಣ್ಣೆ ಮುಂತಾದುವುಗಳನ್ನೂ ನೋಡಿ ಕೋಪಗೊಂಡು ಹೀಗೆಂದು ಕೂಗಾಡುವರು. ||೪೮||

ಎಲೌ ಸಖಿಯೇ, ನನ್ನ ಹಾಲು, ಮೊಸರು, ಬೆಣ್ಣೆ ಮೊದಲಾದುವುಗಳನ್ನು ಯಾರು ಅಪಹರಿಸಿದರು ? ಎಂದು ಮನೆಯ ಯಜಮಾನಿಯು ಕೇಳಲು ಹತ್ತಿರದ ಲ್ಲಿದ್ದ ಆ ಸಖಿಯು ನಂದನ ಮಗನಾದ ಕೃಷ್ಣನು ಈ ಮಾರ್ಗದಿಂದಲೇ ಈಗತಾನೇ ಹೋದನು ! ಎಂದು ಉತ್ತರವೀಯುವಳು. ||೪೯||

ನಂದಪುತ್ರನಾದ ಕೃಷ್ಣನು ತನ್ನ ಸ್ನೇಹಿತರಾದ ಬಾಲಕರೊಂದಿಗೆ ಇಲ್ಲಿಗೆ ಬಂದು ಬೆಣ್ಣೆಯನ್ನು ತಿಂದು ಹಾಲು ಮೊಸರುಗಳನ್ನು ಕುಡಿದು ತನ್ನ ಗೆಳೆಯರಿಗೂ ಕೊಟ್ಟು ಬಳಿಕ ಇಲ್ಲಿಂದ ಹೊರಟುಹೋಗಿರುವನೆಂದು ತೋರುತ್ತದೆ. ||೫೦||

**ವಕ್ತುಂ ಸಮುದ್ಯತಾಽಹಂ ತ್ವಾ ಕೇನಚಿನ್ಮುದ್ರಿತಂ ಮುಖಮ್ ।**
**ಇತಿ ವಾರ್ತಾ(ಂ) ವದಂತೀಂ ತಾಂ ಸಮೀಪಸ್ಥಾಂ ಸಖೀಂ ತು ಸಾ॥೫೧॥**

**ಗೃಹೀತ್ವಾ ದರ್ಶಯಾಮಾಸ ಗೋಪಿಕಾ ನಿಜಮಂದಿರಮ್ ।**
**ಯಾವದ್ವಿಶತಿ ಸಾ ದ್ರಷ್ಟುಂ ಕೃಷ್ಣಪ್ರಭವ ಚೇಷ್ಟಿತಂ ॥೫೨॥**

**ತಾವತ್ತಸ್ಯಾ ಗೃಹಂ ಗತ್ವಾ ತಥೈವಾಚರಿತಂ ಮಯಾ ।**
**ಪುನರಾಗತ್ಯ ಸಾ ಗೇಹಮಾತ್ಮನಸ್ತತ್ರ ಚಾಖಿಲಂ ॥೫೩॥**

**ಮಯ್ಯೈವಾಪಹೃತಂ ದ್ರವ್ಯಂ ವೀಕ್ಷ್ಯ ಗೋಪೀ ಸುವಿಸ್ಮಿತಾ ;**
**ತದಾಽಽಕ್ರೋಶಂ ಕೃತವತೀ ಕೇನಾಗತ್ಯ ಕೃತಂ ತ್ವಿದಂ ॥೫೪॥**

**ಅಧುನೈವ ಗತಾ ಗೇಹಾದನ್ಯಸ್ಯಾ ಗೃಹಮೀಕ್ಷಿತುಂ ।**
**ಮಮ ಗೇಹೇಽಖಿಲಃ ಕೇನ ನಾಶಿತೋ ಭಾಂಡಗೋರಸಃ ॥೫೫॥**

---

ಈ ವಿಷಯವನ್ನು ನಾನು ನಿನಗೆ ತಿಳಿಸಬೇಕೆಂದು ಇದ್ದೆನು. ಆದರೆ ಯಾವ ಕಾರಣದಿಂದಲೋ ಬಾಯಿಯು ಬಿಗಿಹಿಡಿದಂತಾಯಿತು. ಗೃಹಿಣಿಯು ಸಮೀಪದಲ್ಲಿ ನಿಂತು ಆ ಸಖಿಯು ಹೀಗೆಂದು ಹೇಳಲು ಒಬ್ಬಾನೊಬ್ಬ ಗೋಪಿಕಾಸ್ತ್ರೀಯು ಅವಳನ್ನು ಕರೆದೊಯ್ದು ತನ್ನ ಗೃಹವನ್ನು ತೋರಿಸಿದಳು. ॥೫೧॥

ಅವಳು ಕೃಷ್ಣನ ಚೇಷ್ಟೆಯನ್ನು ನೋಡಲು ಮನೆಯನ್ನು ಪ್ರವೇಶಿಸುವುದರೊಳಗಾಗಿಯೇ ನಾನು ಅವಳ ಮನೆಗೆ ಹೋಗಿ ಅವಳ ಮನಸ್ಸಿನಲ್ಲಿದ್ದಂತೆಯೇ ಚೇಷ್ಟೆಯನ್ನು ಮಾಡಿರುತ್ತಿದ್ದೆನು. ॥೫೨॥

ಬಳಿಕ ಅವಳು ತನ್ನ ಮನೆಗೆ ಹಿಂತಿರುಗಿ ಬರಲು, ನಾನೇ ಅವಳ ಮನೆಯಲ್ಲಿದ್ದ ಎಲ್ಲಾ ವಸ್ತುಗಳನ್ನೂ ಅಪಹರಿಸಿದೆನೆಂದು ಆಶ್ಚರ್ಯಪಟ್ಟವಳಾಗಿ "ಯಾರು ಇಲ್ಲಿಗೆ ಬಂದು ಈ ಕಾರ್ಯವನ್ನು ಮಾಡಿದರು ?" ಎಂದು ಕೂಗಾಡುತ್ತಿದ್ದಳು. ॥೫೩-೫೪॥

ಈಗತಾನೇ ಇನ್ನೊಬ್ಬ ಗೋಪಿಕಾಸ್ತ್ರೀಯ ಮನೆಯನ್ನು ನೋಡಲು ಹೋಗಿದ್ದೆನು. ಆದರೆ ಇಷ್ಟರಲ್ಲಿಯೇ ನನ್ನ ಮಡಕೆಯಲ್ಲಿದ್ದ ಹಾಲು, ಮೊಸರನ್ನು ಯಾರು ಅಪಹರಿಸಿರುವರು ? ಎಂದು ಕೂಗಾಡುತ್ತಿದ್ದಳು. ॥೫೫॥

**ಕುಂಡೋಪಧೃತ ಪಾತ್ರಾಣಿ ವಿಕ್ರೇತುಂ ಸಂವ್ರಜಾಮ್ಯಹಂ ।**
**ಗೃಹೇ ಗೃಹೇ ಸಮಾಕ್ರೋಶಃ ಕೃತಃ ಸ್ತ್ರೀಭಿಃ ಪರಸ್ಪರಂ ॥೫೬॥**

**ತತ ಏವಾಥ ತಾಃ ಸರ್ವಾ ಮಾತರಂ ವಕ್ತುಮುದ್ಯತಾಃ ।**
**ಅಭಿಜಗ್ಮುಸ್ತತಃ ಸರ್ವಾ ಯಶೋದಾಯೈ ನಿವೇದಿತುಂ ॥೫೭॥**

**ವೀಕ್ಷಿತುಂ ಮುಖಪದ್ಮಂ ಮೇ ಕರ್ಮ ಚಾತ್ಯಂತ ಮದ್ಭುತಮ್ ।**
**ಆಗತ್ಯೋಚುರ್ಯಶೋದಾಯೈ ಮತ್ಕರ್ಮ ಬಲಸೂಚಕಮ್ ॥೫೮॥**

॥ ಗೋಪ್ಯ ಊಚುಃ ॥

**ಹೇ ಯಶೋದೇ ಮಹಾಭಾಗೇ ನಂದಪತ್ನಿ ವರಾನನೇ ।**
**ಶೃಣು ಪುತ್ರಕೃತಂ ಕರ್ಮ ಯದಸ್ಮಾಭಿರ್ನಿಗದ್ಯತೇ ॥೫೯॥**

**ತ್ವದ್ಗೃಹೇ ಶಿಶುರೇವಾಯಂ ಸಾಧುವತ್ಸ ವಿದೃಶ್ಯತೇ ।**
**ಯತ್ಕರೋತ್ಯಾತ್ಮಜೋಽಯಂ ತೇ ಕೋಽಪಿ ವಕ್ತುಂ ನತತ್ಕ್ಷಮಃ॥೬೦॥**

---

ನಾನು ಹಾಲು ಮೊಸರುಗಳಿಂದ ತುಂಬಿದ ಪಾತ್ರೆಗಳನ್ನೇ ತೆಗೆದುಕೊಂಡು ಹೋಗುವೆನು. ನಾನು ಈರೀತಿಯಲ್ಲಿ ಉಪಟಳವನ್ನು ಕೊಡಲು ಪ್ರತಿಯೊಂದು ಮನೆಯಲ್ಲಿಯೂ ಸ್ತ್ರೀಯರು ಮಾತನಾಡಿಕೊಳ್ಳುತ್ತಿದ್ದರು. ಬಳಿಕ ಅವರೆಲ್ಲರೂ ನನ್ನ ಜನನಿಯಾದ ಯಶೋದೆಯ ಬಳಿಗೆ ಹೋಗಲು ಉದ್ಯುಕ್ತರಾಗಿ ತರುವಾಯ ನನ್ನ ಈ ಉಪಟಳವನ್ನು ಯಶೋದೆಗೆ ತಿಳಿಸಲು ಹೋದರು. ॥೫೬-೫೭॥

ಅವರು ನನ್ನ ಪ್ರಸನ್ನವಾದ ಮುಖಕಮಲವನ್ನೂ ಮತ್ತು ನನ್ನ ಅತ್ಯದ್ಭುತವಾದ ಚೇಷ್ಟೆಯನ್ನೂ ನೋಡಲು ಬಂದು ಶಕ್ತಿಸೂಚಕವಾದ ನನ್ನ ಚೇಷ್ಟೆಯನ್ನು ಯಶೋದೆಗೆ ತಿಳಿಸಿದರು. ॥೫೮॥

ಎಲೌ ಪೂಜ್ಯಳೇ, ನಂದನ ಗೃಹಿಣಿಯೂ, ಶೋಭನವಾದ ಮುಖವುಳ್ಳವಳೂ ಆದ ಯಶೋದೆಯೇ, ನಿನ್ನ ಪುತ್ರನಾದ ಕೃಷ್ಣನ ಚೇಷ್ಟೆಗಳನ್ನು ನಾವು ಹೇಳುತ್ತೇವೆ. ಕೇಳುವವಳಾಗು. ॥೫೯॥

ನಿನ್ನ ಮನೆಯಲ್ಲಿ ಈ ಬಾಲಕನು ಸಾಧುವಾಗಿಯೇ ಇರುವನು. ಎಂದರೆ ಶಿಶುವಿನಂತೆಯೇ ನಟಿಸುವನು. ಮತ್ತು ಏನೂ ತಿಳಿಯದವನಂತೆ ಸಾಧುವಾಗಿಯೇ

**ಪ್ರವಿಶಂತಂ ನ ಪಶ್ಯಾಮಃ ಕದಾ ಪ್ರವಿಶತಿ ಹ್ಯಸೌ ।**
**ಪ್ರವಿಶ್ಯ ಭುಂಕ್ತೇ ದಧ್ಯಾದಿ ಭೋಜಯತ್ಯನ್ಯಬಾಲಕಾನ್ ॥೬೦॥**

**ರಿಕ್ತಪಾತ್ರಮಥಾಕ್ಷಿಪ್ಯ ಭೂಮೌ ಯಾತಿ ನಿರಂತರಂ ।**
**ಕುತ್ರಾಪಿ ದೃಶ್ಯತೇ ನೈವ ಪಶ್ಚಾದನ್ಯೇ ವದಂತಿ ಹಿ ॥೬೨॥**

**ಯದಾ ಕಿಂಚಿನ್ನ ಲಭತೇ ರೋದಯಿತ್ವಾಽಥ ಬಾಲಕಾನ್ ।**
**ವಿಧಾಯ ವಿಪುಲಂ ಕ್ಲೇಶಂ ಯಾತಿ ಶೀಘ್ರಮಲಕ್ಷಿತಃ ॥೬೩॥**

**ಉಪಾಯಾನಖಿಲಾನ್ವೇತ್ತಿ ಚೌರವೃತ್ತ್ಯಾ ಚ ಶಂಕಿತಃ ।**
**ಉಚ್ಚೈಃ ಸಂವೀಕ್ಷ್ಯ ಪೀಠಾದ್ಯೈರ್ವಿರಚಯ್ಯ ವಿಧಿಂ ಸ್ವಯಂ ॥೬೪॥**
**ಆರುಹ್ಯ ವಯಸ್ಯಾಂಸೇ ಗೃಹ್ಣಾತಿ ದ್ರವ್ಯಭಾಜನಂ ।**

---

ಇರುವನು. ಆದರೆ ನಿನ್ನ ಪುತ್ರನು ಮಾಡುವ ಚೇಷ್ಟೆಯನ್ನು ಹೇಳಲು ಯಾವನೂ ಸಮರ್ಥನಾಗಿರುವುದಿಲ್ಲ. ॥೬೦॥

ಇವನು ಯಾವ ಸಮಯದಲ್ಲಿ ಮನೆಯನ್ನು ಪ್ರವೇಶಿಸುವನೋ ಅದನ್ನು ನಾವು ತಿಳಿಯಲಾರದವರಾಗಿದ್ದೇವೆ. ಮನೆಯನ್ನು ಪ್ರವೇಶಿಸುವಾಗ ಇವನನ್ನು ನಾವು ನೋಡುವುದಿಲ್ಲ. ಆದರೆ ಮನೆಯನ್ನು ಪ್ರವೇಶಿಸಿ ಹಾಲು, ಮೊಸರು ಮುಂತಾದುವುಗಳನ್ನು ತಾನೂ ಭುಜಿಸುವನು ಮತ್ತು ಸಂಗಡಿಗರಾದ ಬಾಲಕರಿಗೂ ತಿನ್ನಿಸುವನು. ॥೬೧॥

ಒಳಿಕ ಬರಿದಾದ ಪಾತ್ರೆಯನ್ನು ನೆಲದಮೇಲಿಟ್ಟು ಹೊರಟುಹೋಗುವನು. ಹೀಗೆ ಹೊರಗೆ ಹೊರಟುಹೋದ ಅವನು ಎಲ್ಲಿಯೂ ಕಾಣಿಸಲ್ಪಡುವುದಿಲ್ಲ. ತರುವಾಯ ಇತರರು ಅವನು ಇರುವ ಸ್ಥಳವನ್ನು ಮತ್ತು ಮಾಡಿರುವ ಕೆಲಸಗಳನ್ನು ತಿಳಿಸುವರು. ॥೬೨॥

ಯಾವ ವಸ್ತುವೂ ಕೈಗೆ ಸಿಗದಿರಲು ಮಕ್ಕಳನ್ನು ಅಳಿಸಿ ಅವರನ್ನು ಅತ್ಯಂತವಾಗಿ ಪೀಡಿಸಿ ಶೀಘ್ರವಾಗಿ ಕಣ್ಮರೆಯಾಗುತ್ತಿದ್ದನು. ॥೬೩॥

ಬೇರೆಯವರು ತನ್ನನ್ನು ಕಳ್ಳನೆಂದು ತಿಳಿದುಕೊಂಡಿರುವರು ಎಂಬುದನ್ನು ಅವನು ತಿಳಿದರೆ, ತಾನು ಕಳ್ಳನಲ್ಲವೆಂದು ತಿಳಿಸಿಕೊಳ್ಳಲು ಬೇಕಾದ ಉಪಾಯಗಳೆಲ್ಲವನ್ನೂ ತಿಳಿದಿರುವನು. ಬಹಳ ಎತ್ತರದಲ್ಲಿರುವ ಭಾಂಡಗಳನ್ನು ನೋಡಿ ಅವುಗಳನ್ನು ತೆಗೆದುಕೊಳ್ಳಲು ಸ್ವತಃ ತಾನೇ ಪೀಠವನ್ನು ರಚಿಸುವನು. ತನಗಿಂತಲೂ ವಯಸ್ಕ

ವಿಭಜ್ಯ ವಾನರೇಭ್ಯೋಽಥ ಬಾಲೇಭ್ಯಃ ಸ್ವಯಮತ್ತಿ ಚ ॥೬೫॥

ಆರುಹ್ಯ ಗೋಪಕಸ್ಯಾಂಸೇ ಭಿತ್ವಾ ಭಾಂಡಂ ಪ್ರಯಾತ್ಯಸೌ ।
ಯದಾಕ್ರೋಶನಮತ್ಯುಚ್ಚೈಃ ಕುರ್ಮಃ ಸ ಹಸತಿ ಸ್ಫುಟಮ್ ।
ಅದ್ಯ ಬಾಲತನುರ್ಮಾತಃ ಕಿಮಗ್ರೇಽಸೌ ಕರಿಷ್ಯತಿ ॥೬೬॥

ಗೋಪೀಷ್ವೇವಂ ವದಂತೀಷು ಶೃಣ್ವಂತ್ಯಾಂ ಮಮ ಮಾತರಿ ।
ನ ವದಾಮಿ ನ ಪಶ್ಯಾಮಿ ಯಶೋದಾ ಭಯ ಶಂಕಿತಃ ॥೬೭॥

ಗೋಪೀನಾಂ ವಚನಂ ಶ್ರುತ್ವಾ ಯಶೋದಾ ಕಿಂ ವದೇದಿತಿ ।
ಅಧೋ ದೃಷ್ಟ್ಯಾ ಪ್ರಪಶ್ಯಾಮಿ ಪುನರ್ವಾಚೋ ವದಂತಿ ತಾಃ ॥೬೮॥

---

ರಾದ ಬಾಲಕರ ಹೆಗಲನ್ನೇರಿ ಮೇಲಿರುವ ಭಾಂಡಾದಿಗಳನ್ನು ತೆಗೆದುಕೊಳ್ಳುವನು. ॥೬೪॥

ಬಳಿಕ ಹಾಲು ಮೊಸರುಗಳನ್ನು ವಿಭಾಗಮಾಡಿ ಕಪಿಗಳಂತಿರುವ ಬಾಲಕರಿಗೆ ಕೊಟ್ಟು ತಾನೂ ತಿನ್ನುವನು. ॥೬೫॥

ಇವನು ಗೋಪಾಲಕರ ಹೆಗಲನ್ನೇರಿ ಮೊಸರಿನ ಗಡಿಗೆಯನ್ನು ಒಡೆದ ಶಬ್ದವನ್ನು ಕೇಳಿ ನಾವು ಗಟ್ಟಿಯಾಗಿ ಕೂಗಾಡಲು ಅವನು ಗಟ್ಟಿಯಾಗಿ ನಗುವನು. ಎಲೌ ತಾಯಿಯೇ, ಈಗ ಚಿಕ್ಕವನಾಗಿಯೇ ಇರುವ ಇವನು ಇಷ್ಟು ಚೇಷ್ಟೆಯನ್ನು ಮಾಡುತ್ತಿರುವನು ! ಮುಂದೆ ದೊಡ್ಡವನಾದಮೇಲೆ ಏನನ್ನು ಮಾಡುವನೋ? ॥೬೬॥

ಗೋಪಿಯರು ಹೀಗೆಂದು ಹೇಳಲು ಆ ಮಾತುಗಳನ್ನು ನನ್ನ ತಾಯಿಯೂ ಕೇಳುತ್ತಿರಲು, ಜನನಿಯಾದ ಯಶೋದೆಯು ಎಲ್ಲಿ ನನ್ನನ್ನು ಬಯ್ಯುವಳೋ ಅಥವಾ ಹೊಡೆಯುವಳೋ ಎಂಬ ಹೆದರಿಕೆಯಿಂದ ನಾನು ಏನನ್ನೂ ಮಾತನಾಡುತ್ತಿರಲಿಲ್ಲ. ಮತ್ತು ಕತ್ತನ್ನೆತ್ತಿ ಅತ್ತಿತ್ತ ನೋಡುತ್ತಿರಲಿಲ್ಲ. ॥೬೭॥

ಗೋಪಿಯರ ಮಾತನ್ನು ಕೇಳಿ ಯಶೋದೆಯು ಏನನ್ನು ಹೇಳುವಳೋ ಎಂದು ಹೆದರಿದವನಾಗಿ ಕೆಳಕ್ಕೆ ದೃಷ್ಟಿಯಿಟ್ಟು ನೋಡುವೆನು. ಹೀಗಿರಲು ಆ ಸ್ತ್ರೀಯರು ಪುನಃ ಯಶೋದೆಯನ್ನು ಕುರಿತು ಹೀಗೆಂದು ಹೇಳುವರು. ॥೬೮॥

ಲಿಪ್ತೇಷು ಚಿತ್ರಿತೇಷ್ವೇವ ಭವನೇಷು ತವಾತ್ಮಜಃ ।
ಕರೋತಿ ಮೇಽನ್ಯಥಾ ಯಾತಿ ನಾನಾ ಭೀತ್ಯಾ ಪ್ರತರ್ಜನೈಃ ॥೬೯॥

ಬಾಲಕಾನ್ಪ್ರೇಷ್ಯ ಪಾತ್ರಾಣಿ ಚಾಸ್ಫೋಟಯತಿ ಕುತ್ರಚಿತ್ ।
ಏವಂ ಪ್ರಕುರುತೇ ಪ್ರಾತಃ ಪ್ರತ್ಯಹಂ ತು ತವಾತ್ಮಜಃ ॥೭೦॥

ಕಿಂ ಕುರ್ಮಃ ಕುತ್ರ ಗಚ್ಛಾಮೋ ಯಶೋದೇ ವಾರಯಾತ್ಮಜಂ ।
ಇತಿ ಶ್ರುತ್ವಾ ಯಶೋದಾ ಚ ಪ್ರಾಹ ಗೋಪೀಃ ಸಮಂತತಃ ॥೭೧॥

ಅಹೋ ಮೇಽದ್ಭುತಮಾಭಾತಿ ಹ್ಯೇತಾಸಾಂ ವಚನೇ ಧ್ರುವಂ ।
ಗೃಹೇ ಭವತಿ ಬಾಲೋಽಸೌ ನ ಕುತ್ರಾಪಿ ಚ ಗಚ್ಛತಿ ॥೭೨॥

---

ಎಲೌ ಯಶೋದೆಯೇ, ನಿನ್ನ ಪುತ್ರನು ಚಿತ್ರಗಳಿಂದ ಯುಕ್ತವಾಗಿಯೂ ಮತ್ತು ಸುಣ್ಣ ಬಣ್ಣ ಮುಂತಾದುವುಗಳಿಂದ ಲೇಪಿಸಲ್ಪಟ್ಟವುಗಳಾಗಿಯೂ ಇರುವ ನಮ್ಮ ಮನೆಗಳಲ್ಲಿಯೇ ಕೊಳೆಯನ್ನು ಉಂಟುಮಾಡುತ್ತಾನೆ. ಬಳಿಕ ನಾವು ಹೆದರಿಸಲು ಮತ್ತು ಕೂಗಾಡಲು ಅಲ್ಲಿಂದ ತೆರಳುವನು. ॥೬೯॥

ಮಕ್ಕಳನ್ನು ಬೇರೆಯ ಕಡೆಗೆ ಕಳುಹಿಸಿ ಪಾತ್ರೆಗಳನ್ನು ಒಡೆದು ಹಾಕುವನು. ಇದೇ ರೀತಿಯಲ್ಲಿ ಪ್ರತಿದಿನದಲ್ಲೂ ಪ್ರಾತಃಕಾಲಗಳಲ್ಲಿ ನಿನ್ನ ಮಗನು ಹೀಗೆ ಚೇಷ್ಟೆಯನ್ನು ಮಾಡುವನು. ॥೭೦॥

ಎಲೌ ಯಶೋದೆಯೇ, ಅಶಕ್ತರಾದ ನಾವು ಏನನ್ನು ಮಾಡೋಣ? ಎಲ್ಲಿಗೆ ಹೋಗೋಣ? ಆದುದರಿಂದ ನಿನ್ನ ಮಗನನ್ನು ಈ ಚೇಷ್ಟೆಗಳಿಂದ ನಿರೋಧಿಸುವವಳಾಗು. ಇದನ್ನು ಕೇಳಿ ಯಶೋದೆಯು ತನ್ನ ಸುತ್ತಲೂ ನಿಂತಿರುವ ಗೋಪಿಯರನ್ನು ಕುರಿತು ಹೀಗೆಂದು ಹೇಳಿದಳು. ॥೭೧॥

ಆಹಹಾ! ನನಗೆ ಇವರ ಮಾತುಗಳಲ್ಲಿ ನಿಜವಾಗಿಯೂ ಆಶ್ಚರ್ಯವು ತೋರುವುದು. ಏಕೆಂದರೆ ಈ ಬಾಲಕನು ನಿರಂತರವೂ ಮನೆಯಲ್ಲಿಯೇ ಇರುತ್ತಾನೆ. ಎಲ್ಲಿಗೂ ಹೋಗುವುದೇ ಇಲ್ಲ! ॥೭೨॥

ಹಾ ವಿಭೀತೋ ನ ನ್ವೈ ಯಾತಿ ಪರಗೇಹಂ ಪುನಃ ಕುತಃ ।
ಪ್ರಾತಃ ಕೇನ ಕ್ರಮೇಣಾಸೌ ಯೂಯಂ ವಿಭ್ರಾಂತ ಬುದ್ಧಯಃ॥೭೩॥

ಭವತೀನಾಂ ಮನೋ ಯಾದೃಕ್ತಥಾ ಬಾಲೇ ನಿಗದ್ಯತೇ ।
ವೃಥಾ ಪರಾಪರಾಧೇನ ಕೋ ಲಾಭೋ ವಾ ಭವಿಷ್ಯತಿ ॥೭೪॥

ಯುಷ್ಮಾಕಮಾಶೀರ್ವಚನೈರ್ಬಾಲಕಃ ಸಮಭೂನ್ಮಮ ।
ವರ್ಧ್ಯೋಽಮೋಘಾಭಿರಾಶೀರ್ಭಿರ್ನ ಚಾಕ್ರೋಶ್ಯಃ ಕದಾಚನ॥೭೫॥

ಆಕ್ರೋಶವಾಕ್ಯೇ ಮಮ ಚೇನ್ಮನೋಽತೀವ ಭಯಾಕುಲಮ್ ।
ಕಿಂ ಪುನಶ್ಚಾಸ್ಯ ಬಾಲಸ್ಯ ಸ್ವಭಾವಾತ್ಸೌಮ್ಯರೂಪಿಣಃ ॥೭೬॥

---

ಆಹಾ ಈ ಬಾಲಕನು ಮನೆಯನ್ನು ಬಿಟ್ಟು ಹೊರಗೆ ಹೋಗಲು ಬಹಳ ಹೆದರುವನು. ಹೀಗಿರುವಲ್ಲಿ ಇವನು ಪ್ರಾತಃಕಾಲದಲ್ಲಿ ಹೇಗೆತಾನೆ ಪರರ ಮನೆಯನ್ನು ಕುರಿತು ಹೋಗುವನು ? ಆದುದರಿಂದ ನೀವು ಭ್ರಾಂತರಾಗಿರುವಿರಿ! ||೭೩||

ನಿಮಗೆ ಈ ಬಾಲಕನಲ್ಲಿ ಮತ್ಸರವಿರುವುದರಿಂದ ನಿಮ್ಮ ಮನೋ ಭಾವನೆ ಗನುಸಾರವಾಗಿ ನೀವು ಈ ಬಾಲಕನ ವಿಷಯದಲ್ಲಿ ಸುಳ್ಳನ್ನು ಹೇಳುತ್ತಿರುವಿರಿ. ನಿಷ್ಕಾರಣವಾಗಿ ಪರರನ್ನು ಅಪರಾಧಿಯನ್ನಾಗಿ ಮಾಡುವುದರಿಂದ ನಿಮಗೆ ಯಾವ ಲಾಭವು ತಾನೇ ಬರುವುದು ? ||೭೪||

ನಿಮ್ಮಗಳ ಆಶೀರ್ವಾದದಿಂದ ನನಗೆ ಈ ಪುತ್ರನು ಜನಿಸಿರುವನು. ಆದುದ ರಿಂದ ಸರ್ವಪ್ರಕಾರದಿಂದಲೂ ನೀವು ನಿಮ್ಮ ಅಮೋಘವಾದ ಆಶೀರ್ವಾದಗಳಿಂದ ಇವನನ್ನು ಅಭಿವೃದ್ಧಿಗೊಳಿಸಬೇಕು. ಅದಲ್ಲದೆ ಇದಕ್ಕೆ ವಿಪರೀತವಾಗಿ ಎಂದಿಗೂ ಇವನನ್ನು ನಿಂದಿಸಬಾರದು. ||೭೫||

ವ್ಯರ್ಥವಾದ ಕೂಗಾಟವನ್ನು ಕೇಳುವುದರಿಂದ ನನ್ನ ಮನಸ್ಸು ಭಯಚಕಿತ ವಾಗುವುದು. ಅದರಲ್ಲಿಯೂ ಸ್ವಾಭಾವಿಕವಾಗಿಯೂ ಸಾಧುವಾಗಿರುವ ಈ ಬಾಲಕನ ವಿಷಯದಲ್ಲಿ ನಿಷ್ಕಾರಣವಾಗಿ ಕೂಗಾಡಿದರೆ ಮನಸ್ಸು ಭಯಭರಿತವಾಗುವುದಿಲ್ಲ ವೆಂಬುದನ್ನು ಹೇಗೆ ತಾನೆ ಹೇಳಲು ಸಾಧ್ಯವಾಗುವುದು ? ||೭೬||

**ಬಾಲಕೋಽಯಂ ಮಮ ಪ್ರಾಣಃ ಕಿಂ ವೇತ್ತಿ ವ್ರಜಯೋಷಿತಃ ।**
**ನಾಪರಾಧ್ಯತಿ ಕಸ್ಮೈಚಿತ್ಕಿಂ ವಾ ಸರ್ವಾ ವದಂತಿ ಮೇ ॥೭೭॥**

**ತತೋಽಹಮಬ್ರುವಂ ಕಿಂಚಿದ್ರುದಿ(ತ್ವೇ)ವ ವಿಮೋಹಯನ್ ।**
**ವಚನಂ ಶ್ರೋತ್ರ ಸುಖದಂ ತಾಸಾಮಪಿ ಮನೋಹರಂ ॥೭೮॥**

**ಕುತ್ರತ್ಯಾಃ ಕ್ವ ಗೃಹಂ ಮಾತಶ್ಚೈತಾಸಾಂ ನ ಚ ವೇದ್ಮ್ಯಹಂ ।**
**ವೃಥಾ ಜಲ್ಪಂತಿ ಜನನಿ ಪ್ರಾಗತೋಽತ್ರ ಸಮಾಗತಾಃ ॥೭೯॥**

**ಅಹಂ ಬಿಭೇಮಿ ಸತತಂ ವಾನರೇಭ್ಯಃ ಕುಸಂಗಿನಃ ।**
**ತಾನ್ವಾನರಾನ್ಸಖೀನೇತಾ ವದಂತ್ಯೇವಾತಿ ವಿಭ್ರಮಾತ್ ॥೮೦॥**

**ತ್ವಯ್ಯೈಕಸ್ಮಿನ್ ದಿನೇ ಮಾತರ್ವಾನರಾದ್ಭೀಷಿತೋ ಯತಃ ।**
**ತತ ಆರಭ್ಯ ಕುತ್ರಾಪಿ ನ ಗಚ್ಛಾಮಿ ಗೃಹಾಂತರಂ ॥೮೧॥**

---

ಎಲೈ ಗೋಪಿಕಾಸ್ತ್ರೀಯರೇ, ಈ ಬಾಲಕನೇ ನನ್ನ ಪ್ರಾಣವು ಇವನು ಏನನ್ನೂ ಅರಿತಿರುವುದಿಲ್ಲ. ಮತ್ತು ಯಾರ ವಿಷಯದಲ್ಲಿಯೂ ಅಪರಾಧವನ್ನು ಮಾಡುವವನಲ್ಲ. ಹೀಗಿರುವಲ್ಲಿ ನೀವೆಲ್ಲರೂ ನನ್ನ ಬಳಿಗೆ ಬಂದು ಏನನ್ನು ಹೇಳುತ್ತಿರುವಿರಿ? ॥೭೭॥

ಬಳಿಕ ನಾನು ಆ ಗೋಪಿಯರನ್ನು ದಿಗ್ಭ್ರಾಂತರನ್ನಾಗಿ ಮಾಡುವವನಂತೆ ಸ್ವಲ್ಪವಾಗಿ ಅಳುತ್ತಾ ಗೋಪಿಯರಿಗೂ ಸಹ ಸುಶ್ರಾವ್ಯವಾದ ಮತ್ತು ಮನೋಹರವಾದ ಮಾತನ್ನು ಆಡಿದೆನು. ॥೭೮॥

ಓ ಜನನಿಯೇ, ಈ ಸ್ತ್ರೀಯರು ಎಲ್ಲಿಯವರು? ಇವರ ಮನೆಗಳು ಎಲ್ಲಿರುವುವು? ಇವು ಯಾವುದನ್ನೂ ನಾನು ತಿಳಿದಿರುವುದಿಲ್ಲ. ಹೀಗಿದ್ದರೂ ಸಹ ಇವರು ಇಲ್ಲಿಗೆ ಬಂದು ಅಪಲಪಿಸುತ್ತಿರುವರು. ॥೭೯॥

ನಾನು ಯಾವಾಗಲೂ ಕಪಿಗಳಿಗೂ ಮತ್ತು ದುಷ್ಟರ ಸಹವಾಸಕ್ಕೂ ಹೆದರುವೆನು. ಆದಷ್ಟು ಕಪಿಗಳು ಇವರ ಮನೆಯಲ್ಲಿ ಚೇಷ್ಟೆಯನ್ನು ಮಾಡಿರುವುವು. ಆದರೆ ಈ ಗೋಪಿಯರು ನಾನೇ ಚೇಷ್ಟೆಯನ್ನು ಮಾಡಿರುವೆನೆಂದು ಭ್ರಾಂತರಾಗಿ ಹೀಗೆಂದು ಹೇಳುತ್ತಲಿರುವರು. ॥೮೦॥

ಓ ಜನನಿಯೇ, ಒಂದಾನೊಂದು ದಿನ ನೀನು ಕಪಿಯ ದೆಸೆಯಿಂದ

ಪೀತ್ವಾ ಸ್ತನಂ ತು ತೃಪ್ತಃ ಸಂಸ್ತ್ವದ್ಯೋತ್ಸಂಗಗತೋ ಹ್ಯಹಂ ।
ಕ್ವ ಗತೋ ಗೃಹಮೇತಾಸಾಂ ಕಶ್ಚ ಭುಕ್ತಸ್ತು ಗೋರಸಃ ॥೬೨॥

ತ್ವಯಾ ಗೃಹೇ ಯನ್ಮಹತಾ ದೀಯತೇ ತು ಪ್ರಯತ್ನತಃ ।
ತನ್ಮೇ ನ ರೋಚತೇ ಚೌರ್ಯಂ ಕಥಮನ್ಯಗೃಹೇ ಕೃತಂ ॥೬೩॥

ಧ್ರುವಂ ಮಿಥ್ಯಾ ವದಂತ್ಯೇತಾಃ ಪರಕೀಯಮಹಂ ಗೃಹಂ ।
ನ ವೇದ್ಮಿ ಕಿಂ ಪ್ರಜಲ್ಪಂತಿ ಪ್ರತ್ಯಕ್ಷಂ ತ್ವಂ ವಿಚಾರಯ ॥೬೪॥

ಯಾವತ್ಪಿತಾ ಗೃಹೇ ತಿಷ್ಠೇತ್ತಾವನ್ಮಾಂ ಲಾಲಯತ್ಯಸೌ ।
ಪಶ್ಚಾತ್ತ್ವಮೇವ ಮಾಂ ಮಾತರ್ನ ಮುಂಚಸಿ ಕದಾಚನ ॥೬೫॥

---

ಹೆದರಿಕೆಯನ್ನುಂಟುಮಾಡಿದ್ದೆ. ಅಂದಿನಿಂದ ಮೊದಲ್ಗೊಂಡು ನಾನು ಈ ಮನೆಯನ್ನು ಬಿಟ್ಟು ಪರರ ಮನೆಗೆ ಹೋಗುತ್ತಿರುವುದಿಲ್ಲ. ॥೬೧॥

ಸ್ತನ್ಯಪಾನವನ್ನು ಮಾಡಿ ಅದರಿಂದ ತೃಪ್ತನಾಗಿ ನಿನ್ನ ತೊಡೆಯ ಮೇಲೆ ಮಲಗಿದ ನಾನು ಎಲ್ಲಿಗೂ ಹೋಗಲಿಲ್ಲ. ಈ ಗೋಪಿಯರ ಮನೆಗೆ ಎಲ್ಲಿ ಹೋಗಿರುವೆನು? ಹಾಲು, ಮೊಸರು, ಬೆಣ್ಣೆ ಮೊದಲಾದ ಯಾವ ಪದಾರ್ಥವನ್ನು ತಾನೇ ನಾನು ತಿಂದಿರುವೆನು? ॥೬೨॥

ಮನೆಯಲ್ಲಿ ನೀನು ನನಗೋಸ್ಕರ ಒತ್ತಾಯದಿಂದ ಯಾವ ಪದಾರ್ಥವನ್ನು ತಿನ್ನಲು ಕೊಡುವೆಯೋ, ಅದೇ ನನಗೆ ಹೆಚ್ಚಾಗಿ ರುಚಿಸುವುದಿಲ್ಲ. ಹೀಗಿರುವಲ್ಲಿ ಪರರ ಮನೆಯಲ್ಲಿ ಹೇಗೆತಾನೆ ಕಳ್ಳತನವನ್ನು ಮಾಡುವೆನು? ॥೬೩॥

ಈ ಸ್ತ್ರೀಯರು ನಿಜವಾಗಿಯೂ ಅನೃತವನ್ನೇ (ಸುಳ್ಳನ್ನೇ) ಹೇಳುತ್ತಿರುವರು. ನಾನು ಪರರ ಮನೆಯನ್ನೇ ತಿಳಿದಿರುವುದಿಲ್ಲ. ಹೀಗಿರುತ್ತಿದ್ದರೂ ಇವರು ಏತಕ್ಕೋಸ್ಕರ ಈ ರೀತಿಯಾಗಿ ಅಪಲಪಿಸುತ್ತಿರುವರು? ಆದುದರಿಂದ ಈ ವಿಷಯವು ಪ್ರತ್ಯಕ್ಷವಾದುದಾದರೆ ಇದನ್ನು ನೀನು ವಿಚಾರಿಸುವವಳಾಗು. ಅದಲ್ಲದೆ ಕಣ್ಣಿನಿಂದ ಕಾಣದೇ ಇರುವ ವಿಷಯಕ್ಕೆ ಕಿವಿಗೊಡುವುದು ಯುಕ್ತವಾದುದಲ್ಲ. ॥೬೪॥

ಓ ಜನನಿಯೇ, ತಂದೆಯು ಮನೆಯಲ್ಲಿ ಇರುವ ವರೆಗೂ ನನ್ನನ್ನು ಅವನು ಲಾಲಿಸುವನು. ಅವನು ಮನೆಯಿಂದ ಹೊರಗೆ ಹೋದ ಬಳಿಕ ನೀನು ನನ್ನನ್ನು ಒಂದು ಕ್ಷಣಕಾಲವೂ ಅಗಲಿರುವುದಿಲ್ಲ. ॥೬೫॥

ತವಾಂಗುಲಿ ಮಥಾಲಂಬ್ಯ ಪ್ರವಿಶಾಮಿ ಗೃಹಾಂತರಂ ।
ಗೃಹಾದ್ಬಹಿರ್ವಾಽಪಿ ತಥಾ ತ್ವಯಾ ಸಾರ್ಧಂ ವ್ರಜಾಮ್ಯಹಂ ॥೮೬॥

ಏತಾ ಬ್ರುವಂತಿ ಸಖಿಭಿಃ ಸಹಾಸ್ಮಾಕಂ ಗೃಹಂ ಗತಃ ।
ಸಖಾಯಃ ಸ್ವಗೃಹೇ ಸಂತಿ ವಾನರಾಶ್ಚ ವನಾಂತರೇ ॥೮೭॥

ಅಹಂ ತವಾಂತಿಕೇ ನಿತ್ಯಂ ಕಿಮುನ್ಮತ್ತಾ ವದಂತಿ ವೈ ।
ಯದಿ ಬಾಲಾಃ ಸಖಾಯೋ ಮೇ ಆಯಾಂತಿ ಕ್ರೀಡಿತೇ ತದಾ ।
ಗೃಹಾಂಗಣೇ ಗೃಹದ್ವಾರಿ ಕ್ರೀಡಾ ಭವತಿ ನಾನ್ಯತಃ ॥೮೮॥

ಗೇಹಂ ಗಂತುಂ ಚೋತ್ಸುಕಾ ವ್ರೀಡಿತಾಶ್ಚ
ಹ್ಯೇ ತಚ್ಛ್ರುತ್ವಾ ಗೋಪಿಕಾಸ್ತಾಸ್ಸಮಸ್ತಾಃ ।

---

ನಿನ್ನ ಕೈಬೆರಳನ್ನು ಹಿಡಿದುಕೊಂಡು ಪರರ ಮನೆಯನ್ನು ನಾನು ಪ್ರವೇಶಿಸುವೆನು. ಮತ್ತು ಅಲ್ಲಿಂದ ಹೊರಡುವಾಗಲೂ ಸಹ ನಿನ್ನೊಂದಿಗೇ ಹೋಗುವೆನು. ॥೮೬॥

ಹೀಗಿದ್ದರೂ ಸಹ ಈ ಸಖಿಯರು ಕೃಷ್ಣನು ತನ್ನ ಸ್ನೇಹಿತರೊಂದಿಗೆ ನಮ್ಮ ಮನೆಗೆ ಬಂದಿದ್ದನೆಂದು ಹೇಳುತ್ತಾರೆ. ನನ್ನ ಸ್ನೇಹಿತರು ಅವರವರ ಮನೆಯಲ್ಲಿರುವರು. ಕಪಿಗಳಾದರೋ ಅರಣ್ಯದಲ್ಲಿರುವುವು. ನಾನಾದರೋ ಎಡೆಬಿಡದೆ ನಿನ್ನ ಸಮೀಪದಲ್ಲಿಯೇ ಇರುವೆನು. ಇವರೇನು ಹುಚ್ಚು ಹಿಡಿದವರಂತಾಗಿ (ಭ್ರಾಂತರಾಗಿ) ಈರೀತಿಯಾಗಿ ಹೇಳುತ್ತಿರುವರೋ ಏನೋ. ॥೮೭॥

ನನ್ನ ಗೆಳೆಯರು ಆಟವಾಡುವುದಕ್ಕೋಸ್ಕರ ಬಂದರೆ, ಆಗ ನಾನು ಮನೆಯ ಬಾಗಲಿನಲ್ಲೇ ಇರುವ ಈ ಅಂಗಳದಲ್ಲಿಯೇ (ಚಿಕ್ಕ ಮೈದಾನ) ಅವರೊಂದಿಗೆ ಆಟವಾಡುವೆನು. ಅದಲ್ಲದೆ ಆಟವಾಡುವುದಕ್ಕೋಸ್ಕರ ಬೇರೆ ಎಲ್ಲಿಗೂ ಹೋಗುವುದಿಲ್ಲ. ॥೮೮॥

ನಾನು ಜನನಿಯನ್ನು ಕುರಿತು ಹೇಳಿದ ಈ ಮಾತನ್ನು ಕೇಳಿ ಆ ಗೋಪಿಕಾ ಸ್ತ್ರೀಯರು ಲಜ್ಜೆಯನ್ನು ಹೊಂದಿದವರಾಗಿ ತಮ್ಮ ತಮ್ಮ ಮನೆಗಳನ್ನು ಕುರಿತು ತೆರಳಲು ಉತ್ಸಾಹವುಳ್ಳವರಾದರು. ಆ ಕಾಲದಲ್ಲಿ ಅವರು ಯಾವ ಮಾತುಗಳನ್ನೂ

ವಚೋ ನೋಚುಃ ಕಿಂಚಿದೇವೋತ್ತರಂ ವಾ
ಹ್ಯಾತ್ಮಭ್ರಾಂತಿಂ ಮೇನಿರೇ ತಾಸ್ತದಾ ಹಿ ॥೮೯॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವ್ಯೆಯ್ಯಾಸಿಕೇ
ನಾರದ ಶೌನಕ ಸಂವಾದೇ ಕೃಷ್ಣಚೌರ್ಯವರ್ಣನಂ ನಾಮ
ದ್ವಾವಿಂಶೋಽಧ್ಯಾಯಃ

---

ಆಡಲಿಲ್ಲ ಮತ್ತು ನನ್ನ ಮಾತಿಗೆ ಯಾವ ಉತ್ತರವನ್ನೋ ಆಗಲಿ ಕೊಡಲಿಲ್ಲ. ಮತ್ತು ಈ ವಿಷಯದಲ್ಲಿ ನಾವೇ ಭ್ರಾಂತರಾಗಿರುವೆವೋ ಏನೋ ಎಂಬುದಾಗಿ ಅವರು ತಿಳಿದುಕೊಂಡರು! ||೮೯||

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ನಾರದ ಶೌನಕ
ಸಂವಾದದಲ್ಲಿ ಕೃಷ್ಣನ ಕಳ್ಳತನದ ವರ್ಣನವೆಂಬ ಇಪ್ಪತ್ತೆರಡನೆಯ
ಅಧ್ಯಾಯವು ಸಮಾಪ್ತವಾಯಿತು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

---

## || ತ್ರಯೋವಿಂಶೋಽಧ್ಯಾಯಃ ||

### ಇಪ್ಪತ್ತುಮೂರನೆಯ ಅಧ್ಯಾಯವು

|| ಶ್ರೀ ಭಗವಾನುವಾಚ ||

**ಶ್ರುತ್ವಾ ತಥಾ ಮಮ ವಚೋ ಯಶೋದಾ ಸಂಶಯಂ ಗತಾ ।**
**ಗೋಪಿಕಾನಾಂ ಸವಿನಯಂ ಸಮಾಧಾನಮಥಾಕರೋತ್ ॥೧॥**

**ಭವತೀನಾಂ ವಚಃ ಸತ್ಯಂ ಯದ್ಬ್ರುವಂತಿ ಸಮಾಗತಾಃ ।**
**ನಾಯಂ ಮಮ್ಮೈವ ಬಾಲೋಽಯಂ ಯುಷ್ಮಾಕಮಪಿ ನಾನ್ಯಥಾ ॥೨॥**

**ಸ್ವಕೀಯಬಾಲಕಕೃತೈರಪರಾಧೈರ್ನ ಪೀಡ್ಯತೇ ।**
**ಇತಿ ತದ್ವಚನಂ ಶ್ರುತ್ವಾ ವದನಂ ವೀಕ್ಷ್ಯ ಮೇ ಚಿರಂ ॥೩॥**

---

ಆಗ ಯಶೋದೆಯು ನನ್ನ ಮಾತನ್ನು ಕೇಳಿ ಸಂಶಯವನ್ನು ಹೊಂದಿದವಳಾಗಿ ವಿನಯಪೂರ್ವಕವಾಗಿ ಗೋಪಿಕೆಯರನ್ನು ಹೀಗೆ ಸಮಾಧಾನಗೊಳಿಸಿದಳು. ||೧||

ನನ್ನ ಬಳಿಗೆ ಬಂದು ನೀವು ಯಾವ ಮಾತನ್ನು ಹೇಳುತ್ತಿರುವಿರೋ ಆ ನಿಮ್ಮ ಮಾತುಗಳು ಸತ್ಯವಾದುದಾಗಿರುತ್ತವೆ. ಆದರೆ ಇವನು ನನಗೊಬ್ಬಳಿಗೆ ಪುತ್ರನಾಗಿರದೇ ನಿಮಗೂ ಪುತ್ರನಾಗಿಯೇ ಇರುವನೇ ಹೊರತು ಅನ್ಯಥಾ ಇಲ್ಲ. ||೨||

ಲೋಕದಲ್ಲಿ ತಂದೆತಾಯಿಗಳು ತಮ್ಮ ಮಕ್ಕಳು ಯಾವ ವಿಧವಾದ ಅಪರಾಧವನ್ನು ಮಾಡಿದರೂ ಅದರಿಂದ ತಮಗೆ ಪೀಡೆಯುಂಟಾಯಿತೆಂದು ಭಾವಿಸುವುದಿಲ್ಲ. ಗೋಪಿಯರು ಯಶೋದೆಯ ವಚನವನ್ನು ಕೇಳಿ ಬಹುಕಾಲದವರೆಗೆ

ಯಶೋದಾ ಮಾನಿತಾಸ್ತಾಶ್ಚ ಸ್ವಗೃಹಾಣ್ಯಭಿತೋ ಯಯುಃ ।
ಹಸಂತ್ಯಃ ಕಥಯಂತ್ಯಶ್ಚ ಯಶೋದಾವಚನಾದಲಂ ॥೪॥

ಧನ್ಯಂ ಜನುರ್ಯಶೋದಾಯಾ ಯಸ್ಯಾ ಬಾಲೋಽಯಮೀದೃಶಃ ।
ಕಿಶೋರವಯಸಾಽಸ್ಮಭ್ಯಂ ಯಶೋದಾನಿಕಟೇ ಶಿಶುಃ ॥೫॥

ಬ್ರೂತೇ ಕಿಂ ಕಾರಣಂ ತಚ್ಚ ನ ವಿದ್ಮಸ್ತಸ್ಯ ಚೇಷ್ಟಿತಂ ।
ಅಸ್ಪಷ್ಟಂ ವಚನಂ ವಕ್ತಿ ತ್ವರಯಾ ನ ಚಲತ್ಯಪಿ ॥೬॥

ಅಸ್ಮಾಕಮೇವ ವಚನಂ ಮಿಥ್ಯಾ ಚ ಕುರುತೇಽಖಿಲಂ ।
ಯಶೋದಾಽಪಿ ಚ ಪ್ರತ್ಯೇತಿ ತದ್ವಚಃ ಸರ್ವಮೇವ ಹಿ ॥೭॥

ಕಿಂ ಕುರ್ಮಃ ಕಥಯಾಮಃ ಕ್ವ ಕಃ ಪ್ರತ್ಯೇಷ್ಯತಿ ನೋ ವಚಃ ।
ಆಗಮಿಷ್ಯತಿ ಚೇದಸ್ಮದ್ಗೃಹಂ ಬಾಲಃ ಪುನಃ ಪುನಃ ॥೮॥

---

ನನ್ನ ಮುಖವನ್ನು ನೋಡಿ, ಬಳಿಕ ಯಶೋದೆಯಿಂದ ಸನ್ಮಾನಿತರಾಗಿ ಅವಳ ಮಾತಿನಿಂದ ಸಮಾಧಾನಹೊಂದಿ ನಗುತ್ತಾ ಪರಸ್ಪರವಾಗಿ ಮಾತನಾಡುತ್ತಾ ತಮ್ಮ ತಮ್ಮ ಮನೆಗಳನ್ನು ಕುರಿತು ತೆರಳಿದರು. ||೩-೪||

ಅವರು ಮನೆಗೆ ಹೋಗುವಾಗ ಪರಸ್ಪರವಾಗಿ ಹೀಗೆಂದು ಮಾತನಾಡುವರು. ಯಶೋದೆಯು ಇಂತಹ ಅದ್ಭುತ ಬಾಲಕನನ್ನು ಪಡೆದಿರುವುದರಿಂದ ಅವಳ ಜನ್ಮವು ಸಾರ್ಥಕವಾಗಿರುತ್ತದೆ. ಈ ಬಾಲಕನು ಯಶೋದೆಯ ಸಮೀಪದಲ್ಲಿದ್ದುಕೊಂಡು ಬಾಲ್ಯವಯಸ್ಸಿಗೆ ಅನುಗುಣವಾಗಿ ನಮ್ಮನ್ನೇ ಅಪರಾಧಿಗಳೆಂದು ಹೇಳುತ್ತಾನೆ. ||೫||

ಇದರ ಕಾರಣವೇನೋ ಅದನ್ನು ನಾವು ಅರಿಯೆವು. ಮತ್ತು ಅವನ ಬಾಲ್ಯ ಚೇಷ್ಟೆಗಳ ತತ್ವವನ್ನೂ ನಾವು ತಿಳಿಯಲಾರೆವು!

ಅವನು ತೊದಲು ನುಡಿಗಳನ್ನು ಆಡುವನು. ಗಾಬರಿಗೊಂಡವನಾಗಿ ಅತ್ತಿತ್ತ ಅಲ್ಲಾಡದೇ ಸ್ತಬ್ಧನಾಗಿ ನಿಂತಿರುವನು. ||೬||

ನಮ್ಮ ಮಾತನ್ನೇ ಸುಳ್ಳಾದದ್ದನ್ನಾಗಿ ಮಾಡುವನು. ಯಶೋದೆಯೂ ಸಹ ಅವನು ಹೇಳುವ ಎಲ್ಲಾ ಮಾತುಗಳನ್ನೂ ನಿಜವೆಂದೇ ನಂಬುವಳು. ||೭||

ನಾವು ಈಗ ಏನನ್ನು ಮಾಡೋಣ? ಯಾರೊಂದಿಗೆ ಈ ವಿಷಯವನ್ನು ಹೇಳೋಣ? ಯಾವನು ನಮ್ಮ ಈ ಮಾತನ್ನು ನಿಜವೆಂದು ನಂಬುವನು? ಆದುದ

ತಂ ಗೃಹ್ಣೀಮೋ ಬಲಾದ್ಗೋಪ್ಯೋ ಯೂಥೀಭೂಯ ವ್ರಜಾಬಲಾಃ ।
ಗೃಹೀತ್ವಾ ತಂ ನಯಿಷ್ಯಾಮಸ್ತದಾ ಕಿಂ ಕಥಯಿಷ್ಯತಿ ॥೯।

ಯಸ್ಯಾ ಗೃಹೇ ಪಿಶತ್ಯದ್ಯ ದತ್ವಾ ಗೇಹೇ ಕಪಾಟಿಕಂ ।
ಸ್ವಾಕ್ರೋಶಂತು ಭೃಶಂ ಸರ್ವಾ ಆಯಾಸ್ಯಾಮೋ ದ್ರುತಂ ಶ್ರವಾತ್ ॥೧೦॥

ಸಖ್ಯೋ ಗಚ್ಛತಿ ಶ್ರೀಕೃಷ್ಣಃ ಶೀಘ್ರಂ ಕೃತ್ವಾ ಪಲಾಯನಂ ।
ತತೋಽಪ್ಯೇನಂ ಗ್ರಹೀಷ್ಯಾಮಃ ಕರಿಷ್ಯಾಮೋ ಮನೋಗತಂ ॥೧೧।

ಯಾಸ್ಯಾಮಃ ಸದನಂ ನೀತ್ವಾ ಯಶೋದಾಯಾಃ ಪುನರ್ವಯಂ ।
ವಕ್ಷ್ಯಾಮಃ ಖಲು ತಂ ತಸ್ಮೈ(ಸ್ಯೈ) ತದಾ ಸಾ ಕಿಂ ವದಿಷ್ಯತಿ ॥೧೨॥

---

ರಿಂದ ಎಲೌ ಗೋಪಿಯರೇ, ಆ ಬಾಲಕನು ಮತ್ತೆ ಮತ್ತೆ ನಮ್ಮ ಮನೆಗಳಿಗೆ ಬಂದವನಾದರೆ ಗೋಕುಲವಾಸಿಗಳಾದ ಎಲ್ಲಾ ಸ್ತ್ರೀಯರೂ ಗುಂಪಾಗಿ ಸೇರಿ ಅವನನ್ನು ಹಿಡಿದುಕೊಳ್ಳಬೇಕು. ಬಳಿಕ ಅವನನ್ನು ಯಶೋದೆಯ ಬಳಿಗೆ ತೆಗೆದು ಕೊಂಡು ಹೋಗಿ ಹೇಳೋಣ. ಆಗ ಅವಳು ಏನನ್ನು ಮಾಡುವಳೋ ಅದನ್ನು ನೋಡೋಣ. ॥೮-೯॥

ಈ ದಿವಸ ಅವನು ಯಾವಳ ಮನೆಯನ್ನು ಪ್ರವೇಶಿಸುವನೋ, ಅವಳು ತನ್ನ ಮನೆಯ ಬಾಗಿಲನ್ನು ಹಾಕಿಕೊಂಡು ಗಟ್ಟಿಯಾಗಿ ಕೂಗಬೇಕು. ಆ ಕೂಗನ್ನು ಕೇಳಿ ನಾವೆಲ್ಲರೂ ಅಲ್ಲಿಗೆ ಬರುವೆವು. ॥೧೦॥

ಎಲೌ ಸಖಿಯರೇ, ಆ ಶ್ರೀಕೃಷ್ಣನು ಜಾಗ್ರತೆಯಾಗಿ ಧಾವಿಸಿ ತನ್ನ ಮನೆಗೆ ಹೋಗುತ್ತಾನೆ. ಆದರೂ ಸಹ ನಾವು ನಮ್ಮ ಚಾತುರ್ಯದಿಂದ ಅವನನ್ನು ಹಿಡಿದು ಕೊಂಡು ನಮ್ಮ ಮನೋರಥವನ್ನು ಪೂರ್ಣವನ್ನಾಗಿ ಮಾಡಿಕೊಳ್ಳೋಣ. ॥೧೧॥

ಆಮೇಲೇ ಇವನನ್ನು ಯಶೋದೆಯ ಮನೆಗೆ ಕರೆದುಕೊಂಡು ಹೋಗೋಣ, ಇವನ ದೆಸೆಯಿಂದ ನಮ್ಮ ಮನೆಗಳಲ್ಲಿ ಉಂಟಾದ ಪದಾರ್ಥಗಳ ವ್ಯಯವನ್ನು ಹೇಳೋಣ. ಆಗ ಅವಳು ಏನನ್ನು ಹೇಳುವಳೋ ಅದನ್ನು ನೋಡೋಣ. ॥೧೨॥

ಇದಮೇವ ಪರಂ ಕಾರ್ಯಂ ಕಥಯಿತ್ವಾ ಗೃಹಂ ಗತಾಃ ।
ರಾತ್ರೌ ತಾಃ ಶಯನೇ ಸುಪ್ತಾ ದದೃಶುಸ್ತತ್ತದೇವ ಹಿ ॥೧೩॥

ಕಾಚಿದ್ಗೃಹ್ಣಾತಿ ಮಾಮಂಕೇ ಸಮಾಲಿಂಗತಿ ಚುಂಬತಿ ।
ಕಾಚಿತ್ಪಶ್ಯತಿ ಮೇ ಕಾಂತಂ ಮುಖಮತ್ಯಂತ ಮದ್ಭುತಂ ॥೧೪॥

ಕಾಚಿದ್ಯಶೋದಾಪುರತೋ ಬ್ರೂತೇ ಬಾಲಸ್ಯ ಚಾಪಲಂ ।
ಕಾಚಿದಾಲಕ್ಷ್ಯ ಹಸತಿ ಮನ್ಮುಖಂ ಮದನಾಕುಲಾ ॥೧೫॥

ಸುಮನಾಗಪಿ ಗೋಪೀನಾಮಂತರಾಯೋ ನ ವಿದ್ಯತೇ ।
ತಥಾ ಜಾಗ್ರದವಸ್ಥಾಯಾಂ ತಥಾ ಸ್ವಪ್ನೇ ಮಹತ್ಸುಖಂ ॥೧೬॥

---

ಈ ಕಾರ್ಯವನ್ನೇ ನಾವು ಖಂಡಿತವಾಗಿ ಸಾಧಿಸಬೇಕು. ಹೀಗೆಂದು ಹೇಳುತ್ತಾ ಗೋಪಿಯರು ತಮ್ಮ ತಮ್ಮ ಮನೆಗಳಿಗೆ ಹೋದರು.

ಮನೆಯನ್ನು ಸೇರಿ ರಾತ್ರಿಯಾಗಲು ಅವರು ನಿದ್ರಿಸುವವರಾಗಿ ಜಾಗ್ರದವಸ್ಥೆಯಲ್ಲಿ ಯಾವ ದೃಶ್ಯಗಳನ್ನು ನೋಡಿದ್ದರೋ ಅದೇ ದೃಶ್ಯಗಳನ್ನು ಸ್ವಪ್ನದಲ್ಲಿಯೂ ನೋಡಿದರು. ॥೧೩॥

ಒಬ್ಬಾಳೊಬ್ಬ ಗೋಪಿಯು ನನ್ನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆಲಿಂಗಿಸುವಳು ಮತ್ತು ಮುದ್ದಿಡುವಳು. ಮತ್ತೊಬ್ಬಳು ಆಶ್ಚರ್ಯಕರವಾಗಿಯೂ, ಸುಂದರವಾಗಿಯೂ ಇರುವ ನನ್ನ ಮುಖವನ್ನು ಮುತ್ತಿಡುವಳು.॥೧೪॥

ಒಬ್ಬಳು ಯಶೋದೆಯ ಮುಂದುಗಡೆಯಲ್ಲಿ ಬಾಲಕನಾದ ನನ್ನ ಚಾಪಲ್ಯವನ್ನು ಹೇಳುವಳು. ಮತ್ತೊಬ್ಬಳು ಪ್ರೇಮಭರಿತಳಾಗಿ ನನ್ನ ಮುಖವನ್ನು ದಿಟ್ಟಿಸಿ ನೋಡಿ ನಗುವಳು. ॥೧೫॥

'ಎಷ್ಟು ಕಾಲವು ಕಳೆದರೂ ಅವರಿಗೆ ಯಾವ ವಿಧವಾದ ತೊಂದರೆಯೂ ಇರುವುದಿಲ್ಲ. ಎಚ್ಚರದಲ್ಲಿ ನನ್ನನ್ನು ನೋಡಿದರೆ ಅವರಿಗೆ ಯಾವ ಸುಖವುಂಟಾಗುವುದೋ, ಅದರಂತೆಯೇ ಸ್ವಪ್ನಾವಸ್ಥೆಯಲ್ಲಿಯೂ ಅದೇ ಸುಖವನ್ನು ಅನುಭವಿಸುವರು! ॥೧೬॥

ವ್ಯತೀತಾಯಾಂ ನಿಶಾಯಾಂ ತು ಪ್ರಾತರೇವಾಹಮುತ್ಸುಕಃ ।
ಸಖೀನಾಹೂಯ ಸಕಲಾನಿದಂ ವಚನಮಬ್ರುವಂ ॥೧೭॥

ಭೋಃ ಸಖಾಯಃ ಶ್ರುಣುಧ್ವಂ ಮೇ ವಚನಂ ಯದ್ಬ್ರವೀಮಿ ವಃ ।
ಪಲಾಯಿತೇಷು ಸಖಿಷು ಮಾಂ ಗ್ರಹೀಷ್ಯಂತಿ ಗೋಪಿಕಾಃ ॥೧೮॥

ಪಲಾಯನಂ ವಿಧಾಸ್ಯಾಮಿ ತಾಸಾಂ ಪಾಣಿಗತೋಽಪ್ಯಹಂ ।
ಗೃಹೀತೋ ಬಹುಶಸ್ತಾಭಿರುನ್ಮುಚ್ಯಾಪಿ ಪಲಾಯಿತಃ ॥೧೯॥

ಕರಿಷ್ಯೇಽನೇಕಶಃ ಕ್ರೀಡಾಸ್ತಾಭಿಃ ಸಹ ಮನೋರಮಾಃ ।
ತೇ ಮಾಮೂಚುರ್ಗೋಪಬಾಲಾ ರಾಮಕೃಷ್ಣ ತ್ವಯಾ ಸಹ ॥೨೦॥

ಭೋಕ್ಷ್ಯಾಮಸ್ತತ್ರ ಗತ್ವಾಚ ನ ತಿಷ್ಠಾಮೋ ಭಯೇ ಸತಿ ।
ತಾವತ್ತೇ ಸಂಗಿನೋ ನೂನಂ ಯಾವನ್ನಾಯಾಂತಿ ಗೋಪಿಕಾಃ॥೨೧॥

---

ರಾತ್ರಿಯು ಕಳೆದು ಬೆಳಗಾಗಲು, ನಾನು ನನ್ನ ಚೇಷ್ಟೆಗಳನ್ನು ಮಾಡಲು ಉತ್ಸುಕನಾಗಿ, ಉತ್ಸಾಹದಿಂದ ನನ್ನ ಸ್ನೇಹಿತರನ್ನೆಲ್ಲರನ್ನೂ ಕರೆದು ಅವರಿಗೆ ಮುಂದೆ ಹೇಳುವಂತೆ ಹೇಳಿದೆನು. ॥೧೭॥

ಎಲೈ ಗೆಳೆಯರೇ, ನಾನು ಯಾವ ಮಾತನ್ನು ಹೇಳುವೆನೋ ಅದನ್ನು ಕೇಳುವವರಾಗಿರಿ. ನಾನು ಗೋಪಿಯರ ಮನೆಗೆ ಹೋಗಿ ನಾನಾವಿಧವಾದ ಚೇಷ್ಟೆಗಳನ್ನು ಮಾಡುವೆನು. ಆಗ ಆ ಸ್ತ್ರೀಯರು ಗಟ್ಟಿಯಾಗಿ ಕೂಗಲು ನೀವು ಓಡಿಹೋಗುವಿರಿ. ನೀವು ಓಡಿಹೋಗಲು ಗೋಪಿಯರು ನನ್ನನ್ನು ಹಿಡಿಯುವರು. ನಾನು ಅವರ ಕೈಗೆ ಸಿಕ್ಕಿದರೂ ತಪ್ಪಿಸಿಕೊಂಡು ಓಡುತ್ತೇನೆ. ಇದರಂತೆಯೇ ಅವರು ಅನೇಕಬಾರಿ ನನ್ನನ್ನು ಹಿಡಿದರೂ ನಾನು ಅವರ ಹಿಡಿತದಿಂದ ತಪ್ಪಿಸಿಕೊಂಡು ಓಡುವೆನು. ಈ ರೀತಿಯಲ್ಲಿ ಆ ಗೋಪಿಕಾಸ್ತ್ರೀಯರೊಂದಿಗೆ ನಾನಾವಿಧವಾದ ಮತ್ತು ಮನೋಹರವಾದ ಚೇಷ್ಟೆಗಳನ್ನು ಅಭಿನಯಿಸುವೆನು. ॥೧೮-೧೯॥

ನನ್ನ ವಚನವನ್ನು ಕೇಳಿ ಆ ಗೋಪಾಲಕರು ಹೀಗೆಂದು ಹೇಳಿದರು. ಎಲೈ ಸುಂದರಮೂರ್ತಿಯಾದ ಶ್ರೀಕೃಷ್ಣನೇ, ನಾವು ನಿನ್ನೊಂದಿಗೆ ಗೋಪಿಯರ ಮನೆಗೆ ಹೋಗಿ ಅಲ್ಲಿ ಹಾಲು ಮೊಸರು ಬೆಣ್ಣೆ ಮುಂತಾದ ಭಕ್ಷ್ಯವಸ್ತುಗಳನ್ನು ತಿನ್ನುವೆವು. ಬಳಿಕ ಗೋಪಿಯರು ನಮ್ಮನ್ನು ಎಲ್ಲಿ ಹಿಡಿದು ಜಾಗ್ರತೆಯಾಗಿ ಬಂಧಿಸುವರೋ

ದೃಷ್ಟ್ವಾ ಗೋಪೀರುಪೈಷ್ಯಾಮಃ ಪಲಾಯ್ಯ ನಿಜಮಂದಿರಂ ।
ಇತಿ ತೇಷಾಂ ವಚಃ ಶ್ರುತ್ವಾ ಗೋಪಾ(ಂ)ಸ್ತಾನಹಮಬ್ರವಮ್॥೨೨॥

ಜ್ಞಾತಂ ಮಯಾ ಯದುಕ್ತಂ ವೈ ಕಾ ಶಕ್ತಿಶ್ಚರತಾಮಿಹ ।
ಅಹಮೇವ ಬಲಂ ಬುದ್ಧಿರಹಮೇವ ಸ್ವಲಂಕ್ರಿಯಾ ॥೨೩॥

ಅಹಂ ಗಮಿಷ್ಯೇ ಗೋಪೀನಾಂ ಗೃಹೇಷ್ವೇವಂ ವಿನಿಶ್ಚಿತಮ್ ।
ಏಷ್ಯಂತಿ ಚೇನ್ಮಯಿ ಗತೇ ಗೋಪ್ಯೋ ವೇಷ್ಟಯಿತುಂ ಬಲಾತ್॥೨೪॥

ತದಾಽಽತ್ಮಾನಂ ವಿಮೋಕ್ಷ್ಯಾಮಿ ಭವಂತೋ ಯಾಂತು ಬಾಲಕಾಃ ।
ವರ್ತಮಾನಾ ಭವೇನ್ನೈವ ಗೃಹಿಣೀ ಯತ್ರ ಸದ್ಮನಿ ॥೨೫॥

ತತ್ರ ಪ್ರವಿಶ್ಯ ಭೋಕ್ತವ್ಯಮಸ್ಮಾಭಿರ್ಗೋಪಬಾಲಕಾಃ ।
ವ್ರಜಮಧ್ಯೇ ಚರಿಷ್ಯಾಮೋ ವೀಕ್ಷ್ಯಮಾಣಾಃ ಪರಸ್ಪರಮ್ ॥೨೬॥

---

ಎಂಬ ಹೆದರಿಕೆಯುಂಟಾದರೆ, ನಿನ್ನ ಸಂಗಡಿಗರಾದ ನಾವು ಆ ಗೋಪಿಯರು ನೀನಿದ್ದಲ್ಲಿಗೆ ಬರುವಷ್ಟರಲ್ಲಿಯೇ, ನಾವು ಅದನ್ನು ನೋಡಿ ಅಲ್ಲಿಂದ ನಮ್ಮ ಮನೆಗೆ ಓಡಿಹೋಗುವೆವು. ||೨೦-೨೧||

ಅವರ ಈ ಮಾತನ್ನು ಕೇಳಿ, ನಾನು ಅವರನ್ನು ಕುರಿತು ಹೀಗೆಂದು ಹೇಳಿದೆನು. ಎಲೈ ಗೆಳೆಯರೇ, ನೀವು ಹೇಳುವುದು ನನಗೆ ತಿಳಿಯಿತು. ಭಯವುಂಟಾಗುತ್ತಿರಲು ಆ ಪ್ರದೇಶದಿಂದ ಧಾವಿಸುವುದು ನೀವು ಎಷ್ಟುಮಟ್ಟಿನ ಶಕ್ತಿವಂತರೆಂಬುದನ್ನು ತೋರಿಸುವುದು. ನಿಮ್ಮ ಶಕ್ತಿಯನ್ನು ನಾನು ತಿಳಿದೆನು. ನಿಮಗಿಂತಲೂ ನಾನೇ ಬಲಶಾಲಿಯು. ನಾನೇ ಬುದ್ಧಿಶಾಲಿಯು ಮತ್ತು ನಾನೇ ಶಕ್ತಿವಂತರಾದವರಿಗೆಲ್ಲರಿಗೂ ಅಲಂಕಾರಪ್ರಾಯನಾಗಿರುವೆನು. ||೨೨-೨೩||

ನಾನು ನಿಶ್ಚಯವಾಗಿಯೂ ಗೋಪಿಯರ ಮನೆಗೆ ಹೋಗುವೆನು. ನಾನು ಅಲ್ಲಿಗೆ ಹೋಗಲು ಆ ಗೋಪಿಯರು ನನ್ನನ್ನು ಬಲಾತ್ಕಾರದಿಂದ ಬಂಧಿಸಲು ಬರುವವರಾದರೆ ಆಗ ನಾನು ಅವರ ಹಿಡಿತದಿಂದ ತಪ್ಪಿಸಿಕೊಳ್ಳುವೆನು. ಬಾಲಕರಾದ ನೀವು ಅಲ್ಲಿಂದ ಧಾವಿಸಿ, ಯಾವ ಮನೆಯಲ್ಲಿ ಮನೆಯ ಯಜಮಾನಿಯು ಇರುವುದಿಲ್ಲವೋ ಆ ಮನೆಯನ್ನು ಕುರಿತು ಹೋಗುವವರಾಗಿರಿ. ||೨೪-೨೫||

ಎಲೈ ಗೋಪಬಾಲಕರೇ, ಆ ಗೃಹವನ್ನು ಪ್ರವೇಶಿಸಿ ನಾವೆಲ್ಲರೂ ಅಲ್ಲಿರುವ

ವಿಲೋಕ್ಯೈವ ಗೃಹಂ ಶೂನ್ಯಂ ಪ್ರವೇಕ್ಷ್ಯಾಮೋ ದ್ರುತಂ ವಯಂ ।
ಏವಂ ವಿಚಾರ್ಯರ್(ಂ) ಕಸ್ಯಾಶ್ಚಿತ್ಪ್ರವಿಷ್ಟೋಽಹಂ ಗೃಹಾಂತರಂ ॥೨೭॥

ಗೋಪೀಗೃಹಂ ಪ್ರವಿಶ್ಯಾಥ ಮಾಮುವಾಚಾಗತೋ ಭವಾನ್ ।
ಕೇಶೇಷ್ವದ್ಯ ಗೃಹಿತ್ವಾ ತ್ವಾಂ ಯಾಮೋ ಮಾತುಸ್ತವಾಂತಿಕಂ ॥೨೮॥

ತದಾಽಹಂ ಲಜ್ಜಿತಸ್ತಸ್ಯಾ ವಚನಶ್ರವಣೇನ ಹಿ ।
ಭ್ರಾಮಿತಾ ಮೋಹಿತಾ ಸಾಽನ್ಯತ್ರಾವೋಚತ್ಕಿಂಚಿದೇವ ನ ॥೨೯॥

ತಯಾ ಕೈತವಮಾತ್ರೇಣ ಗೋಪೀಭಿರ್ಮಂತ್ರಿತಂ ತಥಾ ।
ಗೃಹೀತಮಖಿಲಂ ತಸ್ಯಾಃ ಪಶ್ಯಂತ್ಯಪ್ಯವದನ್ನ ಚ ॥೩೦॥

---

ಭೋಜ್ಯವಸ್ತುಗಳನ್ನೆಲ್ಲವನ್ನೂ ಭಕ್ಷಿಸೋಣ. ಈರೀತಿಯಲ್ಲಿ ನಾವು ಅನ್ಯೋನ್ಯ ಸೌಹಾರ್ದದಿಂದ ಈ ಗೋಕುಲ ಮಧ್ಯದಲ್ಲಿ ಸಂಚರಿಸೋಣ. ||೨೬||

ಯಾವ ಮನೆಯಲ್ಲಿ ಗೃಹಸ್ವಾಮಿಯು ಇರುವುದಿಲ್ಲವೋ ಆ ಮನೆಯನ್ನು ನಾವು ಶೀಘ್ರವಾಗಿ ಪ್ರವೇಶಿಸೋಣ. ಹೀಗೆಂದು ಪರ್ಯಾಲೋಚಿಸಿ ನಾನು ಒಬ್ಬಾನೊಬ್ಬ ಗೋಪಿಕಾಸ್ತ್ರೀಯ ಮನೆಯನ್ನು ಹೊಕ್ಕೆನು. ||೨೭||

ಈರೀತಿಯಲ್ಲಿ ನಾನು ಆ ಗೋಪಿಯ ಗೃಹವನ್ನು ಪ್ರವೇಶಿಸಲು ಸ್ವಲ್ಪ ಕಾಲವು ಕಳೆದ ಬಳಿಕ ಗೋಪಿಯು ಮನೆಯನ್ನು ಪ್ರವೇಶಿಸಿ ನನ್ನನ್ನು ಕುರಿತು ಹೀಗೆಂದು ಹೇಳಿದಳು. ಎಲೈ ಕಳ್ಳ ಬಾಲಕನೇ, ನೀನು ಈಗ ನನ್ನ ಮನೆಯ ಒಳಕ್ಕೆ ಬಂದಿರುತ್ತೀಯೆ. ನಿನ್ನ ತಲೆಗೂದಲುಗಳನ್ನು ಹಿಡಿದೆಳೆದು ನಿನ್ನನ್ನು ನಿನ್ನ ತಾಯಿಯ ಬಳಿಗೆ ಕರೆದೊಯ್ಯುವೆನು! ||೨೮||

ಆಗ ನಾನು ಅವಳ ಮಾತನ್ನು ಕೇಳುವುದರಿಂದ ಲಜ್ಜೆಗೊಂಡೆನು. ಬಳಿಕ ಆ ಗೋಪಿಯು ಭ್ರಾಂತಿಗೊಂಡು ಮುಂದೆ ಯಾವ ಕಾರ್ಯವನ್ನು ಕೈಗೊಳ್ಳ ಬೇಕೆಂದೇ ತಿಳಿಯದವಳಾಗಿ ಏನನ್ನೂ ಹೇಳಲಿಲ್ಲ. ||೨೯||

ನನ್ನನ್ನು ನೋಡಿದ ಮಾತ್ರದಿಂದಲೇ ಗೋಪಿಯು ಮಂತ್ರಮುಗ್ಧಳಾ ದಂತಾದಳು! ಅನಂತರದಲ್ಲಿ ನಾನು ಅಲ್ಲಿದ್ದ ಭಕ್ಷ್ಯವಸ್ತುಗಳನ್ನೆಲ್ಲವನ್ನೂ ತೆಗೆದು ಕೊಳ್ಳುವದನ್ನು ಅವಳು ನೋಡುತ್ತಿದ್ದರೂ ಸಹ ಯಾವ ಮಾತನ್ನೂ ಆಡಲಾರ ದವಳಾದಳು! ||೩೦||

ವಯಂ ಭುಕ್ತ್ವಾ ಚ ಪೀತ್ವಾ ಚ ಯದಾ ಗಂತುಂ ಸಮುದ್ಯತಾಃ ।
ತದಾ ಪಪ್ರಚ್ಛ ಮಾಂ ಗೋಪೀ ಕಥಂ ಕೃಷ್ಣ ಸಮಾಗತಃ ॥೩೧॥

ಸುಮುಖ ಸ್ಥೀಯತಾಂ ತಾತ ಮದ್ಗೃಹಂ ಶೋಭಿತಂ ಕುರು ।
ಮಯಾ ಚೋಕ್ತಮಹಂ ಮಾತ್ರಾ ತಾಡಿತೋ ಬಹುಶೋ ಗೃಹೇ ॥೩೨॥

ಕ್ಷುಧಿತೋಽಹಂ ಪ್ರದೇಯಂ ತೇ ಕಿಂಚಿಚ್ಚ ಭೋಜನಂ ಮಮ ।
ಸಖಾಯಶ್ಚಾಗತಾ ನೇತುಂ ಕ್ಷುಧಿತೋ ನ ವ್ರಜಾಮ್ಯಹಂ ॥೩೩॥

ಸಾ ಸತ್ಯಮಿತಿ ಮತ್ವೈವ ಮೋಹಿತಾ ಮದ್ವಚಃ ಶ್ರವಾತ್ ।
ಉತ್ತಾರ್ಯ ಪಾತ್ರೇ ಗವ್ಯಂ ಚ ಬಹುಶೋಽದಾತ್ಸುಸಂಸ್ಕೃತಂ ॥೩೪॥

ಮಯಾ ಚ ಭುಕ್ತಂ ಸಖಿಭಿಃ ತತೋಽನ್ಯಸ್ಯಾ ಗೃಹಂ ಗತಃ ।
ಬಹಿರ್ಮಯಿ ಗತೇ ಸಾ ಚ ಮೋಹಮಾಪ ವ್ಯಚಿಂತಯತ್ ॥೩೫॥

---

ನಾವುಗಳೆಲ್ಲರೂ ಭಕ್ಷ್ಯವಸ್ತುಗಳನ್ನು ಭಕ್ಷಿಸಿ, ಪಾನೀಯವನ್ನು ಪಾನ ಮಾಡಿ, ಅಲ್ಲಿಂದ ಹೊರಟುಹೋಗಲು ಉದ್ಯುಕ್ತರಾಗಲು, ಆಗ ಗೋಪಿಯು ನನ್ನನ್ನು ಕುರಿತು ಎಲೈ ಕೃಷ್ಣನೇ, ನೀನು ಇಲ್ಲಿಗೆ ಯಾವ ರೀತಿಯಿಂದ ಬಂದವನಾದೆ? ಎಂಬುದಾಗಿ ಕೇಳಿದಳು. ॥೩೧॥

ಎಲೈ ಸುಂದರವಾದ ಮುಖವುಳ್ಳ ವತ್ಸನೇ, ನನ್ನ ಮನೆಯಲ್ಲಿ ಇರುವವನಾಗು. ಮನೆಯನ್ನು ಶೋಭಿಸುವಂತೆ ಮಾಡುವವನಾಗು. ಅವಳು ಹೀಗೆ ಹೇಳಲು ನಾನು ಅವಳನ್ನು ಕುರಿತು ಹೀಗೆಂದು ಹೇಳಿದೆನು. ನನ್ನ ತಾಯಿಯು ಮನೆಯಲ್ಲಿ ನನ್ನನ್ನು ಬಹುವಾಗಿ ಹೊಡೆದಳು. ನನಗೆ ಈಗ ಬಹಳ ಹಸಿವಾಗುತ್ತಿದೆ. ಆದುದರಿಂದ ನಿನ್ನ ಹತ್ತಿರ ತಿನ್ನುವುದಕ್ಕೇನಾದರೂ ಇದ್ದರೆ ಅದನ್ನು ನನಗೆ ಕೊಡುವವಳಾಗು. ಸ್ನೇಹಿತರು ನನ್ನನ್ನು ಕರೆದೊಯ್ಯಲು ಬಂದಿದ್ದರು. ಆದರೆ ನಾನು ಹಸಿವಿನಿಂದ ಪೀಡಿತನಾಗಿದ್ದರೂ ಸಹ ಮನೆಗೆ ಹೋಗಲಾರೆ. ॥೩೨-೩೩॥

ಅವಳು, ನಾನು ಹೇಳುವುದನ್ನು ನಿಜವೆಂದೇ ನಂಬಿ ನನ್ನ ಮಾತನ್ನು ಕೇಳುವುದರಿಂದ ಮೋಹಗೊಂಡವಳಾಗಿ, ಚೆನ್ನಾಗಿ ಶೋಧಿಸಲ್ಪಟ್ಟ ಆಕಳ ಹಾಲನ್ನು ಪಾತ್ರೆಯಲ್ಲಿ ಬಗ್ಗಿಸಿ ನನಗೆ ಕುಡಿಯುವುದಕ್ಕೆ ಕೊಟ್ಟಳು. ॥೩೪॥

ಬಳಿಕ ನಾನು ಅವಳು ಕೊಟ್ಟ ಹಾಲನ್ನು ಕುಡಿದು, ನನ್ನ ಸ್ನೇಹಿತರೊಂದಿಗೆ ಮತ್ತೊಬ್ಬ ಗೋಪಿಯ ಮನೆಯನ್ನು ಕುರಿತು ತೆರಳಿದೆನು. ಈ ಮನೆ

**ಕಿಂ ಮಯಾ ಮಂತ್ರಿತಂ ಮಾರ್ಗೇ ಗೋಪೀಭಿಃ ಕಿಮಿದಂ ಕೃತಂ ।**
**ಪಶ್ಯಂತ್ಯಾ ಮೇ ಹೃತಂ ಗವ್ಯಂ ಸಖಿಭ್ಯಶ್ಚ ಸಮರ್ಪಿತಂ ॥೩೬॥**

**ಭುಕ್ತ್ವಾ ಪೀತ್ವಾ ಗತಾಃ ಸರ್ವೇ ಹ್ಯಹೋ ಮೇ ಬುದ್ಧಿಮೋಹನಮ್ ।**
**ಕೃತಮಾಸೀತ್ಪ್ರಪಶ್ಯಂತ್ಯಾ ಗತೇಷ್ವಥ ಕರೋಮಿ ಕಿಮ್ ॥೩೭॥**

**ಪುನರೇಷ್ಯಂತಿ ಚೇದತ್ರ ಕರಿಷ್ಯಾಮಿ ನಿಜಂ ಹಿತಮ್ ।**
**ಅಥಾಽನ್ಯಸದನೇ ಚಾಹಂ ಪ್ರವಿಷ್ಟಃ ಸಖಿಭಿಃ ಸಹ ॥೩೮॥**

**ಯಾವದುತ್ತಾರ್ಯ ತದ್ಗವ್ಯಂ ಭೋಕ್ತುಮೇವ ಸಮುದ್ಯತಾಃ ।**
**ತಾವತ್ಪ್ರಾಪ್ತಾ ಗೃಹಂ ಗೋಪೀ ದ್ವಾರಮಾರೋಧ್ಯ ಸಂಸ್ಥಿತಾ ॥೩೯॥**

**ಉವಾಚ ಸಾಽಸ್ಮಾನ್ ಕೇ ಯೂಯಂ ಮದ್ಗೃಹಂ ಸಮುಪಾಗತಾಃ ।**
**ತದಾಽಹಮಬ್ರುವಂ ತಸ್ಯೈ ವಂಚಯನ್ನಥ ಯುಕ್ತಿಭಿಃ ॥೪೦॥**

---

ಯಿಂದ ಹೊರಗೆ ಹೊರಡಲು ಆಗ ಆ ಗೋಪಿಯು ದಿಗ್ಭ್ರಾಂತಳಾಗಿ ಹೀಗೆಂದು ಯೋಚಿಸಿದಳು. ॥೩೫॥

ನಾನು ಯಶೋದೆಯ ಮನೆಯಿಂದ ಹಿಂತಿರುಗಿ ಬರುವಾಗ ನನ್ನ ಗೆಳತಿಯರಾದ ಗೋಪಿಕೆಯರೊಂದಿಗೆ ಯೋಚಿಸಿದ್ದ ವಿಷಯವೇನು ? ಈಗ ನಾನು ಮಾಡಿದ್ದೇನು ? ನಾನು ನೋಡುತ್ತಿರುವಾಗಲೇ ನನ್ನೆದುರಿಗೆ ಈ ಬಾಲಕನು ಹಾಲು ಮೊಸರುಗಳನ್ನು ಅಪಹರಿಸಿ ತನ್ನ ಸ್ನೇಹಿತರೊಂದಿಗೆ ಭಕ್ಷಿಸಿದನು ! ॥೩೬॥

ಬಾಲಕರೆಲ್ಲರೂ ತಿಂಡಿಯನ್ನು ತಿಂದು, ಪಾನೀಯವನ್ನು ಕುಡಿದು, ಇಲ್ಲಿಂದ ಹೊರಟುಹೋದರು. ನನ್ನ ಅವಿವೇಕವನ್ನು ಏನೆಂದು ಹೇಳಲಿ ? ನಾನು ನೋಡುತ್ತಿರುವಾಗಲೇ ಬಾಲಕರು ಅವರ ಕಾರ್ಯವನ್ನು ಸಾಧಿಸಿದರು. ಕಾರ್ಯವನ್ನು ಸಾಧಿಸಿಕೊಂಡು ಹೊರಟುಹೋದ ಮೇಲೆ ನಾನು ಏನನ್ನು ಮಾಡಲು ಸಾಧ್ಯ ? ಮತ್ತೊಮ್ಮೆ ಅವರು ಇಲ್ಲಿಗೆ ಬಂದವರೇ ಆದರೆ ನನ್ನ ಮನೋಗತವನ್ನು ಸಾಧಿಸುವೆನು. ॥೩೭॥

ಅನಂತರದಲ್ಲಿ ನಾನು ಮತ್ತೊಬ್ಬ ಗೋಪಿಯ ಮನೆಯನ್ನು ನನ್ನ ಸ್ನೇಹಿತರ ಜೊತೆಯಲ್ಲಿ ಪ್ರವೇಶಿಸಿದೆನು. ಒಳಗೆ ಹೋಗಿ ಹಾಲು ಮೊಸರು ಬೆಣ್ಣೆಗಳನ್ನು ಸವಿಯಲು ಉದ್ಯುಕ್ತರಾಗುವುದರೊಳಗೆ ಆ ಮನೆಯ ಸ್ವಾಮಿನಿಯಾದ ಗೋಪಿಯು

ಪಿತ್ರಾ ನಂದೇನ ಮಾತ್ರಾ ಚ ಪ್ರೇಷಿತಸ್ತವ ಸನ್ನಿಧೌ ।
ಅತಿಥಿರ್ನೋ ಮುನಿಃ ಕಶ್ಚಿತ್ಸಹ ಶಿಷ್ಯೈರುಪಾಗತಃ ॥೪೧॥

ದಧಿದುಗ್ಧಾದಿ ಯತ್ಕಿಂಚಿದ್ಭವೇದದ್ಯ ತವಾಲಯೇ ।
ಚಿರಂ ಸ್ಥಿತೋ ಭವದ್ಗೇಹೇ ಭವತೀ ನ ಗೃಹೇ ಸ್ಥಿತಾ ॥೪೨॥

ಸಾಽಬ್ರವೀನ್ಮಾಂ ಮಯಾ ವಸ್ತು ಸರ್ವಂ ತುಭ್ಯಮಿಹಾರ್ಪಿತಂ ।
ಗೋರಸಸ್ತು ಕಥಂ ರಕ್ಷ್ಯಸ್ತಾವಕೇ ಗೃಹವಸ್ತುನಿ ॥೪೩॥

ಇತ್ಯುಕ್ತ್ವಾ ದಧಿ ದುಗ್ಧಾದಿ ದದೌ ಕೈತವವಂಚಿತಾ ।
ಮಯಾ ಚ ಸಮುಪಾದಾಯ ಸಖಿಭಿರ್ದ್ವಾರಿ ಪ್ರಾಪಿತಂ ॥೪೪॥

---

ಮನೆಗೆ ಬಂದವಳಾಗಿ ಬಾಗಿಲನ್ನು ಹಾಕಿ ತಡೆದು ನಿಂತು ನಮ್ಮನ್ನು ಕುರಿತು ನೀವು ಯಾರು? ಮತ್ತು ನನ್ನ ಗೃಹಕ್ಕೆ ಏತಕ್ಕೋಸ್ಕರ ಬಂದಿರುವಿರಿ? ಎಂದು ಕೇಳಿದಳು. ಆಗ ನಾನು ಉಪಾಯದಿಂದ ಅವಳನ್ನು ವಂಚಿಸಬೇಕೆಂಬ ಉದ್ದೇಶದಿಂದ ಹೀಗೆಂದು ಹೇಳಿದೆನು. ||೩೮-೩೯-೪೦||

ನಾನು ತಂದೆಯಾದ ನಂದನಿಂದಲೂ ಮತ್ತು ತಾಯಿಯಾದ ಯಶೋದೆಯಿಂದಲೂ ನಿನ್ನ ಬಳಿಗೆ ಕಳುಹಿಸಲ್ಪಟ್ಟಿರುತ್ತೇನೆ. ಒಬ್ಬಾನೊಬ್ಬ ಮುನಿಯು ತನ್ನ ಶಿಷ್ಯರೊಂದಿಗೆ ನಮ್ಮ ಮನೆಗೆ ಅತಿಥಿಯಾಗಿ ಬಂದಿರುವನು. ನಿನ್ನ ಮನೆಯಲ್ಲಿ ಸ್ವಲ್ಪ ಹಾಲು ಮೊಸರು ಮುಂತಾದುವುಗಳಿದ್ದರೆ ಅದನ್ನು ತರುವುದಕ್ಕೋಸ್ಕರ ನನ್ನನ್ನು ಕಳಹಿಸಿರುವರು. ಬಹಳ ಸಮಯದಿಂದ ನಿನ್ನ ಮನೆಯಲ್ಲಿ ಬಂದು ನಿಂತಿರುವೆನು. ನೀನು ಮನೆಯಲ್ಲಿ ಇರಲಿಲ್ಲವು. ||೪೧-೪೨||

ನಾನು ಹೀಗೆಂದು ಹೇಳಲು ಅವಳು ನನ್ನನ್ನು ಕುರಿತು ನನ್ನ ಗೃಹದಲ್ಲಿರುವ ಸಕಲ ವಸ್ತುಗಳನ್ನೂ ನಿನಗೋಸ್ಕರ ಅರ್ಪಿಸಿರುವೆನು. ಹೀಗೆ ನನ್ನ ಮನೆಯ ಪದಾರ್ಥಗಳೆಲ್ಲವೂ ನಿನ್ನ ಅಧೀನದಲ್ಲಿರಲು ಹಾಲು ಮೊಸರುಗಳನ್ನು ಮಾತ್ರ ನಾನು ಹೇಗೆ ರಕ್ಷಿಸಲಿ? ಎಂಬುದಾಗಿ ಹೇಳಿದಳು. ||೪೩||

ಹೀಗೆಂದು ಹೇಳಿ ನನ್ನ ಅನೃತವಾದ (ಸುಳ್ಳಾದ) ಮಾತುಗಳಿಂದ ಮೋಸಹೋದ ಅವಳು ತನ್ನ ಗೃಹದಲ್ಲಿದ್ದ ಮೊಸರು ಹಾಲು ಮುಂತಾದುವುಗಳನ್ನು ನನಗೆ ಸಮರ್ಪಿಸಿದಳು. ನಾನಾದರೋ ಆ ಹಾಲು ಮೊಸರುಗಳನ್ನು ತೆಗೆದುಕೊಂಡು ನನ್ನ ಸ್ನೇಹಿತರ ಸಹಾಯದಿಂದ ಅವಳ ಮನೆಯ ಬಾಗಿಲಿನವರೆಗೆ ಹೋದೆನು. ಮತ್ತು

ತತ್ರ ಪೀತಂ ಚ ಭುಕ್ತಂ ಚ ತಾವತ್ಸಾ ಚ ಸಮಾಗತಾ ।
ಪಪ್ರಚ್ಛ ಕಿಂ ಹೃತಂ ಬಾಲಾ ಭವದ್ಭಿರ್ವಂಚಿತಾಽಸ್ಮಿ ಕಿಂ ॥೪೫॥
ಕಥಯಾಮಿ ಯಶೋದಾಯೈ ಯತ್ಕೃತಂ ಮಮ ವಂಚನಂ ।
ಮಯೋಕ್ತಂ ಮುನಿರೇವಾಹಂ ಶಿಷ್ಯೇಭ್ಯೋಽಪಿ ಚ ಪಾಯಿತಂ॥೪೬॥
ತದಾಽತಿರೋಷಿತಾ ಗೋಪೀ ತತ್ರ ವ್ಯಾಕ್ರೋಷ್ಟು ಮುದ್ಯತಾ ।
ಪಶ್ಯಧ್ವಂ ಕೈತವೋಕ್ತ್ಯಾಽಹಂ ವಂಚಿತಾ ಬಾಲಕೇನ ವೈ ॥೪೭॥
ಪೂರ್ವಸ್ಮಿನ್ದಿವಸೇಽಸ್ಮಾಭಿರ್ವಿಚಾರಃ ಪರಮಃ ಕೃತಃ ।
ವಿಪ್ಲಾವಿತಂ ಮಯಾಽದ್ಯೈವಂ ಶೃಣ್ವಂತ್ಯಾ ಚಾಸ್ಯಭಾಷಿತಂ ॥೪೮॥
ಗೋಪ್ಯಃ ಪಶ್ಯಂ ತು ಬಾಲಾನಾಂ ಚೇಷ್ಟಿತಂ ಸದನೇ ಮಮ ।

---

ನಾವೆಲ್ಲರೂ ಅಲ್ಲಿ ಹಾಲು ಮೊಸರುಗಳನ್ನು ಕುಡಿದು ಬೆಣ್ಣೆ ತುಪ್ಪ ಮುಂತಾದುವುಗಳನ್ನು ತಿಂದೆವು. ಅಷ್ಟರಲ್ಲಿ ಗೋಪಿಯು ಅಲ್ಲಿಗೆ ಬಂದವಳಾಗಿ ಎಲೈ ಬಾಲಕನೇ, ನೀನು ನನ್ನ ಹಾಲು ಮೊಸರುಗಳನ್ನು ಅಪಹರಿಸಿರುವೆಯೋ? ನಾನು ನಿನ್ನ ಮೋಹಕವಾದ ಮಾತುಗಳಿಗೆ ಬೆರಗಾಗಿ ಮೋಸಹೋಗಿರುವೆನೆ? ಎಂದು ಕೇಳಿದಳು. ||೪೪-೪೫||

ನೀನು ನನಗೆ ಮಾಡಿರುವ ಈ ಮೋಸದ ವಿಷಯವನ್ನು ಯಶೋದೆಯ ಹತ್ತಿರ ತಿಳಿಸುವೆನು ಎಂದು ಹೇಳಿದಳು. ಅವಳ ವಚನಕ್ಕೆ ನಾನು ಹೀಗೆಂದು ಉತ್ತರ ಕೊಟ್ಟೆನು. ಯಾವ ಮುನಿಯು ನಮ್ಮ ಮನೆಗೆ ಅತಿಥಿಯಾಗಿ ತನ್ನ ಶಿಷ್ಯರೊಂದಿಗೆ ಬಂದಿರುವನೆಂದು ಹೇಳಿದೆನೋ ಆ ಮುನಿಯು ನಾನೇ ಆಗಿರುವೆನು. ಈ ಬಾಲಕರೇ ನನ್ನ ಶಿಷ್ಯರಾಗಿರುವರು. ಆದುದರಿಂದ ಮುನಿಯಾದವನು ಶಿಷ್ಯರಾದ ಇವರಿಗೆ ಹಾಲು ಮೊಸರುಗಳನ್ನು ಪಾನಮಾಡಿಸಿದನು. ||೪೬||

ನನ್ನ ಮಾತನ್ನು ಕೇಳಿ, ಆ ಗೋಪಿಯು ಅತ್ಯಂತ ಕೋಪಗೊಂಡವಳಾಗಿ ಗಟ್ಟಿಯಾಗಿ ಕೂಗುತ್ತಾ ಹೀಗೆಂದು ಹೇಳಲು ಪ್ರಾರಂಭಿಸಿದಳು.--ಎಲ್ಲರೂ ನೋಡಿರಿ. ನಾನು ಈ ಬಾಲಕನ ಮೋಸದ ಮಾತುಗಳಿಗೆ ಬೆರಗಾಗಿ ವಂಚಿಸಲ್ಪಟ್ಟಿರುವೆನು. ಹಿನ್ನೆಯ ದಿವಸ ನಾವು ಈ ಬಾಲಕನ ವಿಷಯವನ್ನು ಚೆನ್ನಾಗಿ ಯೋಚಿಸಿದೆವು. ಆದರೆ ಈ ದಿವಸ ನಾನು ಈ ಬಾಲಕನ ಮಾತುಗಳನ್ನು ಕೇಳಿ ಈ ರೀತಿಯಲ್ಲಿ ಮೋಸಹೋದೆನು. ಎಲೌ ಗೋಪಿಯರೇ, ನೀವೆಲ್ಲರೂ ಸ್ನೇಹಿತರೊಡನೆ

ಇತಿ ತಾ ವಚನಂ ಶ್ರುತ್ವಾ ಪ್ರಹಸ್ಯಾಽಖಿಲಗೋಪಿಕಾಃ ॥೪೯॥

ಸಮುದ್ಯತಾಸ್ತಾ ಮಾಂ ಧರ್ತುಂ ವಯಂ ಶೀಘ್ರಂ ಪಲಾಯಿತಾಃ ।
ತಾಃ ಪ್ರಹಸ್ಯಾಽಬ್ರುವನ್ಭೂಯೋ ಭೂಯಸ್ತಚ್ಚೇಷ್ಟಿತಂ ಮಮ॥೫೦॥

ಗತಂ ತದ್ಗತಮೇವಾಸ್ತು ಕರ್ತವ್ಯಂ ಕಿಂ ಮಯಾಽಧುನಾ ।
ಬುದ್ಧಿರುತ್ಪದ್ಯತೇ ನೄಣಾಂ ಸಮಯೇ ನಿರ್ಗತೇ ಸತಿ ॥೫೧॥

ಏವಂ ನಿಗದಮಾನಾಸ್ತಾಃ ಪ್ರಯಯುಃ ಸ್ವಂ ಸ್ವಮಾಲಯಂ ।
ತತೋ ಗತೋಽಹಮನ್ಯಸ್ಯಾ ಭವನಂ ಸಖಿಭಿಃ ಸಹ ॥೫೨॥

ದೃಷ್ಟ್ವಾ ತದ್ಗೃಹಿಣೀ ಶೂನ್ಯಂ ಪ್ರವಿಷ್ಟೋಽಭ್ಯಂತರಂ ಗತಃ ।
ದಧಿದುಗ್ಧ ಸಮಾಕೀರ್ಣಂ ನವನೀತಂ ಚ ಯತ್ ಸ್ಥಿತಂ ॥೫೩॥
ನಾನಾರಸ ವಿಶೇಷೈಶ್ಚ ಪಕ್ವಾನ್ನಾದಿಯುತೈಃ ಶುಭೈಃ ।

---

ಈ ಬಾಲಕನು ನನ್ನ ಮನೆಯಲ್ಲಿ ಆಚರಿಸಿರುವ ದುಷ್ಕೃತ್ಯವನ್ನು ನೋಡಿರಿ. ||೪೭-೪೮||

ಅವಳು ಈ ರೀತಿಯಲ್ಲಿ ಹೇಳಿದ ಮಾತನ್ನು ಕೇಳಿ ಉಳಿದ ಗೋಪಿಕೆಯರೆಲ್ಲರೂ ಗಟ್ಟಿಯಾಗಿ ನಕ್ಕು ನನ್ನನ್ನು ಹಿಡಿಯಲು ಉದ್ಯುಕ್ತರಾದರು. ಆದರೆ ನಾವು ಅಲ್ಲಿಂದ ಜಾಗ್ರತೆಯಾಗಿ ಓಡಿದವರಾದೆವು. ಅವರು ಮತ್ತೆ ಮತ್ತೆ ಗಟ್ಟಿಯಾಗಿ ನಗುತ್ತಾ ನನ್ನ ಚೇಷ್ಟೆಯನ್ನು ಕುರಿತು ಪರಸ್ಪರವಾಗಿ ಮಾತನಾಡಿಕೊಂಡರು. ||೪೯-೫೦||

ನಡೆದುಹೋದ ವೃತ್ತಾಂತವು ಕಳೆದುಹೋಯಿತು. ಈಗ ನಾನು ಮಾಡತಕ್ಕದ್ದೇನಿರುವುದು? ಮನುಷ್ಯರಿಗೆ ಕಾಲವು ಅತಿಕ್ರಮಿಸಿದಮೇಲೆ ಬುದ್ಧಿಯು ಉಂಟಾಗುವುದು. ಹೀಗೆಂದು ಹೇಳುವವರಾಗಿ ಆ ಗೋಪಿಯರು ತಮ್ಮ ತಮ್ಮ ಮನೆಗಳನ್ನು ಕುರಿತು ತೆರಳಿದರು. ||೫೧||

ಬಳಿಕ ನಾನು ಮತ್ತೊಬ್ಬ ಗೋಪಿಯ ಮನೆಯನ್ನು ನೋಡಿ ಅದರೊಳಕ್ಕೆ ನನ್ನ ಸ್ನೇಹಿತರೊಂದಿಗೆ ಪ್ರವೇಶಿಸಿದೆನು. ಗೃಹಸ್ವಾಮಿನಿಯು ಇಲ್ಲದಿರುವ ಆ ಮನೆಯನ್ನು ನೋಡಿ ಅದರ ಒಳಗಡೆಗೆ ಹೋದೆನು. ||೫೨||

ಆ ಮನೆಯಲ್ಲಿ ಮೊಸರು, ಹಾಲು, ಬೆಣ್ಣೆ ಮುಂತಾದುವುಗಳೂ, ಷಡ್ರಸೋಪೇತವಾದ ಪಕ್ವಾನ್ನಗಳೂ, ಸಿದ್ಧವಾಗಿದ್ದುವು. ||೫೩||

ವಿಲೋಕ್ಯಾಽಹಂ ಭೃಶಂ ಪ್ರೀತಃ ಸಖಾಯೋ ಮುದಿತಾ ಮಮ. ॥೫೪॥

ನಿವಿಷ್ಟಾ ಮಂಡಲೀ ಕೃತ್ಯ ವೀಕ್ಷಮಾಣಾ ಮುಹುರ್ಮುಹುಃ ।
ದತ್ವಾ ದ್ವಾರಿ ಕಪಾಟಂ ಚ ಹ್ಯಖಾದಿಷ್ಮ ಯಥೇಚ್ಛಯಾ ॥೫೫॥

ತದ್ಗೃಹಸ್ಯೇಶ್ವರೀ ದ್ವಾರಂ ದೃಷ್ಟ್ವಾ ಬದ್ಧಕಪಾಟಕಂ ।
ಉಚ್ಚೈರಾಕ್ರೋಶನಂ ಚಕ್ರೇ ಕೋ ಮಮಾಸ್ತಿ ಗೃಹಾಂತರೇ ॥೫೬॥

ಮೋಚಯಾಶು ಕಪಾಟಂ ವೈ ಪ್ರವಿಶಾಮಿ ಗೃಹೇ ನಿಜೇ ।
ಇತಿ ಸಾ ದ್ವಾರಿ ಸಂರಾವಮಕರೋದ್ಘೋಷ ಬಾಲಕೈಃ ॥೫೭॥

ತಾವದ್ಭುಕ್ತಂ ಯಥೇಷ್ಟಂ ಚ ಮಯಾ ಚ ಪ್ರೀತಮಾನಸೈಃ ।
ಅಹಂ ಜಾನಾಮಿ ಮಾಂ ಸೌಮ್ಯ ಕಿಂ ಕರಿಷ್ಯತಿ ಗೋಪಿಕಾ ॥೫೮॥

ಸಾ ಸಮುತ್ತೀರ್ಯ ಸದನಂ ಪ್ರವಿಶ್ಯಾಪಶ್ಯದಾಲಯೇ ।
ದಧಿ ದುಗ್ಧಂ ಚ ಪಕ್ವಾನ್ನಂ ನ ಕಿಂಚಿದವಶೇಷಿತಂ

---

ಅವುಗಳನ್ನೆಲ್ಲವನ್ನೂ ನೋಡಿ ನಾನು ತುಂಬಾ ಸಂತೋಷಗೊಂಡೆನು. ನನ್ನ ಗೆಳೆಯರೂ ಸಹ ಹರ್ಷಚಿತ್ತರಾಗಿ ಪುನಃ ಪುನಃ ಆ ಭೋಜ್ಯವಸ್ತುಗಳನ್ನು ನೋಡುವವರಾಗಿ ಮಂಡಲಾಕಾರವಾಗಿ ಕುಳಿತುಕೊಂಡರು. ಬಳಿಕ ಬಾಗಿಲನ್ನು ಮುಚ್ಚಿಕೊಂಡು ನಾವೆಲ್ಲರೂ ಯಥೇಚ್ಛವಾಗಿ ಭಕ್ಷ್ಯಗಳನ್ನು ತಿಂದೆವು. ॥೫೪-೫೫॥

ಅಷ್ಟರಲ್ಲಿ ಆ ಮನೆಯ ಯಜಮಾನಿಯು ಬಂದು ತನ್ನ ಮನೆಯ ಬಾಗಿಲು ಮುಚ್ಚಿರುವುದನ್ನು ಕಂಡು "ನನ್ನ ಮನೆಯಲ್ಲಿ ಯಾರು ಇರುವರು? ಶೀಘ್ರವಾಗಿ ಬಾಗಿಲನ್ನು ತೆರೆಯಿರಿ. ನಾನು ಮನೆಯೊಳಗೆ ಬರುವೆನು." ಎಂದು ಗಟ್ಟಿಯಾಗಿ ಕೂಗಿಕೊಂಡಳು. ॥೫೬॥

ಈ ಪ್ರಕಾರವಾಗಿ ಅವಳು ಬಾಗಿಲಿನ ಬಳಿಯಲ್ಲಿ ನಿಂತು ಕೂಗುತ್ತಿರಲು ನಾನು ಹರ್ಷಚಿತ್ತರಾದ ಆ ಬಾಲಕರೊಡನೆ ಆಹಾರವನ್ನು ಇಚ್ಛಾನುಸಾರವಾಗಿ ತಿಂದೆನು. ಬಳಿಕ ಆ ಗೋಪಿಯ ವಿಷಯವನ್ನು ನಾನು ತಿಳಿದಿರುವೆನು. ಅವಳು ನಮ್ಮನ್ನು ಏನನ್ನು ಮಾಡುವಳು? ಎಂದು ಹೇಳಿದೆನು. ॥೫೭-೫೮॥

ಅವಳು ಮನೆಯ ಒಳಗಡೆ ಬಂದು ಮನೆಯಲ್ಲಿ ನಾವೆಲ್ಲರೂ ಮೊಸರು ಹಾಲು ಪಕ್ವಾನ್ನ ಮುಂತಾದುವುಗಳನ್ನೆಲ್ಲವನ್ನೂ ತಿಂದು ಕುಡಿದು ಭಾಂಡಗಳನ್ನು

ಭುಕ್ತ್ವಾ ಪೀತ್ವಾ ಭುವಿ ಕ್ಷಿಪ್ತ್ವಾ ಭಾಂಡಂ ಭಗ್ನಂ ಕೃತಂ ಚ ತೈಃ ।
ದೃಷ್ಟ್ವಾ ಚುಕ್ರೋಶ ಸದನೇಽಬ್ರವೀದಾನೀಯ ವಲ್ಲವೀಃ ॥೬೦॥

ಹೇ ಹೇ ಸಖ್ಯಃ ಸಮಾಯಾಂತು ಪಶ್ಯಂತು ಮಮ ಮಂದಿರಂ ।
ಪಾತ್ರಾಣಿ ರಿಕ್ತಭಗ್ನಾನಿ ಯಚ್ಚಾನ್ಯದಖಿಲಂ ಕೃತಂ ॥೬೧॥

ಇದಾನೀಂ ನಿರ್ಗತಾ ಗೇಹಾತ್ತದಾಽಗತ್ಯಾಽಪಿ ನಾಶಿತಂ ।
ದಧಿ ದುಗ್ಧಾದಿಕಂ ಸರ್ವಂ ಸಂಚಿತಂ ಯದ್ಗೃಹೇ ಸ್ಥಿತಂ ॥೬೨॥

ಕ್ವ ಯಾಮಿ ಕಿಂ ಕರಿಷ್ಯಾಮಿ ಕ್ಷಣಂ ತ್ಯಕ್ತುಂ ನ ಶಕ್ಯತೇ ।
ಗೃಹಾತ್ಸಖ್ಯಃ ಕದಾಚಿನ್ನ ಬಹಿರ್ಯಾಮಿ ಸದಾ ಸ್ಥಿತಾ ॥೬೩॥

ಯಶೋದಾ ಮನ್ಯತೇ ಚೈವ ಬಾಲಕೋ ಮಮ ಪುತ್ರಕಃ ।
ನೈವ ಕಿಂಚಿತ್ಕರೋತೀಹ ಮಿಥ್ಯೈವಾಹುರ್ವ್ರಜಾಂಗನಾಃ ॥೬೪॥

---

ಒಡೆದು ಯಾವ ಭಕ್ಷ್ಯಗಳನ್ನೂ ಉಳಿಸದಿರುವುದನ್ನು ನೋಡಿ ಆ ಗೋಪಿಯು ಹೀಗೆಂದು ಕಿರಿಚಿಕೊಂಡಳು. ॥೫೯-೬೦॥

ಎಲೈ ಗೆಳತಿಯರೇ, ಬನ್ನಿರಿ ಮತ್ತು ನನ್ನ ಮನೆಯನ್ನು ನೋಡಿರಿ. ಹಾಲು ಮೊಸರುಗಳಿಂದ ತುಂಬಿದ್ದ ಭಾಂಡಗಳು ಬರಿದಾಗಿವೆ. ಮತ್ತು ಒಡೆದು ಹೋಗಿವೆ. ಇದಲ್ಲದೇ ಇನ್ನೂ ಅನೇಕ ಅಪಘಾತಗಳಾಗಿವೆ. ನಾನು ಈಗ ತಾನೆ ಮನೆಯಿಂದ ಹೊರಗೆ ಹೋಗಿದ್ದೆನು. ಹಿಂತಿರುಗಿ ಬರುವಷ್ಟರಲ್ಲಿ ಮನೆಯಲ್ಲಿ ಸಂಗ್ರಹಿಸಿಟ್ಟಿದ್ದ ಮೊಸರು ಹಾಲು ಮುಂತಾದುವುಗಳೆಲ್ಲವನ್ನೂ ಈ ಬಾಲಕರು ತಿಂದು ಮುಗಿಸಿರುವರು. ಈಗ ನಾನು ನಿರ್ಗತಿಕಳಾದೆನು ! ॥೬೧-೬೨॥

ಈಗ ನಾನು ಎಲ್ಲಿಗೆ ಹೋಗಲಿ? ಏನನ್ನು ಮಾಡಲಿ? ಕ್ಷಣಮಾತ್ರವೂ ಮನೆಯನ್ನು ಬಿಟ್ಟಿರುವುದಕ್ಕಾಗುವುದಿಲ್ಲ ! ಎಲೌ ಸಖಿಯರೇ, ನಾನು ಮನೆಯಿಂದ ಹೊರಕ್ಕೆ ಹೊರಡದೇ ಸರ್ವದಾ ಮನೆಯಲ್ಲಿಯೇ ಇರುವೆನು. ಆದರೆ ಯಶೋದೆಯು ಇನ್ನೂ ಬಾಲಕನಾದ ನನ್ನ ಮಗನು ಯಾವ ದುಷ್ಕೃತ್ಯವನ್ನೂ ಮಾಡಲಾರನು. ಇವನ ವಿಷಯದಲ್ಲಿ ಆ ಗೋಪಿಯರು ಸುಳ್ಳನ್ನಾಡುತ್ತಿರುವರು ! ಎಂದು ಹೇಳುವಳು. ॥೬೩-೬೪॥

**ಮುಕ್ತದ್ವಾರೇ ಮಮ ಗೃಹೇ ಪ್ರವಿಷ್ಟೋ ಬಾಲಕೈಃ ಸಹ ।**
**ದತ್ವಾ ದ್ವಾರಿ ಕಪಾಟಂ ಚ ದ್ರವ್ಯಂ ಭುಕ್ತಂ ಚ ನಾಶಿತಂ ॥೬೫॥**

**ಪರಾವೃತ್ಯಾಽಭಿಗಚ್ಛಾಮಿ ಯಾವತ್ತಾವತ್ಪಲಾಯಿತಾಃ ।**
**ಮಯಾ ಜ್ಞಾತ್ವಾ ಧೃತೋ ನೋಽಹೋ ಮುಕ್ತ್ವಾ ಗೃಹಕಪಾಟಿಕಂ॥೬೬॥**

**ಅಹಂ ಮಮ ಸಖೀ ಕಾಚಿದ್ರಕ್ಷಾಮೋ ಯತ್ನತೋ ಗೃಹಂ ।**
**ತದಾ ಯಶೋದಾಮಾನೀಯ ದರ್ಶಯಿಷ್ಯಾಮಿ ನಿಶ್ಚಿತಂ ॥೬೭॥**

**ಗತೇ ಕಾರ್ಯೇ ಸದಾ ನೃಣಾಂ ಭವತ್ಯೇವ ವಿಚಾರಣಾ ।**
**ಪೂರ್ವತೋ ಜಾಯತೇ ಬುದ್ಧಿಃ ಕಥಂ ಕಾರ್ಯಂ ವಿಹೀಯತೇ ॥೬೮॥**

---

ಈ ಬಾಲಕನು ನನ್ನ ಮನೆಯ ಬಾಗಿಲು ತೆರೆದಿರಲು ಅದರೊಳಗೆ ತನ್ನ ಗೆಳೆಯರಾದ ಬಾಲಕರೊಂದಿಗೆ ಪ್ರವೇಶಿಸಿ ಬಾಗಿಲನ್ನು ಮುಚ್ಚಿಕೊಂಡು ಹಾಲು ಮೊಸರು ಮೊದಲಾದುವನ್ನು ಕುಡಿದು ಭಾಂಡಗಳನ್ನು ಒಡೆದುಹಾಕಿರುವನು. ॥೬೫॥

ನಾನು ಹಿಂತಿರುಗಿ ಬರುವಷ್ಟರಲ್ಲಿಯೇ ಬಾಲಕರು ಇಲ್ಲಿಂದ ಓಡಿಹೋಗಿರುವರು. ನಾನು ವಿಷಯವನ್ನು ತಿಳಿದೂ ಸಹ ಅವರನ್ನು ಬಂಧಿಸದೇ ಮುಗ್ಧಳಾದೆನು. ಮತ್ತು ಈ ಚೋರನು ಮನೆಗೆ ಬರುವನೆಂದು ತಿಳಿದೂ ಸಹ ಮನೆಯ ಬಾಗಿಲನ್ನು ಬಿಟ್ಟು ಬೇರೆಯ ಕಡೆಗೆ ಹೋಗಿರುವೆನು! ॥೬೬॥

ಇನ್ನು ಮುಂದೆ ನಾನು ಮತ್ತು ನನ್ನ ಸಖಿಯು ಇಬ್ಬರೂ ಒಡಗೂಡಿ ಜಾಗರೂಕತೆಯಿಂದ ಮನೆಯನ್ನು ರಕ್ಷಿಸುವೆವು. ಆದರೂ ಕೃಷ್ಣನು ಇಲ್ಲಿಗೆ ಬಂದವನಾದರೆ ನಿಜವಾಗಿಯೂ ಅವನನ್ನು ಹಿಡಿದು ಯಶೋದೆಗೆ ತೋರಿಸುವೆನು. ॥೬೭॥

ಕಾರ್ಯವು ಗತಿಸಲು ಮನುಷ್ಯರಲ್ಲಿ ವಿಚಾರಬುದ್ಧಿಯು ಹುಟ್ಟುವುದು. ಕಾರ್ಯವು ಅತಿಕ್ರಮಿಸುವುದಕ್ಕಿಂತ ಮೊದಲೇ ವಿಚಾರಬುದ್ಧಿಯು ಉಂಟಾದರೆ ಆ ಕಾರ್ಯವು ಹೇಗೆತಾನೇ ಸರಾಗವಾಗಿ ಕೊನೆಗೊಳ್ಳದೇ ಇರುವುದು? ಅವರು ನನ್ನ ವಿಷಯದಲ್ಲಿ ಹೀಗೆಂದು ಹೇಳಿಕೊಳ್ಳಲು ನಾನು ಆ ಪ್ರದೇಶದಿಂದ ನನ್ನ ಸ್ನೇಹಿತರೊಂದಿಗೆ ಮುಂದೆ ತೆರಳಿದೆನು. ॥೬೮॥

ಇತ್ಯೇವಂ ಬಹುಧಾ ಚೋಕ್ತೈಃ ಸಖೀಭಿರ್ವಿಚರಾಮ್ಯಹಂ ।
ತತೋಽನ್ಯಸದನೇ ಯಾವತ್ಪ್ರವಿಶಾಮಿ ತ್ವರಾಽನ್ವಿತಃ ॥೬೯॥

ತಾವದ್ಗೃಹಾಂತರಾದ್ಗೋಪೀ ನಿಃಸೃತಾಽಸೌ ತು ಸತ್ವರಾ ।
ತದಾಽಹ ಮಬ್ರುವಂ ತಾಂ ಚ ಕ್ವ ಯಾತ ಇತಿ ಭಾಷಿಣೀಂ ॥೭೦॥

ಸಖಾಽಸ್ಮಾಕಂ ಪಲಾಯಿತ್ವಾ ನಿವಿಷ್ಟಸ್ತವ ಸದ್ಮನಿ ।
ಅಹಂ ಗವ್ಯಂ ದ್ರುತಂ ಹಿತ್ವಾ ಬಹಿರ್ಜಾತ ಸ್ತವಾಖಿಲಂ ॥೭೧॥

ಮಾಂ ವೀಕ್ಷ್ಯಾಽಂತರ್ಗತಾ ಹ್ಯೇತ್ಯ ಬಹಿರ್ನಾಽಪಶ್ಯದಾಗತಾ ।
ವೀಕ್ಷ್ಯ ಸರ್ವಂ ಹೃತಂ ದ್ರವ್ಯಂ ಬಾಲಾನಾಂ ಚ ಪಲಾಯನಂ ॥೭೨॥

ಚುಕ್ರೋಶ ಕಿಂ ಯದೇತೇನ ಕೈತವೋಕ್ತ್ಯಾ ಪ್ರತಾರಿತಾ ।
ಜ್ಞಾತಂ ತಚ್ಚೇಷ್ಟಿತಂ ಮೇಽದ್ಯ ವಚನಂ ಚಾಪ ಧಾರಿತಂ ॥೭೩॥

---

ಬಳಿಕ ನಾನು ಆತುರಗೊಂಡವನಾಗಿ ಮತ್ತೊಬ್ಬ ಗೋಪಿಯ ಮನೆಯನ್ನು ಪ್ರವೇಶಿಸಿದೆನು. ಅಷ್ಟರೊಳಗೇ ತನ್ನ ಮನೆಯನ್ನು ಬಿಟ್ಟು ಬೇರೆಯ ಕಡೆಗೆ ಹೋಗಿದ್ದ ಆ ಗೋಪಿಯು ಗಾಬರಿಯುಳ್ಳವಳಾಗಿ ಆ ಮನೆಯಿಂದ ಹೊರ ಬಿದ್ದಳು. ॥೬೯॥

"ನೀವು ಎಲ್ಲಿಗೆ ಹೋಗುತ್ತಲಿರುವಿರಿ? ಎಂಬುದಾಗಿ ನಮ್ಮನ್ನು ಹೆದರಿಸುತ್ತಿರುವ ಅವಳನ್ನು ಕುರಿತು ನಾನು ಹೀಗೆಂದು ಹೇಳಿದೆನು. ॥೭೦॥

ನನ್ನ ಗೆಳೆಯನೊಬ್ಬನು ಓಡಿ ಬಂದು ನಿನ್ನ ಮನೆಯಲ್ಲಿ ಅವಿತಿರುವನು. ಅವನನ್ನು ಹುಡುಕಲು ಹೋದ ನಾನು ನಿನ್ನ ಸಮಸ್ತವಾದ ಹಾಲು ಮೊಸರು ಮೊದಲಾದುವುಗಳನ್ನು ಭಕ್ಷಿಸದೇ ಅಲ್ಲಿಯೇ ಬಿಟ್ಟು ಹೊರಗೆ ಬಂದಿರುವೆನು. ॥೭೧॥

ನನ್ನನ್ನು ನೋಡಿ ಒಳಗೆ ಹೋದ ಅವಳು ಪುನಃ ಹೊರಗೆ ಬಂದು ನಮ್ಮನ್ನು ನೋಡಲಿಲ್ಲ! ಅವಳ ಮನೆಯ ಒಳಭಾಗಕ್ಕೆ ಹೋಗಿ ತನ್ನ ಮನೆಯೊಳಗಿದ್ದ ಹಾಲು ಮೊಸರು ಮುಂತಾದ ಸಕಲ ವಸ್ತುಗಳೂ ಅಪಹರಿಸಲ್ಪಟ್ಟುದನ್ನೂ ಮತ್ತು ಬಾಲಕರೆಲ್ಲರೂ ತನ್ನ ಮನೆಗೆ ಬಂದು ಪದಾರ್ಥಗಳನ್ನು ತಿಂದು ಓಡಿಹೋದುದನ್ನೂ ನೋಡಿ, ನಾನೇನು ಬಾಲಕನ ಅನೃತಭಾಷಣದಿಂದ ಮೋಸಹೋದೆನೇ? ಈ ದಿವಸ ಅವನು ನನ್ನ ಮನೆಯಲ್ಲಿ ಮಾಡಿದ ಚೇಷ್ಟೆಯನ್ನೂ ಮತ್ತು ಅವನ ವಚನವನ್ನೂ

ಪುನಶ್ಚೇದೇಷ್ಯತಿ ಗೃಹೇ ತತ್ಕರಿಷ್ಯೇ ಯದೀಪ್ಸಿತಂ ।
ಏವಮುಕ್ತ್ವಾ ಚ ಸಾ ಗೋಪೀ ವಿರರಾಮ ಗೃಹೇ ಸ್ಥಿತಾ ॥೭೪॥

ತತೋಽಹಮನ್ಯಸದನಂ ಪ್ರವಿಷ್ಟಃ ಸಖಿಭಿಃ ಸಹ ।
ಮಿಲಿತ್ವಾ ಕತಿಚಿದ್ಗೋಪ್ಯೋ ಮಾಂ ಗ್ರಹೀತುಂ ಸಮುದ್ಯತಾಃ ॥೭೫॥

ತಾ ದೃಷ್ಟ್ವಾ ಮೇ ಸಖಾಯಶ್ಚ ಪಲಾಯನ ಪರಾ ಯಯುಃ ।
ಅಹಮೇಕೋ ಧೃತಸ್ತಾಭಿರ್ಭೀತಾ ನೈವಾಂತಿಕಂ ಯಯುಃ ॥೭೬॥

ತಾ ಊಚುರದ್ಯ ಕಾ ವಾರ್ತಾ ಕ್ವ ಯಾಸಿ ಭವನಾದಿತಃ ;
ತ್ವಾಂ ಗೃಹೀತ್ವಾ ಯಶೋದಾಯಾಃ ಪುರೋ ಯಾಸ್ಯಾಮಹೇ ದ್ರುತಂ॥೭೭॥

ಸರ್ವಾಪರಾಧಾಂಸ್ತೇ ಕೃಷ್ಣ ವದಿಷ್ಯಾಮಸ್ತದಗ್ರತಃ ।
ತ್ವಮಸ್ಮಾಕಂ ವಶೇ ಯಾತಃ ಸಖಾಯಸ್ತೇ ಪಲಾಯಿತಾಃ ॥೭೮॥

ತ್ವಂ ಚೈವ ಶಪಥಂ ಕುರ್ಯಾಃ ಪುನರೇಷ್ಯಾಮಿ ನ ಕ್ವಚಿತ್ ।
ತದಾ ತ್ಯಜಾಮಸ್ತ್ವಾಮದ್ಯ ನಾನ್ಯಥಾ ಹಿ ಕಥಂಚನ ॥೭೯॥

---

ಮನಗಂಡೆನು! ಅವನು ಮತ್ತೊಮ್ಮೆ ನನ್ನ ಮನೆಗೆ ಬಂದವನೇ ಆದರೆ ಆಗ ನನ್ನ ಮನೋರಥವನ್ನು ಈಡೇರಿಸಿಕೊಳ್ಳುವೆನು. ಎಂದು ಕೂಗಿಕೊಂಡಳು. ಹೀಗೆಂದು ಹೇಳಿ ಅವಳು ಮನೆಯಲ್ಲಿಯೇ ಇದ್ದವಳಾಗಿ ವಿಶ್ರಾಂತಿಯನ್ನು ಹೊಂದಿದಳು. ||೭೨-೭೩-೭೪||

ಅನಂತರದಲ್ಲಿ ನಾನು ನನ್ನ ಗೆಳೆಯರೊಂದಿಗೆ ಮತ್ತೊಬ್ಬರ ಮನೆಯನ್ನು ಪ್ರವೇಶಿಸಿದೆನು. ಆಗ ಕೆಲವುಮಂದಿ ಗೋಪಿಕೆಯರು ಒಟ್ಟುಗೂಡಿ ನನ್ನನ್ನು ಹಿಡಿಯಲು ಉದ್ಯುಕ್ತರಾದರು. ||೭೫||

ಆ ಗೋಪಿಯರನ್ನು ನೋಡಿ ನನ್ನ ಸ್ನೇಹಿತರು ಓಡಿಹೋದರು. ಬಳಿಕ ಗೋಪಿಯರು ನನ್ನನ್ನು ಬಂಧಿಸಿದರು. ಬಾಲಕರು ಭಯಗೊಂಡು ನನ್ನನ್ನು ಬಿಡಿಸಲು ಸಮೀಪಕ್ಕೆ ಬರಲಿಲ್ಲ. ||೭೬||

ನನ್ನನ್ನು ಹಿಡಿದು ಅವರು ಹೀಗೆಂದು ಹೇಳಿದರು.--"ಎಲೈ ಕೃಷ್ಣನೇ, ಈಗ ಏನನ್ನು ಹೇಳುವೆ? ನೀನು ಈ ಮನೆಯಿಂದ ಎಲ್ಲಿಗೆ ಹೋಗುವೆ? ನಿನ್ನನ್ನು ಹಿಡಿದುಕೊಂಡು ಶೀಘ್ರವಾಗಿ ಯಶೋದೆಯ ಮುಂದಕ್ಕೆ ಹೋಗುವೆವು. ಮತ್ತು

ತತೋಽಹ ಮಬ್ರುವಂ ತಾಭ್ಯೋ ಯುಷ್ಮದ್ಭೀತಿರ್ನ ವರ್ತತೇ ।
ಕ್ರೀಡನ್ನಹಂ ಪ್ರವಿಷ್ಟೋಽತ್ರ ಸಖಿಭಿಃ ಸಹಿತೋ ಯದಾ ॥೮೦॥

ಕಾ ಹಾನಿರ್ವಃ ಕೃತಾ ಮೇಽದ್ಯ ನಾಪರಾಧಂ ವಿನಾ ಭಯಂ ।
ಯಶೋದಾಯೈ ಚ ಕಿಂ ಯೂಯಂ ವದಿಷ್ಯಥ ಬ್ರುವಂತು ಮೇ ॥೮೧॥

ಮಿಥ್ಯಾಗಸಂ ನ ಮಾಂ ಮಾತಾ ಕದಾಚಿತ್ತಾಡಯಿಷ್ಯತಿ ।
ಇತಿ ಮದ್ವಚನಂ ಶ್ರುತ್ವಾ ತಾ ವಿಹಸ್ಯಾಬ್ರುವನ್ಪುರಃ ॥೮೨॥

ಸ್ತ್ರೀಭಿ ಸ್ತ್ವಮಧುನಾ ನೂನಂ ಶೀಘ್ರ್ರಮಾಗತ್ಯ ವೇಷ್ಟಿತಃ ।
ಕ್ಷಣಾವಸ್ಥಾನ ಮಾತ್ರೇಣ ಸಾಪರಾಧೋ ನ ಯತ್ಕೃತಂ ॥೮೩॥

---

ನಿನ್ನ ಸಕಲ ಅಪರಾಧಗಳನ್ನೂ ಅವಳೆದುರಿನಲ್ಲಿ ಹೇಳುವೆವು. ನೀನು ನಮ್ಮ ವಶದಲ್ಲಿ 'ಶಿಕ್ಕಿರುವೆ! ನಿನ್ನ ಸ್ನೇಹಿತರು ಓಡಿಹೋಗಿರುವರು. ಆದುದರಿಂದ ನಾನು ಇನ್ನು ಮುಂದೆ ಎಂದಿಗೂ ಇಲ್ಲಿಗೆ ಬರುವುದಿಲ್ಲ. ಎಂದು ಶಪಥವನ್ನು ತೊಡು. ಇಲ್ಲದಿದ್ದರೆ ಎಂದಿಗೂ ನಿನ್ನನ್ನು ಬಿಡಲಾರೆವು. ||೭೭-೭೮-೭೯||

ಬಳಿಕ ನಾನು ಅವರಿಗೆ ಹೀಗೆಂದು ಉತ್ತರವನ್ನಿತ್ತೆನು. ನನಗೆ ನಿಮ್ಮಿಂದ ಯಾವ ಹೆದರಿಕೆಯೂ ಇರುವುದಿಲ್ಲ. ನಾನು ನನ್ನ ಸ್ನೇಹಿತರೊಂದಿಗೆ ಆಟವಾಡುತ್ತಾ ಈ ಗೃಹವನ್ನು ಪ್ರವೇಶಿಸಿರುವೆನು. ಹೀಗಿರುವಲ್ಲಿ, ||೮೦||

ನಾನು ನಿಮ್ಮ ವಿಷಯದಲ್ಲಿ ಯಾವ ಅಪರಾಧವನ್ನು ಕೈಗೊಂಡಿರುವೆನು? ಈಗ ನನ್ನ ಯಾವ ಅಪರಾಧವೂ ಇಲ್ಲದೇ ಮತ್ತು ನನಗೆ ಯಾವ ಹೆದರಿಕೆಯೂ ಇಲ್ಲದಿರಲು, ನೀವು ಯಶೋದೆಯ ಬಳಿಯಲ್ಲಿ ಏನೆಂದು ಹೇಳುವಿರಿ? ಅದನ್ನು ನನಗೆ ಹೇಳಿರಿ. ||೮೧||

ಯಾವ ಅಪರಾಧವೂ ಇಲ್ಲದೆ ಜನನಿಯು ನನ್ನನ್ನು ಎಂದಿಗೂ ಹೊಡೆಯುವುದಿಲ್ಲ. (ಶಿಕ್ಷಿಸುವುದಿಲ್ಲ). ನನ್ನ ಈ ಮಾತನ್ನು ಕೇಳಿ ಅವರು ನಕ್ಕು ಹೀಗೆಂದು ಹೇಳಿದರು. ||೮೨||

ಎಲೈ ಬಾಲಕನೇ, ನಿನ್ನ ವಚನವು ಸತ್ಯವಾದುದಾಗಿರುತ್ತದೆ. ಏಕೆಂದರೆ ಈಗ ಸ್ತ್ರೀಯರು ಜಾಗ್ರತೆಯಾಗಿ ನಿನ್ನ ಬಳಿಗೆ ಬಂದು ನಿನ್ನನ್ನು ಸುತ್ತುವರಿದಿರುವರು. ನೀನು ಇಲ್ಲಿ ಕ್ಷಣಕಾಲಪರ್ಯಂತ ನಿಂತಿರುವೆಯಾದುದರಿಂದ ಈ ಕಾಲದಲ್ಲಿ ಮಾತ್ರ ನೀನು ಅಪರಾಧವನ್ನು ಮಾಡಿರುವುದಿಲ್ಲ. ||೮೩||

ಉವಾಚಾನ್ಯಾ ಮಮೇದಾನೀಂ ಗೃಹೇ ನಾಗಃ ಕೃತಂ ತ್ವಯಾ ।
ತದ್ಬ್ರೂಹಿ ತತ್ರ ನೀತ್ವಾ ತ್ವಾಂ ದರ್ಶಯಿಷ್ಯಾಮಹೇ ವಯಂ ॥೮೪॥

ಏವಂ ವಿವದಮಾನಾನಾಂ ತಾಸಾಂ ಮಂಡಲ ಮಧ್ಯಗಃ ।
ಚಿರಂ ವಿಮೃಶ್ಯ ಕಸ್ಯಾಶ್ಚಿದ್ಧಾರಂ ಚ ತ್ರೋಟಿತಂ ಮಯಾ ॥೮೫॥

ಚ್ಯುತಾ ಯತಸ್ತತೋ ಮುಕ್ತಾಸ್ತಾ ಧರ್ತುಂ ಯಾವದನ್ಯತಃ ।
ತಾವತ್ಪಲಾಯಿತಃ ಶೀಘ್ರಂ ತಾಶ್ಚ ಹಾ ಹೇತಿ ಚುಕ್ರುಶುಃ ॥೮೯॥

ಕಥಂ ಹಸ್ತಗತೋ ಯಾತಃ ಪುನರೇಷ್ಯತಿ ನ ಕ್ವಚಿತ್ ।
ಧೂರ್ತ ವಿದ್ಯಾವಿದೋ ಬಾಲಃ ಪ್ರೌಢೋಽಯಂ ನಾತ್ರ ಸಂಶಯಃ ॥೮೭॥

ಕಪಾಟರೋಧಂ ಪೂರ್ವಂ ಚ ಕೃತ್ವಾಽಸ್ಮಾಭಿರ್ನ ವೇಷ್ಟಿತಃ ।
ಗತೇ ಕಾಲೇ ನೃಣಾಂ ಬುದ್ಧಿಃ ಪುನರ್ಭವತಿ ನಿಶ್ಚಿತಂ ॥೮೮॥

---

ಮತ್ತೊಬ್ಬಳು ಹೀಗೆಂದು ಹೇಳಿದಳು. ಎಲೈ ಕೃಷ್ಣನೇ, ನೀನು ಈಗತಾನೇ ನನ್ನ ಗೃಹದಲ್ಲಿ ಅಪರಾಧವನ್ನು ಮಾಡಿರುವುದಿಲ್ಲವೋ ? ಅದನ್ನು ಹೇಳುವವನಾಗು. ನಾವು ನಿನ್ನನ್ನು ಯಶೋದೆಯ ಬಳಿಗೆ ಕರೆದುಕೊಂಡುಹೋಗಿ ಅವಳಿಗೆ ತೋರಿಸುವೆವು. ॥೮೪॥

ಅವರು ಹೀಗೆಂದು ಮಾತನಾಡುತ್ತಿರಲು ಅವರ ಗುಂಪಿನ ಮಧ್ಯದಲ್ಲಿದ್ದ ನಾನು ಬಹುಕಾಲ ಯೋಚಿಸಿ ಬಳಿಕ ಒಬ್ಬಾನೊಬ್ಬ ಗೋಪಿಯ ಮುತ್ತಿನ ಹಾರವನ್ನು ಕಿತ್ತೆಸೆದನು. ॥೮೫॥

ಆಗ ಹಾರದಲ್ಲಿದ್ದ ಮುತ್ತುಗಳೆಲ್ಲವೂ ಕೆಳಕ್ಕೆ ಬಿದ್ದು ಅಲ್ಲಲ್ಲಿ ಚದುರಿ ಹೋಗಲು, ಗೋಪಿಯರು ಆ ಮುತ್ತುಗಳನ್ನು ಆರಿಸುವುದಕ್ಕೋಸ್ಕರ ಬೇರೆಯ ಕಡೆಗೆ ಹೋಗಲು, ನಾನು ಶೀಘ್ರವಾಗಿ ಅಲ್ಲಿಂದ ಓಡಿಹೋದೆನು. ಆಗ ಗೋಪಿಯರು " ಹಾ ಹಾ " ಎಂದು ಕೂಗಿಕೊಂಡರು. ॥೮೬॥

ಕೈಗೆ ಸಿಕ್ಕಿ ಪುನಃ ತಪ್ಪಿಸಿಕೊಂಡು ಹೋಗಿರುವನು. ಇವನೇನು ಇನ್ನೆಂದೂ ಇಲ್ಲಿಗೆ ಬರಲಾರನೆ ? ಮೋಸಗಾರರ ವಿದ್ಯೆಯನ್ನು ಅರಿತು ಈ ಬಾಲಕನು ಬಹು ಚತುರನಾಗಿರುವನು. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ॥೮೭॥

ನಾವು ಮೊದಲೇ ಬಾಗಿಲನ್ನು ಹಾಕಿಕೊಂಡು ಇವನನ್ನು ಸುತ್ತುವರಿಯಲಿಲ್ಲ.

ಗತಂ ತದ್ಗತ ಮೇವಾಸ್ತು ಪುನಃ ಕಾಲೋ ಭವಿಷ್ಯತಿ ॥೮೯॥

ಇತ್ಥಂ ಚೋಕ್ತ್ವಾ ಗೋಪಿಕಾ ಹಾಸಪೂರ್ವಂ
ಸ್ಮೃತ್ವಾ ಸ್ಮೃತ್ವಾ ಚೇಷ್ಟಿತಂ ಯತ್ಕೃತಂ ಮೇ ।
ಅನ್ಯೋನ್ಯಂ ಚ ಪ್ರೇಮಪೂರ್ವಂ ಕಥಾ(ಂ) ಮೇ
ಸಂಜಲ್ಪಂತ್ಯಃ ಸ್ವಾಲಯಾನ್ಯೇವ ಜಗ್ಮುಃ ॥೯೦॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯಾಸಿಕೇ ನಾರದ ಶೌನಕ ಸಂವಾದೇ ಗೋಪೀಧೃತ ಕೃಷ್ಣಮೋಕ್ಷೋ ನಾಮ ತ್ರಯೋವಿಂಶೋಽಧ್ಯಾಯಃ

---

ಕಾಲವು ಗತಿಸಿಹೋಗಲು ಮನುಷ್ಯರಿಗೆ ಬುದ್ಧಿಯುಂಟಾಗುವುದು. ಇದು ನಿಜವಾದುದಾಗಿರುತ್ತದೆ. ॥೮೮॥

ಆದದ್ದು ಆಗಿಹೋಯಿತು. ಇನ್ನೊಮ್ಮೆ ಇವನನ್ನು ಬಂಧಿಸುವ ಸಮಯವು ಒದಗುವುದು. ॥೮೯॥

ಹೀಗೆಂದು ಹೇಳಿ ಆ ಗೋಪಿಯರು ನಗುತ್ತಾ, ನನ್ನ ಚೇಷ್ಟೆಗಳನ್ನು ಪುನಃ ಪುನಃ ಸ್ಮರಿಸುತ್ತಾ, ಪ್ರೇಮಪೂರ್ವಕವಾಗಿ ನನ್ನ ಲೀಲಾಮಯವಾದ ಕಥೆಯನ್ನು ಕುರಿತು ಮಾತನಾಡುತ್ತಾ, ತಮ್ಮ ತಮ್ಮ ಮನೆಗಳನ್ನು ಕುರಿತು ತೆರಳಿದರು. ॥೯೦॥

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ನಾರದ ಶೌನಕ ಸಂವಾದದಲ್ಲಿ ಗೋಪಿಯರಿಂದ ಹಿಡಿಯಲ್ಪಟ್ಟ ಕೃಷ್ಣನ ಬಿಡುಗಡೆ ಎಂಬ ಇಪ್ಪತ್ತುಮೂರನೆಯ ಅಧ್ಯಾಯವು ಸಮಾಪ್ತವಾಯಿತು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಚತುರ್ವಿಂಶೋಽಧ್ಯಾಯಃ ||

## ಇಪ್ಪತ್ತುನಾಲ್ಕನೆಯ ಅಧ್ಯಾಯವು

|| ಶ್ರೀ ಭಗವಾನುವಾಚ ||

ಅಥಾನ್ಯದಿವಸೇ ಪ್ರಾತಃ ಸಮಾನೀಯ ಸಖೀನಹಂ ।
ವಾನರಾನಪಿ ಸಂಗೃಹ್ಯ ಕೃತವಾನ್ಯಚ್ಛೃಣುಷ್ವ ಮೇ ||೧||

ಕಸ್ಮಿಂಶ್ಚಿದ್ಗೋಪಿಕಾಗೇಹೇ ಪ್ರವಿಷ್ಟೋಽಹಂ ತ್ವರಾಽನ್ವಿತಃ ।
ಉತ್ತಾರ್ಯ ದಧಿ ಶಿಕ್ಯಾಚ್ಚ ಭೋಕ್ತುಂ ಯಾವತ್ಸಮುದ್ಯತಃ ||೨||

ತಾವದ್ಗೋಪೀ ಸಮಾಗತ್ಯಾಬ್ರವೀತ್ಕಿಂ ಕ್ರಿಯತೇ ತ್ವಯಾ ।
ಕಥಮುತ್ತಾರಿತಂ ಪಾತ್ರಂ ಕುತ್ರೇದಂ ದಧಿ ನೀಯತೇ ||೩||

---

ಶ್ರೀಕೃಷ್ಣನು ಹೇಳಿದನು—ಎಲೈ ನಾರದನೇ, ತರುವಾಯ ಇನ್ನೊಂದು ದಿವಸ ಪ್ರಾತಃಕಾಲದಲ್ಲಿ ನಾನು ನನ್ನೊಡನೆ ಸ್ನೇಹಿತರನ್ನು ಕರೆತಂದು ಮತ್ತು ಕಪಿಗಳನ್ನು ಸಹ ಒಟ್ಟುಗೂಡಿಸಿ ಏನನ್ನು ಮಾಡಿದೆನೆಂಬುದನ್ನು ಕೇಳುವವನಾಗು. ||೧||

ನಾನು ಒಂದಾನೊಂದು ಗೋಪಿಯ ಮನೆಯನ್ನು ಪ್ರವೇಶಿಸಿದವನಾಗಿ ನೆಲುವಿನಿಂದ ಮೊಸರಿನ ಪಾತ್ರೆಯನ್ನು ಕೆಳಗಿಳಿಸಿ ಭಕ್ಷಿಸಲು ಉದ್ಯುಕ್ತನಾದೆನು. ||೨||

ಅಷ್ಟರೊಳಗೆ ಗೋಪಿಯು ಬಂದು “ಎಲೈ ಬಾಲಕನೇ, ನೀನು ಏನನ್ನು ಮಾಡುತ್ತಿರುವೆ? ಈ ಪಾತ್ರೆಯನ್ನು ಹೇಗೆ ಕೆಳಗಿರಿಸಿದೆ? ಮತ್ತು ಈ ಮೊಸರನ್ನು ಎಲ್ಲಿಗೆ ತೆಗೆದುಕೊಂಡು ಹೋಗುವೆ? ಎಂದು ಕೇಳಿದಳು. ||೩||

ತದಾಽಹಮಬ್ರುವಂ ಗೋಪೀಂ ಧನ್ಯೇ ನ ಕಲಿರಾಗತಃ ।
ತವ ಭ್ರಾತಾ ಮಮ ಸಖಾ ತೇನಾಹೂತಾಃ ಸಮಾಗತಾಃ ॥೪॥

ಸಖಾಯೋಽನ್ಯೇ ಗತಾ ಏಕಃ ಶಯೇಽಹಂ ಭವನೇ ತವ ।
ಗಂತುಂ ಸುಪ್ತೋತ್ಥಿತೋ ಯಾವದುದ್ಯತಃ ಶಿಕ್ಯ ಸಂಸ್ಥಿತಮ್ ॥೫॥

ಪಾತ್ರಂ ಪಿಪೀಲಿಕಾವ್ಯಾಪ್ತಂ ದ್ರಷ್ಟುಮೇತನ್ಮಯಾ ದ್ರುತಮ್ ।
ತತಃ ಪಾತ್ರಂ ಸಮುತ್ತಾರ್ಯ ಕ್ರಿಯತೇ ತನ್ನಿರಾಸನಮ್ ॥೬॥

ವಿಪರೀತಂ ತವ ಜ್ಞಾನಂ ಗುಣೇ ದೋಷೋಽವಧಾರಿತಃ ।
ಏವಮುಕ್ತಾಽಬ್ರವೀತ್ಸಾ ಮಾಂ ಚಿರಂ ಜೀವೇತಿ ವಂಚಿತಾ ॥೭॥

ತತೋಽಹಮನ್ಯಸದನಂ ಪ್ರವಿಷ್ಟಃ ಸಖಿಭಿಃ ಸಹ ।
ವರ್ತಮಾನಾ ಗೃಹೇ ಗೋಪೀ ದೃಷ್ಟ್ವಾ ಮಾಮುತ್ಥಿತಾ ದ್ರುತಂ ॥೮॥

---

ಆಗ ನಾನು ಗೋಪಿಯನ್ನು ಕುರಿತು ಹೀಗೆಂದು ಹೇಳಿದೆನು-- "ಎಲೌ ಪುಣ್ಯಶಾಲಿಯೇ, ಇನ್ನೂ ಈ ಲೋಕವನ್ನು ಕಲಿಯು ಪ್ರವೇಶಿಸಿರುವುದಿಲ್ಲ ನಿನ್ನ ಸಹೋದರನು ನನ್ನ ಸ್ನೇಹಿತನಾಗಿರುವನು. ಅವನು ನನ್ನನ್ನು ಆಹ್ವಾನಿಸಿರುವುದರಿಂದ ನಾನು ಇಲ್ಲಿಗೆ ಬಂದಿರುತ್ತೇನೆ. ಬೇರೆಯ ನನ್ನ ಸ್ನೇಹಿತರೆಲ್ಲರೂ ಇಲ್ಲಿಂದ ಹೊರಟುಹೋದರು. ನಾನೊಬ್ಬನೇ ನಿನ್ನ ಮನೆಯಲ್ಲಿ ಮಲಗಿದ್ದೆನು. ||೪||

ನಿದ್ರಿತನಾಗಿ ಎಚ್ಚೆತ್ತು ಮನೆಯಿಂದ ಹೊರಗೆ ಹೋಗಲು ಉದ್ಯುಕ್ತನಾದೆನು. ಅಷ್ಟರೊಳಗೆ ನೆಲುವಿನಲ್ಲಿದ್ದ ಪಾತ್ರೆಗೆ ಇರುವೆಗಳು ಮುತ್ತಿರುವುದನ್ನು ನೋಡಿದೆನು. ಬಳಿಕ ಶೀಘ್ರವಾಗಿ ಪಾತ್ರೆಯನು ಕೆಳಕ್ಕಿಳಿಸಿ ಇರುವೆಗಳನ್ನು ಹೋಗಲಾಡಿಸುತ್ತಿರುವೆನು. ||೫-೬||

ಹೀಗಿರುತ್ತಿರಲು ನೀನು ನಿನ್ನ ವಿಪರೀತವಾದ ಬುದ್ಧಿಯಿಂದ ಗುಣವನ್ನು ದೋಷವನ್ನಾಗಿ ಪರಿಗಣಿಸಿರುವೆ! ನಾನು ಹೀಗೆಂದು ಹೇಳಲು, ನನ್ನ ವಚನದಿಂದ ಮೋಸಹೋದ ಅವಳು ನನ್ನನ್ನು "ಚಿರಕಾಲ ಜೀವಿಸುವವನಾಗು' ಎಂದು ಆಶೀರ್ವದಿಸಿದಳು. ||೭||

ಬಳಿಕ ನಾನು ನನ್ನ ಗೆಳೆಯರೊಂದಿಗೆ ಮತ್ತೊಂದು ಗೃಹವನ್ನು ಪ್ರವೇಶಿಸಿದೆನು. ಆಗ ನನ್ನನ್ನೇ ಹಿಡಿಯಬೇಕೆಂದು ಪ್ರಯತ್ನಪಡುತ್ತಿದ್ದ ಆ ಮನೆಯ

ಆಗಚ್ಛಾಗಚ್ಛ ಮದ್ಗೇಹೇ ಕಿಮರ್ಥಂ ಸಮುಪಾಗತಃ ।
ತತೋಽಹಮಬ್ರುವಂ ತಾಂ ಚ ವಕ್ಷ್ಯೇ ವಿಶ್ರಾಮ್ಯ ಚ ಕ್ಷಣಂ ॥೯॥

ಮಮ ಮಾತುಃ ಪ್ರಿಯಾಽಸಿ ತ್ವಂ ತಸ್ಯಾಸ್ತ್ವರ್ಥಾಧಿಕಾರಿಣೀ ।
ದ್ವಿತೀಯಾ ಭಗಿನೀ ಯಾ ತೇ ತಾಮಾಹ್ವಯ ವದಾಮ್ಯಹಂ ॥೧೦॥

ತಾಮಾನೇತುಂ ಗತಾ ಯಾವತ್ತಾವದ್ದ್ರವ್ಯಂ ಮಯಾ ಹೃತಂ ।
ಭುಕ್ತಂ ದತ್ತಂ ಚ ಗೋಪೇಭ್ಯೋ ವಾನರೇಭ್ಯಸ್ತ್ವಶೇಷತಃ ॥೧೧॥
ಪಲಾಯಿತಾ ಗೃಹಾತ್ತಸ್ಮಾದ್ಯಾವದಾಯಾತಿ ಗೇಹಿನೀ ।

---

ಸ್ವಾಮಿನಿಯಾದ ಗೋಪಿಯು ನನ್ನನ್ನು ನೋಡಿ ಶೀಘ್ರವಾಗಿ ಮೇಲಕ್ಕೆದ್ದವಳಾದಳು. ॥೮॥

ಮೇಲಕ್ಕೆದ್ದ ಅವಳು ನನ್ನನ್ನು ಕುರಿತು ಹೀಗೆಂದು ಹೇಳಿದಳು. " ಬಾ, ಬಾ, ನೀನು ಏತಕ್ಕೋಸ್ಕರ ನನ್ನ ಮನೆಗೆ ಬಂದವನಾಗಿರುತ್ತೀಯೆ ? " ಎಂದು ಕೇಳಿದಳು. ಬಳಿಕ ನಾನು ಅವಳನ್ನು ಕುರಿತು " ಕೊಂಚಕಾಲ ವಿಶ್ರಮಿಸಿಕೊಂಡು ಬಳಿಕ ನನ್ನ ಸಮಾಗಮದ ಕಾರಣವನ್ನು ಹೇಳುವೆನು " ಎಂದು ಹೇಳಿದೆನು. ಮತ್ತು ಕೊಂಚ ಕಾಲ ವಿಶ್ರಮಿಸಿಕೊಂಡವನಾಗಿ ಹೀಗೆಂದು ಹೇಳಿದೆನು. ॥೯॥

ನೀನು ನನ್ನ ಜನನಿಗೆ ಪ್ರೀತಿಪಾತ್ರಳಾಗಿರುವೆ. ಮತ್ತು ಅವಳ ಧನಕ್ಕೆ ನೀನೇ ಅಧಿಕಾರಿಣಿಯಾಗಿರುವೆ. ಆದುದರಿಂದ ಎರಡನೆಯ ನಿನ್ನ ತಂಗಿಯಾದ ಅವಳನ್ನು ಇಲ್ಲಿಗೆ ಕರೆಯುವವಳಾಗು ಅವಳ ಬಳಿಯಲ್ಲಿ ಸಕಲ ವಿಷಯವನ್ನೂ ಹೇಳುವೆನು. ನಾನು ಹೀಗೆಂದು ಹೇಳಲು, ॥೧೦॥

ಆ ಗೋಪಿಯು ತನ್ನ ಸಹೋದರಿಯನ್ನು ಕರೆತರಲು ಹೋದಳು. ಅವಳು ಹಿಂತಿರುಗಿ ಬರುವಷ್ಟರಲ್ಲಿ ನಾನು ಹಾಲು ಮೊಸರು ಮೊದಲಾದ ಎಲ್ಲಾ ವಸ್ತುಗಳನ್ನೂ ಅಪಹರಿಸಿ ತಿಂದೆನು. ಮತ್ತು ಸ್ವಲ್ಪವೂ ಉಳಿಯದಂತೆ ಅದೆಲ್ಲವನ್ನೂ ಬಾಲಕರಿಗೂ ಮತ್ತು ಕಪಿಗಳಿಗೂ ಕೊಟ್ಟು ತಿನ್ನಿಸಿದೆನು. ಅನಂತರದಲ್ಲಿ ಗೃಹಸ್ವಾಮಿನಿಯು ಹಿಂತಿರುಗಿ ಬರುವುದರೊಳಗೆ ಅಲ್ಲಿಂದ ಧಾವಿಸಿದೆವು. ॥೧೧॥

**ಸಾ ಭಗಿನ್ಯಾ ಸಮಾಗತ್ಯ ದೃಷ್ಟ್ವಾಽಽತ್ರಗೃಹಭಾಜನಮ್ ॥೧೨॥**

**ಇತಸ್ತತಃ ಪರಿಕ್ಷಿಪ್ತಮುವಾಚ ಭಗಿನೀಂ ಪುರಃ ।**
**ಯದೇತಶ್ಚಲಿತಾ ಭ್ರಾಂತಾ ಬುದ್ಧಿರ್ನಾಸೀತ್ತದಾ ಮಮ ॥೧೩॥**

**ಕಾಮದ್ಯ ಕಥಯಾಮ್ಯೇತದ್ಯತೋ ಬುದ್ಧಿಭ್ರಮೋ ಮಮ ।**
**ಭಗಿನ್ಯೈ ದರ್ಶಯಿತ್ವಾ ಚ ವಿರರಾಮ ಗೃಹೇ ಸ್ಥಿತಾ ॥೧೪॥**

**ತತೋಽನ್ಯಭವನಂ ಗತ್ವಾ ಯತ್ಕೃತಂ ತನ್ಮುನೇ ಶೃಣು ।**
**ಕಸ್ಯಾಶ್ಚಿದ್ಗೋಪಿಕಾಯಾಸ್ತು ಗೃಹಂ ಗೋಪ್ಯಃ ಸಮಾಗತಾಃ ॥೧೫॥**

**ಮಿಲಿತಾ ಮಂಗಲೇ ಕಾರ್ಯೇ ಗಾನವಾದ್ಯ ಮಹೋತ್ಸವೇ ।**
**ತತ್ರ ಯಾವದ್ಗತೋಽಹಂ ತಾ ಮಾಂ ದೃಷ್ಟ್ವಾ ಸಹಸೋತ್ಥಿತಾಃ ॥೧೬॥**

---

ಬಳಿಕ ಆವಳು ತನ್ನ ಭಗಿನಿಯೊಂದಿಗೆ ಮನೆಗೆ ಬಂದು ಅಲ್ಲಲ್ಲಿ ಬರಿದಾಗಿ ಚದರಿಹೋಗಿ ಬಿದ್ದಿರುವ ಮನೆಯ ಪಾತ್ರೆಗಳನ್ನು ನೋಡಿ ತಂಗಿಯ ಹತ್ತಿರ ಹೀಗೆಂದು ಹೇಳಿದಳು. ॥೧೨॥

ನಾನು ಯಾವಾಗ ಈ ಬಾಲಕನ ಮಾತುಗಳಿಂದ ಮೋಸಹೋಗಿ ಇಲ್ಲಿಂದ ಹೊರಹೊರಟೆನೋ ಆಗ ನನಗೆ ತಿಳಿವಳಿಕೆಯೇ ಇರಲಿಲ್ಲ. ನಾನು ಭ್ರಾಂತಳಾದುದರಿಂದ ಹೀಗಾಯಿತು. ಆದುದರಿಂದ ಈ ವಿಷಯವನ್ನು ಯಾವವಳ ಹತ್ತಿರದಲ್ಲಿ ಹೇಳಲಿ ? ॥೧೩॥

ಹೀಗೆಂದು ಹೇಳಿ ಅವಳು ನನ್ನ ಕೃತ್ಯಗಳನ್ನು ತನ್ನ ಸಹೋದರಿಗೆ ತೋರಿಸಿ ತನ್ನ ಮನೆಯಲ್ಲಿ ವಿಶ್ರಾಂತಿಯನ್ನು ಪಡೆದಳು. ॥೧೪॥

ಎಲೈ ನಾರದನೇ, ಅನಂತರದಲ್ಲಿ ನಾನು ಮತ್ತೊಂದು ಮನೆಯನ್ನು ಪ್ರವೇಶಿಸಿ ಅಲ್ಲಿ ಏನುಮಾಡಿದೆನೆಂಬುದನ್ನು ಕೇಳುವವನಾಗು. ಕೆಲವು ಮಂದಿ ಗೋಪಿಯರು ಒಟ್ಟುಗೂಡಿ ಒಬ್ಬಾನೊಬ್ಬ ಗೋಪಿಕೆಯ ಮನೆಯಲ್ಲಿ ಸಂಗೀತ ವಾದ್ಯ ಇವುಗಳಿಂದ ಅತ್ಯಂತ ಹರ್ಷವನ್ನುಂಟುಮಾಡುವ ಒಂದಾನೊಂದು ಶುಭಕಾರ್ಯದಲ್ಲಿ ಆಸಕ್ತರಾಗಿದ್ದರು. ॥೧೫॥

ನಾನು ಆ ಮನೆಗೆ ಹೋಗಲು ಅವರು ನನ್ನನ್ನು ನೋಡಿ ಶೀಘ್ರವಾಗಿ ಮೇಲಕ್ಕೆದ್ದವರಾಗಿ “ ಗೆಳೆಯರಾದ ಗೋಪಾಲಕರೊಂದಿಗೆ ಕಳ್ಳನು ಬಂದಿರುವನು.

**ಊಚುಶ್ಚ ಚೋರ ಆಯಾತಃ ಸಖಿಭಿರ್ಗೋಪಬಾಲಕೈಃ ।**
**ಗೃಹ್ಣೀಮಃ ಸರ್ವತಶ್ಚೇಮಂ ವೇಷ್ಟಯಿತ್ವಾಽಥ ಮಾಚಿರಂ ॥೧೭॥**

**ಗೋಪಿಕಾ ಮಂತ್ರಯಿತ್ವೇತಿ ರುದ್ಧ್ವಾ ದ್ವಾರಿ ಕಪಾಟಕಂ ।**
**ತ್ಯಕ್ತ್ವಾ ಗಾನಂ ಚ ವಾದ್ಯಂ ಚ ಯಾವದ್ಧರ್ತುಂ ಸಮುದ್ಯತಾಃ ॥೧೮॥**

**ತಾವನ್ಮಯೋಕ್ತಂ ಹೇ ಗೋಪ್ಯಃ ಶೃಣುತಾಽಸ್ಮದ್ವಚಃ ಸ್ಫುಟಂ ।**
**ಪಿತ್ರಾ ಮಾತ್ರಾ ಪ್ರೇಷಿತೋಽಹಂ ಭವಿತಾಽದ್ಯಮಹೋತ್ಸವಃ ॥೧೯॥**

**ಯೂಯಂ ತತ್ರ ಸಮಾಹೂತಾಃ ಶೀಘ್ರಂ ಗಚ್ಛತ ಮಾ ಚಿರಂ ।**
**ಶ್ರುತ್ವಾ ಮದ್ವಚನಂ ಗೋಪ್ಯೋ ಹರ್ಷಿತಾ ಮಾಮಥಾಽಬ್ರುವನ್ ॥೨೦॥**

**ಉಚ್ಯತೇ ಸತ್ಯಮಥವಾಽನೃತಂ ಕೃಷ್ಣ ವದಸ್ವ ನಃ ।**
**ನಾನೃತಂ ವಚ್ಮ್ಯಹಂ ಕ್ವಾಪಿ ನ ತಥಾ ವೇದ್ಮಿ ಚ ಕ್ವಚಿತ್ ॥೨೧॥**

---

ನಾಲ್ಕು ಕಡೆಗಳಿಂದಲೂ ಇವನನ್ನು ಮುತ್ತಿ ಬಂಧಿಸೋಣ. ತಡಮಾಡಿದರೆ ಆಗದು." ಎಂದು ಹೇಳಿದರು. ||೧೬-೧೭||

ಗೋಪಿಯರು ಹೀಗೆಂದು ಗುಪ್ತವಾಗಿ ಮಾತನಾಡಿಕೊಂಡು ಬಾಗಿಲನ್ನು ಹಾಕಿ ಸಂಗೀತವನ್ನೂ ಮತ್ತು ವಾದ್ಯವನ್ನೂ ಬಿಟ್ಟು ನನ್ನನ್ನು ಹಿಡಿಯಲು ಉದ್ಯುಕ್ತರಾದರು. ಅಷ್ಟರೊಳಗೆ ನಾನು ಅವರನ್ನು ಕುರಿತು ಹೀಗೆಂದು ಹೇಳಿದೆನು. "ಎಲೌ ಗೋಪಿಯರೇ, ನನ್ನ ವಚನವನ್ನು ಕಿವಿಗೊಟ್ಟು ಕೇಳಿರಿ. ನನ್ನ ತಂದೆ ತಾಯಿಗಳು ನನ್ನನ್ನು ನಿಮ್ಮ ಬಳಿಗೆ ಕಳುಹಿಸಿರುವರು. ಈ ದಿವಸ ನಮ್ಮ ಮನೆಯಲ್ಲಿ ವಿಶೇಷ ಉತ್ಸವವು ನಡೆಯಲಿದೆ. ಅದಕ್ಕೆ ನೀವೆಲ್ಲರೂ ಆಹ್ವಾನಿಸಲ್ಪಟ್ಟಿರುವಿರಿ. ಶೀಘ್ರವಾಗಿ ಅಲ್ಲಿಗೆ ಹೋಗಿರಿ. ವಿಳಂಬವನ್ನು ಮಾಡಬೇಡಿರಿ. ||೧೮-೧೯||

ನನ್ನ ಮಾತನ್ನು ಕೇಳಿ ಗೋಪಿಯರು ಸಂತೋಷಗೊಂಡವರಾಗಿ ಬಳಿಕ ನನ್ನನ್ನು ಕುರಿತು, "ಎಲೈ ಕೃಷ್ಣನೇ, ನೀನು ನಿಜವನ್ನೇ ಹೇಳುತ್ತಿರುವೆಯೋ? ಅಥವಾ ಸುಳ್ಳನ್ನಾಡುತ್ತಿರುವೆಯೋ? ಎಂಬುದನ್ನು ನಮಗೆ ಹೇಳುವವನಾಗು" ಎಂದು ಹೇಳಿದರು. ಅವರು ಹೀಗೆಂದು ಕೇಳಲು, ನಾನು ಅವರನ್ನು ಕುರಿತು "ನಾನು ಎಂದಿಗೂ ಸುಳ್ಳನ್ನು ಹೇಳುವುದಿಲ್ಲ. ಸುಳ್ಳನ್ನು ಹೇಳುವುದನ್ನೇ ನಾನರಿಯೆನು!" ಎಂದು ಹೇಳಿದೆನು. ||೨೦-೨೧||

ಸರ್ವೇ ವ್ರಜೌಕಸಶ್ಚೈವ ಸಖಾಯೋ ಗೋಪಬಾಲಕಾಃ ।
ತೇ ಪ್ರೋಚುರೇವಮೇವೇತಿ ತತಸ್ತಾ ಗಂತುಮುದ್ಯತಾಃ ॥೨೨॥

ವಿನಿರ್ಗತಾ ಯದಾಗೇಹಾದ್ಗತ್ವಾಽಸ್ಮಾಭಿರ್ಗೃಹಾಂತರಮ್ ।
ಹೃತಂ ಪಕ್ವಾನ್ನಮಖಿಲಂ ದಧಿ ದುಗ್ಧಾದಿಕಂ ಚ ಯತ್ ॥೨೩॥

ವಿನಿಸ್ಸೃತ್ಯ ಪುನಃ ಪಶ್ಚಾದ್ಗತ್ವಾಽಗ್ರೇ ಗೋಪದಾರಕಾಃ ।
ಅಬ್ರುವನ್ನಾಸ್ತಿ ತ್ವದ್ಗೇಹೇ ಕಿಂಚಿದದ್ಯ ಕ್ವ ಗಮ್ಯತೇ ॥೨೪॥

ಯೂಯಂ ಚ ವಂಚಿತಾಃ ಸರ್ವಾ ನೋಕ್ಷಣಾರ್ಥಂ ನಿಜಾತ್ಮನಃ ।
ನಾಹೂತಾಃ ಕೇನಚಿಚ್ಚಾತೋ ನಿವೃತ್ತಾಸ್ಸ್ವಂ ಸ್ವಮಾಲಯಂ ॥೨೫॥

ಏತಚ್ಛ್ರುತ್ವಾ ವಚೋ ಗೋಪ್ಯಃ ಪ್ರೋಚುರ್ಬಾಲೈಸ್ತು ಕಿಂ ಹೃತಂ।
ಕೃಷ್ಣಸ್ಯ ದೂತಾನೇತಾನ್ಹಿ ನ ಕಾಚಿದ್ವೇತ್ತಿ ಗೋಪಿಕಾ ॥೨೬॥

---

ನನ್ನ ಗೆಳೆಯರಾದ ಗೋಪಬಾಲಕರೂ ಸಹ ನನ್ನ ಮಾತನ್ನು ಅನುಮೋದಿಸುತ್ತಾ, "ಕೃಷ್ಣನು ಹೇಳಿರುವುದು ನಿಜವಾಗಿರುವುದು" ಎಂದು ಹೇಳಿದರು. ಬಳಿಕ ಆ ಗೋಪಿಯರೆಲ್ಲರೂ ಉತ್ಸವವನ್ನು ನೋಡುವುದಕ್ಕೋಸ್ಕರ ಹೋಗಲು ಉದ್ಯುಕ್ತರಾದರು. ॥೨೨॥

ಅವರು ಮನೆಯಿಂದ ಹೊರಗೆ ಹೊರಟುಹೋಗಲು, ನಾವು ಮನೆಯ ಒಳಕ್ಕೆ ಹೋಗಿ ಅಲ್ಲಿದ್ದ ಸಮಸ್ತ ಪಕ್ವಾನ್ನಗಳನ್ನೂ ಮತ್ತು ಮೊಸರು ಹಾಲು ಮುಂತಾದುವುಗಳನ್ನೂ ಅಪಹರಿಸಿದೆವು. ॥೨೩॥

ಬಳಿಕ ಗೋಪಾಲಕರು ಆ ಮನೆಯಿಂದ ಹೊರಟು ಉತ್ಸವವನ್ನು ನೋಡುವುದಕ್ಕೋಸ್ಕರ ಹೋಗುತ್ತಿದ್ದ ಗೋಪಿಯರನ್ನು ಹಿಂಬಾಲಿಸಿ ಅವರನ್ನು ಕುರಿತು ಹೀಗೆಂದು ಹೇಳಿದರು." ನಂದನ ಮನೆಯಲ್ಲಿ ಈ ದಿವಸ ಯಾವ ಉತ್ಸವವೂ ಇರುವುದಿಲ್ಲ. ನೀವು ಎಲ್ಲಿಗೆ ಹೋಗುತ್ತಲಿರುವಿರಿ? ತನ್ನನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ಕೃಷ್ಣನು ನಿಮ್ಮನ್ನು ವಂಚಿಸಿರುವನು. ನಿಮ್ಮನ್ನು ಯಾರೂ ಆಹ್ವಾನಿಸಿರುವುದಿಲ್ಲ. ಆದುದರಿಂದ ನೀವು ನಿಮ್ಮ ನಿಮ್ಮ ಮನೆಗಳಿಗೆ ಹೋಗುವವರಾಗಿರಿ. ॥೨೪-೨೫॥

ಈ ಮಾತನ್ನು ಕೇಳಿ ಗೋಪಿಯರು ಹೀಗೆಂದು ಮಾತನಾಡಿಕೊಂಡರು.

**ಗಾನವಾದ್ಯೇऽನ್ತರಾಯೋऽಭೂತ್ತಥಾ ಗವ್ಯಾದಿಕಂ ಹೃತಂ ।**
**ಸ್ಪರ್ಶೋऽಪಿ ನೈಷಾಂ ಭವತಿ ಕಿಂ ಕುರ್ಮಃ ಕುತ್ರ ಯಾಮ ವಾ ॥೨೭॥**

**ಅಹೋ ವಿಚೇಷ್ಟಿತಂ ತಸ್ಯ ಗೋಪೀನಾಂ ವಂಚನಂ ದ್ರುತಂ ।**
**ತಯೋರ್ವೃದ್ಧತ್ವ ಸಮಯೇ ಜಾತೋऽಯಂ ಬಾಲಕಃ ಪ್ರಿಯಃ ॥೨೮॥**

**ನ ತಾಡಯತಿ ನೋ ವಕ್ತಿ ಪ್ರತ್ಯೇತಿ ನ ಚ ಮದ್ವಚಃ ।**
**ಬ್ರೂತೇ ಬಾಲೋ ನ ಜಾನಾತಿ ನ ಕಿಂಚಿತ್ಕುರುತೇ ಹಿ ಸಃ ॥೨೯॥**

**ಕಿಂ ಕುರ್ಮಸ್ಸಾ ತಥಾ ವಕ್ತಿ ಯಥಾ ಸ್ನೇಹೋ ನ ಹೀಯತೇ ।**
**ಗೃಹೇ ವಿತ್ತಾದಿಕಂ ತಾವತ್ಸರ್ವಂ ಸಂಜಾಯತೇ ಪುನಃ ॥೩೦॥**
**ಸ್ನೇಹಭಗ್ನಭಯಾದೇವ ಗುರೋರ್ವಕ್ತುಂ ನ ಗಮ್ಯತೇ ।**

---

ಈ ಬಾಲಕರು ನಮ್ಮ ಮನೆಯಲ್ಲಿ ಏನನ್ನು ಅಪಹರಿಸಿರುವರೋ? ಇವರು ಆ ಕೃಷ್ಣನಿಗೆ ದೂತರಾಗಿರುವರೆಂಬುದನ್ನು ಯಾವ ಗೋಪಿಯೂ ತಿಳಿದಿರುವುದಿಲ್ಲ. ॥೨೬॥

ಗಾನವನ್ನು ಮತ್ತು ವಾದ್ಯವನ್ನು ಕೇಳಲು ವಿಘ್ನವುಂಟಾಯಿತು. ಅದ ರಂತೆಯೇ ಹಾಲು ಮೊಸರು ಮುಂತಾದುವುಗಳೂ ಅಪಹರಿಸಲ್ಪಟ್ಟುವು. ಈ ಬಾಲಕರಾದರೋ ನಮ್ಮ ಕೈಗೆ ಸಿಕ್ಕುವುದಿಲ್ಲ. ಏನನ್ನು ಮಾಡೋಣ? ಎಲ್ಲಿಗೆ ಹೋಗೋಣ? ॥೨೭॥

ಅಯ್ಯೋ! ಅವನ ಚೇಷ್ಟೆಯೇ! ಎಷ್ಟು ಶೀಘ್ರವಾಗಿ ಗೋಪಿಯರನ್ನು ಅವನು ವಂಚಿಸಿರುವನು! ಆ ಯಶೋದಾನಂದರಿಗಾದರೋ ತಮ್ಮ ವೃದ್ಧಾಪ್ಯದಲ್ಲಿ ಹುಟ್ಟಿರುವ ಈ ಬಾಲಕನು ಅತ್ಯಂತ ಪ್ರೀತಿಪಾತ್ರನಾಗಿರುವನು. ॥೨೮॥

ನಂದನು ಈ ಬಾಲಕನನ್ನು ಶಿಕ್ಷಿಸುವುದಿಲ್ಲ. ಅದಕ್ಕೆ ವಿಪರೀತವಾಗಿ ನಮ್ಮನ್ನೇ ಬಯ್ಯುವನು. ನಮ್ಮ ಮಾತನ್ನು ಅವನು ನಂಬುವುದಿಲ್ಲ. ಬಾಲಕನಾದ ಇವನು ಏನನ್ನೂ ಅರಿತಿರುವುದಿಲ್ಲ. ಆದುದರಿಂದ ಅವನು ಯಾವ ದುಷ್ಕೃತ್ಯವನ್ನೂ ಮಾಡುವುದಿಲ್ಲ. ಎಂದು ಹೇಳುವನು. ॥೨೯॥

ಏನನ್ನು ಮಾಡೋಣ? ಯಶೋದೆಯು ತನಗಿರುವ ಪುತ್ರವಾತ್ಸಲ್ಯಕ್ಕೆ ಧಕ್ಕೆ ತಗಲದಂತೆ ಮಾತನಾಡುವಳು. ದೊಡ್ಡವರಲ್ಲಿ ಗೌರವವನ್ನು ತೋರ್ಪಡಿಸಿದರೆ ಮನೆಯಲ್ಲಿ ಧನಧಾನ್ಯಾದಿ ಸಕಲ ಸಂಪತ್ತೂ ಉಂಟಾಗುವುದು. ಆದುದರಿಂದ

ಇತ್ಯಾಗತಾ ಗೃಹಂ ಸ್ವಂಸ್ವಂ ತಾ ಯುಕ್ತಾ ಗೋಪನಾಯಿಕಾಃ ॥೩೧॥

ಕಾಶ್ಚಿದ್ಗಾನಂ ಪುನಶ್ಚಕ್ರುಸ್ತತ್ರ ಯತ್ರಾ ಭವತ್ಪುರಾ ।
ಅಹಂ ಚಾನ್ಯಗೃಹಂ ಯಾತಃ ಸಖಿಭಿಃ ಸಹ ವಾನರೈಃ ॥೩೨॥

ಕಾಚಿದ್ಗೃಹಾಂಗಣೇ ಗೋಪೀ ಸ್ಥಿತಾಽಪಿ ಪರಮಾಸನೇ ।
ತಾಂ ದೃಷ್ಟ್ವಾಽಹಂ ಶನೈರ್ಯಾತಃ ಕೃತವಾನಕ್ಷಿಮುದ್ರಣಮ್ ॥೩೩॥

ಸಾ ಜಾನೀತೇ ಸಖೀ ಕಾಚಿತ್ಕುರುತೇ ನೇತ್ರಮುದ್ರಣಂ ।
ನ ಚುಕ್ರೋಶ ವಿದಿತ್ವೈವಂ ಕಾಚಿದ್ಧಾಸ್ಯಮುಚೀಕರತ್ ॥೩೪॥

ಯದಾ ಗೃಹಿತ್ವಾ ಗವ್ಯಾದಿ ಸಖಾಯೋ ಮಮ ನಿಸ್ಸೃತಾಃ ।
ಮಯಾ ಮುಕ್ತಾಽಥ ಸಾ ದೃಷ್ಟ್ವಾ ಮಾಂ ಚುಕ್ರೋಶ ಗೃಹಾಂಗಣೇ ।
ಕಸ್ತ್ವಂ ಕಸ್ತ್ವಮಿತಿ ಪ್ರೋಚ್ಚೈಸ್ತಾವತ್ಸರ್ವೇ ಪಲಾಯಿತಾಃ ॥೩೫॥

---

ನಾವು ನಂದನೊಡನೆ ಮರ್ಯಾದೆಯನ್ನು ಉಲ್ಲಂಘಿಸಿ ಮಾತನಾಡಿದರೆ ಅವನಿಗೆ ನಮ್ಮಲ್ಲಿರುವ ವಿಶ್ವಾಸಕ್ಕೆ ಎಲ್ಲಿ ಧಕ್ಕೆ ತಗಲುವುದೋ ಎಂಬ ಹೆದರಿಕೆಯಿಂದ ಮಾತನಾಡಲು ತೋಚುವುದಿಲ್ಲ. ॥೩೦॥

ಹೀಗೆಂದು ಹೇಳಿ ಗಾನವಾದ್ಯಗಳಲ್ಲಿ ಆಸಕ್ತರಾದ ಆ ಗೋಪಿಯರು ತಮ್ಮ ತಮ್ಮ ಮನೆಗಳನ್ನು ಕುರಿತು ತೆರಳಿದರು. ಅದರಲ್ಲಿ ಕೆಲವರು ಹಿಂದೆ ಇದ್ದ ಮನೆಯಲ್ಲಿಯೇ ಗಾನವನ್ನು ಮಾಡಿದರು. ನಾನು ನನ್ನ ಸ್ನೇಹಿತರಾದ ಗೋಪಾಲಕರಿಂದಲೂ ಮತ್ತು ಕಪಿಗಳಿಂದಲೂ ಯುಕ್ತನಾಗಿ ಬೇರೆ ಬಂದು ಮನೆಯನ್ನು ಕುರಿತು ತೆರಳಿದೆನು. ॥೩೨॥

ಒಬ್ಬಾಳೊಬ್ಬ ಗೋಪಿಯು ತನ್ನ ಮನೆಯ ಅಂಗಳದಲ್ಲಿ ಮೃದುವಾದ ಪೀಠದಲ್ಲಿ ಕುಳಿತಿದ್ದಳು. ನಾನು ಮೆಲ್ಲಮೆಲ್ಲನೆ ಅವಳ ಸಮೀಪಕ್ಕೆ ಹೋಗಿ ಆವಳ ಕಣ್ಣುಗಳನ್ನು ಮುಚ್ಚಿದೆನು. ॥೩೩॥

ಅವಳು ಯಾವಳೋ ಒಬ್ಬ ಸಖಿಯು ತನ್ನ ಕಣ್ಣುಗಳನ್ನು ಮುಚ್ಚಿರುವಳು ಎಂದು ತಿಳಿದಳು. ಈ ತಿಳಿವಳಿಕೆಯಿಂದಲೇ ಅವಳು ಕಿರಿಚಿಕೊಳ್ಳಲಿಲ್ಲ. ಇಷ್ಟರಲ್ಲಿ ಒಬ್ಬಾನೊಬ್ಬ ಗೋಪಿಯು ಅವಳನ್ನು ಹಾಸ್ಯಮಾಡಿದಳು. ॥೩೪॥

ಅಷ್ಟರೊಳಗೆ ನನ್ನ ಸ್ನೇಹಿತರು ಹಾಲು ಮೊಸರು ಮೊದಲಾದುವನ್ನು ತೆಗೆದುಕೊಂಡು ಹೊರಗೆ ಹೋಗಲು ನಾನು ಅವಳ ಕಣ್ಣುಗಳನ್ನು ಬಿಟ್ಟೆನು.

ಪುನರನ್ಯಗೃಹೇ ಯಾವದ್ಯಾಮಿ ಸಾ ದ್ವಾರಮಾಸ್ಥಿತಾ ।
ತಾಮುಕ್ತವಾನಹಂ ಮಾತ್ರಾ ಪ್ರೇಷಿತೋ ವತ್ಸಚಾರಣೇ ॥೩೬॥

ಯಾಮಿ ವತ್ಸಾಂಶ್ಚಾರಯಿತುಂ ವತ್ಸಾಂಸ್ತ್ವಮಪಿ ಮೋಚಯ ।
ಸಾ ತದಾಕರ್ಣ್ಯ ಮುದಿತಾ ತಥಾ ಕರ್ತುಂ ಸಮುದ್ಯತಾ ॥೩೭॥

ಗತಾ ಯತ್ರ ಸ್ಥಿತಾ ವತ್ಸಾಃ ಪ್ರವಿಷ್ಟಾ ಸ್ತದ್ಗೃಹೇ ವಯಮ್ ।
ಭುಕ್ತ್ವಾ ಪೀತ್ವಾ ಬಹಿರ್ಯಾತಾಃ ವತ್ಸಾನುನ್ಮುಚ್ಯ ಸಾಽಽಗತಾ ।
ಮಯ್ಯೈತೇ ಮೋಚಿತಾ ವತ್ಸಾಃ ಕ್ವ ಕೃಷ್ಣಃ ಕ್ವ ಚ ಬಾಲಕಾಃ ॥೩೮॥

---

ಅವಳು ನನ್ನನ್ನು ನೋಡಿ ಅಂಗಳದಲ್ಲಿಯೇ ಬೆದರಿಸಿದಳು. ನೀನು ಯಾರು? ನೀನು ಯಾರು? ಎಂಬುದಾಗಿ ಕೂಗಿಕೊಳ್ಳಲು ನಾವುಗಳೆಲ್ಲರೂ ಅಲ್ಲಿಂದ ಓಡಿ ಹೋದೆವು. ॥೩೫॥

ಬಳಿಕ ನಾನು ಮತ್ತೊಂದು ಮನೆಯನ್ನು ಕುರಿತು ಹೋಗಲು ಗೋಪಿಯು ತನ್ನ ಮನೆಯ ಬಾಗಿಲಿನಲ್ಲಿ ನಿಂತಿದ್ದಳು. ಅವಳನ್ನು ಕುರಿತು ಕರುಗಳನ್ನು ಮೇಯಿಸಿ ಕೊಂಡು ಬರಲು ನನ್ನ ತಾಯಿಯು ನನ್ನನ್ನು ಕಳುಹಿಸಿರುವಳು. ಆದುದರಿಂದ ನಾನು ಕರುಗಳನ್ನು ಮೇಯಿಸುವುದಕ್ಕೋಸ್ಕರ ಹೋಗುವೆನು. ನೀನೂ ಸಹ ನಿನ್ನ ಕೊಟ್ಟಿಗೆಯಲ್ಲಿರುವ ಕರುಗಳನ್ನು ಬಿಡುವವಳಾಗು ಎಂದು ಹೇಳಿದೆನು. ॥೩೬॥

ನನ್ನ ಮಾತನ್ನು ಕೇಳಿ ಅವಳು ಸಂತೋಷಗೊಂಡವಳಾಗಿ ಹಾಗೆ ಮಾಡಲು ಉದ್ಯುಕ್ತಳಾಗಿ ಕರುಗಳು ಇದ್ದಲ್ಲಿಗೆ ಹೋದಳು. ಆಗ ನಾವು ಮನೆಯೊಳಕ್ಕೆ ಪ್ರವೇಶಿಸಿದೆವು. ॥೩೭॥

ನಾವು ಭಕ್ಷ್ಯಗಳನ್ನು ತಿಂದು ಹಾಲು ಮೊಸರುಗಳನ್ನು ಕುಡಿದು ಹೊರಗೆ ಹೋದೆವು. ಅಷ್ಟರಲ್ಲಿ ಗೋಪಿಯು ಕರುಗಳನ್ನು ಬಿಟ್ಟು ಬಂದವಳಾಗಿ "ನಾನು ಈ ಕರುಗಳನ್ನು ಹೊರಗೆ ಬಿಟ್ಟಿರುವೆನು. ಕೃಷ್ಣನೂ ಮತ್ತು ಅವನ ಸಂಗಡಿಗರಾದ ಬಾಲಕರೂ ಎಲ್ಲಿಗೆ ಹೋದರು?" ಎಂದು ಕೇಳಲು, ॥೩೮॥

ಕಯಾಚಿದುಕ್ತಂ ಬಾಲಾಸ್ತೇ ಶೀಘ್ರಂ ಶೀಘ್ರಂ ಪಲಾಯಿತಾಃ ।
ಗೃಹೀತ್ವಾ ತ್ವದ್ಗೃಹಾತ್ಸರ್ವಂ ಸಾ ಶ್ರುತ್ವಾ ಗೃಹಮಾವಿಶತ್ ॥೩೯॥

ದದರ್ಶ ಭಾಂಡಂ ಭಗ್ನಂ ಚ ಭುಕ್ತಂ ಪೀತಂ ಚ ಗೋರಸಂ । ॥೪೦॥

ಚುಕ್ರೋಶೋಚ್ಚೈರನೇನೇಹ ಕಿಂ ಕೃತಂ ನಂದ ಸೂನುನಾ ।
ಅಹೋಽಯಂ ನಂದ ತನಯಃ ಕಿಂ ಜಾತಃ ಛದ್ಮಧಾರಕಃ ॥೪೧॥

ಕಥಂ ಪ್ರತಾರಿತಾ ತೇನ ಬಾಲೇನಾಹಂ ವಯೋಽಧಿಕಾ ।
ಅಕಸ್ಮಾದಾಗಮದ್ಗೇಹಂ ನಿರ್ಗತೋ ವಾನರೈಃ ಸಹ ॥೪೨॥

ಮಾಮುವಾಚ ಕ್ವ ತೇ ವತ್ಸಾಃ ಕತಿ ವಾ ನಯ ತಾನಿಹ ।
ಸ್ವವತ್ಸೈಶ್ಚಾರಯಿಷ್ಯಾಮಿ ತಚ್ಛ್ರುತ್ವಾಽಹಂ ವಿಮೋಹಿತಾ ॥೪೩॥

ಅಹಂ ಗತಾ ತಥಾ ಕರ್ತುಂ ಬಾಲಕೈರ್ಲುಂಠಿತಂ ಗೃಹಮ್ ।
ಯಶೋದಾ ನ ಹಿ ಕಸ್ಯಾಶ್ಚಿದ್ವಚನಂ ಮನುತೇ ಧ್ರುವಂ ॥೪೪॥

---

ಒಬ್ಬಾಕೊಬ್ಬ ಗೋಪಿಯು ಹೀಗೆಂದು ಉತ್ತರ ಕೊಟ್ಟಳು.—"ಆ ಬಾಲಕರು ನಿನ್ನ ಮನೆಯಿಂದ ಹಾಲು ಮೊಸರು ಮುಂತಾದುವೆಲ್ಲವನ್ನೂ ತೆಗೆದು ಕೊಂಡು ಬೇಗ ಬೇಗ ಓಡಿಹೋದರು.'' ಇದನ್ನು ಕೇಳಿ ಆ ಗೋಪಿಯು ಮನೆಯೊಳಕ್ಕೆ ಪ್ರವೇಶಿಸಿ ಪಾತ್ರೆಗಳು ಒಡೆದುಹೋಗಿರುವುದನ್ನೂ ಮತ್ತು ಹಾಲು ಮೊಸರುಗಳೆಲ್ಲವೂ ತಿನ್ನಲ್ಪಟ್ಟು ಇರುವುದನ್ನೂ ನೋಡಿದಳು. ||೩೯-೪೦||

ಮತ್ತು "ನಂದಪುತ್ರನಾದ ಈ ಕೃಷ್ಣನು ಏನನ್ನು ಮಾಡಿದನು ? ಇವನೇನು ಕಪಟವೇಷಧಾರಿಯಾದವನೇ ?" ಎಂದು ಗಟ್ಟಿಯಾಗಿ ಕೂಗಿದಳು. ||೪೧||

ವಯಸ್ಸಿನಿಂದ ದೊಡ್ಡವಳಾದ ನಾನು ಆ ಬಾಲಕನಿಂದ ಹೇಗೆತಾನೆ ಮೋಸಹೋದೆನು ? ಆ ಬಾಲಕನು ಅನಿರೀಕ್ಷಿತವಾಗಿ ನನ್ನ ಮನೆಯನ್ನು ಹೊಕ್ಕು ಕಪಿಗಳೊಡನೆ ಲೂಟಿಮಾಡಿ ಹೊರಟುಹೋದನು ! ಅವನು ನನ್ನನ್ನು ಕುರಿತು "ನಿನ್ನ ಕರುಗಳೆಲ್ಲವೂ ಎಲ್ಲಿರುವುವು ? ಮತ್ತು ಎಷ್ಟಿರುವುವು ? ನಾನು ಅವುಗಳನ್ನು ನನ್ನ ಕರುಗಳೊಂದಿಗೆ ಮೇಯಿಸುವೆನು." ಎಂದು ಹೇಳಿದನು. ಅದನ್ನು ಕೇಳಿ ನಾನು ಅವನ ಮಾತಿಗೆ ಮರುಳಾಗಿ, ||೪೨-೪೩||

ನಾನು ಅವನು ಹೇಳಿದಂತೆಯೇ ಮಾಡಲು ಹೋದೆನು. ಆಗ ಬಾಲಕರು

**ಯದ್ಗತಂ ಗತಮೇವಾಸ್ತು ನ ವಕ್ತವ್ಯಂ ಮಯಾಽಪಿ ಹಿ ।**
**ಏತಾವದುಕ್ತ್ವಾ ಗೋಪೀಭ್ಯೋ ವಿರರಾಮಾಥ ಮಾನಿನೀ ॥೪೪॥**

**ಗೃಹಂ ಪ್ರವಿಷ್ಟಾ ಸುಮುಖೀ ಸ್ಮರಂತೀ ಕೈತವಂ ಮಮ ।**
**ಗೇಹೇಽನ್ಯಸ್ಮಿನ್ಪ್ರವಿಷ್ಟೋಽಹಂ ಸಖಿಭಿರ್ವಾನರೈಸ್ಸಹ ॥೪೬॥**

**ಸುಪ್ತಾಮಾಲಕ್ಷ್ಯ ಗೋಪೀಂ ತಾಂ ಶನೈರ್ಗತ್ವಾ ಗೃಹಾಂತರೇ ।**
**ಉತ್ತಾರ್ಯ ದಧಿ ದುಗ್ಧಾದಿ ಭುಕ್ತಂ ಸರ್ವೈರ್ಯಥೇಚ್ಛಯಾ ॥೪೭॥**

**ಭುಂಜಾನೇಷ್ವಥ ವಾಽಸ್ಮಾಸು ಸ್ವಪ್ನೇಽಪಶ್ಯತ್ತಥೈವ ಸಾ ।**
**ಜಗ್ರಾಹ ಮಾಂ ಸ್ವಪ್ನ ಏವೋವಾಚ ಮಾಂ ಯಾಸ್ಯಹೋ ಕಥಂ ॥೪೮॥**

**ಕೃತ್ವಾ ಬಹುತಿಥಶ್ಚೌರ್ಯಂ ಮದ್ಗೃಹೇಽಥ ಪಲಾಯಿತಾಃ ।**
**ತ್ವಂ ಧೃತೋಽಸ್ಯದ್ಯ ನೇಷ್ಯಾಮಿ ಯಶೋದಾಯಾಸ್ತಥಾಽಂತಿಕಂ ॥೪೯॥**

---

ನನ್ನ ಮನೆಯನ್ನು ದೋಚಿಕೊಂಡು ಹೋದರು. ಹೀಗಿದ್ದರೂ ಯಶೋದೆಯು ಮಾತ್ರ ಯಾವವಳ ಮಾತನ್ನೂ ನಂಬುವುದಿಲ್ಲ. ||೪೪||

ಆದದ್ದು ಆಗಿಹೋಗಲಿ. ಇನ್ನು ಅದನ್ನು ನಾನು ಹೇಳಬಾರದು. ಗೋಪಿಯರೊಂದಿಗೆ ಹೀಗೆಂದು ಹೇಳಿ ಬಳಿಕ ಅವಳು ಸುಮ್ಮನಾದಳು. ||೪೫||

ಬಳಿಕ ಸುಂದರಮುಖವುಳ್ಳ ಆ ಗೋಪಿಯು ನನ್ನ ಕಪಟವೃತ್ತಿಯನ್ನು ಸ್ಮರಿಸುತ್ತಾ ಮನೆಯ ಒಳಕ್ಕೆ ಹೋದಳು. ತರುವಾಯ ನಾನು ನನ್ನ ಸ್ನೇಹಿತರೊಂದಿಗೂ ಮತ್ತು ಕಪಿಗಳೊಂದಿಗೂ ಮತ್ತೊಂದು ಮನೆಯನ್ನು ಪ್ರವೇಶಿಸಿದೆನು. ಅಲ್ಲಿ ನಿದ್ರೆಮಾಡುತ್ತಿದ್ದ ಗೋಪಿಯನ್ನು ನೋಡಿ ಮೆಲ್ಲಮೆಲ್ಲಗೆ ಮನೆಯೊಳಕ್ಕೆ ಹೋಗಿ, ಹಾಲು ಮೊಸರಿನ ಪಾತ್ರೆಗಳನ್ನು ಕೆಳಕ್ಕಿಳಿಸಿ ನಾವೆಲ್ಲರೂ ಇಷ್ಟಾನುಸಾರವಾಗಿ ಮೊಸರು ಹಾಲು ಮುಂತಾದುವುಗಳನ್ನು ಭಕ್ಷಿಸಿದೆವು. ||೪೬-೪೭||

ನಾವುಗಳು ಆ ಗೋಪಿಯ ಮನೆಗೆ ಹೋಗಿ ಊಟಮಾಡುತ್ತಿರಲು ಆ ಗೋಪಿಯು ನಮ್ಮನ್ನು ಸ್ವಪ್ನದಲ್ಲಿ ನೋಡಿದಳು. ಮತ್ತು ಸ್ವಪ್ನದಲ್ಲಿಯೇ ನನ್ನನ್ನು ಹಿಡಿದುಕೊಂಡು ಎಲ್ಲಿಗೆ ಹೋಗುವೆ? ಎಂದು ನನ್ನನ್ನು ಕುರಿತು ಹೇಳಿದಳು. ||೪೮||

ನೀವುಗಳು ನಮ್ಮ ಮನೆಯಲ್ಲಿ ಬಹಳ ದಿವಸಗಳಿಂದ ಚೌರ್ಯವನ್ನು

ಇತ್ಥಂ ತಸ್ಯಾ ವಿಕರ್ಷಂತ್ಯಾ ನಿದ್ರಾನಾಶೋಽಭವತ್ತತಃ ।
ಉತ್ತಿಷ್ಠಂತೀ ವಿಲೋಕ್ಯಾರಂ ವಯಂ ಸರ್ವೇ ಪಲಾಯಿತಾಃ ॥೫೦॥

ಸಮುತ್ಥಿತಾ ತು ಸಾಽಪಶ್ಯದ್ಯಥಾ ಸ್ವಪ್ನೇ ವಿಲೋಕಿತಂ ।
ಸಮಾಹೂಯ ಸಖೀ ವೃಂದಮುಸ್ಮತ್ಕೃತ್ಯ ಮುವಾಚ ತತ್ ॥೫೧॥

ಕುತ್ರ ಚಿಚ್ಛೂನ್ಯಸದನಂ ಪ್ರವಿಶ್ಯ ಹಸತೇ ಸ್ವಯಂ ।
ಧೂರ್ತೋಽಯಂ ವಿವಿಧೈರ್ಯತ್ನೈಃ ಪ್ರಾತರಾಯಾತಿ ಗೋಪಿಕಾಃ ॥೫೨॥

ನ ಕಾಽಪಿ ಚಾಸ್ಯ ಬಾಲಸ್ಯ ಚೇಷ್ಟಿತಂ ವಕ್ತುಮರ್ಹತಿ ।
ಕಿಂ ಬ್ರೂಮಃ ಕುತ್ರ ಗಚ್ಛಾಮೋ ಬಾಲಕೇನಾತಿ ಮೋಹಿತಾಃ ॥೫೩॥

ಅಯಂ ಚಾಸ್ಮದ್ಗೃಹಾತ್ಸರ್ವಂ ಹರತೇ ನಾವಶಿಷ್ಯತೇ ।
ಏವಂ ವಿವದ ಮಾನಾಸು ಗೋಪೀಷ್ವನ್ಯಗೃಹೇ ಗತಂ ॥೫೪॥

---

ಮಾಡುತ್ತಿದ್ದಿರಿ. ಮತ್ತು ನಮಗೆ ತಿಳಿಯದಂತೆ ಮನೆಗೂ ಓಡಿಹೋಗುತ್ತಿದ್ದಿರಿ. ಈಗ ನನ್ನ ಕೈಗೆ ಸಿಕ್ಕಿರುವೆ. ನಿನ್ನನ್ನು ಯಶೋದೆಯ ಬಳಿಗೆ ಒಯ್ಯುವೆನು.॥೪೯॥

ಈ ಪ್ರಕಾರವಾಗಿ ಆ ಗೋಪಿಯು ಸ್ವಪ್ನದಲ್ಲಿ ಹೇಳಿ ನನ್ನನ್ನು ಎಳೆಯುತ್ತಿರಲು ಅವಳಿಗೆ ಎಚ್ಚರವಾಯಿತು. ನಾವುಗಳು ಎಚ್ಚರಗೊಂಡಿರುವ ಆ ಗೋಪಿಯನ್ನು ನೋಡಿ ಅಲ್ಲಿಂದ ಓಡಿಹೋದೆವು. ॥೫೦॥

ಎಚ್ಚರಗೊಂಡ ಗೋಪಿಯು ಸ್ವಪ್ನದಲ್ಲಿ ನೋಡಿದಂತೆಯೇ ನನ್ನನ್ನು ನೋಡಿದಳು. ತನ್ನ ಗೆಳತಿಯರನ್ನು ಕರೆದು ನಾವು ಮಾಡಿದ ಕೆಲಸಗಳನ್ನೆಲ್ಲ ವನ್ನೂ ಹೇಳಿದಳು. ॥೫೧॥

ಓ ಗೋಪಿಯರೇ, ತುಂಟನಾದ ಈ ಬಾಲಕೃಷ್ಣನು ಯಾರೂ ಇಲ್ಲದ ಮನೆಯನ್ನು ಪ್ರವೇಶಿಸಿ ತನಗೆ ಬೇಕಾದುದನ್ನು ತೆಗೆದುಕೊಂಡು ಹೋಗುವನು. ಅನೇಕ ಪ್ರಯತ್ನಗಳಿಂದ ನಮ್ಮನ್ನು ಮೋಸಗೊಳಿಸುವನು. ॥೫೨॥

ಯಾವ ಗೊಲ್ಲಿತಿಯೂ ಸಹ ಈ ಬಾಲಕನ ಚೇಷ್ಟೆಯನ್ನು ಹೇಳಲು ಸಮರ್ಥಳಾಗಿಲ್ಲ. ಏನನ್ನು ಹೇಳುವುದು? ಎಲ್ಲಿಗೆ ಹೋಗೋಣ? ಅಲ್ಲದೆ ಎಲ್ಲಾ ಗೋಪಿಯರೂ ಸಹ ಕೃಷ್ಣನಿಂದ ಮೋಹಿತರಾಗಿರುವರು. ॥೫೩॥

ಈ ಹುಡುಗನು ನಮ್ಮ ಮನೆಯನ್ನು ಹೊಕ್ಕು ಒಂದು ಪದಾರ್ಥವೂ ಸಹ ಉಳಿಯದಂತೆ ಎಲ್ಲವನ್ನೂ ತೆಗೆದುಕೊಂಡು ಹೋಗಿರುವನು. ಎಂಬುದಾಗಿ ಆ

**ತತ್ರಸ್ಥಾ ಗೋಪಿಕಾ ಕಾಚಿತ್ಪರ್ಯಂ ಕಾಸನಸಂಸ್ಥಿತಂ ।**
**ಭ್ರಾತರಂ ಲಾಲಯಂತೀ ಚ ಗಾಯಂತೀ ಮದ್ಗುಣಾನ್ ಶುಭಾನ್' ॥೫೫॥**

**ಮಾಂ ದೃಷ್ಟ್ವಾ ಸಾ ಸಮುತ್ಥಾಯ ದದಾವಾಸನಮುತ್ತಮಂ ।**
**ಪ್ರಾಹ ಮಾ ಗಚ್ಛ ತಿಷ್ಠೇತಿ ಸಖಿಭಿಃ ಸಹ ಮಾನದ ॥೫೬॥**

**ಕಿಮರ್ಥಮಿಹ ಚಾಯಾತಃ ಕಿಮಿಚ್ಛಸಿ ಗೃಹಾಣ ತತ್ ।**
**ಬ್ರೂಹಿ ಮೇ ಕರಣೀಯಂ ಯತ್ತ್ವದಾಜ್ಞಾ ಚ ನ ಲಂಘ್ಯತೇ ॥೫೭॥**

**ಸಾ ಮಯೋಕ್ತಾ ತವ ಸ್ನೇಹಾದಾಗತೋಽಸ್ಮಿ ತವಾಂತಿಕಂ ।**
**ಸಖಾಯೋ ಮೇ ಕ್ಷುಧಾಽಽರ್ತಾಸ್ತು ಭೋಕ್ತುಮಿಚ್ಛಾಮ ಕಿಂಚನ ॥೫೮॥**

---

ಗೋಪಿಯರು ತಮ್ಮ ತಮ್ಮಲ್ಲಿಯೇ ಚರ್ಚೆಮಾಡುತ್ತಿರಲು ನಾವು ಇನ್ನೊಂದು ಮನೆಗೆ ಹೋದೆವು. ॥೫೪॥

ಆ ಮನೆಯಲ್ಲಿರುವ ಒಬ್ಬ ಗೋಪಿಯು ಮಂಚದ ಮೇಲೆ ಹಾಸಿಗೆಯಲ್ಲಿರುವ ತನ್ನ ತಮ್ಮನನ್ನು ಆಡಿಸುತ್ತಲೂ ಮಂಗಳಕರವಾದ ನನ್ನ ಗುಣಗಳನ್ನು ಗಾನ ಮಾಡುತ್ತಲೂ ಇದ್ದಳು. ॥೫೫॥

ಆ ಗೋಪಿಯು ನನ್ನನ್ನು ನೋಡಿದ ಕೂಡಲೇ ಎದ್ದು ಕುಳಿತುಕೊಳ್ಳಲು ನನಗೆ ಉತ್ತಮವಾದ ಪೀಠವನ್ನು ಕೊಟ್ಟಳು. ಓ ಕೃಷ್ಣನೇ, ಸ್ನೇಹಿತರೊಡನೆ ಕುಳಿತುಕೋ. ಹೋಗಬೇಡವೆಂದಳು. ॥೫೬॥

ಓ ಕೃಷ್ಣನೇ, ನನ್ನ ಮನೆಗೆ ಯಾಕೆ ಬಂದಿರುವೆ? ನಿನಗೆ ಯಾವ ವಸ್ತು ವಿನಲ್ಲಿ ಅಪೇಕ್ಷೆ ಇದೆಯೋ ಅದನ್ನು ತೆಗೆದುಕೋ. ಮತ್ತು ನನ್ನಿಂದ ನಿನಗೆ ಏನಾಗಬೇಕು? ಅಪ್ಪಣೆಮಾಡು. ನಾನು ನಿನ್ನ ಆಜ್ಞೆಯನ್ನು ಮೀರುವುದಿಲ್ಲವು. ಎಂದು ಆ ಗೋಪಿಯು ಹೇಳಿದಳು. ॥೫೭॥

ಓ ಗೋಪಿಯೇ, ನಿನ್ನಲ್ಲಿರುವ ಸ್ನೇಹದಿಂದ ನಾನು ನಿನ್ನ ಬಳಿಗೆ ಬಂದಿರುವೆನು. ನನ್ನ ಈ ಸ್ನೇಹಿತರು ಬಹಳ ಹಸಿದಿರುವರು. ಆದುದರಿಂದ ಏನನ್ನಾದರೂ ತಿನ್ನಲು ಬಯಸುವೆವು. ಎಂದು ಹೇಳಿದೆನು. ॥೫೮॥

ದೇಹಿ ನಸ್ತೇ ಯದಿ ಶ್ರದ್ಧಾ ತೇನ ದಧ್ಯಾದಿ ಗೋರಸಂ ।
ತಚ್ಛ್ರುತ್ವಾ ಸಾಽತಿ ಹರ್ಷೇಣ ಸಮಾನೀಯ ಚ ಗೋರಸಂ ॥೫೯॥

ದದೌ ಪ್ರೇಮ್ಣಾಸ್ಮಿತಂ ಕೃತ್ವಾ ಪ್ರೀತ್ಯಾ ಭೋಕ್ತುಂ ಯಥೇಷ್ಟಕಂ ।
ತಸ್ಯಾಶ್ಚ ಪ್ರೀತಿಭಾವೇನ ತೋಷಿತೋಽಹಂ ಮುನೇ ಭೃಶಂ ॥೬೦॥

ಭುಕ್ತ್ವಾ ದತ್ವಾಽಥ ಗೋಪೇಭ್ಯೋ ವಾನರೇಭ್ಯೋ ವಿಶೇಷತಃ ।
ತಸ್ಯಾಂ ಮಮ ಕೃಪಾ ಜಾತಾ ಸರ್ವಂ ದ್ರವ್ಯಮನಂತಕಂ ॥೬೧॥

ಯಾ ಮಹ್ಯಮರ್ಪಯೇತ್ಪ್ರೀತ್ಯಾ ತಸ್ಯಾಸ್ತನ್ನ ಕ್ಷಯಂ ವ್ರಜೇತ್ ।
ನ ಚಾರ್ಪಯೇದ್ಯಾ ಹಿ ರಕ್ಷೇದ್ಧಾನಿಸ್ತಸ್ಯಾಸ್ತು ಜಾಯತೇ ॥೬೨॥

ಇತಿ ಮೇ ಪ್ರಕಟೀಕೃತ್ಯ ದರ್ಶಿತಂ ಮುನಿಸತ್ತಮ ।
ಯಾಽಗೋಪಯತ್ತು ದಧ್ಯಾದಿ ಮತ್ತೋ ಭೀತಾ ಹಿ ಗೋಪಿಕಾ ॥೬೩॥

---

ನಿನಗೆ ನನ್ನಲ್ಲಿ ವಿಶ್ವಾಸವಿದ್ದರೆ ನಮಗೆ ತಿನ್ನಲು ಮೊಸರನ್ನಾಗಲೀ, ಕುಡಿಯಲು ಹಾಲನ್ನಾಗಲೀ ತಂದುಕೊಡೆಂದು ಹೇಳಿದೆನು. ಆ ಗೋಪಿಯು ನನ್ನ ಮಾತನ್ನು ಕೇಳಿ ಬಹಳ ಸಂತೋಷಗೊಂಡು ಹಾಲನ್ನು ತಂದು ವಿಶ್ವಾಸಪೂರ್ವಕವಾಗಿ ನಗುತ್ತಾ ನಮಗೆ ಬೇಕಾದಷ್ಟನ್ನು ಕೊಟ್ಟಳು. ನಾವೂ ಸಹ ಯಥೇಚ್ಛವಾಗಿ ಹಾಲನ್ನು ಕುಡಿದೆವು. ಓ ಮುನಿಯೇ, ಆ ಗೋಪಿಯ ವಿಶ್ವಾಸವನ್ನು ನೋಡಿ ನಾನು ಸಂತೋಷಗೊಂಡೆನು. ॥೫೯-೬೦॥

ನಾವೆಲ್ಲರೂ ಬೇಕಾದಷ್ಟು ಹಾಲು ಮೊಸರನ್ನು ಭುಜಿಸಿದೆವು. ಗೋಪರಿಗೂ ಕಪಿಗಳಿಗೂ ಹೆಚ್ಚಾಗಿ ಹಾಲು ಮೊಸರನ್ನು ಕೊಟ್ಟೆವು. ನನಗೆ ಆ ಗೋಪಿಯಲ್ಲಿ ದಯೆಯುಂಟಾಯಿತು. ಆ ದ್ರವ್ಯವು ಎಲ್ಲವೂ ಅನಂತವಾಯಿತು! ॥೬೧॥

ಯಾವ ವಸ್ತುವನ್ನು ಭಕ್ತರು ನನಗೆ ಅರ್ಪಿಸುವರೋ ಅದು ಯಾವಾಗಲೂ ಕ್ಷಯವಾಗದೆ ದಿನೇದಿನೇ ಅಭಿವೃದ್ಧಿಯಾಗುವುದು. ಯಾವುದನ್ನು ನನಗೆ ಕೊಡದೆ ರಕ್ಷಣೆ ಮಾಡಿಸುವರೋ ಅದು ಅಲ್ಲಿಯೇ ನಷ್ಟವಾಗುವುದು. ॥೬೨॥

ಓ ಮುನಿಶ್ರೇಷ್ಠನೇ, ಈ ರೀತಿಯಾಗಿ ನಾನು ಕರುಣೆಯನ್ನು ಪ್ರಕಟಿಸಿದೆನು. ಯಾವ ಗೋಪಿಕಾಸ್ತ್ರೀಯು ನನಗೆ ಹೆದರಿ ಹಾಲು ಮೊಸರುಗಳನ್ನು ಮುಚ್ಚಿಡುವಳೋ ಅವಳ ಹಾಲು ಮೊಸರುಗಳನ್ನು ನಾನು ಬಲಾತ್ಕಾರದಿಂದಲೂ, ಮೋಸ

ತಸ್ಯಾ ಹೃತಂ ಮಯಾ ಸರ್ವಂ ಬಲೇನಾಥ ಛಲೇನ ವಾ ।
ಸಂಚಿತಂ ನಾಶಮಾಯಾತಿ ದತ್ತಮಾನಂತ್ಯ ಮೃಚ್ಛತಿ ॥೬೪॥

ಯತ್ಕಿಂಚಿದ್ವಸ್ತುಮಾತ್ರಂ ಹಿ ಸರ್ವಂ ಮತ್ತೋ ನ ಚಾನ್ಯತಃ ।
ಯೋ ನಾರ್ಪಯಿತ್ವಾ ಭುಂಕ್ತೇ ಸ ಸ್ತೇನ ಏವ ನ ಸಂಶಯಃ ॥೬೫॥

ಅತೋಽನ್ಯಾಸಾಂ ತು ಭವನೇ ನಾಶಿತಂ ಚಾಖಿಲಂ ಮಯಾ ।
ತಸ್ಯಾಸ್ತು ವರ್ಧಿತಂ ಯಾ ಮೇ ಪ್ರೀತ್ಯಾ ಸರ್ವಂ ಸಮರ್ಪಯತ್॥೬೬॥

ಇತ್ಯಹಂ ಶಿಕ್ಷಯನ್ ಘೋಷೇ ಅಟಾಮಿ ಪ್ರತಿವಾಸರಂ ।
ಗೋಪಾ ಗೋಪ್ಯಸ್ತಥಾ ಗಾವೋ ವೃಕ್ಷಾ ವೀರುತ್ತೃಣಾನಿ ಚ ॥೬೭॥

ಏತತ್ಸರ್ವಂ ಚ ವಿಜ್ಞೇಯಂ ಮನ್ಯೈವಾನಂದವಿಗ್ರಹಂ ।
ಸರ್ವಾನ್ ವ್ರಜಸ್ಥಾನ್ಯೇ ಮತ್ತೋ ಭಿನ್ನಾನ್ಪಶ್ಯಂತಿ ದುರ್ಧಿಯಾ ॥೬೮॥

ತೇಷಾಂ ಹಿ ಮೂಢಬುದ್ಧೀನಾಂ ಗತಿರ್ನಾತ್ರ ಪರತ್ರ ಚ ।
ತತೋ ವ್ರಜೇ ವಿನೋದೇನ ಮುನೇಽಕ್ರೀಡಮಹರ್ನಿಶಂ ॥೬೯॥

---

ದಿಂದಲೂ ಅಪಹರಿಸುವೆನು. ಕೂಡಿಟ್ಟಿದ್ದು ನಾಶವಾಗುತ್ತದೆ. ದಾನಮಾಡಿದ್ದು ಅನಂತವಾಗುತ್ತದೆ. ಯಾವ ವಸ್ತುವಾದರೂ ಸರಿ, ಅದು ನನ್ನಿಂದಲೇ ಕೊಡಲ್ಪಟ್ಟದ್ದೇ ಹೊರತು ಬೇರೆ ರೀತಿಯಾಗಿ ಬರಲಾರದು. ಯಾವನು ಅತಿಥಿಗೆ, ನನಗೆ, ಕೊಡದೆ ತಿನ್ನುವನೋ ಅವನು ಖಂಡಿತವಾಗಿಯೂ ಚೋರನೇ ಸರಿ.॥೬೩-೬೪-೬೫॥

ನನಗೆ ಕೊಡದೆ ಹಾಗೇ ಇಟ್ಟಿರುವ ಗೋಪಿಯರ ಹಾಲು ಮೊಸರನ್ನು ನಾಶಗೊಳಿಸಿದೆನು. ಪ್ರೀತಿಯಿಂದ ಎಲ್ಲವನ್ನೂ ದಾನಮಾಡಿದ ಗೋಪಿಯ ಮನೆಯಲ್ಲಿ ಹಾಲು ಮೊಸರು ಇನ್ನೂ ಅಭಿವೃದ್ಧಿ ಹೊಂದಿತು. ॥೬೬॥

ಈರೀತಿಯಾಗಿ ಗೋಕುಲದಲ್ಲಿ ನಾನು ಪ್ರತಿಯೊಬ್ಬರನ್ನೂ ಶಿಕ್ಷಿಸುತ್ತಾ ನಿತ್ಯವೂ ತಿರುಗುತ್ತಿರುವೆನು. ಗೋಪಗೋಪಿಯರೂ, ಗೋವುಗಳೂ, ಲತೆಗಳೂ, ವೃಕ್ಷಗಳೂ, ಹುಲ್ಲುಗಳೂ ಸಹ ನನಗೆ ಆನಂದವನ್ನುಂಟುಮಾಡುವ ವಿಗ್ರಹಗಳಾಗಿರುವುವು. ಯಾರು ಗೋಕುಲದಲ್ಲಿರುವವರನ್ನು ನನಗಿಂತಲೂ ಬೇರೆಯವರನ್ನಾಗಿ ಕಾಣುವರೋ ಅಂತಹ ದುಷ್ಟಬುದ್ಧಿಗಳಿಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ

ತತಸ್ತಸ್ಯಾ ಗೃಹೇ ಭುಕ್ತ್ವಾ ಪೀತ್ವಾ ಪ್ರೀತತರಾ ವಯಂ ।
ಗಂತು ಮುಚ್ಚಲಿತಾಃ ಸರ್ವೇ ಹ್ಯನ್ಯಗೋಪ್ಯಾ ಗೃಹಂ ಪ್ರತಿ ॥೭೦॥

ಸಾ ಚಾಸ್ಮಾನ್ವೀಕ್ಷ್ಯ ದೂರಾದ್ಧಿ ಗೃಹದ್ವಾರಗತಾ ಸತೀ ।
ಯ ಯಾವನ್ಯಾಪದೇಶೇನ ಗೋಪೀನಾಂ ಸಾ ಗೃಹೇಗೃಹೇ ॥೭೧॥

ವಿಲೋಕ್ಯಾಸ್ಮಾನ್ಗೃಹೇ ವಿಷ್ಟಾನ್ ಸಮಾಹೂಯ ವ್ರಜಸ್ತ್ರಿಯಃ ।
ಸಮಾಗತಾ ತತೋ ದ್ವಾರಮಾರುಧ್ಯ ಪ್ರಸಭಂ ಸ್ಥಿತಾಃ ॥೭೨॥

ಯದಾ ಗೃಹಾದ್ಬಹಿರ್ಯಾಸಿ ಕೃಷ್ಣ ತ್ವಾಂ ಸರ್ವಯೋಷಿತಃ ।
ಧೃತ್ವಾ ಯಶೋದಾಭವನಂ ನಯಾಮಶ್ಚ ವಿಚಾರಯ ।೭೩॥

ಏವಮುಕ್ತ್ವಾ ಸ್ಥಿತಾ ದ್ವಾರಿ ಚಾಸ್ಮಾಭಿರ್ಭುಕ್ತ ಮೇವ ಹಿ ।
ತತ್ ಜ್ಞಾತ್ವಾ ಸುಭೃಶಂ ಭೀತಾಃ ಸಖಾಯಸ್ತೇ ಪಲಾಯಿತಾಃ ॥೭೪॥

ಗೋಪೀಭಿರ್ನ ಧೃತಾಃ ಕೇಽಪಿ ಮತ್ಪಲಾಯನ ಶಂಕಯಾ ।
ಅಹಮೇಕಃ ಸ್ಥಿತಸ್ತತ್ರ ದ್ವಾರಿ ದತ್ವಾ ಕಪಾಟಕಂ ॥೭೫॥

---

ಸಹ ಸದ್ಗತಿಯಿರುವುದಿಲ್ಲವು. ಓ ಮುನಿಯೇ, ಅನಂತರದಲ್ಲಿ ನಾನು ಹೀಗೇ ಗೋಕುಲ ದಲ್ಲಿ ಹಗಲೂ ರಾತ್ರಿಯೂ ವಿನೋದದಿಂದ ಕ್ರೀಡಿಸುತ್ತಿದ್ದೆನು. ||೬೭-೬೮-೬೯||

ಆಮೇಲೆ ನಾವೆಲ್ಲರೂ ಸಹ ಬೇಕಾದಷ್ಟು ಊಟಮಾಡಿ ಹಾಲನ್ನು ಕುಡಿದು ತೃಪ್ತರಾಗಿ ಅಲ್ಲಿಂದ ಇನ್ನೊಬ್ಬ ಗೋಪಿಯ ಮನೆಗೆ ಹೊರಟೆವು. ಆ ಗೋಪಿಯು ಹೋಗುತ್ತಿರುವ ನಮ್ಮನ್ನು ದೂರದಿಂದಲೇ ನೋಡಿ ಬೇರೆ ಕೆಲಸದ ನೆಪದಿಂದ ಬೇರೆ ಗೋಪಿಯರ ಮನೆ ಮನೆಗೂ ಹೋದಳು. ||೭೦-೭೧||

ಆ ಗೋಪಿಯು ಮನೆಯನ್ನು ಹೊಕ್ಕಿರುವ ನಮ್ಮನ್ನು ನೋಡಿ ಗೋಕುಲದ ಅನೇಕ ಗೋಪಿಕಾಸ್ತ್ರೀಯರನ್ನು ಕರೆದುಕೊಂಡು ಬಂದು ಬಾಗಿಲನ್ನು ಬಲಾತ್ಕಾರ ವಾಗಿ ಹಾಕಿದಳು. ಓ ಕೃಷ್ಣನೇ, ನೀನು ಹೊರಗೆ ಹೊರಟ ಕೂಡಲೇ ಸ್ತ್ರೀಯರಾದ ನಾವೆಲ್ಲರೂ ಸೇರಿ ನಿನ್ನನ್ನು ಯಶೋದೆಯ ಬಳಿಗೆ ಹೊತ್ತುಕೊಂಡು ಹೋಗುವೆವು. ಎಂದರು. ||೭೨-೭೩||

ಆ ನಾರಿಯರು ಹೀಗೆ ಹೇಳಿ ಬಾಗಿಲಲ್ಲಿ ಕಾದು ನಿಂತರು. ನಾವು ಮನೆಯೊಳಗೆ ಬೇಕಾದುದನ್ನೆಲ್ಲವನ್ನೂ ಭುಜಿಸಿದೆವು. ಆ ಸ್ತ್ರೀಯರ ಮಾತನ್ನು ಕೇಳಿ

**ಅದ್ಯೋಪಲಬ್ಧೋ ಬಹುಭಿರ್ದಿವಸೈರ್ಯತ್ನತೋ ಭೃಶಂ ।**
**ಕಥಂ ತೇ ಗಮನಂ ಚಾದ್ಯ ಭವಿಷ್ಯತಿ ವಿಚಾರಯ ॥೭೬॥**

**ಬಹೂನಿ ತ್ವಂ ದಿನಾನ್ಯತ್ರ ಕೃತವಾನ್ಸಿ ಗತಾಗತಂ ।**
**ಚೌರಾಣಾಂ ಸಮಯಾಃ ಸಂತಿ ಬಹುಶೋಽಥಾನುವಾಸರಂ ॥೭೭॥**

**ಸಾಧೋಃ ಕದಾಚಿತ್ಸಮಯಶ್ಚೈಕದಾ ಸರ್ವಸಾಧಕಃ ।**
**ತಸ್ಮಾದದ್ಯ ವಿಧಾಸ್ಯಾಮೋ ಯಥಾಽಸ್ಮಾಕಂ ಮನೋಗತಂ ॥೭೮॥**

**ಗೃಹೀತ್ವಾ ತ್ವಾಂ ವಿನೇಷ್ಯಾಮೋ ಯಶೋದಾಭವನೇ ವಯಂ ।**
**ಏವಂ ಬಹುವಿಧಾ ವಾಚೋ ಜಲ್ಪಂತೋ ಮಾಮವೇಷ್ಟಯನ್॥೭೯॥**

---

ನನ್ನ ಸ್ನೇಹಿತರು ಭೀತಿಯಿಂದ ಓಡಿದರು. ಕೃಷ್ಣನು ಎಲ್ಲಿ ಓಡಿಹೋಗುವನೋ ಎಂಬ ಶಂಕೆಯಿಂದ ಆ ಗೋಪಿಯರು ನನ್ನ ಸ್ನೇಹಿತರನ್ನು ಹಿಡಿಯಲಿಲ್ಲ. ನಾನು ಮಾತ್ರ ಒಳಗೆ ಬಾಗಿಲಬಳಿಯಲ್ಲಿದ್ದೆನು. ॥೭೪-೭೫॥

ಅನೇಕ ದಿವಸಗಳವರೆಗೆ ಬಹಳ ಕಷ್ಟಪಟ್ಟರೂ ಕೃಷ್ಣನು ಸಿಗಲಿಲ್ಲ. ಇವತ್ತು ಸಿಕ್ಕಿದನು. ಓ ಕೃಷ್ಣನೇ, ನೀನು ಹೇಗೆ ಹೋಗುವೆ? ವಿಚಾರಿಸಿನೋಡು. ನೀನು ಇವತ್ತು ನಮ್ಮ ಕೈಗೆ ಸಿಕ್ಕಿರುವೆ ! ॥೭೬॥

ನೀನು ಅನೇಕಸಾರಿ ಇಲ್ಲಿಗೆ ಬಂದು ಹೋಗಿರುವೆ. ಮತ್ತು ಸಮಯವನ್ನರಿತು ಅನೇಕ ಪದಾರ್ಥಗಳನ್ನು ಚೌರ್ಯಮಾಡಿರುವೆ. ಚೋರರಿಗೂ ಒಂದು ಸಮಯವು ಒಳ್ಳೆಯದಾಗಿರುವುದು. ॥೭೭॥

ಸಾಧುವಿಗೂ ಸಹ ಸಕಲ ಇಷ್ಟಾರ್ಥಗಳನ್ನು ನೀಡುವ ಒಂದಾನೊಂದು ಕಾಲವು ಇರುವುದು. ಆದುದರಿಂದ ನಮ್ಮ ಮನಸ್ಸಿಗೆ ಬಂದಂತೆ ನಿನಗೆ ಈಗ ಶಿಕ್ಷೆ ಮಾಡುವೆವು. ನಿನ್ನನ್ನು ಹೊತ್ತುಕೊಂಡು ಯಶೋದೆಯ ಮನೆಗೆ ಹೋಗುವೆವು. ಎಂಬುದಾಗಿ ಇನ್ನೂ ಅನೇಕ ಮಾತುಗಳನ್ನಾಡುತ್ತಾ ಗೋಪಿಯರು ನನ್ನ ಸುತ್ತಲೂ ಬಂದು ನಿಂತರು. ॥೭೯॥

ಭುಂಜಾನೇನ ಮಯಾ ಕ್ಷಿಪ್ರಂ ದಧಿ ದುಗ್ಧಾದಿ ತತ್ರ ಚ ।
ಗೃಹೀತ್ವಾ ನೇತ್ರಯೋಃ ಕ್ಷಿಪ್ತಂ ಕಸ್ಯಾಶ್ಚಿದ್ವ್ಯಾಕುಲಾಽಭವತ್ ॥೮೦॥

ಲಬ್ಧಮಾರ್ಗೋ ಬಹಿಸ್ತಸ್ಮಾನ್ಮಂಡಲಾತ್ಪ್ರಸ್ಥಿತೋಽಸ್ಮ್ಯಹಂ ।
ಉವಾಚ ತಾಃ ಕಥಂ ಯತ್ನಃ ಸಫಲೋ ನಿಷ್ಫಲೋಽಥವಾ ॥೮೧॥

ನಾಹಂ ಕೈಶ್ಚಿದ್ಧೃತಃ ಕ್ವಾಪಿ ಬಲಿಷ್ಠೈರಪಿ ಪೂರುಷೈಃ ।
ಏತಾವದ್ಯತ್ನನಿಚಯೈರ್ಧಾರ್ಯಃ ಸ್ತ್ರೀಭಿರಹಂ ಕಥಂ ॥೮೨॥

ಭವತೀನಾಮಿಹ ಪ್ರೇಮರಶನಾ ಮಮ ಶೃಂಖಲಾ ।
ತಥಾ ಯತ್ನಂ ವಿಚಾರ್ಯಾಶು ಕುರುಧ್ವಮವಿಲಂಬಿತಂ ॥೮೩॥

ಯಥಾ ಮಮ ಗತಿರ್ನೈವ ಕದಾಚಿಜ್ಜಾಯತೇಽನ್ಯತಃ ।
ತಾ ಊಚುರಾತ್ಮಗ್ರಹಣೋಪಾಯಂ ಕೃಷ್ಣ ವದಾಶು ನಃ ॥೮೪॥

ಬಹುಧಾ ತು ಕೃತೋಽಸ್ಮಾಭಿಃ ಪ್ರಯತ್ನಸ್ತ್ವಂ ನ ಗೃಹ್ಯಸೇ ।
ಕಥಂ ಚಿದ್ವೇಷ್ಟಿತೋ ಯತ್ನಾತ್ತಥಾಽಪಿ ತ್ವಂ ಬಹಿರ್ಗತಃ ॥೮೫॥

---

ಹಾಲು ಮೊಸರುಗಳನ್ನು ತಿನ್ನುತ್ತಿರುವ ನಾನು ಸ್ವಲ್ಪ ಹಾಲು ಮೊಸರನ್ನು ತೆಗೆದುಕೊಂಡು ಗೋಪಿಯರ ಕಣ್ಣಿಗೆ ಎರಚಿದೆನು. ಇದರಿಂದ ಒಬ್ಬ ಗೋಪಿಯು ಕಣ್ಣಿಗೆ ತಗಲಿ ಬಹಳ ವ್ಯಥೆಗೊಂಡಳು. ॥೮೦॥

ಆ ಗೋಪಿಯರು ತೊಂದರೆಪಡುತ್ತಿರಲು ಕೃಷ್ಣನು ಅವರ ಮಧ್ಯದಿಂದ ಈಚೆಗೆ ಬಂದು ಓ ಗೋಪಿಯರೇ, ನಿಮ್ಮ ಪ್ರಯತ್ನವು ಸಫಲವಾದುದೇ ? ಅಥವಾ ನಿಷ್ಫಲವಾದುದೇ ? ಎಂದನು. ॥೮೧॥

ಬಲಿಷ್ಠರಾದ ಯಾವ ಪುರುಷರೂ ಸಹ ಎಲ್ಲಿಯೂ ನನ್ನನ್ನು ಹಿಡಿಯಲಿಲ್ಲವು. ದುರ್ಬಲರಾದ ಸ್ತ್ರೀಯರು ನನ್ನನ್ನು ಹಿಡಿಯಲು ಹೇಗೆ ಸಮರ್ಥರಾದಾರು ? ॥೮೨॥

ನಿಮ್ಮ ಪ್ರೇಮವೆಂಬ ಹಗ್ಗವು ನನಗೆ ಸಂಕೋಲೆಯಾಗಿರುವುದು. ಆ ಹಗ್ಗದಿಂದ ನಾನು ಬೇರೆ ಕಡೆಗೆ ಅಲುಗಾಡದ ಹಾಗೆ ವಿಚಾರಿಸಿ ನನ್ನನ್ನು ಬಂಧಿಸಿರಿ. ॥೮೩॥

ಗೋಪಿಯರು ಶ್ರೀಕೃಷ್ಣನನ್ನು ಕುರಿತು ಹೇಳಿದರು — ಓ ಶ್ರೀಕೃಷ್ಣನೇ,

**ಕೇನ ತ್ವಂ ಶಿಕ್ಷಿತೋ ನಾನಾಚ್ಛಲಮಾರ್ಗ ವಿಚಕ್ಷಣಃ ।**
**ತ್ವತ್ಸಮೋ ಭೂತಲೇ ಕಶ್ಚಿನ್ನಭೂತೋ ನ ಭವಿಷ್ಯತಿ ॥೮೬॥**

**ಸಖಾಯಸ್ತ್ವಾಽಭಿತೋ ಯಾಂತಿ ನ ತಿಷ್ಠಂತಿ ಕ್ಷಣಂ ಕ್ವಚಿತ್ ।**
**ಅತಃ ಪಿತೃಭ್ಯಾಂ ತನಯಸ್ತಾಡ್ಯತೇ ನ ಹಿ ಲಾಲ್ಯತೇ ॥೮೭॥**

**ತ್ವಂ ಪಿತ್ರೋರ್ವಯಸೋಽತೀತೇ ಜಾತಃ ಸಂಲಾಲ್ಯತೇ ತತಃ ।**
**ಧೃಷ್ಟೋ ಭವಸಿ ತೇನ ತ್ವಂ ಸಖಿಭಿರ್ಭ್ರಾಮ್ಯಸಿ ವ್ರಜೇ ॥೮೮॥**

**ಗೃಹಂ ಪ್ರವಿಶ್ಯ ಪಾತ್ರಾಣಿ ಭಿನತ್ಸ್ಯತ್ತಿಚ ಗೋರಸಂ ।**
**ಪ್ರಯತ್ನೈರ್ಬಹುಭಿರ್ನಾಪಿ ಲಭ್ಯಸೇ ತ್ವಂ ಕಥಂಚನ ॥೮೯॥**

**ಇತ್ಥಂ ಹಸ್ತಗತೋಽಸ್ಮಾಕಂ ಯಶೋದಾಽಗ್ರೇ ನಯಾಮಹೇ ।**
**ಸರ್ವಂ ತ್ವಚ್ಚೇಷ್ಟಿತಂ ಮಾತುಃ ಪುರತಃ ಕಥಯಾಮಹೇ ॥೯೦॥**

---

ನಿನ್ನನ್ನು ಹಿಡಿಯಬೇಕೆಂದು ನಾವು ಎಷ್ಟು ಪ್ರಯತ್ನಪಟ್ಟರೂ ಸಹ ನೀನು ಸಿಕ್ಕದೇ ಹೊರಗೆ ಬಂದಿರುವೆ. ॥೮೪-೮೫॥

ನಿನಗೆ ಅನೇಕ ಬಗೆಯಾದ ಮೋಸಕೃತ್ಯಗಳನ್ನು ಯಾರು ಹೇಳಿಕೊಟ್ಟರು? ಈ ಭೂಮಂಡಲದಲ್ಲಿ ನಿನಗೆ ಸಮನಾದವರು ಹಿಂದೆ ಹುಟ್ಟಲೂ ಇಲ್ಲ. ಮುಂದೆಯೂ ಹುಟ್ಟಲಾರರು. ॥೮೬॥

ನಿನ್ನ ಸ್ನೇಹಿತರು ಒಂದು ಕ್ಷಣವೂ ಸಹ ಒಂದು ಸ್ಥಳದಲ್ಲಿ ಸ್ಥಿರವಾಗಿರದೆ ಅಲ್ಲಿ ಇಲ್ಲಿ ಸುತ್ತುತ್ತಿರುವರು. ಈರೀತಿ ಮಾಡುವ ಪುತ್ರನನ್ನು ತಂದೆ ತಾಯಿಗಳು ಲಾಲಿಸದೆ ಹೊಡೆದು ಶಿಕ್ಷಿಸುವರು. ॥೮೭॥

ನೀನಾದರೋ ನಿನ್ನ ತಂದೆ ತಾಯಿಗಳ ಮುಪ್ಪಿನಲ್ಲಿ ಹುಟ್ಟಿದವನಾದುದರಿಂದ ನಿನ್ನನ್ನು ಅವರು ಮುದ್ದಿಸುವರು. ಆದುದರಿಂದ ನೀನು ಕೊಬ್ಬಿದವನಾಗಿ ಸ್ನೇಹಿತರೊಡನೆ ಯಾರ ಹೆದರಿಕೆಯೂ ಇಲ್ಲದೆ ಗೋಕುಲದಲ್ಲಿ ಸಂಚರಿಸುತ್ತಿರುವೆ! ॥೮೮॥

ನೀನು ಎಲ್ಲರ ಮನೆಯನ್ನೂ ಪ್ರವೇಶಿಸಿ ಕಣ್ಣಿಗೆ ಕಂಡ ಪಾತ್ರೆಗಳನ್ನೆಲ್ಲವನ್ನೂ ಎತ್ತಿಹಾಕಿ ಒಡೆಯುತ್ತಿರುವೆ. ಎಷ್ಟು ಪ್ರಯತ್ನಪಟ್ಟರೂ ಯಾರ ಕೈಗೂ ಸಿಗುವುದಿಲ್ಲ. ಈಗ ಈರೀತಿಯಾಗಿ ನಮ್ಮ ಕೈಗೆ ಸಿಕ್ಕಿರುವೆ. ನಿನ್ನನ್ನು ಈಗಲೇ ಯಶೋದೆಯ

ಪ್ರತಿವಾಸರಮಾಗತ್ಯ ಕರೋಷಿ ಕಿಲ ಕರ್ಮ ಯತ್ ।
ಕಥಂ ಸಹೇತಾನುದಿನಂ ಹಾನಿ ಮಾತ್ಯಂತಿಕೀಂ ಗೃಹೀ ॥೯೧॥

ವಸಿಷ್ಯಾಮ್ಯನ್ಯತೋ ಗತ್ವಾ ವ್ರಜಂ ತ್ಯಕ್ತ್ವಾಽಧುನೈವ ಹಿ ।
ನ ವಾರಯತ್ಯಾತ್ಮಸುತಂ ಯಶೋದಾ ಸ್ನೇಹಯಂತ್ರಿತಾ ॥೯೨॥

ಆತ್ಮವಸ್ತು ಚ ಸರ್ವೇಷಾಂ ಭ್ರಾಜತೇಽಪ್ಯಧಿಕಂ ಭವೇತ್ ।
ತತಸ್ತೇ ಚಾತ್ಮಜೇ ಪ್ರೀತಿರ್ನಾಸ್ಮಾಕಂ ಗೃಹವಸ್ತುಷು ॥೯೩॥

ಗೋಪ್ಯಸ್ತತ್ರ ಪ್ರೋಚುರನ್ಯೋನ್ಯಮೇವಂ
ಧರ್ತುಂ ತಾ ಮಾ ಮುದ್ಯತಾಶ್ಚ ಪ್ರಯತ್ನಾತ್ ।
ಜ್ಞಾತ್ವಾ ಚಾಽಹಂ ಭಿತ್ತಿಮುತ್ಪತ್ಯ ತಸ್ಯಾ
ಗೇಹಾಜ್ಜಗ್ಮುರ್ಗೋಪಕಾಶ್ಚಾತ್ಮಸದ್ಮ ॥೯೪॥

---

ಬಳಿಗೆ ಒಯ್ದು ನೀನು ಮಾಡಿದ ಎಲ್ಲಾ ಚೇಷ್ಟೆಗಳನ್ನೂ ನಿನ್ನ ತಾಯಿಯ ಹತ್ತಿರ ಹೇಳುವೆವು. ॥೮೯-೯೦॥

ಪ್ರತಿ ದಿವಸದಲ್ಲಿಯೂ ನೀನು ಮನೆಯನ್ನು ಹೊಕ್ಕು ಬಹಳ ಹಾವಳಿಯನ್ನು ಮಾಡುತ್ತಿರುವೆ. ನೀನು ಮಾಡುವ ಈ ದುಶ್ಚೇಷ್ಟೆಯನ್ನು ಯಾವನು ಸಹಿಸಿಯಾನು? ॥೯೧॥

ಯಶೋದೆಯು ಪುತ್ರಸ್ನೇಹದಿಂದ ಆಕುಲಳಾಗಿರುವಳು. ಆದುದರಿಂದ ಅವಳು ಮಗನನ್ನು ತಡೆದು ಶಿಕ್ಷಿಸುವುದಿಲ್ಲ. ನನಗೆ ಈ ಗೋಕುಲದಲ್ಲಿ ಇನ್ನು ವಾಸಿಸಲು ಸಾಧ್ಯವಿಲ್ಲ. ಕೃಷ್ಣನ ಹಾವಳಿಯು ಬಹಳ ಹೆಚ್ಚಿಹೋಗಿದೆ. ಆದುದರಿಂದ ಗೋಕುಲವನ್ನು ಈಗಲೇ ಬಿಟ್ಟು ಎಲ್ಲಿಯಾದರೂ ಹೋಗಿ ವಾಸಿಸುವೆನು. ॥೯೨॥

ಸಮಸ್ತ ಜನರಿಗೂ ತಾನು ಎಂಬುದು ಹೆಚ್ಚಾಗಿರುವುದು. ಎಂದರೆ ಆತ್ಮನು ಎಲ್ಲಕ್ಕಿಂತಲೂ ಹೆಚ್ಚಾಗಿ ಪ್ರೀತಿಗೆ ಆಸ್ಪದವಾಗಿರುವನು. ಆ ಪುತ್ರನಲ್ಲೂ ಪ್ರೀತಿಯು ಹೆಚ್ಚಾಗಿರುತ್ತದೆ. ಆದರೆ ಇತರರ ಮನೆಯ ಸಾಮಾನುಗಳಲ್ಲಾದರೋ ಅಂತಹ ಪ್ರೀತಿಯು ಇರುವುದಿಲ್ಲವು. ಯಶೋದೆಯೂ ಹೀಗೇ ಆಗಿದಾಳೆ. ॥೯೩॥

ಈರೀತಿಯಾಗಿ ಆ ಗೋಪಿಯರು ಮಾತನಾಡುತ್ತಾ ನನ್ನನ್ನು ಹಿಡಿಯಬೇಕೆಂದು ಪ್ರಯತ್ನಪಟ್ಟರು. ನಾನು ಅವರಿಂದ ತಪ್ಪಿಸಿಕೊಂಡು ಗೋಡೆಯ

**ಇತಿ ಶ್ರೀ ಆದಿಪುರಾಣೇ ನಾರದ ಶೌನಕ ಸಂವಾದೇ ಕೃಷ್ಣಚೌರ್ಯಲೀಲಾ ವರ್ಣನಂ ನಾಮ ಚತುರ್ವಿಂಶೋಽಧ್ಯಾಯಃ**

---

ಮೇಲೆ ಹತ್ತಿ ದುಮುಕಿ ಮನೆಗೆ ಹೋದೆನು. ಗೋಪಿಯರೂ ಸಹ ತಮ್ಮ ತಮ್ಮ ಮನೆಗಳಿಗೆ ಹೋದರು. ||೯೪||

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ಶ್ರೀಕೃಷ್ಣನ ಚೇಷ್ಟೆಗಳನ್ನು ವರ್ಣಿಸಿರುವ ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

|| ಪಂಚವಿಂಶೋಽಧ್ಯಾಯಃ ||

## ಇಪ್ಪತ್ತೈದನೆಯ ಅಧ್ಯಾಯವು

|| ಶ್ರೀ ಭಗವಾನುವಾಚ ||

**ಪ್ರಾತರುತ್ಥಾಯ ಗೋಪ್ಯಸ್ತಾ ಯಶೋದಾ ಸನ್ನಿಧಿಂ ಯಯುಃ ।**
**ಯನ್ಮಂತ್ರಿತಂ ಪೂರ್ವದಿನೇ ತದ್ವಕ್ತುಂ ಮಮ ಚೇಷ್ಟಿತಂ ॥೧॥**

|| ಗೋಪ್ಯ ಊಚುಃ ||

**ಅಂಬಾಂಬ ವ್ರಜಮಾತ್ಮೀಯಂ ಗೃಹಾಣ ಸುಖದಂ ಪಯಂ ।**
**ಯಾಸ್ಯಾಮೋಽನ್ಯತ್ರ ವಾಸಾರ್ಥಂ ನಿರುಪಾಧಿಸ್ಥಲಂ ಯತಃ ॥೨॥**

**ವಸ್ತವ್ಯಂ ಯತ್ರ ಕುತ್ರಾಪಿ ನ ಹಾನಿ ರ್ಯತ್ರ ಜಾಯತೇ ।**
**ಹಾನಿಶ್ಚೇತ್ಕಾಽಪಿ ಭವತಿ ವಾಸಸ್ಯ ಕಿಮು ತತ್ಸುಖಂ ॥೩॥**

---

ಗೋಪಿಯರು ಹಿಂದಿನ ದಿವಸ ನನ್ನ ಚೇಷ್ಟೆಯನ್ನು ಯಶೋದೆಗೆ ಹೇಳಬೇಕೆಂದು ಆಲೋಚಿಸಿದ ಪ್ರಕಾರವಾಗಿ ಅವರೆಲ್ಲರೂ ಬೆಳಿಗ್ಗೆ ಎದ್ದವರು ಶ್ರೀಕೃಷ್ಣನ ಚೇಷ್ಟೆಯನ್ನು ತಿಳಿಸಲು ಯಶೋದೆಯ ಹತ್ತಿರಕ್ಕೆ ಹೋಗಿ ಹೀಗೆ ಹೇಳಿದರು. ||೧||

ಓ ತಾಯಿಯೇ, ನಿನಗೆ ಸುಖವಾಗಿರುವ ಈ ಗೋಕುಲದಲ್ಲಿ ನೀನೇ ಸುಖವಾಗಿರು. ನಾವೆಲ್ಲಾದರೂ ಯಾವ ಉಪದ್ರವವೂ ಇಲ್ಲದ ಸ್ಥಳದಲ್ಲಿ ವಾಸಿಸುವೆವು. ನಿನ್ನ ಗೋಕುಲವನ್ನು ನೀನೇ ತೆಗೆದುಕೋ. ||೨||

ಯಾವ ಸ್ಥಳದಲ್ಲಿ ತೊಂದರೆ ಇಲ್ಲವೋ ಅಲ್ಲಿ ವಾಸಿಸಬೇಕು. ತೊಂದರೆ ಇರತಕ್ಕ ಸ್ಥಳದಲ್ಲಿ ಸುಖವು ಹೇಗೆ ಉಂಟಾದೀತು? ||೩||

ಯದ್ಯೇಕಸ್ಮಿನ್ದಿನೇ ಕಿಂಚಿದ್ವೈಕಲ್ಯಂ ಮನಸೋ ಭವೇತ್ ।
ಭೂಯೋ ಭೂಯೋ ನಿತ್ಯಶಸ್ತತ್ಸೋಢವ್ಯಂ ಸ್ಯಾತ್ಕಥಂ ಪುನಃ ॥४॥

ಬಾಲಕೋಽಯಂ ಚಿರಂಜೀವೀ ಭವೇತ್ತು ವ್ರಜರಾಟ್ ಪ್ರಿಯೇ ।
ತವ ಸ್ನೇಹಾತ್ ವ್ರಜೇ ಕಿಂಚಿನ್ನದುಃಖ ಮನುಭಾವಿತಂ ॥೫॥

ಯುವಯೋರ್ನಿತ್ಯಸಂಸರ್ಗಾ ಜ್ಜಾತಂ ಸುಖಮನುತ್ತಮಂ ।
ಯಾಸ್ಯಾಮೋಽತಃ ಪರಂ ಯತ್ರ ತತ್ರ ಕಿಂ ಭವಿತಾಽಸ್ತಿ ನಃ ॥೬॥

ಅತ್ರ ನಿತ್ಯಂ ತವ ಸುತಃ ಸಖಿಭಿರ್ವಾನರೈಃ ಸಹ ।
ಅಕಸ್ಮಾದ್ವಿಶತೇಽಸ್ಮಾಕಂ ಭವನೇಷು ಹಿ ನಿತ್ಯಶಃ ॥೭॥

ಭುಂಕ್ತಾಂ ಯದಿ ಸ್ವಯಂ ಕಿಂಚಿದ್ಭವನೇ ನಃ ಪರಂ ಸುಖಂ ।
ನ ತಥಾ ಕುರುತೇ ಕೃಷ್ಣೋ ಭೋಜಯತ್ಯಪರಾನ್ಪಶೂನ್ ॥೮॥

---

ಒಂದು ಪ್ರದೇಶದಲ್ಲಿ ಮನಸ್ಸಿಗೆ ಒಂದೊಂದು ಸಲ ಸ್ವಲ್ಪ ಬೇಸರವಾದರೆ ಹೇಗಾದರೂ ವಾಸಿಸ ಬಹುದು. ಪುನಃ ಪುನಃ ಮನಸ್ಸಿಗೆ ಕ್ಲೇಶವಾದರೆ ಹೇಗೆ ಸಹಿಸುವುದು ? ॥४॥

ದೀರ್ಘಾಯುವಾದ ಈ ಬಾಲಕನು ಗೋಕುಲಕ್ಕೆ ಅಧಿಪತಿಯಾಗಬಹುದು. ನಿನ್ನ ವಿಶ್ವಾಸದಿಂದ ಗೋಕುಲದಲ್ಲಿ ಸ್ವಲ್ಪವೂ ದುಃಖವನ್ನು ಅನುಭವಿಸಲಿಲ್ಲ. ನಿಮ್ಮ ಸಂಬಂಧದಿಂದ ಉತ್ತಮವಾದ ಸುಖವು ಉಂಟಾಗಿರುವುದು. ಆದರೆ, ॥೫॥

ನಿನ್ನ ಮಗನಾದ ಶ್ರೀಕೃಷ್ಣನು ಸ್ನೇಹಿತರೊಡನೆಯೂ ಕಪಿಗಳೊಡನೆಯೂ ಸಹ ಗೋಕುಲದಲ್ಲೆಲ್ಲಾ ತಿರುಗುತ್ತಾ ಅಕಸ್ಮಾತ್ತಾಗಿ ನಮ್ಮ ಮನೆಗಳಿಗೆ ನಿತ್ಯವೂ ಬರುವನು. ಅಲ್ಲಿ ಏನಾಗುವುದೋ ಅದನ್ನು ನೋಡುತ್ತಿರುವೆವು. ಆದುದರಿಂದ ನಾವು ಎಲ್ಲಿಯಾದರೂ ಹೋಗುವೆವು. ॥೬-೭॥

ಒಂದು ವೇಳೆ ಕೃಷ್ಣನು ತಾನೊಬ್ಬನೇ ಬೇಕಾದುದನ್ನು ತಿಂದರೆ ಅದು ನಮಗೆ ಪರಮಾನಂದವೇ ಸರಿ. ಆದರೆ ಕೃಷ್ಣನು ಹಾಗೆ ಮಾಡದೆ ಇತರರಿಗೂ, ಪಶುಗಳಿಗೂ ಸಹ ಬೇಕಾದಷ್ಟು ತಿನ್ನಿಸುವನು. ॥೮॥

ಭುಂಜತೇ ಗೋಪಬಾಲಾಶ್ಚ ನ ಹಿ ದುಃಖಾಯ ತದ್ಧಿ ನಃ ।
ಯದ್ವಾನರಾನ್ಭೋಜಯತಿ ಭುವಿ ಪ್ರಕ್ಷಿಪತೀತಿ ಚ ॥೯॥

ಯದ್ಭಿನತ್ತಿ ಚ ಪಾತ್ರಾಣಿ ತತೋ ದುಃಖಂ ಕರೋತಿ ಚ ।
ಆಗತ್ಯಾಗತ್ಯ ಪಶ್ಯಾಮಃ ಕೃತಂ ಕರ್ಮಾತ್ಮಜಸ್ಯ ತೇ ॥೧೦॥

ವಿಕ್ರುಶ್ಯ ಬಹುಶೋ ಗೇಹೇ ತಿಷ್ಠಾಮಃ ಕ್ಷುಬ್ಧಮಾನಸಾಃ ।
ಗತಂ ತದ್ಗತಮೇವಾಸ್ತು ಕಿಂ ಕುರ್ಮ ಇತಿ ನಿಶ್ಚಿತಾಃ ।
ಯತ್ರ ಕುತ್ರಾಪ್ಯಸೌ ಯಾತಿ ಕೈತವೋಕ್ತ್ಯಾ ಪ್ರವಂಚಯನ್ ॥೧೧॥

ಭುಂಕ್ತೇ ಬಾಲೈಶ್ಚ ಕಪಿಭಿಃ ಛಲೇನ ಚ ಬಲೇನ ಚ ।
ವೇಷ್ಟಿತೋಽಪಿ ಚ ಗೋಪೀಭಿರ್ಭೂಯೋಭೂಯಃ ಪಲಾಯತೇ ॥೧೨॥

ಬಾಲಾನ್ರಾವಯತೇ ಕ್ವಾಪಿ ರೋದಿತ್ಯಪಿ ಚ ಧಾವತಿ ।
ಗೃಹೇ ಮೂತ್ರ ಪುರೀಷಂ ಚ ಕುರುತೇ ಲಿಪ್ತಮಾರ್ಜಿತೇ ॥೧೩॥

---

ಕೃಷ್ಣನ ಜೊತೆಗಾರರಾದ ಗೊಲ್ಲರ ಹುಡುಗರು ಬೇಕಾದಷ್ಟು ತಿಂದರೂ ಸಹ ನಮಗೆ ಅದರಿಂದಲೂ ದುಃಖವಿಲ್ಲ. ಆದರೆ ಅನ್ಯಾಯವಾಗಿ ಕಪಿಗಳಿಗೆ ತಿನ್ನಿಸುವುದನ್ನೂ ಪಾತ್ರೆಗಳನ್ನು ಎತ್ತಿಹಾಕಿ ಒಡೆಯುವುದನ್ನೂ ಸಹ ನೋಡಿ ನಮಗೆ ಬಹಳ ದುಃಖವಾಗುವುದು. ||೯||

ಮನೆಗೆ ಬಂದು ನಿನ್ನ ಮಗನು ಮಾಡಿದ ಕೃತ್ಯಗಳನ್ನು ನೋಡಿ ಮನಸ್ಸಿಗೆ ಬಹಳ ಖೇದವುಂಟಾಗಿ ಆಕ್ರೋಶಮಾಡುತ್ತಾ ಮನೆಯಲ್ಲಿರುವೆವು. ಆದರೆ ಹಿಂದೆ ಕಳೆದದ್ದು ಆಯಿತು. ಹೋಗಲಿ. ಮುಂದೆ ಏನನ್ನು ಮಾಡುವುದು? ಇವನು ಎಲ್ಲಾದರೂ ಹೋದರೆ ಅಲ್ಲಿ ಕಪಟವನ್ನು ಮಾಡಿ ಎಲ್ಲರನ್ನೂ ವಂಚಿಸುವನು. ||೧೦-೧೧||

ಯಾರ ಮನೆಯನ್ನಾದರೂ ಹೊಕ್ಕು, ಶ್ರೀಕೃಷ್ಣನು ತನ್ನ ಮಿತ್ರರಾದ ಬಾಲಕರೊಡನೆಯೂ, ಕಪಿಗಳೊಡನೆಯೂ ಸಹ ಯಥೇಚ್ಛವಾಗಿ ಮನೆಯಲ್ಲಿರುವ ತಿಂಡಿಗಳನ್ನು, ಮೋಸಗೊಳಿಸಿಯಾಗಲೀ ಬಲಾತ್ಕಾರದಿಂದಾಗಲೀ ತಿಂದುಬಿಡುವನು. ಒಂದು ವೇಳೆ ಗೋಪಿಯರು ಕಟ್ಟಿಹಾಕಲು ಬಂದರೆ ತಪ್ಪಿಸಿಕೊಂಡು ಓಡಿಹೋಗುವನು. ||೧೨||

ಮತ್ತು ಬಾಲಕರನ್ನು ಗಟ್ಟಿಯಾಗಿ ಅಳಿಸುವನು. ತಾನು ಅಳುವನು.

ವಾಗ್ವಜ್ರತಾಡನಂ ಕ್ವಾಪಿ ತಥಾ ತರ್ಜನಭರ್ತ್ಸನೇ ।
ಪ್ರತ್ಯಹಂ ಕುರುತೇಽಸ್ಮಾಕಂ ಕಥಂ ಸೋಢುಂ ಹಿ ಶಕ್ಯತೇ ॥೧೪॥

ನೇತ್ರೇಷು ಧೂಳಿಂ ಕ್ಷಿಪತಿ ಹಾರಂ ಚ ತ್ರೋಟಯತ್ಯಲಂ ।
ವಸ್ತ್ರಾಣಿ ಪಾಟಯಿತ್ವಾ ಚ ಭಯಾದಿವ ಪಲಾಯತೇ ॥೧೫॥

ಭುಕ್ತ್ವಾ ಪೀತ್ವಾ ದಧಿ ಪಯಃ ಸಖಿಭಿರ್ವಾನರೈಃ ಸಹ ।
ಯದಾ ವಯಂ ವ್ಯಗ್ರಧಿಯೋ ಗೃಹಕೃತ್ಯೇಷು ಭಾಮಿನಿ ॥೧೬॥

ತದಾ ಗೃಹಂ ಪ್ರವಿಶ್ಯಾಽಶು ಗೃಹೋತ್ಸಾದಂ ಕರೋತ್ಯಸೌ ।
ನ ಶಕ್ನುಮಸ್ತತಃ ಕರ್ತುಂ ಗೃಹಕಾರ್ಯಂ ಚ ಕಿಂಚನ ॥೧೭॥

ವ್ರಜತ್ಯಾಗೇ ಮನೋಽಸ್ಮಾಕಂ ನಾನ್ಯತ್ಕರ್ತುಂ ಹಿ ಶಕ್ಯತೇ ।
ಅಥವಾ ಸ್ವಂ ಸುತಂ ದೇವಿ ನಿವಾರಯ ಕಥಂಚನ ॥೧೮॥

---

ಓಡಿಹೋಗುವನು. ಸಾರಿಸಿ ಗುಡಿಸಿ ಪರಿಶುದ್ಧವಾಗಿ ಮಾಡಿದ ಮನೆಯೊಳಗೆ ಮಲಮೂತ್ರಗಳನ್ನು ವಿಸರ್ಜಿಸುವನು. ||೧೩||

ಪ್ರತಿನಿತ್ಯವೂ ಶ್ರೀಕೃಷ್ಣನು ನಮ್ಮನ್ನು ವಜ್ರದಂತೆ ಕಠಿಣವಾದ ವಾಕ್ಕುಗಳಿಂದ ವಂಚಿಸುತ್ತಾ ಜರಿಯುತ್ತಿರುವನು. ಹೊಡೆಯುವನು. ಹೆದರಿಸುವನು. ಇವೇ ಮುಂತಾದ ಉಪದ್ರವಗಳನ್ನು ಹೇಗೆ ಸಹಿಸಬಹುದು ? ||೧೪||

ಮತ್ತು ನಮ್ಮ ಕಣ್ಣುಗಳಿಗೆ ಧೂಳನ್ನು ಎರಚುವನು. ಮುತ್ತಿನ ಹಾರಗಳನ್ನೂ ಹೂವಿನ ಹಾರಗಳನ್ನೂ ಕಡಿದು ಹಾಕುವನು. ಸೀರೆಗಳನ್ನು ಹರಿದು ಚೂರು ಚೂರು ಮಾಡುವನು. ಇಷ್ಟೆಲ್ಲವನ್ನೂ ಮಾಡಿ ಹೆದರಿದವನಂತೆ ಓಡಿಹೋಗುವನು. ||೧೫||

ನಾವು ಮನೆ ಕೆಲಸದಲ್ಲಿ ತೊಡಗಿದಾಗ ಕೃಷ್ಣನು ಬಾಲಕರೊಡನೆಯೂ ಕಪಿಗಳೊಡನೆಯೂ ಸಹ ನಮ್ಮ ಮನೆಗಳಿಗೆ ಪ್ರವೇಶಿಸಿ ಹಾಲು ಮೊಸರು ಬೆಣ್ಣೆ ಮುಂತಾದುವುಗಳನ್ನು ಕದ್ದು ತಿಂದುಬಿಡುವನು. ಹೀಗೆ ಅವನು ಮಾಡುತ್ತಿರಲು ನಮಗೆ ನಿತ್ಯವೂ ಗೃಹಕೃತ್ಯಗಳನ್ನು ನೆರವೇರಿಸಲು ಬಹಳ ಕಷ್ಟವಾಗುತ್ತದೆ. ||೧೬-೧೭||

ಆದುದರಿಂದ ಗೋಕುಲವನ್ನು ಬಿಡಬೇಕೆಂದು ನಮ್ಮ ಮನಸ್ಸಿಗೆ ತೋರುವುದು. ಇದಕ್ಕೆ ಇನ್ನು ಯಾವ ಉಪಾಯವೂ ತೋರುವುದಿಲ್ಲ. ಅಥವಾ ನಿನ್ನ

ತದಾ ವಾಸೋ ಭವೇನ್ನೂನ ಮಸ್ಮಾಕಂ ನಾನ್ಯಥಾ ಕ್ವಚಿತ್ ।
ವ್ರಜೇ ವಾಸಃ ಸುಖಾಯೈವ ನ ತ್ಯಜಾಮಃ ಕದಾಚ ನ ॥೧೯॥

ತವ ಪುತ್ರಸ್ಯ ಕೃತ್ಯೇನ ವ್ರಜತ್ಯಾಗೋ ಭವಿಷ್ಯತಿ ॥೨೦॥

ಇತಿ ತಾಸಾಂ ವಚಃ ಶ್ರುತ್ವಾ ಯಶೋದಾ ಸುಸ್ಮಿತಾ ಸತೀ ।
ಮಾಮುವಾಚ ಕಥಂ ಪುತ್ರ ಗೋಪಿಕಾಃ ಕಥಯಂತಿ ಹಿ ॥೨೧॥

ದಧ್ಯಾದಿಕಂ ಗೃಹೇ ಸರ್ವಂ ವರ್ತತೇಽತ್ರ ಚತುರ್ವಿಧಂ ।
ಕಥಂ ಪರಗೃಹೇ ಯಾಸಿ ಮಯಾ ಕಿಂ ನೈವ ದೀಯತೇ ॥೨೨॥

---

ಮಗನನ್ನು ಈ ರೀತಿ ದುಷ್ಟಕಾರ್ಯಗಳಿಗೆ ಹೋಗದಂತೆ ಹೇಗಾದರೂ ಮಾಡಿ ತಡೆಯುವವಳಾಗು. ॥೧೮॥

ನೀನು ನಿನ್ನ ಮಗನನ್ನು ತಡೆದರೆ ನಮಗೆ ಸುಖವಾಗಿ ವಾಸಿಸಲು ಅನುಕೂಲವಾಗಬಹುದು. ಇದಕ್ಕೆ ಬೇರೆ ಉಪಾಯವು ತೋರುವುದಿಲ್ಲ. ನಿನ್ನ ಮಗನನ್ನು ತಡೆದರೆ ನಾವು ಈ ಗೋಕುಲವನ್ನು ಬಿಡದೆ ಸುಖವಾಗಿ ವಾಸಿಸುವೆವು. ॥೧೯॥

ಒಟ್ಟಿನಲ್ಲಿ ನಿನ್ನ ಪುತ್ರನಾದ ಶ್ರೀಕೃಷ್ಣನ ತುಂಟತನದಿಂದ ನಮಗೆ ಗೋಕುಲದ ತ್ಯಾಗವೇ ಉಂಟಾಗಬಹುದು. ॥೨೦॥

ಯಶೋದೆಯು ಈ ರೀತಿಯಾಗಿ ಆ ಗೋಪಿಯರ ಮಾತನ್ನು ಕೇಳಿ ಮುಗುಳುನಗೆಯಿಂದ ನನ್ನನ್ನು ಕುರಿತು ಹೇಳಿದಳು. —ಓ ಪುತ್ರನೇ, ಈ ಗೋಪಿಯರು ನಿನ್ನ ವಿಷಯದಲ್ಲಿ ಹೀಗೆ ಹೇಳುತ್ತಿರುವರು. ನೀನು ಅವರ ಮನೆಗೆ ಹೋಗಿ ಹೋಗಿ ಏಕೆ ಹಾಲು ಮೊಸರು ಬೆಣ್ಣೆ ತುಪ್ಪಗಳನ್ನು ತಿನ್ನುವಿ ? ಹಾಲು ಮೊಸರು, ಬೆಣ್ಣೆ, ತುಪ್ಪ ಮುಂತಾದುವುಗಳು ನಮ್ಮ ಮನೆಯಲ್ಲಿಯೂ ಇವೆ. ಮತ್ತು ನೀನು ಕೇಳಿದಾಗ ನಾನು ಕೊಡುವುದಿಲ್ಲೆಂದು ಹೇಳಿದ್ದೇನೆಯೇ ? ಏನು ಬೇಕೆಂದರೂ ಕೊಡುವೆನು. ಹೀಗಿರಲು ಆ ಗೋಪಿಯರ ಮನೆಗೆ ಏಕೆ ಹೋಗುವೆ ? ॥೨೧-೨೨॥

**ಸದಾಽಽದತ್ತ್ವಾಖಿಲಂ ನೂನಂ ವಿದ್ಯತೇ ತವ ಸದ್ಮನಿ ।**
**ಯದ್ಯದಿಚ್ಛಸಿ ಕರ್ತುಂ ತ್ವಂ ತತ್ಕುರುಷ್ವ ನಿರಂತರಂ ॥೨೩॥**

**ಕಥಂ ವ್ರಜಸಿ ಗೋಪೀನಾಂ ಗೃಹೇಷು ಪರಸದ್ಮಸು ।**
**ಬಾಲಕಾ ವಾನರಾಶ್ಚೈವ ಕಿಂ ಕರಿಷ್ಯಂತಿ ತೇ ಹಿತಂ ॥೨೪॥**

**ಯೈಃ ಸಾರ್ಧಂ ಪರಗೇಹೇ ಚ ವ್ರಜಸಿ ತ್ವಂ ಹಿ ನಿತ್ಯಶಃ ।**
**ನವ ವಧ್ವೋಽಖಿಲಾ ಗೋಪ್ಯೋ ಯದ್ವಾ ತದ್ವಾ ವದಂತಿ ತಾಃ ॥೨೫॥**

**ಯಾ ವದಂತಿ ಪ್ರವಯಸಸ್ತಾ ವಿಚಾರ್ಯ ವದಂತಿ ವೈ ।**
**ತವಾಽಪರಾಧಾದೇತಾಸಾಂ ವಚನಂ ಸಹ್ಯತೇ ಮಯಾ ॥೨೬॥**

**ವಿನಾಽಽಪರಾಧಂ ಕಃ ಕಸ್ಯ ಸಹತೇ ರುಶತೀ ಗಿರಃ ।**
**ಯದಿ ತ್ವಂ ನ ವ್ರಜಸ್ಯಾಸಾಂ ಗೃಹೇಷು ಕಥಯಂತಿ ಕಿಂ ॥೨೭॥**

---

ನಿನ್ನ ಮನೆಯಲ್ಲಿ ಎಲ್ಲಾ ಕಾಲದಲ್ಲಿಯೂ ಸಹ ನಿನಗೆ ಬೇಕಾದ ಸಾಮಾನುಗಳಿರುವುವು. ಅವುಗಳನ್ನು ನಿನ್ನ ಇಚ್ಛೆಬಂದಂತೆ ಯಾವಾಗಲೂ ಉಪಯೋಗಿಸಿಕೊಳ್ಳಬಹುದು. ಇನ್ನೊಬ್ಬರ ಮನೆಯಲ್ಲಿ ನಿನಗೆ ಕೆಲಸವೇನು? ಅಲ್ಲಿಗೆ ಏಕೆ ವೃಥಾ ಹೋಗುವೆ? ಬಾಲಕರಾಗಲೀ ಕಪಿಗಳಾಗಲೀ ನಿನಗೆ ಯಾವ ಉಪಕಾರವನ್ನು ಮಾಡುವರು? ||೨೩-೨೪||

ನಿತ್ಯವೂ ನೀನು ಬಾಲಕರೊಡನೆ ಗೋಪಿಯರ ಮನೆಗೆ ಹೋಗುವೆ. ಅಲ್ಲಿರುವ ಎಲ್ಲಾ ಹರೆಯದ ಹೆಂಗಸರೂ ಬಾಯಿಗೆ ಬಂದಹಾಗೆ ನಿನ್ನ ವಿಷಯದಲ್ಲಿ ತಮಗೆ ತೋರಿದಹಾಗೆಲ್ಲ ದೂರನ್ನು ಹೇಳುವರು. ||೨೫||

ಗೋಕುಲದಲ್ಲಿರುವ ವೃದ್ಧನಾರಿಯರಾದರೋ ವಿಚಾರಿಸಿ ತಿಳಿದು ಹೇಳುವರು. ನೀನು ಮಾಡಿದ ಅಪರಾಧಗಳಿಂದ ಈ ಗೋಪಿಯರು ನನ್ನನ್ನೂ ನಿಂದಿಸುವರು. ಅದನ್ನು ಸಹಿಸಲಾರೆನು. ನಿರಪರಾಧಿಯಾದವನು ಯಾವನು ತಾನೇ ದೂರಿನ ಮಾತನ್ನು ಕೇಳಿ ಸಹಿಸಿಯಾನು? ಒಂದು ವೇಳೆ ನೀನು ಇವರ ಮನೆಗೆ ಹೋಗದಿದ್ದರೆ ಈ ಗೋಪಿಯರು ಹೀಗೆಲ್ಲಾ ಬಂದು ಹೇಳುತ್ತಿದ್ದರೇನು? ||೨೬-೨೭||

ಸ್ವಲ್ಪಮನ್ಯಾಪರಾಧಂ ಹಿ ಪರಸ್ತು ಬಹು ಮನ್ಯತೇ ।
ಆತ್ಮೀಯಾನಾಂ ನ ಗಣಯತ್ಯಪರಾಧಂ ಕದಾಚನ ॥೨೮॥

ಯದಿ ಮೇ ವಚನಂ ಕುರ್ಯಾತ್ಕದಾಚಿದಪಿ ಮಾ ಭವಾನ್ ।
ಅನ್ಯಾಸಾಂ ಭವನಂ ಗಚ್ಛೇತ್ ತಾಡಯಿಷ್ಯಾಮಿ ಚಾನ್ಯಥಾ ॥೨೯॥

ಇತಿ ತಸ್ಯಾಃ ವಚಃ ಶ್ರುತ್ವಾ ಅವೋಚಂ ಮೋಹಯನ್ನಿವ ।
ಏತಾಸಾಂ ವಚನಂ ಮಾತಃ ಕಿಂ ವದಾಮಿ ನ ಶಕ್ಯತೇ ॥೩೦॥

ವಕ್ತುಂ ತಥಾಽಪಿ ವಕ್ಷ್ಯಾಮಿ ನ ಪ್ರತೀತಿಂ ಕರೋಷಿ ಕಿಂ ।
ಕ್ರೀಡಂತಮಾತ್ಮನೋ ದ್ವಾರಿ ಸಹ ಮಾಂ ಗೋಪಬಾಲಕೈಃ ॥೩೧॥

ಆನಯಂತಿ ಸಮಾಹೂಯ ಬಲಾದಸ್ಯಾತ್ಮನೋ ಗೃಹಂ ।
ಗೋಪ್ಯ ಏತಾಸ್ತರ್ಜಯಂತಿ ನ ಚ ವೇದ್ಮಿ ಕಥಂಚನ ॥೩೨॥

---

ಒಬ್ಬನ ಅಪರಾಧವು ಬಹಳ ಸ್ವಲ್ಪವಿದ್ದರೂ ಅದನ್ನೇ ಇನ್ನೊಬ್ಬನು ಬಹು ದೊಡ್ಡದೆಂದು ತಿಳಿಯುವನು. ಲೋಕದಲ್ಲಿ ಯಾರೂ ಸಹ ತಮ್ಮವರಲ್ಲಿರುವ ಅಪರಾಧ ವನ್ನು ಯಾವಾಗಲೂ ತಿಳಿದುಕೊಳ್ಳುವುದೇ ಇಲ್ಲವು. ಹೀಗೆಯೇ ಲೋಕದ ಸ್ವಭಾವವು. ನೀನು ಇನ್ನು ಮುಂದೆ ನನ್ನ ಮಾತಿನಂತೆ ನಡೆದುಕೊಂಡು ಇನ್ನೊ ಬ್ಬರ ಮನೆಗೆ ವೃಥಾ ಹೋಗಕೂಡದು. ಹಾಗೆ ನನ್ನ ಮಾತನ್ನು ಮೀರಿ ಹೋದರೆ ನಿನ್ನನ್ನು ಹೊಡೆಯುವೆನು. ||೨೮-೨೯||

ಈ ರೀತಿಯಾಗಿ ಯಶೋದೆಯ ಮಾತನ್ನು ಕೇಳಿ ಅವಳನ್ನು ಮೋಹಗೊಳಿಸು ವಂತೆ ಹೀಗೆ ಹೇಳಿದೆನು. ಓ ತಾಯಿಯೇ, ಈ ಗೋಪಿಯರ ಮಾತನ್ನು ಕೇಳಿ ನನಗೆ ಏನನ್ನು ಮಾಡಲೂ ತೋರುವುದಿಲ್ಲ. ಆದರೂ ಸಹ ಒಂದೆರಡು ಮಾತುಗಳ ನ್ನಾಡುವೆನು. ನನ್ನ ಮಾತಿನಲ್ಲಿ ವಿಶ್ವಾಸವಿಡು. ನಾನು ಸ್ನೇಹಿತರಾದ ಗೋಪಾಲಕ ರೊಡನೆ ಈ ಗೋಪಿಯರ ಮನೆಯ ಮುಂಭಾಗದಲ್ಲಿ ಆಡುತ್ತಿರುವಾಗ ನಮ್ಮನ್ನು ಬಲಾತ್ಕಾರದಿಂದ ತಮ್ಮ ಮನೆಗಳಿಗೆ ಕರೆದುಕೊಂಡು ಹೋಗುವರು. ||೩೦-೩೧||

ಗೋಪಿಯರು ತಮ್ಮ ಮನೆಗೆ ಕರೆದುಕೊಂಡು ಹೋಗಿ ನನ್ನನ್ನು ಬೆದರಿಸು ವರು. ನನಗೆ ಇದರ ಕಾರಣವೇ ತಿಳಿಯದು. ಅಲ್ಲದೆ, ಅಜ್ಜನಿಗೂ, ತಾಯಿಗೂ, ಅವಳ

ಪಿತಾಮಹಾಯ ಪಿತ್ರೇ ಚ ಮಾತ್ರೇ ಮಾತಾಮಹಾಯ ಚ ।
ಪ್ರಯಚ್ಛಂತಿ ಹಿ ಗೌಲೀಶ್ಚ ಶತಶೋಽಥ ಸಹಸ್ರಶಃ ॥೩೩॥

ಕರೌ ಗೃಹೀತ್ವಾ ಕರ್ಷಂತಿ ಮಾಂ ಚರಂತಮಿತಸ್ತತಃ ।
ಕಾಚಿದಂಜನಮಾದಾಯ ನೇತ್ರೇ ಅಂಜಯತಿ ಧ್ರುವಂ ॥೩೪॥

ಕಾಚಿನ್ನೇ ವಸನಂ ಕಾಚಿನ್ಮಾಲಾಂ ವಲಯಮೇವಚ ।
ವಂಶೀಂ ಚ ಕಿಂಕಿಣೀಂ ಪಾದಯುಗಾಭ್ಯಾಂ ತಾಂ ಹರಂತಿ ಹಿ ॥೩೫॥

ರುಷ್ಟೋಽಹಂ ಕರ್ಮಣಾ ತೇನ ತತ್ಸ್ಥಾನಾಚ್ಚಲಿತಸ್ತತಃ ।
ರುಂಧಂತಿ ಮಮ ಮಾರ್ಗಂ ಚ ತದಾ ಗೋಪ್ಯಶ್ಚ ಸಂಘಶಃ ॥೩೬॥

ಭಗ್ನೇ ಪಾತ್ರೇ ಸ್ವಯಂ ತಾಭಿರ್ಗೋರಸಃ ಕ್ಷಿಪ್ಯತೇ ಬಹಿಃ ।
ವದಂತಿ ಚ ಯಶೋದಾಽಗ್ರೇ ಸರ್ವಾ ಗತ್ವಾ ಚ ನಿಶ್ಚಿತಂ ॥೩೭॥

---

ತಾಯಿಗೂ ಸಹ ನೂರಾರು ಬೈಗಳಗಳನ್ನು ಕೊಡುವರು. ನಾನು ಅಲ್ಲಿ ಇಲ್ಲಿ ಸಂಚರಿಸುತ್ತಿರಲು ನನ್ನ ಕೈಯನ್ನು ಹಿಡಿದು ದರದರನೆ ಎಳೆದುಕೊಂಡು ಹೋಗುವರು. ಒಬ್ಬಳು ಗೋಪಿಯು ಬಂದು ನನ್ನ ಎರಡು ಕಣ್ಣುಗಳಿಗೆ ಕಾಡಿಗೆಯನ್ನು ಹಚ್ಚುವಳು. ॥೩೨-೩೩-೩೪॥

ಇನ್ನೊಬ್ಬಳು ಬಂದು ನನ್ನ ಬಟ್ಟೆಯನ್ನು ಎಳೆಯುವಳು. ಮತ್ತೊಬ್ಬಳು ನನ್ನ ಮಾಲಿಕೆಯನ್ನೂ, ಕಡಗವನ್ನೂ ಎಳೆಯುವಳು. ಮತ್ತೊಬ್ಬ ಗೋಪಿಯು ನನ್ನ ಕೊಳಲನ್ನು ಕಸಿಯುವಳು. ಮಗದೊಬ್ಬಳು ನನ್ನ ಕಾಲಿನಲ್ಲಿರುವ ಕಿರುಗೆಜ್ಜೆ ಮಾಲೆಯನ್ನು ಬಿಚ್ಚುವಳು. ಹೀಗೆ ಇವರು ಮಾಡುವ ಕೆಲಸಗಳಿಂದ ನಾನು ಸಿಟ್ಟುಗೊಂಡು ಅಲ್ಲಿಂದ ಬೇರೆ ಕಡೆಗೆ ಹೋಗಲು ಹೊರಟರೆ ಎಲ್ಲರೂ ಮುತ್ತಿಗೆ ಹಾಕಿ ನನ್ನ ಮಾರ್ಗವನ್ನೇ ತಡೆಯುವರು. ॥೩೬॥

ಹಾಲಿನ ಮಡಿಕೆಗಳನ್ನು ತಾವೇ ಒಡೆದು ಅದರಲ್ಲಿ ಹಾಲನ್ನು ಹಾಕಿ ಹೊರಗೆ ಇಡುವರು. ಹೀಗಿದ್ದರೂ ಕೃಷ್ಣನು ಹೀಗೆ ಅವಿವೇಕದ ಕಾರ್ಯಗಳನ್ನು ಮಾಡಿದನೆಂದು ನಿನ್ನ ಎದುರು ನಿಶ್ಚಯವಾಗಿರುವಂತೆ ದೂರನ್ನೂ ಹೇಳಿಬಿಡುವರು ! ॥೩೭॥

ವಯಂ ತಥಾ ವದಿಷ್ಯಾಮೋ ಯಥಾ ತ್ವಾಂ ತಾಡಯಿಷ್ಯತಿ ।
ಯದ್ಯದೇತಾ ವದಂತಿ ತ್ವಾಂ ತದಹಂ ನ ವ್ಯಧಾಂ ಕ್ವಚಿತ್ ॥೩೮॥

ಏತಾ ಆಗತ್ಯ ಸಂಘೇನ ತವಾಗ್ರೇ ಕಥಯಂತಿ ವೈ ।
ಮಾತಸ್ತ್ವಂ ವೇತ್ಸಿ ಮೇ ಕರ್ಮ ತ್ವತ್ತೋ ಗೋಪ್ಯಂ ನ ಕಿಂಚನ ॥೩೯॥

ಕ್ಷುಧಿತಾಸ್ತೃಷಿತಾ ಬಾಲಾಃ ಪರಗೇಹಂ ಪ್ರಯಾಂತಿ ಹಿ ।
ಕದಾಽಹಂ ಭೋಜಿತೋ ನೈವ ತ್ವಯಾ ಮಾತರ್ಗೃಹಾದ್ಗತಃ ॥೪೦॥

ಅನಿಶಂ ಮಾಂ ಭೋಜಯಸಿ ಪರಗೇಹಂ ಕುತೋ ವ್ರಜೇ ।
ಇತಿ ಮದ್ವಚನಂ ಶ್ರುತ್ವಾ ಮಾತಾ ಗೋಪೀಸ್ತದಾಽಬ್ರವೀತ್ ॥೪೧॥

ಗೋಪ್ಯ ಆತ್ಮೀಯ ಕರ್ಮಾಣಿ ಸಂಗೋಪ್ಯ ಪರಕರ್ಮ ವೈ ।
ಕಥಯಂತ್ಯೋ ನ ಸಂಲಜ್ಜಾ ಧನ್ಯಾ ಯೂಯಂ ವ್ರಜಾಂಗನಾಃ ॥೪೨॥

---

ನಾವೆಲ್ಲರೂ ಯಶೋದೆಯ ಬಳಿಗೆ ಹೋಗಿ ನಿನ್ನನ್ನು ಹೊಡೆಯುವಂತೆ ಹೇಳಿಬಿಡುವೆವು ಎನ್ನುವರು. ಹಾಗೆ ಗೋಪಿಯರು ನಿನ್ನ ಹತ್ತಿರ ದೂರುವಂತಹ ಯಾವ ಕೆಲಸವನ್ನೂ ನಾನು ಯಾವಾಗಲೂ ಎಲ್ಲಿಯೂ ಮಾಡಿಲ್ಲವು. ॥೩೮॥

ಈ ಗೋಪಿಯರು ಒಟ್ಟಾಗಿ ಸೇರಿ ನಿನ್ನ ಬಳಿಗೆ ಬಂದು ನನ್ನ ಮೇಲೆ ಇಲ್ಲದ ದೂರನ್ನು ಹೇಳುವರು. ಓ ಜನನಿಯೇ, ನೀನು ನನ್ನ ಎಲ್ಲಾ ಕೆಲಸಗಳನ್ನೂ ತಿಳಿದಿರುವೆ. ನಿನ್ನ ಸಮೀಪದಲ್ಲಿ ನಾನು ಯಾವ ಅಂಶವನ್ನೂ ಮುಚ್ಚಿಡುವುದಿಲ್ಲವು.॥೩೯॥

ಹಸಿದಿರುವ ಮತ್ತು ಬಾಯಾರಿಕೆಯುಳ್ಳ ಇತರ ಬಾಲಕರು ಇನ್ನೊಬ್ಬರ ಮನೆಗೆ ಹೋಗುವರು. ಮನೆಯಿಂದ ಹೊರಟ ನನಗೆ ನೀನು ಯಾವಾಗ ಊಟವನ್ನು ಮಾಡಿಸದೆ ಇರುವೆ? ॥೪೦॥

ನೀನು ಯಾವಾಗಲೂ ನನಗೆ ಭೋಜನಮಾಡಿಸುತ್ತಿರುವುದರಿಂದ ನನಗೆ ಹಸಿವು ಬಾಯಾರಿಕೆಗಳಿಲ್ಲದಿರಲು, ನನಗೆ ಇನ್ನೊಬ್ಬರ ಮನೆಯಿಂದ ಏನಾಗಬೇಕಾಗಿದೆ? ಈ ರೀತಿಯಾದ ನನ್ನ ಮಾತನ್ನು ಕೇಳಿ ಯಶೋದೆಯು ಗೋಪಿಯರನ್ನು ಕುರಿತು ಹೇಳಿದಳು. ॥೪೧॥

ಓ ಗೋಪಿಯರೇ, ನಿಮ್ಮಲ್ಲಿರುವ ತಪ್ಪನ್ನು ಮುಚ್ಚಿಟ್ಟುಕೊಂಡು, ಇನ್ನೊಬ್ಬರ ತಪ್ಪನ್ನೇ ಹೇಳುತ್ತಿರುವ ನಿಮಗೆ ನಾಚಿಕೆಯಾಗುವುದಿಲ್ಲವೇ? ಗೋಕುಲದಲ್ಲಿರುವ ನೀವೇ ಧನ್ಯರು! ॥೪೨॥

ಕ್ಷುಧಿತಾಸ್ತೃಷಿತಾ ಬಾಲಾ ಪರಗೇಹಂ ಪ್ರಯಾಂತಿ ಹಿ ।
ನಾಯಂ ಕ್ಷುಧಾऽऽರ್ತಸ್ತೃಷಿತೋ ರಾಶಯಃ ಸಂತಿ ಸರ್ವಶಃ ॥೪೩॥

ಅನುವ್ರಜಾಮ್ಯಹಂ ನಿತ್ಯಂ ಪಿಬ ಭಕ್ಷೇತಿ ವಾದಿನೀ ।
ಕದಾಚಿತ್ಪಿಬತಿ ಪ್ರೀತ್ಯಾ ಕದಾಚಿನ್ನ ಪಿಬತ್ಯಪಿ ॥೪೪॥

ಏವಂ ಭುಂಕ್ತೇ ನ ಭುಂಕ್ತೇ ಚ ಬಾಲಕೋऽಯಂ ನಿಜೇಚ್ಛಯಾ ।
ಅತಿಕ್ಲೇಶೈರ್ಮಯಾ ಪ್ರಾಪ್ತಃ ಬಾಲೋऽಯಂ ತ್ವತ್ಪ್ರಸಾದತಃ ॥೪೫॥

ರೋರುದೀತಿ ಚ ಸೋಚ್ಛ್ವಾಸೋ ಮದ್ಭೀತ್ಯಾ ಬಾಲಕೋ ಹ್ಯಸೌ ।
ಮಮ ಪ್ರಾಣಾಧಿಕಃ ಪ್ರೇಯಾನ್ನ ತಾಡ್ಯೋऽಯಂ ವೃಥಾ ಮಯಾ ॥೪೬॥

ಯದಿರಾಗಃ ಕೃತೋऽನೇನ ತದಾ ಕುರು ವಿನಿಗ್ರಹಂ ।
ಶ್ರುತ್ವಾ ಚೋಕ್ತೀರ್ಯಶೋದಾಯಾಃ ಪುನರೂಚುಶ್ಚ ಗೋಪಿಕಾಃ ॥೪೭॥

---

ಬಾಲಕರು ಹಸಿದಿರುವವರಾಗಿಯೂ, ನೀರಡಿಕೆಯುಳ್ಳವರಾಗಿಯೂ ಸಹ ಇದ್ದರೆ ಇನ್ನೊಬ್ಬರ ಮನೆಗೆ ಹೋಗುವರು. ಇವನು ಹಸಿವು ಬಾಯಾರಿಕೆಯುಳ್ಳವನಾಗಿಲ್ಲವು. ಅಲ್ಲದೆ ತಿನ್ನು, ಕುಡಿ ಎಂದು ಹೇಳುತ್ತಾ ನಾನು ನಿತ್ಯವೂ ಇವನನ್ನು ಅನುಸರಿಸುತ್ತಿರುವೆನು. ಒಂದೊಂದು ದಿವಸ ಪ್ರೀತಿಯಿಂದ ಕುಡಿಯುವನು. ಒಂದೊಂದು ದಿನ ಕುಡಿಯದೇ ಹಾಗೆಯೇ ಓಡುವನು. ||೪೩-೪೪||

ಇದರಂತೆಯೇ ತನ್ನ ಇಚ್ಛೆ ಬಂದರೆ ಊಟಮಾಡುವನು. ಇಲ್ಲದಿದ್ದರೆ ಹಾಗೆಯೇ ಬಿಡುವನು. ನಿಮ್ಮ ಅನುಗ್ರಹದಿಂದ ಬಹಳ ಕಷ್ಟಪಟ್ಟು ಈ ಪುತ್ರನು ನನಗೆ ಪ್ರಾಪ್ತನಾಗಿರುವನು. ||೪೫||

ಈ ಬಾಲಕೃಷ್ಣನು ಅಳಬೇಕೆಂದು ಪ್ರಯತ್ನಪಡದೆ ನನ್ನನ್ನು ನೋಡಿ ಬಿಕ್ಕಿ ಬಿಕ್ಕಿ ಸ್ವಾಭಾವಿಕವಾಗಿ ಅಳುತ್ತಿರುವನು. ಕೂಡಲೇ ನನ್ನ ಹೆದರಿಕೆಯಿಂದ ದೊಡ್ಡದೊಂದು ನಿಟ್ಟುಸಿರನ್ನೂ ಬಿಡುತ್ತಿರುವನು. ನನ್ನ ಪ್ರಾಣಕ್ಕಿಂತಲೂ ಹೆಚ್ಚಾದ ಈ ಬಾಲಕನನ್ನು ವೃಥಾ ನಾನು ಹೊಡೆಯಲಾರೆನು. ಒಂದುವೇಳೆ ಇವನು ತಪ್ಪನ್ನು ಮಾಡಿದರೆ ಆಗ ಶಿಕ್ಷಿಸಿರಿ. ಈ ರೀತಿಯಾಗಿ ಹೇಳಿದ ಯಶೋದೆಯ ಮಾತನ್ನು ಕೇಳಿ ಗೋಪಿಯರು ತಿರುಗಿ ಹೀಗೆ ಹೇಳಿದರು. ||೪೬-೪೭||

ಪ್ರತೀತಿಂ ಬಾಲವಾಕ್ಯೇ ಚ ಕುರುಷೇ ನಾಸ್ಮದೀರಿತೇ ॥೪೮॥

ನ ಚೇತ್ಪ್ರತೀತಿಂ ಕುರುಷೇ ಕಿಂ ಕುರ್ಮಃ ಕಥಯಾಮ ಕಂ ।
ವಯಂ ಮಿಥ್ಯಾಽತಿ ವಾದಿನ್ಯೋ ನ ಹಿ ಸೋಽಯಂ ತವಾತ್ಮಜಃ ॥೪೯॥

ಚಿತ್ರಮಸ್ಮಾಕಮಿತ್ಯೇವ ವಕ್ತುಂ ಕೇನ ಸುಶಿಕ್ಷಿತಃ ।
ಜಿಹ್ವಾ ನ ತಾಲು ಸ್ಪೃಶತಿ ಸಮಯೋಕ್ತಿಂ ವದತ್ಯಪಿ ॥೫೦॥

ತಥಾ ತ್ವಮಪಿ ಜಾನಾಸಿ ಸಾಧುರೇಷ ತವಾತ್ಮಜಃ ।
ಆತ್ಮೀಯೇ ಪರಕೀಯೇ ಚ ಸಮತಾ ನ ಭವೇನ್ನೃಣಾಂ ॥೫೧॥

ಬಾಲಕೋ ಲಾಲಿತಃ ಪೂರ್ವಂ ಕದಾಚಿನ್ನತು ತಾಡಿತಃ ।
ಜ್ಞಾಸ್ಯತೀಯಂ ಯದಾ ಬಾಲಸ್ತ್ವಾ ಮೇವೋದ್ವೇಜಯಿಷ್ಯತಿ ॥೫೨॥

---

ನಮ್ಮ ಮಾತಿನಲ್ಲಿ ನಿನಗೆ ನಂಬಿಕೆಯಿಲ್ಲ. ನಮ್ಮ ಮಾತನ್ನು ನೀನು ನಂಬದಿದ್ದರೆ ಏನನ್ನು ಹೇಳಲೂ ಸಾಧ್ಯವಿಲ್ಲ ಮತ್ತು ಏನನ್ನು ಮಾಡಲೂ ಸಾಧ್ಯವಿಲ್ಲ. ನಾವು ಸುಳ್ಳನ್ನೂ ಅತಿಯಾಗಿಯೂ ಮಾತನಾಡುವವರೆಂದಹಾಗಾಯಿತು. ನಿನ್ನ ಮಗನಾದರೋ ಹಾಗಲ್ಲ. ಸತ್ಯವನ್ನೂ ಮಿತವನ್ನೂ ಆಡುವವನು. ||೪೮-೪೯||

ಇದೆಲ್ಲವೂ ಬಹಳ ವಿಚಿತ್ರವಾಗಿರುವುದು. ನಮಗೆ ಹೀಗೆ ಹೇಳಲು ಈ ಬಾಲಕನನ್ನು ಯಾರು ಶಿಕ್ಷಿಸಿರುವರೋ ತಿಳಿಯದು. ಇನ್ನೂ ನಾಲಿಗೆಯು ತಾಲುಪ್ರದೇಶವನ್ನು ಮುಟ್ಟುವುದಿಲ್ಲ. ಅಷ್ಟರೊಳಗೆ ಸಮಯಕ್ಕೆ ಯೋಗ್ಯವಾಗಿ ಹೇಳುವನು. ||೫೦||

ನೀನು ಕೂಡ ನಿನ್ನ ಮಗನು ಬಹಳ ಸಾಧುಸ್ವಭಾವದವನೆಂದು ತಿಳಿದಿರುವೆ! ಲೋಕದಲ್ಲಿ ಮನುಷ್ಯರಿಗೆ ತನ್ನ ವಸ್ತುವಿನಲ್ಲಿಯೂ ಇನ್ನೊಬ್ಬರ ವಸ್ತುವಿನಲ್ಲಿಯೂ ಸಮಬುದ್ಧಿಯು ತೋರುವುದಿಲ್ಲ. ತಮ್ಮದೇ ಉತ್ತಮವೆಂದೂ, ಇನ್ನೊಬ್ಬರದ್ದು ಹಾಗಲ್ಲವು. ಎಂದೂ ತಿಳಿದುಕೊಂಡಿರುವರು. ||೫೧||

ಈ ಮೊದಲಿನಿಂದಲೂ ನೀನು ಈ ಬಾಲಕನನ್ನು ಯಾವಾಗಲೂ ಲಾಲಿಸುತ್ತಲೇ ಇರುವೆ. ಯಾವಾಗಲೂ ಹೊಡೆದು ಶಿಕ್ಷಿಸಲೇ ಇಲ್ಲ. ಇದನ್ನು ತಿಳಿದು ಇವನು ಈಗ ನಿನ್ನನ್ನೇ ಹೆದರಿಸುತ್ತಿರುವನು. ವಾಸ್ತವಸ್ಥಿತಿಯಾದರೋ ನಿನಗೂ ಬೇಸರವನ್ನುಂಟುಮಾಡದಿರದು. ||೫೨||

ಲಾಲನೇ ಬಹವೋ ದೋಷಾಸ್ತಾಡನೇ ಬಹವೋ ಗುಣಾಃ ।
ತಸ್ಮಾದ್ಧಿತಾರ್ಥೀ ಬಾಲಾಂಶ್ಚ ತಾಡಯೇನ್ನತು ಲಾಲಯೇತ್ ॥೫೩॥

ಪರಂತು ವಾರ್ಧಕೇ ಜಾತೇ ಜಾತೋಽಯಂ ಯುವಯೋಃ ಸುತಃ ।
ತಸ್ಮಾತ್ತಾಡಯಿತುಂ ನೈವ ಕುರುತೇ ಭವತೀ ಮನಃ ॥೫೪॥

ಭವತ್ವಿದಾನೀಂ ಗಚ್ಛಾಮೋ ಯದಿ ಕಿಂಚಿತ್ಕರಿಷ್ಯತಿ ।
ನೀತ್ವಾ ತ್ವಾಂ ದರ್ಶಯಿಷ್ಯಾಮಸ್ತದಾ ಕಿಂ ವಾ ವದಿಷ್ಯತಿ ॥೫೫॥

ಇತ್ಯುಕ್ತ್ವಾ ತಾಸ್ತತೋ ಗೋಪ್ಯಃ ಸ್ವಕೀಯನಿಲಯಂ ಯಯುಃ ।
ಗತಾಸು ತಾಸು ಗೋಪೀಷು ಯಶೋದಾ ಮಾಮಶಿಕ್ಷಯತ್ ॥೫೬॥

ನ ಗಚ್ಛೇರನ್ಯ ವೇಶ್ಮಾನಿ ನ ವದೇದ್ದುರ್ವಚಃ ಕ್ವಚಿತ್ ।
ನ ಗಾಲೀರ್ದಾಪಯೇಃ ಪಿತ್ರೋರ್ನ ಬ್ರೂಯಾ ಅನೃತಂ ವಚಃ ॥೫೭॥

---

ಹುಡುಗರನ್ನು ಹೊಡೆದು ಶಿಕ್ಷಿಸಿದರೆ ಅನೇಕ ಗುಣಗಳುಂಟು. ಆದುದರಿಂದ ತನಗೆ ಹಿತವಾಗಬೇಕೆಂದು ಬಯಸುವವನು ಬಾಲಕರನ್ನು ತಕ್ಕಂತೆ ತಾಡಿಸಬೇಕೇ ಹೊರತು ಅತಿಯಾಗಿ ಲಾಲಿಸಬಾರದು. ॥೫೩॥

ಆದರೆ ನಿಮ್ಮ ಮುಪ್ಪಿನಲ್ಲಿ ಈ ಬಾಲಕನು ಹುಟ್ಟಿರುವನು. ಆದುದರಿಂದ ಹೊಡೆಯಲು ನಿನ್ನ ಮನಸ್ಸು ಬಾರದಾಗಿದೆ. ಆಗಲಿ ಚಿಂತೆಯಿಲ್ಲ. ನಾವೀಗ ನಮ್ಮ ಮನೆಗಳಿಗೆ ಹೋಗುವೆವು. ಇನ್ನು ಮುಂದೆ ಕೃಷ್ಣನು ಏನಾದರೂ ಚೇಷ್ಟೆಯನ್ನು ಮಾಡಿದರೆ ಆಗ ನಿನ್ನನ್ನೇ ಕರೆದುಕೊಂಡು ಹೋಗಿ ತೋರಿಸುವೆವು. ಆಗ ನೀನು ಏನನ್ನು ಹೇಳುವೆ ? ಎಂದು ಗೋಪಿಯರೆಲ್ಲರೂ ಹೇಳಿ ತಮ್ಮ ತಮ್ಮ ಮನೆಗಳಿಗೆ ಹೋದರು. ॥೫೪-೫೫॥

ಹೀಗೆ ಆ ಗೋಪಿಯರು ತಮ್ಮ ತಮ್ಮ ಮನೆಗಳಿಗೆ ಹೋಗಲು ನನ್ನ ತಾಯಿಯಾದ ಯಶೋದೆಯು ನನ್ನನ್ನು ಹೀಗೆ ಶಿಕ್ಷಿಸಿದಳು. ಇನ್ನೊಬ್ಬರ ಮನೆಗೆ ವೃಥಾ ಹೋಗಬೇಡ. ಯಾವಾಗಲೂ ದುಷ್ಟಮಾತುಗಳನ್ನಾಡಬೇಡ. ಪಿತೃಗಳಿಗೆ ಬೈಗಳನ್ನು ಕೊಡಬೇಡ. ಯಾವಾಗಲೂ ಸುಳ್ಳನ್ನು ಹೇಳಬೇಡ. ॥೫೬-೫೭॥

ಪಾಪಂ ಕರ್ಮ ನ ಕುರ್ವೀಥಾಶ್ಚೌರ್ಯಂ ಕಪಟಮೇವ ಚ ।
ತಥ್ಯಂ ಪ್ರಿಯಂ ತತೋ ಬ್ರೂಯಾಃ ಕುರ್ಯಾಃ ಕರ್ಮಸುಖಾವಹಂ॥೫೮॥

ನೋದ್ವೇಜಯೇಸ್ತಥಾ ಕಂಚಿದನಾಹೂತೋ ನ ವೇಶ್ಮನಿ ।
ನ ಗಚ್ಛೇಸ್ತ್ವಂ ಕದಾಚಿಚ್ಚ ಕುರು ಮೇ ಶಿಕ್ಷಿತಂ ವಚಃ ॥೫೯॥

ಯದಿ ಬಾಲಾ ವಾನರಾಶ್ಚ ಪ್ರಿಯಾಃ ಪುತ್ರ ತವಾಂತಿಕಂ ।
ಆನಯಸ್ವ ಗೃಹೇ ಸರ್ವಾನ್ಪಿಬ ಭುಂಕ್ಷ್ವ ದದಸ್ವ ಚ ।
ತದಾ ಸುಖಂ ಮೇ ಭವಿತಾ ನಾನ್ಯಥಾ ಕಿಂಚಿದೇವ ಹಿ ॥೬೦॥

ಶ್ರುತ್ವೇತಿ ವಚನಂ ತಸ್ಯಾ ಅಹಮಪ್ಯಬ್ರುವಂ ತತಃ ।
ನ ಪ್ರತೀತಿಂ ಮದ್ವಚಸಿ ಕುರುಷೇ ತ್ವಂ ತತಃ ಕುರು ॥೬೧॥

ಗೋಪಂ ಪ್ರೌಢಂ ನಿಜಂ ಕಿಂಚಿನ್ಮದೀಯಂ ಸಹಚಾರಿಣಂ ।
ತಂ ದೃಷ್ಟ್ವಾ ಜ್ಞಾಸ್ಯಸೇ ಮಾತಃ ಸರ್ವಮೇವ ಚ ಚೇಷ್ಟಿತಂ ॥೬೨॥

---

ಪಾಪವುಂಟಾಗುವ ಕೆಲಸವನ್ನು ಮಾಡಬೇಡ. ಕಳ್ಳತನವನ್ನು ಮಾಡಬೇಡ. ಯಾರಿಗೂ ವಂಚಿಸಬೇಡ. ಸತ್ಯವಾಗಿಯೂ ಕೇಳಲು ಆನಂದವಾಗಿಯೂ ಇರುವ ಮಾತುಗಳನ್ನು ಆಡು. ಸುಖವುಂಟಾಗುವ ಕೆಲಸಗಳನ್ನು ಮಾಡು. ಯಾರನ್ನೂ ಹೆದರಿಸಬೇಡ. ಯಾರೂ ಕರೆಯದೆ ಇನ್ನೊಬ್ಬರ ಮನೆಗೆ ಹೋಗಬೇಡ. ನಾನು ಶಿಕ್ಷಿಸಿದಂತೆಯೇ ಮಾಡುವವನಾಗು. ||೫೮-೫೯||

ಒಂದುವೇಳೆ ಹುಡುಗರೂ, ಕಪಿಗಳೂ ಸಹ ನಿನಗೆ ಪ್ರೀತಿಪಾತ್ರರಾಗಿದ್ದರೆ, ಅವರನ್ನು ನಮ್ಮ ಮನೆಗೆ ಕರೆದುಕೊಂಡು ಬಂದು ಬೇಕಾದಷ್ಟು ತಿಂಡಿಗಳನ್ನು ಕೊಡು. ಅವರೂ ಕುಡಿಯಲಿ. ಅವರಿಗೆ ಬೇಕಾದುದನ್ನು ಕೊಡು. ನೀನು ಹೀಗೆ ಮಾಡಿದರೆ ನನಗೆ ಸುಖವಾಗುವುದು. ಹಾಗೆಮಾಡದಿದ್ದರೆ ನನ್ನ ಮನಸ್ಸಿಗೆ ಬಹಳ ದುಃಖವುಂಟಾಗುವದು. ||೬೦||

ಈ ರೀತಿಯಾಗಿ ಹೇಳಿದ ತಾಯಿಯ ಮಾತನ್ನು ಕೇಳಿ ನಾನು ಹೇಳಿದೆನು. ಓ ತಾಯಿಯೇ, ನನ್ನ ಮಾತಿನಲ್ಲಿ ನಿನಗೆ ನಂಬಿಕೆ ಇಲ್ಲದಿದ್ದರೆ ಒಂದು ಉಪಾಯ ವನ್ನು ಹೇಳುವೆನು ಕೇಳು. ನನ್ನ ಜೊತೆಯವನಾದ ಪ್ರೌಢವಯಸ್ಕನಾದ ಒಬ್ಬ

**ತಾಸಾಮಪಿ ಚ ಕರ್ಮಾಣಿ ವದಿಷ್ಯತಿ ಸ ಏವ ತೇ ।**
**ಯತ್ರ ಕುತ್ರಾಪಿ ಕ್ರೀಡಂತಂ ವೀಕ್ಷ್ಯ ಮಾಂ ವೇಷ್ಟಯಂತಿ ತಾಃ ॥೬೩॥**

**ಗೃಹಕರ್ಮಾಣಿ ಸಂತ್ಯಜ್ಯ ತಿಷ್ಠಂತಿ ಮಮ ಸನ್ನಿಧೌ ।**
**ಬಲಾದ್ಗೃಹೀತ್ವಾ ಸ್ವೋತ್ಸಂಗೇ ನಯಂತಿ ಸ್ವಗೃಹಂ ಪ್ರತಿ ॥೬೪॥**

**ಅತ್ಯಂತಾತ್ಮೇಚ್ಛಯಾ ಚೈವ ಯಾಮಿ ಕೃತ್ವಾ ಪಲಾಯನಂ ।**
**ಆನೀಯ ಗೃಹಪಾತ್ರಾಣಿ ಸ್ವಯಮೇವ ಹಿ ಗೋಪಿಕಾಃ ॥೬೫॥**

**ಪ್ರಯಚ್ಛಂತಿ ಸಖಿಭ್ಯಶ್ಚ ಭೋಜಯಂತಿ ಸ್ವಭಾವತಃ ।**
**ಪಶ್ಚಾದ್ಗೃಹೀತ್ವಾ ವಸನಂ ತಾಡಯಂತಿ ಸಖೀನಪಿ ॥೬೬॥**

**ಕಥಂ ದಧಿ ಪಯೋಽಸ್ಮಾಕಂ ಭುಕ್ತಂ ಪಾತ್ರಂ ಚ ಭೇದಿತಂ ।**
**ತದಾ ತಾನಪಿ ಕೃಚ್ಛ್ರೇಣ ಮೋಚಯಾಮಿ ಕಥಂಚನ ॥೬೭॥**

---

ಗೋಪನಿರುವನು. ಅವನನ್ನು ನೀನು ಕೇಳಿ ನೋಡಿದರೆ ಗೋಪಿಯರ ಚೇಷ್ಟೆಗಳು ನಿನಗೆ ತಿಳಿಯುವುವು. ||೬೧-೬೨||

ಆ ಗೋಪಿಯರ ಕೆಲಸಗಳನ್ನೂ ಅವನೇ ನಿನಗೆ ವಿಶದವಾಗಿ ಹೇಳುವನು. ನಾನೆಲ್ಲಾದರೂ ಆಡುತ್ತಿದ್ದರೆ ಆ ಗೋಪಿಯರು ಅಲ್ಲಿಗೆ ಬಂದು ಸುತ್ತುವರೆಯುವರು. ತಮ್ಮ ಮನೆಯ ಕೆಲಸಗಳನ್ನೂ ಸಹ ಬಿಟ್ಟು ನನ್ನ ಹತ್ತಿರ ಇರುವರು. ಬಲಾತ್ಕಾರದಿಂದ ನನ್ನನ್ನು ತಮ್ಮ ತೊಡೆಗಳ ಮೇಲೆ ಕುಳ್ಳಿರಿಸಿಕೊಂಡು ತಮ್ಮ ಮನೆಗಳಿಗೆ ಒಯ್ಯುವರು. ||೬೩-೬೪||

ಇವರ ಇಚ್ಛೆಯಂತೆಯೇ ಅವರ ಮನೆಗೆ ಹೋಗಿ ಅನಂತರದಲ್ಲಿ ನನ್ನ ಇಚ್ಛೆಯಂತೆ ನಾನು ಓಡಿ ಹೋಗುವೆನು. ಗೋಪಿಯರು ಮನೆಯಲ್ಲಿರುವ ತಿಂಡಿಪಾತ್ರೆಗಳನ್ನು ತಂದು ನನಗೂ ನನ್ನ ಮಿತ್ರರಿಗೂ ಊಟವನ್ನು ಮಾಡಿಸುವರು. ಅನಂತರದಲ್ಲಿ ಹಿಂದಿನಿಂದ ಬಂದು ನಮ್ಮಬಟ್ಟೆಗಳನ್ನು ಹಿಡಿದುಕೊಂಡು ನಮ್ಮನ್ನು ಹೊಡೆಯುವರು. ||೬೫-೬೬||

ನಮ್ಮ ಹಾಲು ಮೊಸರನ್ನು ತಿಂದು ಪಾತ್ರೆಗಳನ್ನು ಒಡೆದುಹಾಕಿದಿರೆಂದು ನನ್ನ ಮಿತ್ರರನ್ನು ಹೊಡೆಯುವರು. ಆಗ ನಾನು ಏನೇನನ್ನೋ ಸಮಾಧಾನವನ್ನು ಹೇಳಿ ಕಷ್ಟಪಟ್ಟು ಅವರನ್ನು ಬಿಡಿಸುವೆನು. ಊಟವಾದ ಕೂಡಲೆ ನನ್ನ ಮಿತ್ರರೆಲ್ಲರೂ

**ಭುಕ್ತ್ವಾ ಚ ತೇ ಪಲಾಯಂತೇ ಗೋಪ್ಯೋ ಗೃಣ್ಹಂತಿ ಮಾಂ ತದಾ ।**
**ತದಾ ಕ್ರೋಶಂತಿ ಬಹುಶೋ ಯದ್ವಾ ತದ್ವಾ ವದಂತಿ ಚ ॥೬೮॥**

**ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯ್ಯಾಸಿಕೇ ನಾರದ ಶೌನಕ ಸಂವಾದೇ ಯಶೋದಾ ಕೃಷ್ಣ ಸಂಲಾಪೋ ನಾಮ ಪಂಚವಿಂಶೋಽಧ್ಯಾಯಃ**

---

ಹೊರಗೆ ಓಡಿಹೋಗುವರು. ಆಗ ಎಲ್ಲಾ ಗೋಪಿಯರೂ ನನ್ನನ್ನು ಹಿಡಿದುಕೊಂಡು ಹೆಚ್ಚಾಗಿ ಆಕ್ರೋಶಿಸುತ್ತಾ ಬಾಯಿಗೆ ಬಂದಹಾಗೆ ಹರಟುವರು. ॥೬೭-೬೮॥

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಸಮಾಪ್ತವಾಯಿತು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಷಡ್ವಿಂಶೋಽಧ್ಯಾಯಃ ||

### ಇಪ್ಪತ್ತಾರನೆಯ ಅಧ್ಯಾಯವು

|| ಶ್ರೀ ಭಗವಾನುವಾಚ ||

**ಯಶೋದಾ ಮದ್ವಚಃ ಶ್ರುತ್ವಾ ಪ್ರತೀತಿಮಕರೋತ್ತದಾ ।**
**ಅಹಮಪ್ಯನ್ಯದಿವಸೇ ತಾಸಾಂ ವೇಶ್ಮ ತಥಾಽವಿಶಂ ॥೧॥**

**ಬಲೇನ ಛದ್ಮನಾ ವಾಽಪಿ ಗೃಹೀತಂ ಚಾಖಿಲಂ ವಸು ।**
**ಕುತ್ರ ಚಿದ್ಭುಕ್ತಮೇವಾಽಥ ಪಾತ್ರಭಂಗಶ್ಚ ಕುತ್ರಚಿತ್ ॥೨॥**

**ವಸ್ತ್ರಸ್ಯ ಪಾಟನಂ ಕ್ವಾಪಿ ಹಾರಶಂಖ ವಿಭೇದನಂ ।**
**ಮಹಾಕ್ರೋಶೋ ಬಭೂವಾಥ ವ್ರಜಸ್ತ್ರೀಣಾಂ ಗೃಹೇ ಗೃಹೇ ॥೩॥**

---

ನನ್ನ ಮಾತನ್ನು ಕೇಳಿ ಯಶೋದೆಯು ನಂಬಿದಳು. ಇದಾದಮೇಲೆ ಒಂದು ದಿನ ನಾನು ಆ ಗೋಪಿಯರ ಮನೆಯನ್ನು ಪ್ರವೇಶಿಸಿದೆನು. ||೧||

ಬಲಾತ್ಕಾರದಿಂದಲೂ ಮೋಸದಿಂದಲೂ ಸಹ ಆ ಗೋಪಿಯರಿಂದ ಸ್ವಲ್ಪ ದ್ರವ್ಯವನ್ನು ತೆಗೆದುಕೊಂಡೆನು. ಒಂದು ಮನೆಯಲ್ಲಿ ಊಟಮಾಡಿದೆನು. ಇನ್ನೊಂದು ಮನೆಯ ಪಾತ್ರೆಯನ್ನು ಒಡೆದುಹಾಕಿದೆನು. ||೨||

ಇನ್ನೊಂದೆಡೆಯಲ್ಲಿ ವಸ್ತ್ರಗಳನ್ನು ಹರಿದೆನು. ಮತ್ತೊಂದು ಕಡೆಯಲ್ಲಿ ಹಾರವನ್ನು ಚೂರುಮಾಡಿದೆನು. ಮತ್ತು ಶಂಖವನ್ನು ಎತ್ತಿಹಾಕಿ ಒಡೆದೆನು. ಇಷ್ಟರೊಳಗೆ ಗೋಪಿಯರ ಪ್ರತಿಯೊಂದು ಮನೆಯಲ್ಲಿ ದೊಡ್ಡ ಕೂಗುಗಳು ಹೊರಟವು. ||೩||

ಕಸ್ಮಿಂಶ್ಚಿದ್ಭವನೇ ಸೌಮ್ಯ ಪ್ರೌಢಾ ಯೌವನ ಗರ್ವಿತಾ ।
ರುರೋಧ ಮಾಂ ಸಖೀಭಿಶ್ಚ ಸ್ವಯಂ ಧರ್ತುಂ ಸಮುದ್ಯತಾ ॥೪॥

ಮಯಾ ಚ ಸಾ ಬಲಾತ್ಕ್ಷಿಪ್ತಾ ಪಪಾತ ಧರಣೀತಲೇ ।
ಹಸ್ತಯೋಃ ಸ್ಫುಟಿತಾಃ ಶಂಖಾಃ ಹಾರಶ್ಛಿನ್ನೋ ದ್ವಿಧಾಽಭವತ್ ॥೫॥

ವಸ್ತ್ರಂ ಚ ಗಾತ್ರೇ ರುಧಿರಸ್ರಾವೋ ವೈ ತತ್ರ ತತ್ರ ಹ ।
ಉತ್ಥಿತಾ ಸಾ ತಥಾ ಭೂತಾ ಯಶೋದಾಯೈ ನ್ಯವೇದಯತ್ ॥೬॥

ಅಹಂ ಮೃಷಾಶ್ರುರ್ಗಚ್ಛಾಮಿ ರುದನ್ಸ್ವೈ ಸದನಂ ಪ್ರತಿ ।
ತತೋ ಯಶೋದಾ ಮಾಮಾಹ ಕಥಂ ರೋದಿಷಿ ಪುತ್ರಕ ॥೭॥

ಮಯೋಕ್ತಂ ಶೃಣು ಮಾತರ್ಮೇ ವಚನಂ ಯದ್ಬ್ರವೀಮ್ಯಹಂ ।
ಇಯಂ ಪಶ್ಚಾನ್ಮಮಾಗತ್ಯ ಪೃಷ್ಠೇ ಸಂತಾಡ್ಯ ಪಾಣಿನಾ ॥೮॥

---

ಒಂದಾನೊಂದು ಗೃಹದಲ್ಲಿ ಪ್ರೌಢವಯಸ್ಕಳೂ, ಯೌವನದಿಂದ ಗರ್ವಿತಳೂ, ಆದ ಒಬ್ಬಳು ಗೋಪಿಯು ತನ್ನ ಸಖಿಯರೊಡನೆ ನನ್ನನ್ನು ತಡೆದು ನಿಂತಳು ಮತ್ತು ನನ್ನನ್ನು ಹಿಡಿಯಲು ಪ್ರಯತ್ನಪಟ್ಟಳು! ॥೪॥

ನಾನು ಆ ಗೋಪಿಯನ್ನು ಬಲವಾಗಿ ನೂಕಲು ಅವಳು ನೆಲದ ಮೇಲೆ ಬಿದ್ದಳು. ಅವಳ ಹಸ್ತದಲ್ಲಿರುವ ಶಂಖಗಳು ಚೂರಾದವು. ಅವಳು ಧರಿಸಿದ ಹಾರವು ಎರಡು ತುಂಡಾಯಿತು. ॥೫॥

ಅವಳು ಉಟ್ಟಿರುವ ಸೀರೆಯು ಜಾರಿಹೋಯಿತು. ಅಂಗಾಂಗಗಳಲ್ಲಿ ರಕ್ತವು ಸುರಿಯಿತು. ಇಂತಹ ಅವಸ್ಥೆಯನ್ನು ಹೊಂದಿದ ಆ ಗೋಪಾಂಗನೆಯು ಎದ್ದು ಹೋಗಿ ಎಲ್ಲಾ ವಿಚಾರವನ್ನೂ ಯಶೋದಾದೇವಿಗೆ ಹೇಳಿದಳು. ॥೬॥

ನಾನೂ ಸಹ ಸುಳ್ಳಿಗಾಗಿಯೇ ಕಣ್ಣಿನಲ್ಲಿ ನೀರು ಸುರಿಸುತ್ತಾ, ಅಳುವವನಂತೆ ನಟಿಸುತ್ತಾ, ನಮ್ಮ ಮನೆಗೆ ಹೋದೆನು. ಅನಂತರದಲ್ಲಿ ಯಶೋದೆಯು ಮಗನೇ, ಏಕೆ ಅಳುವೆ? ಎಂದು ನನ್ನನ್ನು ಕೇಳಿದಳು. ॥೭॥

ಓ ತಾಯಿಯೇ, ನನ್ನ ಮಾತನ್ನು ಕೇಳು. ಈ ಗೋಪಸ್ತ್ರೀಯು ನನ್ನ ಹಿಂದುಗಡೆಯಿಂದ ಬಂದು ನನ್ನ ಬೆನ್ನಿನ ಮೇಲೆ ಕೈಯಿಂದ ಹೊಡೆದು ಓಡಿದಳು. ಓಡುವಾಗ್ಗೆ ಕಾಲೆಡವಿ ತಾನೇ ಭೂಮಿಯಲ್ಲಿ ಬಿದ್ದುಬಿಟ್ಟಳು. ॥೮॥

ಚಚಾಲ ವೇಗಾದಪತತ್ ಸ್ಖಲಿತಾ ಚ ಸ್ವಯಂ ಭುವಿ ।
ಮಿಥ್ಯಾ ವದತಿ ಮೇ ದೋಷಮಿಯಂ ತತ್ಪುರತಃ ಸ್ಥಿತಾ ॥೯॥

ತದಾಕರ್ಣ್ಯ ಯಶೋದಾ ಚ ಬಹುಧಾ ತಾಮಭರ್ತ್ಸಯತ್ ।
ತ್ವಂ ಸದಾ ಯೌವನೋನ್ಮತ್ತಾ ಬಂಧನಂ ಕುರುಷೇ ಭೃಶಂ ॥೧೦॥

ಬಾಲಾ ಗೃಹೇ ಗೃಹೇ ಸಂತಿ ಕಾಽಪಿ ಕಸ್ಯಾಪಿ ದೂಷಣಂ ।
ನ ಬ್ರವೀತಿ ಯಥಾ ನಿತ್ಯಂ ಕೃಷ್ಣಸ್ಯಾಖಿಲಗೋಪಿಕಾ(ಃ) ॥೧೧॥

ಇತಿ ಸಾಕ್ಷೇಪವಾಕ್ಯಾನಿ ಶ್ರುತ್ವಾ ಸಾ ಲಜ್ಜಿತಾ ಯಯೌ ।
ನೈತದ್ಬ್ರಹ್ಮಾದಿಭಿರ್ದೇವೈರನುಭೂತಂ ಹಿ ತತ್ಸುಖಂ ॥೧೨॥

ಯಲ್ಲಬ್ಧಂ ವಲ್ಲಭಸ್ತ್ರೀಭಿರೇವಂ ಭೂತಮನೇ ಕಥಾ ।
ಕದಾಚಿದ್ದೇವಪೂಜಾರ್ಥಮುದ್ಯತಾ ಜನನೀ ಮಮ ॥೧೩॥

---

ಈಗ ಈ ಗೋಪಿಯು ನಿನ್ನ ಮುಂಭಾಗದಲ್ಲಿ ಸುಳ್ಳಾಗಿಯೇ ನನ್ನ ದೋಷಗಳನ್ನು ಹೇಳುತ್ತಿರುವಳು. ಈ ಮಾತನ್ನು ಕೇಳಿ ಯಶೋದೆಯು ಆಕೆಯನ್ನು ನಾನಾವಿಧವಾಗಿ ಬೈದಳು. ನೀನು ಯಾವಾಗಲೂ ಯೌವನಮದದಿಂವ ಕೊಬ್ಬಿಹೋಗಿರುವೆ. ಆದುದರಿಂದ ಯಾವಾಗಲೂ ಬಾಲನನ್ನು ಬಂಧಿಸುವೆ. ||-೯೧೦||

ಪ್ರತಿಯೊಬ್ಬರ ಮನೆಯಲ್ಲಿಯೂ ಬಾಲಕರಿರುವರು. ಆದರೆ ನಿನ್ನಂತೆ ಇನ್ನು ಯಾವ ಗೋಪಾಂಗನೆಯೂ ಸಹ ಬಾಲಕನ ದೂರನ್ನು ಹೇಳುವುದಿಲ್ಲ. ಮತ್ತು ಕೃಷ್ಣನ ದೂರನ್ನೂ ಸಹ ಹೇಳುವುದಿಲ್ಲ. ||೧೧||

ಈ ರೀತಿಯಾಗಿ ಧಿಕ್ಕಾರದ ಮಾತುಗಳನ್ನು ಕೇಳಿ ಆ ಗೋಪಿಯು. ನಾಚಿಕೆಗೊಂಡವಳಾಗಿ ಮನೆಗೆ ಹೋದಳು. ನನ್ನ ಈ ಚರಿತ್ರೆಯಿಂದ ಈ ರೀತಿಯಾಗಿ ನನಗೆ ಪ್ರೀತಿಪಾತ್ರರಾದ ಗೋಪಸ್ತ್ರೀಯರು ಆನಂದವನ್ನು ಅನುಭವಿಸುವರು. ಇಂತಹ ಚರಿತ್ರೆಯು ಬ್ರಹ್ಮಾದಿದೇವತೆಗಳಿಗೂ ಸಹ ಅನುಭವಿಸಲು ದುರ್ಲಭವಾಗಿರುವುದು. ||೧೨||

ಒಂದುದಿನ ನನ್ನ ಜನನಿಯಾದ ಯಶೋದೆಯು ದೇವರ ಪೂಜೆಯನ್ನು ಮಾಡಬೇಕೆಂದು ಅನೇಕ ವಿಧವಾದ ಶಾಲ್ಯನ್ನಗಳನ್ನೂ ಹಾಲು, ಮೊಸರು, ಬೆಣ್ಣೆ, ಮತ್ತು ತುಪ್ಪ ಮುಂತಾದ ಪೂಜಾಸಾಮಗ್ರಿಗಳನ್ನೂ ಸಿದ್ಧಪಡಿಸಿದಳು. ಗೋಪಿಯರನ್ನು ಕರೆದುಕೊಂಡು ಬರಬೇಕೆಂದು ಯೋಚಿಸಿ ನನ್ನನ್ನು ಕುರಿತು ಹೀಗೆಂದಳು.

ಅಕರೋದ್ಭಹುಪಕ್ವಾನ್ನಂ ದಧಿದುಗ್ಧಾದಿ ಸಂಚಯಂ ।
ಸಂಪಾದ್ಯ ಸರ್ವಾಂ ಸಾಮಗ್ರೀಂ ಗೋಪೀರಾಹ್ವಾತುಮುದ್ಯತಾ ॥೧೪॥

ಮಾಮುಕ್ತ್ವಾ ಗೃಹರಕ್ಷಾತ್ರ ಸಮ್ಯಕ್ಕಾರ್ಯಾ ತ್ವಯಾಽನಘ ।
ಯಾವತ್ಸ್ತ್ರಿಯಃ ಸಮಾಹೂಯ ಆನಯಾಮಿ ಸ್ವವೇಶ್ಮನಿ ॥೧೫॥

ಅಥ ತಸ್ಯಾಂ ಗತಾಯಾಂ ತು ಮಯಾಽಽಹೂತಾಶ್ಚ ಬಾಲಕಾಃ ।
ವಾನರಾಶ್ಚಾಗತಾಃ ಸರ್ವೇ ತೇ ಮಯಾ ಭೋಜಿತಾಃ ಸುಖಂ ॥೧೬॥

ಆಗತಾ ಸಾ ಪರಾವೃತ್ಯ ಸಮಾಹೂಯ ವ್ರಜಸ್ತ್ರಿಯಃ ।
ದೃಷ್ಟ್ವಾ ಭೂಯೋ ಮತ್ಕೃತಂ ಚ ಬಭೂವಾಽಥ ಸಮಾಕುಲಾ॥೧೭॥

ಮಾಮುವಾಚ ತದಾ ಮಾತಾ ಕಿಂ ಕೃತಂ ಶೂನ್ಯ ಸದ್ಮನಿ ।
ಆಗತ್ಯಾಗತ್ಯ ಗೋಪೀಭಿರ್ಯದುಕ್ತಂ ಜಾತಮದ್ಯ ಮೇ ॥೧೮॥

ಯದೀಹ್ಯೈತಾದೃಶೋ ಬಾಲೋ ದೇವಕಾರ್ಯಂ ಕುತಶ್ಚ ವೈ ।
ತ್ಯಕ್ತಂ ಮಯಾಽಧುನಾ ಸರ್ವಂ ದೇವಕಾರ್ಯಾದಿಕಂ ಚ ಯತ್ ॥೧೯॥

---

ಓ ಕೃಷ್ಣನೇ, ನಾನು ಗೋಪಿಯರನ್ನು ಕರೆಯಲು ಅವರ ಮನೆಗಳಿಗೆ ಹೋಗುವೆನು. ನೀನು ಮನೆಯಲ್ಲಿಯೇ ಇದ್ದು ನಾನು ಗೋಪಿಯರನ್ನು ಕರೆದುಕೊಂಡು ಬರುವ ವರೆಗೆ ಮನೆಯನ್ನು ಸರಿಯಾಗಿ ಕಾಯುತ್ತಿರು. ಜೋಕೆ. ಎಂದು ನನಗೆ ಹೇಳಿ ಹೊರಗೆ ಹೋದಳು. ||೧೩-೧೪-೧೫||

ಯಶೋದೆಯು ಗೋಪಿಯರನ್ನು ಕರೆಯಲು ಹೊರಗೆ ಹೋಗಲು, ನಾನು ನನ್ನ ಸ್ನೇಹಿತರಾದ ಬಾಲಕರನ್ನೂ ಕಪಿಗಳನ್ನೂ ಸಹ ಕರೆದು ಸುಖವಾಗಿ ಭೋಜನ ವನ್ನು ಮಾಡಿಸಿದೆನು. ||೧೬||

ಇಷ್ಟರಲ್ಲಿ ನನ್ನ ಮಾತೆಯು ಎಲ್ಲಾ ಗೋಪಸ್ತ್ರೀಯರನ್ನು ಕರೆದು ಮನೆಗೆ ಬಂದು ನನ್ನ ಕೃತ್ಯಗಳನ್ನೆಲ್ಲವನ್ನೂ ನೋಡಿ ಬಹಳ ಖೇದಗೊಂಡು ನನ್ನನ್ನು ಕುರಿತು ಹೀಗೆ ಹೇಳಿದಳು. ಓ ಬಾಲಕನೇ, ಮನೆಯಲ್ಲಿ ಯಾರೂ ಇಲ್ಲದಿರುವಾಗ ಎಂತಹ ಕಾರ್ಯವನ್ನು ಮಾಡಿಬಿಟ್ಟೆ. ಪ್ರತಿದಿನವೂ ಗೋಪಿಯರೆಲ್ಲರೂ ಬಂದು ನಿನ್ನ ಕೃತ್ಯಗಳನ್ನು ಹೇಳುತ್ತಿದ್ದರು. ಅದನ್ನು ಈಗ ನಾನು ಪ್ರತ್ಯಕ್ಷವಾಗಿ ನೋಡಿದಂತಾಯಿತು.

**ಆಯಾಸ್ಯಂತಿ ಸಮಾಹೂತಾಃ ಕಿಂ ವದಿಷ್ಯಂತಿ ಯೋಷಿತಃ ।**
**ಸರ್ವಾ ಏವ ಹಸಿಷ್ಯಂತಿ ಜ್ಞಾತ್ವಾ ಮಾಂ ತವ ಚೇಷ್ಟಿತಂ ॥೨೦॥**

**ಏವಂ ವದಂತ್ಯಾಂ ತಸ್ಯಾಂ ತು ವ್ರಜವಧ್ವಃ ಸಮಾಗತಾಃ ।**
**ತಾಂ ದೃಷ್ಟ್ವಾ ಕ್ಷೋಭಿತಾಂ ಪ್ರೋಚುಃ ಕಿಮರ್ಥಂ ಕ್ಲಿಶ್ಯತೇ ತ್ವಯಾ॥೨೧॥**

॥ ಯಶೋದೋವಾಚ ॥

**ಅಹಂ ಪುರೈವ ಸರ್ವಾಣಿ ಕರ್ಮಾಣಿ ಪ್ರೇಕ್ಷ್ಯ ಚ ಸ್ಥಿತಾ ।**
**ಸಂತತಿರ್ನಾಸ್ತಿ ಯದ್ಗೇಹೇ ತದ್ಗೇಹೇ ಮಂಗಲಂ ಕುತಃ ॥೨೨॥**

**ದೇವತಾಃ ಪಿತರಶ್ಚೈವ ನ ಪುನಃ ಪೂಜ್ಯತಾ ಮಮ ।**
**ಇತಿ ತ್ಯಕ್ತಂ ಮಯಾ ಸರ್ವಂ ಯದಾಽಯಂ ಬಾಲಕೋಽಭವತ್ ॥೨೩॥**

**ಕುರ್ವನ್ನರಃ ಕುಲಾಚಾರಂ ಸರ್ವಮಾಪ್ನೋತಿ ಶೋಭನಂ ।**
**ಇತಿ ವೇದವಿದಾಂ ವಾದಃ ಸಮಾರಬ್ಧೋ ಮಯಾ ತತಃ ॥೨೪॥**

---

ಇಂತಹ ತುಂಟನಾದ ಬಾಲಕನಿದ್ದರೆ ದೇವಕಾರ್ಯವನ್ನು ಹೇಗೆ ಮಾಡುವುದು? ಸಮಸ್ತ ದೇವಕಾರ್ಯಗಳನ್ನೂ ಬಿಟ್ಟುಬಿಡುವೆನು. ॥೧೭-೧೮-೧೯॥

ನಾನು ಕರೆದ ಗೋಪಿಯರೆಲ್ಲರೂ ಈಗಲೇ ಬರುವರು. ಅವರು ಇದನ್ನೆಲ್ಲವನ್ನೂ ನೋಡಿ ಏನೆಂದಾರು? ನಿನ್ನ ಚೇಷ್ಟೆಯನ್ನೂ ನನ್ನನ್ನೂ ಸಹ ನೋಡಿ ಎಲ್ಲರೂ ನಗುವರು. ಈರೀತಿಯಾಗಿ ಯಶೋದೆಯು ಹೇಳುತ್ತಿರಲು ಗೋಕುಲವಾಸಿಗಳಾದ ನಾರಿಯರೆಲ್ಲರೂ ನಮ್ಮ ಮನೆಗೆ ಬಂದರು. ಬೇಸರದಿಂದಿರುವ ಯಶೋದೆಯನ್ನು ಕುರಿತು ಆ ಸ್ತ್ರೀಯರು ನೀನು ಹೀಗೆ ಬೇಸರದಿಂದಿರಲು ಕಾರಣವೇನೆಂದು ಕೇಳಿದರು. ॥೨೦-೨೧॥

ಯಶೋದೆಯು ಹೇಳಿದಳು---ನಾನು ಮುಂಭಾಗದಲ್ಲಿಯೇ ಸಮಸ್ತ ಕರ್ಮಗಳನ್ನೂ ನೋಡುತ್ತಾ ನಿಂತಿರುವೆನು. ಯಾವ ಮನೆಯಲ್ಲಿ ಪುತ್ರ ಸಂತತಿ ಇರುವುದಿಲ್ಲವೋ ಆ ಮನೆಯಲ್ಲಿ ದೇವತೆಗಳಿಗಾಗಲೀ ಪಿತೃಗಳಿಗಾಗಲೀ ಮಂಗಳವು ಎಲ್ಲಿಂದ ಬಂದೀತು! ನನಗೆ ಪೂಜ್ಯತೆ ಇಲ್ಲವೆಂದು ತಿಳಿದಿದ್ದೆನು. ಈ ಬಾಲಕನು ಹುಟ್ಟಿದ ಮೊದಲ್ಗೊಂಡು ದೇವಪಿತೃಗಳ ಆರಾಧನೆಗಳನ್ನು ನಿಲ್ಲಿಸಲಾರದಿರುವೆನು. ॥೨೨-೨೩॥

ಆದಕಾರಣ ತನ್ನ ಕುಲಕ್ಕೆ ಉಚಿತವಾದ ಆಚಾರವನ್ನು ನಡೆಯಿಸುವ

ದೇವಾಶ್ಚ ಪಿತರಶ್ಚೈವ ಪುತ್ರೇ ಜಾತೇಽತಿ ವಿಸ್ಮೃತಾಃ ।
ಪುತ್ರಸ್ನೇಹವಶಾದ್ಯೋಽಸ್ಯಾಃ ಕಿಂಚಿತ್ಕರ್ತುಂ ನ ಶಕ್ಯತೇ ।
ಚಿತ್ತೋತ್ಸಾಹಾದಿದಾನೀಂ ತು ಸಮಾರಬ್ಧಂ ತು ಕಿಂಚನ ॥೨೫॥

ಆಸ್ಥಾಪ್ಯ ವಿವಿಧಂ ದ್ರವ್ಯಂ ದೇವಕಾರ್ಯಾರ್ಥಮುದ್ಯ ನೈ ।
ಭವತೀನಾಂ ಸಮಾಹ್ವಾನಂ ಕರ್ತುಂ ಯಾವದ್ಗತಾ ಹ್ಯಹಂ ॥೨೬॥

ತಾವತ್ಪ್ರಣಾಶಿತಂ ಸರ್ವಂ ಬಾಲೇನಾತಿ ಚಲೇನ ಹಿ ।
ಶಿಕ್ಷಯಿತ್ವಾಽಥ ವಿಧಿವತ್ಸಮ್ಯಗೇನಂ ಗತಾ ಬಹಿಃ ॥೨೭॥

ಯಸ್ಯ ಸದ್ಮನಿ ಪುತ್ರೋಽಯಂ ವರ್ತತೇ ಚಪಲೋ ಹ್ಯತಿ ।
ತತ್ರ ದೇವಾಶ್ಚ ಪಿತರಃ ಕಥಂ ಪೂಜ್ಯಾ ಭವಂತಿ ಹಿ ॥೨೮॥

ಅದ್ಯಾರಭ್ಯ ಕದಾಚಿನ್ನ ಪೂಜಯಿಷ್ಯಾಮಿ ಕಂಚನ ।
ಸಮಾಹೂತಾ ಭವಂತ್ಯೋ ಮೇ ಯಾತ ಸ್ವಂ ಸ್ವಂ ನಿಕೇತನಂ ॥೨೯॥

---

ಮನುಜನು ಕಲ್ಯಾಣವನ್ನು ಹೊಂದುವನೆಂದು ವೇದವನ್ನು ಬಲ್ಲ ಪೂಜ್ಯರು ಹೇಳುವರು. ಆದುದರಿಂದ ನಾನೀಗ ದೇವರ ಪೂಜೆಯನ್ನು ಮಾಡಲು ಆರಂಭಿಸಿದೆನು. ಪ್ರೀತಿಪಾತ್ರನಾದ ಈ ಪುತ್ರನು ಹುಟ್ಟಿದ ಮೊದಲ್ಗೊಂಡು, ಪುತ್ರನ ಸ್ನೇಹದಿಂದ ದೇವಪಿತೃಗಳನ್ನು ಮರೆತಂತಿದ್ದೆನು. ||೨೪||

ಇವತ್ತು ಮನಸ್ಸಿಗೆ ಬಹಳ ಉಲ್ಲಾಸ ಉಂಟಾಗಿ ದೇವಕಾರ್ಯವನ್ನು ಮಾಡಬೇಕೆಂದು ಪ್ರಯತ್ನಪಟ್ಟು, ನಾನಾಬಗೆಯಾದ ಪೂಜಾದ್ರವ್ಯಗಳನ್ನು ಸಿದ್ಧಪಡಿಸಿದೆನು. ಈ ರೀತಿ ಸಿದ್ಧಪಡಿಸಿ ನಿಮ್ಮನ್ನು ಕರೆಯಲು ಮನೆಯಿಂದ ಹೊರಗೆ ಹೊರಡುವಾಗ ಪೂಜೆಯ ದ್ರವ್ಯಗಳನ್ನು ಚನ್ನಾಗಿ ನೋಡಿಕೋ, ಜೋಕೆ. ಎಂದು ಹೇಳಿ ಮನೆಯಿಂದ ಹೊರಟಿದ್ದೆನು. ಆದರೂ ಅತಿ ಚಂಚಲಚಿತ್ತನಾದ ಈ ಬಾಲಕನು ಎಲ್ಲವನ್ನೂ ಹಾಳುಮಾಡಿದನು. ||೨೫-೨೬-೨೭||

ಇಂತಹ ಚಪಲಚಿತ್ತನಾದ ಬಾಲಕನು ಮನೆಯಲ್ಲಿದ್ದರೆ ದೇವತೆಗಳನ್ನಾಗಲೀ, ಪಿತೃಗಳನ್ನಾಗಲೀ, ಹೇಗೆ ಪೂಜಿಸಲು ಸಾಧ್ಯವಾಗಬಹುದು? ಇನ್ನು ಮುಂದೆ ನಾನು ದೇವತೆಗಳನ್ನಾಗಲೀ, ಪಿತೃಗಳನ್ನಾಗಲೀ ಯಾರನ್ನೂ ಆರಾಧಿಸುವು

|| ಗೋಪ್ಯ ಊಚುಃ ||

ಜ್ಞಾತಂ ತ್ವಯಾ ಪುತ್ರ ಕರ್ಮ ನ ಪ್ರತ್ಯೇಷಿ ಕದಾಚನ ।
ಅಸ್ಮಾಭಿರುಕ್ತಂ ಬಹುಧಾ ತ್ವಂ ಜಾನಾಸಿ ಮೃಷೈವ ಹಿ ॥೩೦॥

ಸಮ್ಯಕ್ಕೃತಂ ತ್ವಯಾ ಕೃಷ್ಣ ವಸ್ತುಜಾತಂ ಚ ನಾಶಿತಂ ।
ಪ್ರತೀತಿಂ ನಾಕರೋತ್ಕ್ವಾಪಿ ಯಶೋದಾ ವಚನೇ ಪುನಃ ॥೩೧॥

ಯಾವನ್ನಲಭತೇ ದುಃಖಮಾತ್ಮನೋ ಮಾನವಃ ಕ್ವಚಿತ್ ।
ತಾವದನ್ಯಸ್ಯ ದುಃಖೇನ ಪ್ರತೀತಿಂ ನಾಭಿಗಚ್ಛತಿ ॥೩೨॥

|| ಶ್ರೀಕೃಷ್ಣ ಉವಾಚ ||

ಇತಿ ತಾಸಾಂ ವಚಃ ಶ್ರುತ್ವಾ ತದಾ ಸಾ ಜನನೀ ಮಮ ।
ಆಕ್ರುಶ್ಯ ಬಹುಧಾ ಭೂಯೋ ಮಾಂ ಗ್ರಹೀತುಂ ಸಮುದ್ಯತಾ ॥೩೩॥

ಅಹಂ ಸಾಕ್ಷೇಪ ವಚನೈಃ ರುಷ್ಟೋ ಗೇಹಾದ್ಬಹಿರ್ಗತಃ ।
ಸಾ ಮಾಮನುಜಗಾಮಾಥ ಗೋಪ್ಯಶ್ಚ ಸ್ವಗೃಹಾನ್ಯಯುಃ ॥೩೪॥

---

ದಿಲ್ಲ. ನಾನು ನಿಮ್ಮನ್ನು ಪೂಜೆಗೋಸ್ಕರ ಕರೆದಿರುವುದು ಸರಿಯಷ್ಟೇ. ಈಗ ನೀವು ನಿಮ್ಮ ನಿಮ್ಮ ಮನೆಗಳಿಗೆ ಹೋಗಿರಿ. ||೨೮-೨೯||

ಗೋಪಿಯರು ಹೇಳಿದರು---ಈಗ ನಿನಗೆ ನಿನ್ನ ಮಗನ ತುಂಟತನವು ತಿಳಿಯಿತು. ಯಾವಾಗಲೂ ನಮ್ಮನ್ನು ನೀನು ನಂಬುತ್ತಿರಲಿಲ್ಲ. ನಾವು ಹಿಂದೆ ಎಷ್ಟೋ ಸಾರಿ ಹೇಳಿದ್ದೆವು. ಅದೆಲ್ಲವೂ ಸುಳ್ಳೆಂದು ನೀನು ಹೇಳಿರುವೆ. ಓ ಕೃಷ್ಣನೇ, ನೀನು ಬಹಳ ಚೆನ್ನಾಗಿ ಮಾಡಿರುವೆ. ಎಲ್ಲಾ ಪೂಜಾದ್ರವ್ಯಗಳನ್ನೂ ಹಾಳು ಮಾಡಿರುವೆ. ಹಿಂದೆ ಯಾವಾಗಲೂ ಯಶೋದೆಯು ನಮ್ಮ ಮಾತಿನಲ್ಲಿ ನಂಬಿಕೆ ಯನ್ನೇ ಇಟ್ಟಿರಲಿಲ್ಲ. ||೩೦-೩೧||

ಮನುಷ್ಯನಿಗೆ ದುಃಖವುಂಟಾಗಿ ತಾನು ಅನುಭವಿಸಿದ ಹೊರತು ಇನ್ನೊಬ್ಬರ ದುಃಖದಲ್ಲಿ ನಂಬಿಕೆಯೇ ಹುಟ್ಟುವುದಿಲ್ಲವು. ||೩೨||

ಶ್ರೀಕೃಷ್ಣನು ಹೇಳಿದನು.—ಈ ರೀತಿಯಾಗಿ ಗೋಪಿಯರ ಮಾತನ್ನು ಕೇಳಿ ನನ್ನ ಜನನಿಯಾದ ಯಶೋದಾದೇವಿಯು ಬಹಳವಾಗಿ ನನ್ನನ್ನು ಗದರಿಸಿ ಬೈದು ನನ್ನನ್ನು ಹಿಡಿಯಲು ಪ್ರಯತ್ನಪಟ್ಟಳು. ನಾನು ಜನನಿಯ ಆಕ್ಷೇಪವಾಕ್ಯ

ಮಯಾ ವಿಚಾರಿತಂ ಸಾ ಮಾಂ ತ್ಯಕ್ತ್ವಾಽಭೂದ್ದೇವಪೂಜನೇ ।
ಮತಿರ್ಭವಿಷ್ಯತಿ ತತೋ ವಸ್ತು ತತ್ರ ನ ರಕ್ಷಿತಂ ॥೩೫॥

ವ್ಯಭಿಚಾರಪರೋ ಧರ್ಮೋ ನ ಮೇ ತೋಷಾಯ ಕಲ್ಪತೇ ।
ಯಾವನ್ಮೇ ಪೂಜನಂ ನಾಸ್ತಿ ತಾವದ್ದೇವಾನ್ನ ವೈ ಯಜೇತ್ ॥೩೬॥

ಮಯಿ ಪ್ರಪೂಜಿತೇ ದೇವಾಃ ಪಿತರಶ್ಚೈವ ಪೂಜಿತಾಃ ।
ಯಥಾ ಸಿಕ್ತೇ ವೃಕ್ಷಮೂಲೇ ಪತ್ರಶಾಖಾದಿಸೇಚನಂ ॥೩೭॥

ತಥಾ ಮೇ ಪೂಜನೇ ಜಾತೇ ಸರ್ವೇಷಾಂ ಪೂಜನಂ ಭವೇತ್ ।
ನ ಭಕ್ತೇ ಭಕ್ತಿಮಂತೋಽಪಿ ಯೇಽನ್ಯದೇವಾರ್ಚನೇ ರತಾಃ ॥೩೮॥

ಯಥಾ ಸ್ತ್ರೀ ಕುಲಟಾ ಮೂಢಾ ನ ಯಾತಿ ಪತಿಲೋಕತಾಂ ।
ಯೋಽನನ್ಯ ಭಕ್ತ್ಯಾ ಮಾಂ ನಿತ್ಯಂ ಭಜೇತಮನುಜೋ ಮುನೇ॥೩೯॥

---

ಗಳನ್ನು ಕೇಳಿ ಕೋಪಗೊಂಡು ಮನೆಯಿಂದ ಹೊರಗೆ ಹೊರಟೆನು. ಯಶೋದೆಯೂ ಸಹ ನನ್ನನ್ನು ಅನುಸರಿಸಿ ಹೊರಟಳು. ಗೋಪಿಯರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋದರು. ॥೩೩-೩೪॥

ನಾನು ಹೀಗೆ ವಿಚಾರಿಸಿದೆನು. ಯಶೋದೆಯು ನನ್ನನ್ನು ಬಿಟ್ಟು ದೇವ ಪೂಜೆಯಲ್ಲಿ ಮನಸ್ಸನ್ನಿಟ್ಟರೆ ಅಲ್ಲಿ ಯಾವ ವಸ್ತುವೂ ರಕ್ಷಿಸಲ್ಪಡುವುದಿಲ್ಲವು. ॥೩೫॥

ವ್ಯಭಿಚಾರರೂಪವಾದ ಆ ಧರ್ಮವು ನನಗೆ ಸಂತೋಷವನ್ನುಂಟುಮಾಡಲಾರದು. ಎಲ್ಲಿಯವರೆಗೆ ನನ್ನ ಪೂಜೆಯು ನಡೆಸಲ್ಪಡುವುದಿಲ್ಲವೋ ಅಲ್ಲಿಯವರೆಗೆ ದೇವತೆಗಳನ್ನು ಪೂಜಿಸಿದಂತಾಗದು. ॥೩೬॥

ನಾನೊಬ್ಬನು ಪೂಜಿಸಲ್ಪಡಲು, ಸಮಸ್ತ ದೇವತೆಗಳೂ, ಪಿತೃಗಳೂ ಸಹ ಪೂಜಿಸಲ್ಪಟ್ಟಂತೆ ತೃಪ್ತಿಪಡುವರು. ವೃಕ್ಷದ ಮೂಲಕ್ಕೆ ನೀರನ್ನು ಎರೆದರೆ ಪತ್ರಪುಷ್ಪಾದಿಗಳಿಗೂ ಎರೆದಂತೆಯೇ. ನನ್ನನ್ನು ಪೂಜಿಸಿದರೆ ಎಲ್ಲರೂ ಪೂಜಿತರಾಗುವರು. ಯಾರು ನನ್ನನ್ನು ಬಿಟ್ಟು ಬೇರೆ ದೇವತೆಯನ್ನು ಆರಾಧಿಸುವರೋ ಅವರು ನನ್ನ ಭಕ್ತರೂ ಅಲ್ಲ, ಅವರಲ್ಲಿರುವದು ನಿಜವಾದ ಭಕ್ತಿಯೂ ಅಲ್ಲವು. ॥೩೭-೩೮॥

ವ್ಯಭಿಚಾರಿಣಿಯಾದ ಮೂಢಸ್ತ್ರೀಯು ಹೇಗೆ ಪತಿಲೋಕವನ್ನು ಹೊಂದದೆ ಭ್ರಷ್ಟಳಾಗುವಳೋ ಹಾಗೆ ನನಗಿಂತಲೂ ಬೇರೆ ದೇವತೆಗಳನ್ನು ಪೂಜಿಸುವವನು

ತಸ್ಯಾಧೀನೋಽಸ್ಮಿ ಸತತಂ ನೈವಾನ್ಯತ್ರ ವ್ರಜೇ ಕ್ವಚಿತ್ ।
ಅನನ್ಯ ಭಕ್ತಿಸದೃಶಂ ನಾನ್ಯತ್ ಪ್ರಿಯತಮಂ ಮಮ ॥೪೦॥

ಭಜಂತೋಽನನ್ಯಭಕ್ತಾಶ್ಚ ಸರ್ವೇ ತೇಽ ವ್ಯಭಿಚಾರಿಣಃ ।
ಇತ್ಯಾಶಯಾದ್ಯಶೋದಾಯಾಃ ಕೃತಾ ವಿಪ್ರಗೃಹೇ ಸ್ಥಿತಿಃ ॥೪೧॥

ಅನ್ಯಾಸಾಮಪಿ ಗೋಪೀನಾಂ ಯದ್ಭುಕ್ತಂ ತದ್ಗೃಹೇಗೃಹೇ ।
ತಾ ಮದ್ಭಕ್ತಾಶ್ಚ ಮಾಮೇವ ಮೋಹಿತಾ ನಾರ್ಚಯಂತಿ ಹಿ ॥೪೨॥

ತಾಶ್ಚಾತ್ಮಲೀಲಾವೃದ್ಧ್ಯರ್ಥಂ ಮೋಹಿತಾ ನಾನ್ಯಥಾ ಮುನೇ ।
ಯದಿ ಸರ್ವೇಽನ್ಯಥಾಭಾವಾ ಭವೇಯುರ್ವ್ರಜವಾಸಿನಃ ॥೪೩॥

ತದಾ ಲೀಲಾ ವಿವೃದ್ಧಿಶ್ಚ ನ ಸಮ್ಯಗ್ಜಾಯತೇ ವ್ರಜೇ ।
ಮತ್ಕರ್ಮಭಿರ್ಮತ್ಸ್ನೇಹೇನ ಮಯಿ ತೇಷಾಂ ಸ್ಥಿತಂ ಮನಃ ॥೪೪॥

---

ಭ್ರಷ್ಟನಾಗುವನು. ಯಾವನು ಅನನ್ಯಭಕ್ತಿಯಿಂದ ನನ್ನನ್ನೇ ಆರಾಧಿಸುವನೋ ಅಂತಹ ಮನುಜನಿಗೆ ನಾನು ಅಧೀನನಾಗಿರುವೆನು. ಗೋಕುಲದಲ್ಲಿ ಇನ್ನೆಲ್ಲೂ ನಾನಿರುವುದಿಲ್ಲ. ಅಂತಹ ಭಕ್ತನಲ್ಲಿಯೇ ನಾನಿರುವೆನು. ನನ್ನಲ್ಲಿಯೇ ಅನನ್ಯ ಭಕ್ತಿ ಗಿಂತಲೂ ನನಗೆ ಪ್ರೀತಿಕರವಾದುದು ಇನ್ನು ಯಾವುದೂ ಇರುವುದಿಲ್ಲ. ||೩೯-೪೦||

ಯಾರು ಅನ್ಯದೇವತೆಯನ್ನು ಭಜಿಸದೇ ನನ್ನನ್ನೇ ಎಡೆಬಿಡದೆ ಭಜಿಸು ವರೋ ಅವರು ಯಾವಾಗಲೂ ನಿಷ್ಫಲರಾಗುವುದಿಲ್ಲ. ಈ ಪ್ರಕಾರವಾದ ಅಭಿಪ್ರಾಯ ದಿಂದ ವಿಪ್ರಗೃಹದಲ್ಲಿ ನಾನಿರುವೆನು. ||೪೧||

ಗೋಕುಲದಲ್ಲಿರುವ ಬೇರೆಯಾದ ಗೋಪಸ್ತ್ರೀಯರ ಪ್ರತಿಯೊಂದು ಮನೆ ಯಲ್ಲಿಯೂ ನಾನು ಬೇಕಾದುದನ್ನು ತಿಂದು ಉಂಡಿರುವೆನು. ಅವರೆಲ್ಲರೂ ನನ್ನ ಭಕ್ತರೇ ಆಗಿರುವರು. ಆದರೆ ಅವರು ಮೋಹಿತರಾಗಿ ನನ್ನನ್ನು ಅರ್ಚಿಸುವುದಿಲ್ಲ. ಅವರು ನನ್ನ ಲೀಲೆಯ ಹೆಚ್ಚಿಗೆಗೋಸ್ಕರವೇ ಮೋಹಿತರಾಗಿರುವರೇ ಹೊರತು ಬೇರೆ ಕಾರಣವಿಲ್ಲ. ಹಾಗೆ ಆ ಸ್ತ್ರೀಯರು ಮೋಹಿತರಾಗದಿದ್ದರೆ ಗೋಕುಲದಲ್ಲಿ ನನ್ನ ಲೀಲೆಯು ಚನ್ನಾಗಿ ನಡೆಯಲಾರದು. ನನ್ನ ಅದ್ಭುತ ಕಾರ್ಯಗಳಿಂದಲೂ ನನ್ನಲ್ಲಿರುವ ವಿಶ್ವಾಸದಿಂದಲೂ ಸಹ ಆ ಗೋಪಿಯರ ಮನಸ್ಸು ನನ್ನಲ್ಲಿ ನಟ್ಟುಹೋಗಿರುವುದು. ||೪೨-೪೩-೪೪||

ತತೋಽಪ್ಯನನ್ಯಭಾವಸ್ತು ನ ತೇಷಾಂ ಕ್ವಾಪಿ ಹೀಯತೇ ।
ಏಕದಾ ಚ ಗತಾ ಮಾತಾ ಮೋಹಿತಾ ಮಮ ಮಾಯಯಾ ॥೪೫॥

ತ್ಯಕ್ತ್ವಾ ಕ್ರೋಧಂ ಪುತ್ರ ಪುತ್ರ ಗಚ್ಛ ಮಾಗಚ್ಛ ಮಾಽಬ್ರವೀತ್ ।
ಮಯೋಕ್ತಂ ನೈವ ತೇ ಗೇಹೇ ಆಯಾಸ್ಯಾಮಿ ಕಥಂಚನ ॥೪೬॥

ದೇವಪೂಜಾಽಽಕುಲಾಯಾಸ್ತೇ ಮಯಾ ಕಿಂ ಕಾರ್ಯಮಸ್ತಿನೈ ।
ನ ತಥಾ ವರ್ತತೇ ಪ್ರೇಮ ಕ್ಷುಧಿತೇ ತೃಷಿತೇ ಮಯಿ ॥೪೭॥

ದೇವೇತರ-ತಾಯಾಸ್ತೇ ನಾಹಂ ಯಾಮಿ ಗೃಹಾಂತರಂ ।
ಇತ್ಯುಕ್ತ್ವಾಽಹಂ ರುದಂಸ್ತತ್ರ ಸ್ಥಿತಃ ಸಾ ಭೀಷಯತ್ತದಾ ॥೪೮॥

ತತ್ರೈವ ಮರ್ಕಟಃ ಕ್ರೋಧೀ ರುದಂತಮನುಧಾವತಿ ।
ಅಗತ್ಯ ನಾಸಿಕಾ ಕರ್ಣೌ ಲುನಾತ್ಯೇನ ನ ಸಂಶಯಃ ॥೪೯॥

---

ನನ್ನಲ್ಲಿ ಆ ಗೋಪರಿಗಿರುವ ಅಸಾಧಾರಣವಾದ ಭಾವವು ಯಾವಾಗಲೂ ಕಡಿಮೆಯಾಗುವುದಿಲ್ಲ. ಒಂದಾನೊಂದು ದಿನ ನನ್ನ ಮಾತೆಯಾದ ದೇವಕಿಯು ನನ್ನ ಮಾಯೆಯಿಂದ ಮೋಹಿತಳಾಗಿ ನನ್ನ ಹತ್ತಿರಕ್ಕೆ ಬಂದು ತನ್ನ ಕೋಪವನ್ನು ಬಿಟ್ಟು, ಪುತ್ರನೇ, ಹೋಗಬೇಡ, ಮನೆಗೆ ಬಾ, ಎಂದು ನನಗೆ ಹೇಳಿದಳು. ನಿನ್ನ ಮನೆಗೆ ನಾನು ಯಾವಾಗಲೂ ಬರುವುದಿಲ್ಲವೆಂದು ನಾನು ಹೇಳಿದೆನು. ||೪೫-೪೬||

ನೀನು ದೇವತಾರಾಧನದಲ್ಲಿ ಆಸಕ್ತಳಾಗಿರಲು ನನಗೆ ಅಲ್ಲಿ ಏನು ಕೆಲಸವಿರುವುದು? ನನಗೆ ಹಸಿವಾದರಾಗಲೀ, ಬಾಯಾರಿಕೆಯಾದರಾಗಲೀ ಉಂಟಾದರೆ ಅವನ್ನು ಹೋಗಲಾಡಿಸಬೇಕೆಂಬ ವಿಶ್ವಾಸವು ನಿನ್ನಲ್ಲಿರುವುದಿಲ್ಲ. ನೀನು ಬೇರೆ ದೇವತೆಯಲ್ಲಿ ಆಸಕ್ತಳಾದುದರಿಂದ ನಿನ್ನ ಮನೆಯೊಳಗೆ ನಾನು ಬರುವುದಿಲ್ಲವೆಂದು ಹೇಳಿ ಅಳುತ್ತಾ ನಿಂತೆನು. ಅನಂತರದಲ್ಲಿ ನನ್ನ ಜನನಿಯು ಹೀಗೆ ಬೆದರಿಸಿದಳು. ||೪೭-೪೮||

ಇಲ್ಲಿ ಒಂದು ಕಪಿಯು ಕೋಪದಿಂದ ಅಳುತ್ತಿರುವ ನಿನ್ನ ಹತ್ತಿರಕ್ಕೆ ಬರುತ್ತಿದೆ. ಅದು ನಿನ್ನ ಮೂಗನ್ನೂ ಕಿವಿಯನ್ನೂ ಖಂಡಿತವಾಗಿಯೂ ಕಡಿಯು

ಅತ ಉದ್ಗೃಹ್ಯ ಶೀಘ್ರಂ ಹಿ ಪ್ರವಿಶಾಮೋ ಗೃಹಂ ಸುತಂ ।
ಇತಿ ತದ್ವಚನಂ ಶ್ರುತ್ವಾ ಪ್ರರೋದಮಹಮುಚ್ಚಕೈಃ ॥೫೦॥

ಸಾ ಮಾಮಪೃಚ್ಛದ್ಧಸಿತಾ ಕಥಂ ರೋದಿಷಿ ಪುತ್ರಕ ।
ತದಾಽಹಮಬ್ರುವಂ ಮಾತರಯಮಲ್ಪಬಲಃ ಕಪಿಃ ॥೫೧॥

ಮಾಂ ಚ ಲಂಘಯಿತುಂ ಕೋಽಪಿ ನೇಶೋ ಮತ್ಸೇವಕಂ ವಿನಾ ।
ನ ನಿತ್ಯಂ ಯತ್ರ ಮೇ ಭಕ್ತಿಸ್ತತ್ರ ಮೋಹೋ ಮಯಾ ಕೃತಃ ॥೫೨॥

ತೇನ ಬಾಧೋ ನ ಮೋಹಶ್ಚ ಕೇವಲಂ ಸುಖಮೇವ ಹಿ ।
ಯನ್ಮಯಾ ಮೋಹಿತಾ ತ್ವಂ ಚ ಮಾಂ ವೇತ್ಸಿ ತನಯಂ ಸ್ವಕಂ ॥೫೩॥

ಮಾಮೈಶ್ವರ್ಯಂ ನ ಜಾನಾಸಿ ತತೋ ಭೀಷಯಸೇ ಹಿ ಮಾಂ ।
ಇತಿ ಶ್ರುತ್ವಾ ಯಶೋದಾ ಮಾಮಬ್ರವೀದತಿವಿಸ್ಮಿತಾ ॥೫೪॥

---

ವುದು. ಆದುದರಿಂದ ನಿನ್ನನ್ನು ಎತ್ತಿಕೊಂಡು ಮನೆಯೊಳಗೆ ಹೋಗುವೆನು. ಎಂದು ನನ್ನ ಜನನಿಯು ಹೇಳಲು ನಾನು ಬಹಳ ಗಟ್ಟಿಯಾಗಿ ಅತ್ತೆನು. ॥೪೯-೫೦॥

ಯಶೋದೆಯು ನಗುತ್ತಾ ಎಲೈ ಪುತ್ರನೇ, ಏಕೆ ಹೀಗೆ ಅಳುವೆ? ಎಂದು ಕೇಳಲು ನಾನು ಹೀಗೆ ಹೇಳಿದೆನು. ಎಲೌ ಮಾತೆಯೇ, ಈ ದುರ್ಬಲವಾದ ಕಪಿಯು ನನ್ನನ್ನು ಏನನ್ನೂ ಮಾಡಲಾರದು. ನನ್ನನ್ನು ಮೀರಲು ನನ್ನ ಭಕ್ತ ಸೇವಕನು ಸಮರ್ಥನೇ ಹೊರತು ಇನ್ನು ಯಾರೂ ಸಮರ್ಥರಲ್ಲ. ನನ್ನಲ್ಲಿ ಯಾರಿಗೆ ನಿತ್ಯವೂ ಅಚಲವಾದ ಭಕ್ತಿಯು ಇರುವುದಿಲ್ಲವೋ ಅವರಿಗೆ ನಾನು ಮೋಹವನ್ನುಂಟು ಮಾಡುವೆನು. ॥೫೧-೫೨॥

ಆ ಮೋಹವನ್ನುಂಟುಮಾಡುವುದರಿಂದ ನನಗೆ ತೊಂದರೆಯೂ ಇಲ್ಲ, ಮೋಹವೂ ಇಲ್ಲ. ಕೇವಲ ಸುಖವುಂಟಾಗುವುದು. ನೀನು ನನ್ನಿಂದ ಮೋಹಿಸಲ್ಪಟ್ಟವಳಾಗಿ ನನ್ನನ್ನು ಮಗನೆಂದು ತಿಳಿದಿರುವೆ. ನನ್ನ ಐಶ್ವರ್ಯವನ್ನು ನೀನು ತಿಳಿಯಲಿಲ್ಲ. ಆದುದರಿಂದ ನನ್ನನ್ನು ಹೆದರಿಸುತ್ತಿರುವೆ. ॥೫೩॥

ಈರೀತಿಯಾಗಿ ನನ್ನ ಮಾತನ್ನು ಕೇಳಿ ಯಶೋದೆಯು ಬಹಳ ಆಶ್ಚರ್ಯಗೊಂಡು ಪ್ರಭುವಾದ ನಿನ್ನ ಐಶ್ವರ್ಯವನ್ನು ನಾನು ಹೇಗೆ ತಿಳಿದೇನು? ಎಂದಳು. ಅನಂತರದಲ್ಲಿ ಸಮಯಬಂದಾಗ ನನ್ನ ಐಶ್ವರ್ಯವನ್ನು ತೋರಿಸುವೆನು. ಈಗ ನೀನು

ಕಥಂ ಪಶ್ಯೇಯಮೈಶ್ವರ್ಯ ಮಹಂ ಜಾನಾಮಿ ಯದ್ವಿಭುಂ ।
ತತೋ ಮಯೋಕ್ತಂ ಸಮಯೇ ದರ್ಶಯಿಷ್ಯೇ ಸ್ವವೈಭವಂ ॥೫೫॥

ತ್ವಂ ಗಚ್ಛ ನಾಧುನಾ ಗೇಹಂ ಗಮಿಷ್ಯಾಮಿ ಕಥಂಚನ ।
ಅಥ ಸಾ ಮಾಮುನುದ್ಧೃತ್ಯ ಧೃತ್ವಾಂಕೇ ಚಾ ನಯದ್ಗೃಹಂ ॥೫೬॥

ವಿಸಸ್ಮಾರ ಮಯೋಕ್ತಂ ಯದ್ಗೃಹಾಸಕ್ತಾ ಸತೀ ತು ಸಾ ॥೫೭॥

ಇತ್ಥಂ ನಿತ್ಯಂ ಗೋಕುಲೇ ಕ್ರೀಡಮಾನಃ
ಸರ್ವಾನ್ಲೋಕಾನಾತ್ಮಸೌಖ್ಯಪ್ರಸಕ್ತಾನ್ ।
ಕೃತ್ವಾ ಗೋಪೀರ್ಮೋಹಯಿತ್ವಾ ವಿನೋದೈಃ
ಕಾಲಂ ನಿನ್ಯೇ ಯೋಗಿನಾಮಪ್ಯದೃಶ್ಯಃ ॥೫೮॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ನಾರದ ಶೌನಕ ಸಂವಾದೇ ಕೃಷ್ಣಸ್ಯ ಗೃಹಚೌರ್ಯವರ್ಣನಂ ನಾಮ ಷಡ್ವಿಂಶೋಽಧ್ಯಾಯಃ

---

ಮನೆಗೆ ಹೊರಡು. ನಾನು ಬರುವುದಿಲ್ಲ! ಎಂದೆನು. ಈ ಮಾತನ್ನು ಕೇಳಿ ಯಶೋದೆಯು ನನ್ನ ಸಮೀಪಕ್ಕೆ ಬಂದು ನನ್ನನ್ನು ಎತ್ತಿ ಸೊಂಟದಮೇಲಿರಿಸಿ ಕೊಂಡು ಮನೆಗೆ ಒಯ್ದಳು. ಅನಂತರದಲ್ಲಿ ಯಶೋದೆಯು ಮನೆಕೆಲಸದಲ್ಲಿ ಆಸಕ್ತಳಾಗಿ ನಾನು ಹೇಳಿದ ವಿಚಾರವನ್ನು ಮರೆತಳು. ॥೫೪-೫೫-೫೬-೫೭॥

ಈರೀತಿಯಾಗಿ ನಾನು ಪ್ರತಿದಿವಸದಲ್ಲಿಯೂ ಗೋಕುಲದಲ್ಲಿ ವಿಹರಿಸುತ್ತಾ ಸಮಸ್ತ ಜನರನ್ನೂ ನನ್ನ ಸೌಖ್ಯದಲ್ಲಿಯೇ ಆಸಕ್ತರನ್ನಾಗಿ ಮಾಡಿ ಗೋಪಿಯರನ್ನು ವಿನೋದಗಳಿಂದ ಮೋಹಗೊಳಿಸುತ್ತಾ ಯೋಗಿಗಳಿಗೂ ಸಹ ಕಾಣದಂತೆ ಇರುವ ನಾನು ಕಾಲವನ್ನು ಕಳೆಯುತ್ತಿದ್ದೆನು. ॥೫೮॥

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ನಾರದ ಶೌನಕ ಸಂವಾದದಲ್ಲಿ ಕೃಷ್ಣನ ಕಳ್ಳತನದ ವರ್ಣನವೆಂಬ ಇಪ್ಪತ್ತಾರನೆಯ ಅಧ್ಯಾಯವು ಸಮಾಪ್ತವಾಯಿತು.

|| ಶ್ರೀಗಣೇಶಾಯನಮಃ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಸಪ್ತವಿಂಶೋಽಧ್ಯಾಯಃ ||

### ಇಪ್ಪತ್ತೇಳನೆಯ ಅಧ್ಯಾಯವು

|| ಶ್ರೀ ಭಗವಾನುವಾಚ ||

ತಸ್ಮಿನ್ದಿನೇ ವ್ಯತೀತೇ ತು ಸಖೀನಾಹೂಯ ವಾನರಾನ್ ।
ತೈಃ ಸಾರ್ಧಂ ವಿಪಿನಂ ಗಂತು ಮುದ್ಯತಃ ಪ್ರಾಹ ತಾನಹಂ ॥೧॥

ಅದ್ಯ ಸರ್ವೇ ವಯಂ ಮಲ್ಲಯುದ್ಧೇನ ವಿಹರಾಮಹೇ ।
ತೇ ಊಚುಃ ಕೃಷ್ಣ ತೇ ತುಲ್ಯಃ ಕೋಽಪಿ ನಾಸ್ತೀಹ ಬಾಲಕಃ ॥೨॥

ಭವಾನ್ಕೇನ ಕಥಂ ಚಾಪಿ ಮಲ್ಲಕ್ರೀಡಾಂ ಕರಿಷ್ಯತಿ ।
ಬಲಃ ಕೃಷ್ಣಮಥೋವಾಚ ಕುರು ಯುದ್ಧಂ ಮಯಾ ಸಹ ॥೩॥

---

ಭಗವಂತನು ಹೇಳಿದನು.—ಆ ದಿವಸವು ಕಳೆಯಲು, ಸ್ನೇಹಿತರನ್ನೂ, ಕಪಿಗಳನ್ನೂ ಕರೆದು ಅರಣ್ಯಕ್ಕೆ ಹೋಗಬೇಕೆಂದು ಯೋಚಿಸಿ, ಇವತ್ತು ನಾವೆಲ್ಲರೂ ಮಲ್ಲಯುದ್ಧವನ್ನು ಮಾಡಿ ವಿಹರಿಸಬೇಕೆಂದು ಅವರನ್ನು ಕುರಿತು ಹೇಳಿದೆನು. ||೧||

ನನ್ನ ಮಾತನ್ನು ಕೇಳಿ, ನನ್ನ ಸ್ನೇಹಿತರು ಹೀಗೆಂದರು.—ಓ ಕೃಷ್ಣನೇ, ನಿನಗೆ ಸಮನಾದ ಬಾಲಕನು ಯಾರೂ ಇರುವುದಿಲ್ಲ. ನೀನು ತುಂಬಾ ಬಲಶಾಲಿಯು. ಹೀಗಿರಲು ನೀನು ಯಾರೊಡನೆ ಈಗ ಮಲ್ಲಯುದ್ಧವನ್ನು ಮಾಡುವೆ? ಈ ಮಾತನ್ನು ಕೇಳಿ ಬಲರಾಮನು ನನ್ನೊಡನೆ ಮಲ್ಲಯುದ್ಧವನ್ನು ಮಾಡೆಂದು ಕೃಷ್ಣನಿಗೆ ಹೇಳಿದನು. ||೨-೩||

ತದಾಽಹಮನುಬ್ರವಂ ಭ್ರಾತಸ್ತ್ವಂ ಮೇ ಮಾನ್ಯತರೋಽಗ್ರಜಃ ।
ಕಥಮತ್ರ ಭವೇದ್ಯೋಗ್ಯಂ ಯುದ್ಧಂ ಶ್ರುತಿ ವಿದೂಷಿತಂ ॥೪॥

ತದಾಽಹ ಬಲಿದೇವೋ ಮಾಂ ಕುರು ಯುದ್ಧಂ ಮಮೇಚ್ಛಯಾ ।
ತಥೇತ್ಯುಕ್ತಂ ಮಯಾ ತತ್ರ ಚಾವಯೋರಭವದ್ರಣಃ ॥೫॥

ನಾನಾರಣವಿಧಾನೇನ ಬಲೋ ಮಾಮಜಯತ್ಪುರಾ ।
ತತಃ ಸರ್ವೇ ಸಖಾಯಶ್ಚ ಜಹಸುರ್ಮಾಮಭೀಕ್ಷ್ಣಶಃ ॥೬॥

ಕೃಷ್ಣನೇಯಂ ಬಕೀ ದುಷ್ಟಾ ತೃಣಾವರ್ತೋ ನ ವಾಽಸುರಃ ।
ಅಯಂ ಹಿ ಬಲಿನಾಂ ಶ್ರೇಷ್ಠೋ ಬಲಭದ್ರಃ ತವಾಗ್ರಜಃ ॥೭॥

ಮಯಾ ಕೃತಂ ಚ ಮೃದ್ಭಕ್ಷಂ ಕಥಿತು ಮಾತರಂ ಯಯೌ
ಚಕಾರ ಸಾಕ್ಷಿಣೋ ಗೋಪಾಂಸ್ತತ್ರ ಗತ್ವಾ ಜಗಾದ ಹ ।
ಮೃದಂ ಭಕ್ಷಿತವಾನ್ ಕೃಷ್ಣಃ ಕಥಯಾಮಿ ತವಾಗ್ರತಃ ॥೮॥

---

ಈ ಮಾತನ್ನು ಕೇಳಿ ನಾನು ಹೇಳಿದೆನು. ಓ ಅಣ್ಣನೇ, ನೀನು ನನಗೆ ಮಾನ್ಯನೂ ಅಗ್ರಜನೂ ಆಗಿರುವೆ. ಹೀಗಿರಲು ಶ್ರುತಿಯಿಂದ ದೂಷಿತವಾದ ಯುದ್ಧವನ್ನು ಹೇಗೆ ನಿನ್ನೊಡನೆ ಮಾಡಲಿ? ಇದು ಯೋಗ್ಯವೇ? ಈ ಮಾತನ್ನು ಕೇಳಿ, ಚಿಂತೆಯಿಲ್ಲ. ನನ್ನ ಇಚ್ಛೆಯಂತೆ ನೀನು ಯುದ್ಧಕ್ಕೆ ನಿಲ್ಲು. ಎಂದನು. ನಾನು ಹಾಗೆಯೇ ಆಗಲೆಂದು ಹೇಳಿ ಯುದ್ಧಕ್ಕೆ ಸಿದ್ಧನಾದೆನು. ನಮ್ಮಿಬ್ಬರಿಗೂ ಯುದ್ಧವು ಆರಂಭವಾಯಿತು. ||೪-೫||

ಬಲರಾಮನು ನಾನಾವಿಧವಾದ ರಣವಿದ್ಯಾಕೌಶಲ್ಯಗಳಿಂದ ನನ್ನನ್ನು ಮೊದಲು ಗೆದ್ದನು. ಅನಂತರದಲ್ಲಿ ನನ್ನ ಸ್ನೇಹಿತರು ನನ್ನನ್ನು ಪುನಃ ಪುನಃ ಹಾಸ್ಯಮಾಡಿದರು. ಓ ಕೃಷ್ಣನೇ, ಇವನು ದುಷ್ಟನಾದ ಬಕಾಸುರನೂ ಅಲ್ಲ, ತೃಣಾವರ್ತನೆಂಬ ರಾಕ್ಷಸನೂ ಅಲ್ಲ. ಮತ್ತೇನೆಂದರೆ ಬಲಶಾಲಿಗಳಲ್ಲಿ ಅತಿ ಬಲಶಾಲಿಯಾದ ನಿನ್ನ ಅಣ್ಣನಾದ ಬಲಭದ್ರನಾಗಿರುವನು. ಎಂದು ಹೇಳಿದರು. ||೬-೭||

ಆ ಮೇಲೆ ನಾನು ಮಣ್ಣನ್ನು ತಿಂದೆನು. ಈ ವಿಷಯವನ್ನು ತಾಯಿಗೆ ತಿಳಿಸಲು ಗೋಪಾಲರನ್ನು ಸಾಕ್ಷಿಮಾಡಿಕೊಂಡು ಬಲರಾಮನು ಹೋದನು. ಓ ಜನನಿಯೇ, ಕೃಷ್ಣನು ಮಣ್ಣನ್ನು ತಿಂದನು. ಈ ವಿಷಯವನ್ನು ತಿಳಿಸಲು ನಿನ್ನ

**ರೋಗೋऽತ್ಯಂತಂ ಚ ಭವಿತಾ ನಿವಾರಯ ತತೋ ದ್ರುತಂ ।**
**ಇತಿ ತ್ವವಸ್ಥಿತೋ ಯಾವದ್ಬಲಭದ್ರೋऽಹವಾಗತಃ ॥೯॥**

**ಯಶೋದಾ ಮಾಮುವಾಚೇದಂ ತದಾऽऽಕ್ರೋಶಸಮನ್ವಿತಾ ।**
**ಕಥಂ ಮೃದಂ ಭಕ್ಷಿತವಾನ್ರೋಗಸ್ತೇ ಭವಿತಾ ಖಲು ॥೧೦॥**

**ತಥೈವ ಜಾಯತೇ ವತ್ಸ ದೇಹವೈವರ್ಣ್ಯಮೇವಚ ।**
**ಉವಾಚಾऽಹಂ ಸಖಾಯೋ ಮೇ ಸರ್ವೇ ಮಿಥ್ಯಾऽಭಿಶಂಸಿನಃ ॥೧೧॥**

**ಯದಿ ಸತ್ಯಗಿರಸ್ತೇ ಹಿ ಸಮಸ್ತಂ ಪಶ್ಯ ಮೇ ಮುಖಂ ।**
**ವ್ಯಾದೇಹೀತಿ ತಯೋಕ್ತಸ್ತು ಮುಖಂ ವ್ಯಾದಿತವಾನಹಂ ॥೧೨॥**

**ಸಾ ತತ್ರಾಖಿಲಲೋಕಾಂಶ್ಚಾ ಪಶ್ಯತ್ಕೌತುಕ ಮೋಹಿತಾ ।**
**ಭೂಪಾತಾಲಕಕುದ್ವ್ಯೋಮ ಜ್ಯೋತಿಷ್ಚಕ್ರಂ ಸುರಾಸುರಾನ್ ॥೧೩॥**

---

ಹತ್ತಿರ ಬಂದಿರುವೆನು. ಮಣ್ಣನ್ನು ತಿಂದರೆ ಬಲವಾದ ರೋಗವುಂಟಾಗುವುದು. ಆದುದರಿಂದ ಶೀಘ್ರವಾಗಿ ಅದನ್ನು ಹೋಗಲಾಡಿಸೆಂದು ಬಲರಾಮನು ಹೇಳುತ್ತಿರಲು ನಾನು ಅಲ್ಲಿಗೆ ಹೋಗಿ ಯಶೋದೆಯ ಬಳಿಯಲ್ಲಿ ನಿಂತೆನು. ॥೮-೯॥

ಆಗ ನನ್ನ ತಾಯಿಯು ಗಟ್ಟಿಯಾಗಿ ಆಕ್ರೋಶಿಸುತ್ತಾ ನನ್ನನ್ನು ಕುರಿತು ಹೀಗೆ ಎಂದಳು. ಮಣ್ಣನ್ನು ಏಕೆ ತಿಂದಿರುವೆ? ಅದರಿಂದ ನಿನಗೆ ರೋಗವು ಪ್ರಾಪ್ತವಾಗುವುದು. ॥೧೦॥

ಎಲೈ ವತ್ಸನೇ, ರೋಗವುಂಟಾಗುವುದಲ್ಲದೆ ಶರೀರವೂ ಸಹ ವಿಕಾರವಾಗುವುದೆನ್ನಲು ನಾನು ತಾಯಿಗೆ ಹೇಳಿದೆನು. ನನ್ನ ಎಲ್ಲಾ ಸ್ನೇಹಿತರೂ ಸುಳ್ಳನ್ನೇ ಹೇಳುತ್ತಿರುವರು. ಒಂದುವೇಳೆ ಅವರು ಸತ್ಯವನ್ನೇ ಆಡುವವರಾಗಿದ್ದರೆ, ನೀನೇ ಪ್ರತ್ಯಕ್ಷವಾಗಿ ನನ್ನ ಬಾಯನ್ನು ನೋಡೆಂದು ನಾನು ಹೇಳಲು, ಬಾಯನ್ನು ತೆರೆ. ಎಂದು ತಾಯಿಯು ಹೇಳಲು ನಾನು ಬಾಯನ್ನು ತೆರೆದೆನು (ವಿಸ್ತರಿಸಿದೆನು). ॥೧೧-೧೨॥

ಆ ಗೋಪಿಯು ನನ್ನ ಬಾಯೊಳಗೆ ಎಲ್ಲ ಲೋಕಗಳನ್ನೂ ಆಶ್ಚರ್ಯದಿಂದ ಮೋಹಿತಳಾಗಿ ನೋಡಿದಳು. ಭೂಮಿ, ಪಾತಾಳ, ದಿಕ್ಕುಗಳು, ಆಕಾಶ, ಸೂರ್ಯಾದಿ ತೇಜಸ್ಸು, ದೇವತೆಗಳು, ರಾಕ್ಷಸರು ಇವನ್ನು ನೋಡಿದಳು. ಮತ್ತು ಹದಿನಾಲ್ಕು

ಲೋಕಾನ್ ಲೋಕಾಧಿಪಾಂಶ್ಚಾನ್ಯಾನ್ಗಿರೀನ್ನಾನಾನದೀನದಾನ್ ।
ನಗರಗ್ರಾಮ ಸಂಘಾಂಶ್ಚ ವ್ರಜಮಾತ್ಮಾನಮೇವಚ ॥೧೪॥

ಗೋಪಾನಖಿಲಗೋಪೀಶ್ಚ ಗೋವತ್ಸಾಂಶ್ಚ ದದರ್ಶ ಹ
ತತಃ ಕ್ಷಣೇನ ಸಾ ಗೋಪೀ ಸ್ಮೃತಿಯುಕ್ತಾ ಬಭೂವ ಹ ।
ಕೃಷ್ಣಂ ಬಲಂ ಚಾತ್ಮನೋಗ್ರೇ ದೃಷ್ಟ್ವಾ ವಿಸ್ಮಯಮಾಗತಾ ॥೧೫॥

ವಿತರ್ಕಯಂತೀ ಬಹುಧಾ ನಿಶ್ಚಯಂ ನಾಧಿಗಮ್ಯ ಚ ।
ಸ್ವಪ್ನೋ ವಾ ಬುದ್ಧಿಮೋಹೋ ವಾ ದೈವೀ ಮಾಯಾಽಥವಾಽಽಸುರೀ ॥೧೬॥

ಅಥವಾ ಪುತ್ರರೂಪೇಣ ಜಾತೋಽಯಂ ಭಗವಾನ್ ಸ್ವಯಂ ॥೧೭॥

ಏತಾವತ್ಕಾಲಪರ್ಯಂತಂ ಮೋಹಿತಾಽನೇನ ಮಾಯಯಾ ।
ಅಧುನಾ ಶರಣಂ ಪ್ರಾಪ್ತಾ ಮಾಮುದ್ಧರ ಜನಾರ್ದನ ॥೧೮॥

---

ಲೋಕ ಮತ್ತು ಆ ಲೋಕಪಾಲಕರು, ಪರ್ವತ, ನದ, ನದೀ ಇವುಗಳನ್ನೂ ನೋಡಿದಳು! ನಗರ ಗ್ರಾಮ ಇವುಗಳನ್ನೂ ಗೋಕುಲವನ್ನೂ ಅದರಲ್ಲಿ ತನ್ನನ್ನೂ ನೋಡಿದಳು. ಗೋಕುಲದಲ್ಲಿರುವ ಎಲ್ಲಾ ಗೋಪಗೋಪಿಯರನ್ನೂ, ಹಸುಗಳನ್ನೂ ಅವುಗಳ ಕರುಗಳನ್ನೂ ನೋಡಿದಳು. ಇದನ್ನೆಲ್ಲವನ್ನೂ ನೋಡಿ ಯಶೋದೆಯು ಒಂದು ಕ್ಷಣಕಾಲ ಸ್ಮೃತಿ ತಪ್ಪಿದಳು. ||೧೩-೧೪||

ಎಚ್ಚೆತ್ತು ತನ್ನ ಎದುರುಭಾಗದಲ್ಲಿ ನಿಂತಿರುವ ಬಲರಾಮಕೃಷ್ಣರನ್ನು ನೋಡಿ ಬಹಳವಾಗಿ ಆಶ್ಚರ್ಯಗೊಂಡಳು. ಅನೇಕವಿಧವಾಗಿ ವಿಚಾರಿಸಿದರೂ ಸಹ ಅವಳಿಗೆ ಯಾವ ನಿಶ್ಚಯವೂ ಉಂಟಾಗಲಿಲ್ಲ. ಇದೇನು ಸ್ವಪ್ನವೋ? ಅಥವಾ ಬುದ್ಧಿಯು ವಿಕಲ್ಪವೋ? ದೇವತಾಮಾಯೆಯೋ ? ಅಥವಾ ರಾಕ್ಷಸರ ಮಾಯೆಯೋ ? ಎಂದು ನಾನಾ ಬಗೆಯಾಗಿ ತರ್ಕಿಸಿದಳು. ||೧೫-೧೬||

ಒಂದುವೇಳೆ ಸಾಕ್ಷಾತ್ ಈಶ್ವರನೇ ನನ್ನ ಪುತ್ರರೂಪದಿಂದ ಜನಿಸಿರಬಹುದು. ಇಷ್ಟು ಹೊತ್ತಿನ ವರೆಗೂ ನಾನು ಈ ಈಶ್ವರನ ಮಾಯೆಯಿಂದ ಮೋಹಿತಳಾಗಿರುವೆನು. ಈಗ ಓ ಜನಾರ್ದನನೇ ನಿನ್ನನ್ನು ಶರಣುಹೊಂದಿರುವೆನು. ನನ್ನನ್ನು ಉದ್ಧರಿಸು. ಚರಾಚರಾತ್ಮಕವಾದ ಈ ಜಗತ್ತು ನಿನಗಿಂತಲೂ ಬೇರೆಯದಾಗಿ ತೋರುವುದಿಲ್ಲವು. ಸಕಲವೂ ಕೂಡ ನಿನ್ನಲ್ಲಿಯೇ ಆರೋಪಿತವಾಗಿರುವುದು.

ತ್ತ್ವೇ ನ ಕಿಂಚಿದ್ಭಿನ್ನಂ ಹಿ ದೃಶ್ಯತೇ ಸಚರಾಚರಂ ।
ಪ್ರತೀಯತೇ ಹಿ ಮಿಥ್ಯಾಽಪಿ ಸಮವಸ್ಥಾನ ಸತ್ತಯಾ ॥೧೯॥

ಯಥಾ ಸೂರ್ಯಸ್ಯ ಕಿರಣೇ ಮೃಗತೃಷ್ಣಾ ಜಲಭ್ರಮಃ ।
ಶುಕ್ತೌ ರೂಪ್ಯಂ ತಥಾಽರ್ಥೇಷು ಸತ್ಯಬುದ್ಧಿಃ ಕುಮೇಧಸಾಂ ॥೨೦॥

ವಿಷಯಾಃ ಸ್ವಪ್ನಸಂಕಾಶಾ ಯಥಾ ಮಾಯಾ ಮನೋರಥಾ ।
ಸರ್ವ ಏತೇ ಪ್ರಣಶ್ಯೇಯುಸ್ತಥಾ ಸರ್ವಮಿದಂ ಜಗತ್ ॥೨೧॥

ಮಿಂಚಿಚ್ಚಂಚಲಮಾಯುಶ್ಚ ಯೌವನಂ ಕುಸುಮೋಪಮಂ ।
ಸ್ವಾದಾಶ್ಚ ವಿನಶ್ಯಂತಿ ತಥಾ ಪ್ರಾಣಿಸಮಾಗಮಾಃ ॥೨೨॥

ಗಂಧರ್ವನಗರ ಪ್ರಖ್ಯಾಃ ಕಸ್ತತ್ರ ರಮತೇ ನರಃ ।
ಮಾಯಾ ತೇ ಮುಹತೀ ಬ್ರಹ್ಮಂಸ್ತ್ವಯಾ ಸರ್ವ್ಮೋಹಿತಂ ಜಗತ್ ॥೨೩॥

---

ಎಂದುವೇಳೆ ಜಗತ್ತು ನಿನಗಿಂತ ಬೇರೆಯದಾಗಿ ತೋರಿದರೂ ಕೂಡ ಮಿಥ್ಯಾಭೂತವಾಗಿಯೇ ತೋರುತ್ತಿರುವುದು! ಪಾರಮಾರ್ಥಿಕಸತ್ಸ್ವರೂಪನಾದ ನಿನ್ನಲ್ಲಿ, ಶುಕ್ತಿಯಲ್ಲಿ ರಜತವು ತೋರುವಂತೆ, ಈ ಜಗತ್ತು ತೋರುವುದೇ ಹೊರತು ಸತ್ಯವಾದುದಲ್ಲ. ॥೧೭-೧೮-೧೯॥

ಸೂರ್ಯನ ಕಿರಣಗಳಲ್ಲಿ ನೀರಿನ ಭ್ರಾಂತಿಯುಂಟಾಗುವಂತೆಯೂ, ಶುಕ್ತಿಯಲ್ಲಿ ರಜತದ ಭ್ರಾಂತಿಯುಂಟಾಗುವಂತೆಯೂ ಸಹ ಅರ್ಥಗಳಲ್ಲಿ ಸತ್ಯಬುದ್ಧಿಯು ಮೂಢರಿಗೆ ತಿಳಿಯುವುದು. ॥೨೦॥

ಶಬ್ದಾದಿ ವಿಷಯಗಳು ಸ್ವಪ್ನದಲ್ಲಿ ತೋರುವ ವಿಷಯಗಳಂತೆ ಮಾಯಾಮಯವಾಗಿಯೂ, ಮನೋರಥದಿಂದ ಕಲ್ಪಿತವಾಗಿಯೂ ಇವೆ. ಈ ಸಮಸ್ತವೂ ಸಹ ಸ್ವಪ್ನಮಾಯೆಗಳಂತೆ ಮಿಥ್ಯೆಯಾದುದು. ಮನುಷ್ಯನ ಆಯುಸ್ಸು ಮಿಂಚಿನಂತೆ ಬಹಳ ಚಂಚಲವಾದುದು. ಯೌವನವಾದರೋ ಕುಸುಮದಂತೆ ಸ್ವಲ್ಪಕಾಲಮಾತ್ರ ಇರುವುದು. ವಿಷಯೋಪಭೋಗಗಳೂ ಪ್ರಾಣಿಗಳೂ ನಾಶವಾಗುವುವು. ॥೨೧-೨೨॥

ಸಮಸ್ತ ವಿಷಯಗಳೂ ಸಹ ಭ್ರಾಂತಿಯಿಂದ ತೋರುವ ಗಂಧರ್ವನಗರದಂತೆ ಭ್ರಾಂತಿ ಕಲ್ಪಿತವಾಗಿರುವುವು. ಇಂತಹ ವಿಷಯಗಳಲ್ಲಿ ಯಾವ ಮನುಷ್ಯನು ತಾನೇ ಸಂತೋಷಪಡುವನು? ಹಾಗೆಯೇ ಪ್ರಾಣಿಗಳಿಗೆ ತಾಯಿ ಮಕ್ಕಳು

ನ ಪಶ್ಯತಿ ಜನೋ ಮುಗ್ಧಸ್ತ್ವಾಮೀಶ್ವರಮುಪದ್ರುತಃ ।
ನ ವೇತ್ತಿ ಕಶ್ಚನಾತ್ಮಾನಮನಯಾ ಮೋಹಿತೋ ಜನಃ ॥೨೪॥

ಅವಿವೇಕಪ್ರಣಷ್ಟಾಕ್ಷೋ ಯಥಾಽಂಧೋ ದರ್ಪಣೇ ಮುಖಂ ।
ಏವಂ ವಿದಿತ ತತ್ತ್ವಾಯಾಂ ಯಶೋದಾಯಾಂ ಪುನರ್ಮಯಾ ॥೨೫॥

ಪ್ರಸಾದಿತಾ ಮಹಾಮಾಯಾ ಪುತ್ರಸ್ನೇಹಮಯೀ ಪರಾ ।
ವಿಸಸ್ಮಾರ ತದಾ ಸರ್ವಮಪೂರ್ವಂ ತತ್ತ್ವಬೋಧನಂ ॥೨೬॥

ಉವಾಚ ಪುತ್ರ ಆಗಚ್ಛ ಕ್ಷುಧಿತೋಽಸಿ ಸ್ತನಂ ಪಿಬ ।
ತ್ವಂ ಮೇ ಪ್ರಾಣಪ್ರಿಯಃ ಕೃಷ್ಣ ಭುಂಕ್ಷ್ವ ಕ್ರೀಡ ಸುಖೇನ ಹಿ ॥೨೭॥

ಇತ್ಯಾದಿ ಸ್ನೇಹವಾಕ್ಯೇನ ಯಶೋದಾ ಮಾಮಲಾಲಯತ್ ।
ಯತ್ತು ಮತ್ತತ್ತ್ವ ವಿಜ್ಞಾನಾನ್ಮುಕ್ತಿಃ ಸ್ಯಾಚ್ಚಿತ್ರಮತ್ರ ಕಿಂ ॥೨೮॥

---

ಮುಂತಾದ ಸಂಬಂಧಗಳೂ, ವಿಯೋಗಗಳೂ ಉಂಟಾಗುವುವು! ಓ ಬ್ರಹ್ಮಸ್ವರೂಪಿಯೇ, ನಿನ್ನ ಮಾಯೆಯು ಬಹಳ ಪ್ರಬಲವಾಗಿರುವುದು. ಆ ಮಾಯೆಯು ಸಮಸ್ತಜಗತ್ತನ್ನೂ ಮೋಹಗೊಳಿಸಿರುವುದು. ಅನೇಕ ಉಪದ್ರವಗಳುಳ್ಳ ಮೂಢರಾದ ಜನರು ಈಶ್ವರನಾದ ನಿನ್ನನ್ನು ತಿಳಿಯುವುದಿಲ್ಲ. ಮಾಯೆಯಿಂದ ಮೋಹಿತನಾದುದರಿಂದ ಯಾವನೂ ಕೂಡ ತನ್ನ ಆತ್ಮಸ್ವರೂಪವನ್ನು ತಿಳಿಯುವುದಿಲ್ಲ. ॥೨೩-೨೪॥

ಅವಿವೇಕದಿಂದ ನಷ್ಟವಾದ ನೇತ್ರವುಳ್ಳ ಕುರುಡನು ಕನ್ನಡಿಯಲ್ಲಿ ಹೇಗೆ ತನ್ನ ಮುಖವನ್ನು ನೋಡಿಕೊಳ್ಳಲಾರನೋ, ಹಾಗೆಯೇ ವಿಷಯವನ್ನು ತಿಳಿದ ಯಶೋದೆಯೂ ನನ್ನ ಮಾಯೆಯಿಂದ ತಿರುಗಿ ಮೋಹಿತಳಾಗಿ, ತತ್ತ್ವವನ್ನು ತಿಳಿಯಲು ಸಮರ್ಥಳಾಗಲಿಲ್ಲ. ಹೆಚ್ಚಾಗಿ ಪುತ್ರಸ್ನೇಹಪರಳಾಗಿ ನನ್ನನ್ನು ಕುರಿತು ಹೇಳಿದಳು. ಪುತ್ರನೇ, ಬೇಗ ನನ್ನ ಹತ್ತಿರ ಬರುವವನಾಗು. ಬಹಳ ಹಸಿದಿರುವೆ. ಸ್ತನ್ಯವನ್ನು ಪಾನಮಾಡು. ನೀನು ನನ್ನ ಪ್ರಾಣಗಳಿಗಿಂತಲೂ ಹೆಚ್ಚಾದವನು. ಊಟಮಾಡಿ ಸುಖವಾಗಿ ಕ್ರೀಡಿಸುವವನಾಗು! ಇವೇ ಮುಂತಾದ ಸ್ನೇಹಪೂರಿತವಾದ ವಾಕ್ಯಗಳಿಂದ ನನ್ನನ್ನು ಲಾಲಿಸಿದಳು. ॥೨೫-೨೬-೨೭॥

ನನ್ನ ತತ್ತ್ವಜ್ಞಾನದಿಂದ ಅಜ್ಞಾನನಿವೃತ್ತಿಯಾಗಿ ಮೋಕ್ಷವುಂಟಾಗುವುದೆಂಬ ವಿಷಯದಲ್ಲಿ ಏನೂ ಆಶ್ಚರ್ಯವಿಲ್ಲ. ಆದರೆ ಸಂಸಾರದಿಂದ ಸುಖದುಃಖಗಳಲ್ಲಿ ಕರ್ತೃತ್ವ,

ಸಾಂಸಾರಿಕೈಃ ಕ್ಲೇಶಪಾಶೈರ್ಬಂಧಾನ್ಮುಕ್ತಿಸ್ತು ಯದ್ಭವೇತ್ ।
ತತ್ರಾಶ್ಚರ್ಯಂ ಮುನೇಃತ್ರೇತಿ ಮೋಹಿತಾ ಮಾಯಯಾ ತು ಸಾ ॥೨೯॥

ಮಯಿ ಪ್ರಸನ್ನೇ ಮತ್ ಜ್ಞಾನಂ ಭವತ್ಯೇವ ನ ದುರ್ಲಭಂ ।
ಪುತ್ರೇತಿ ಮಯಿ ಯತ್ಪ್ರೇಮ ತದ್ದುರ್ಲಭತರಂ ನೃಣಾಂ ॥೩೦॥

ಅತಃ ಪ್ರಸಾರಿತಾ ಮಾಯಾ ಪುತ್ರಸ್ನೇಹಮಯೀ ಮಯಾ ।
ಅತೋ ಯಶೋದಾ ಮತ್ಸ್ನೇಹಂ ಚಕ್ರೇ ಮುದಿತಮಾನಸಾ ॥೩೧॥

ವೇದೋಽಪಿ ಯನ್ನಜಾನಾತಿ ಯೋಗಿನೋ ಯಮುಪಾಸತೇ ।
ಯಜಂತಿ ಯಜ್ಞೈರ್ವಿಪ್ರಾಶ್ಚ ತಂ ಮಾಂ ಸಾ ವೇತ್ತಿ ಬಾಲಕಂ ॥೩೨॥

ಅಪಾಲಯತ್ಪುತ್ರಬುದ್ಧ್ಯಾ ಮಾಮತೀವ ಸುಖೇಚ್ಛಯಾ ।
ತಸ್ಯಾಶ್ಚ ಸದೃಶಂ ಭಾಗ್ಯಂ ನಾನ್ಯಸ್ಯ ಭುವಿ ವಿದ್ಯತೇ ॥೩೩॥

---

ಭೋಕ್ತೃತ್ವ, ನಾನು, ನನ್ನದು, ಎಂದು ಮುಂತಾದ ಅಭಿಮಾನದಿಂದ ಉಂಟಾಗುವ ಪಾಶಗಳಂತಿರುವ ಬಂಧನದಿಂದ ಮುಕ್ತಿ ಎಂಬುದು ಆಶ್ಚರ್ಯಕರವಾದುದು. ಯಶೋದೆ ಯಾದರೋ ನನ್ನ ಮಾಯೆಯಿಂದ ಮೋಹಿತಳಾಗಿರುವಳು. ನಾನು ಪ್ರಸನ್ನನಾದರೆ ನನ್ನ ವಿಷಯದ ಜ್ಞಾನಉಂಟಾಗುವುದು ದುರ್ಲಭವಲ್ಲ. ನನ್ನಲ್ಲಿರುವ ಪುತ್ರನೆಂಬ ಪ್ರೇಮವು ಮನುಷ್ಯರಿಗೆ ದುರ್ಲಭವಾದುದು. ॥೨೮-೨೯-೩೦॥

ಆದುದರಿಂದ ನನ್ನಲ್ಲಿ ಪುತ್ರಭಾವವು ಬರುವಂತೆ ಯಶೋದೆಗೆ ನನ್ನ ಮಾಯೆಯನ್ನು ಬೀಸಿರುವೆನು. ಯಶೋದೆಯು ಸಂತೋಷಗೊಂಡು ನನ್ನಲ್ಲಿ ಪುತ್ರ ಸ್ನೇಹವನ್ನೇರಿಸಿರುವಳು. ವೇದಗಳೂ ಸಹ ಯಾವನನ್ನು ಶಬ್ದ ಶಕ್ತಿಮುಖೇನ ತಿಳಿಸ ಲಾರವೋ, ಯೋಗಿಗಳು ನಿರ್ವಿಕಲ್ಪ ಸವಿಕಲ್ಪಗಳೆಂಬ ಸಮಾಧಿಗಳಲ್ಲಿ ಸಿದ್ಧಿಯನ್ನು ಪಡೆದು ಯಾವನನ್ನು ಸಾಕ್ಷಾತ್ಕರಿಸಿಕೊಳ್ಳುವರೋ, ಬ್ರಾಹ್ಮಣರು ಯಾವನ ಉದ್ದೇಶ ದಿಂದ ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡುವರೋ ಅಂತಹ ಪರಮಾತ್ಮ ನಾದ ನನ್ನನ್ನು ಯಶೋದೆಯು ತನ್ನ ಬಾಲಕನನ್ನಾಗಿ ತಿಳಿದಿರುವಳು! ॥೩೧-೩೨॥

ಯಶೋದೆಯು ನನ್ನನ್ನು ಪುತ್ರನೆಂದು ತಿಳಿದು ನನಗೆ ಸುಖವಾಗುವ ಹಾಗೆ ಪಾಲಿಸಿದಳು. ಯಶೋದೆಗೆ ಸಮಾನವಾದ ಭಾಗ್ಯವು ಈ ಲೋಕದಲ್ಲಿ ಇನ್ನು ಯಾರಿಗೂ ಇರುವುದಿಲ್ಲ. ॥೩೩॥

ನ ಪುಣ್ಯಪುಂಜೈರ್ನತಪೋಭಿರುಗ್ರೈಃ
ನ ದೇವತೀರ್ಥಾಟನ ಯಜ್ಞಯೋಗೈಃ ।
ನ ದೃಶ್ಯತೇ ಕ್ವಾಪಿ ಚ ಯಃ ಕಥಂಚಿತ್
ಸೋಽಹಂ ಹರಿಃ ಪುತ್ರ ತನುಶ್ಚ ತಸ್ಯಾಃ ॥೩೪॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ನಾರದ ಶೌನಕ
ಸಂವಾದೇ ಕೃಷ್ಣಮೃದ್ಭಕ್ಷಣಲೀಲಾವರ್ಣನಂ
ನಾಮ ಸಪ್ತವಿಂಶೋಽಧ್ಯಾಯಃ

---

ಪುಣ್ಯಗಳ ರಾಶಿಯಿಂದಲೂ, ಉಗ್ರವಾದ ತಪಸ್ಸುಗಳಿಂದಲೂ, ದೇವಾಲಯ ತೀರ್ಥಾಟನೆ ಮುಂತಾದುವುಗಳಿಂದಲೂ, ಯಜ್ಞಯೋಗಾಭ್ಯಾಸಗಳಿಂದಲೂ ಸಹ ಯಾವ ಹರಿಯು ಸಿಗುವುದಿಲ್ಲವೋ ಅಥವಾ ಅವುಗಳು ಪರಿಪಕ್ವವಾಗಲು ಬಹಳ ಕಷ್ಟದಿಂದ ಲಭ್ಯನಾಗುವನೋ ಅಂತಹ ಪರಮಾತ್ಮನಾದ ನಾನು ಯಶೋದೆಗೆ ಪುತ್ರನಾಗಿರುವೆನು. ||೩೪||

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ ಕೃಷ್ಣನು ಮಣ್ಣನ್ನು ತಿಂದು
ಅದ್ಭುತಪ್ರದರ್ಶನವನ್ನೂ ತೋರಿದ ವಿನೋದವನ್ನು ವರ್ಣಿಸಿರುವ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ

## || ಅಷ್ಟಾವಿಂಶೋಽಧ್ಯಾಯಃ ||

## ಇಪ್ಪತ್ತೆಂಟನೆಯ ಅಧ್ಯಾಯವು

|| ಶ್ರೀ ಭಗವಾನುವಾಚ ||

ಕದಾಚಿತ್ಪ್ರಾತರುತ್ಥಾಯ ಯಶೋದಾ ಜನನೀ ಮಮ ।
ದಾಸೀಷು ಕರ್ಮಸಕ್ತಾಸು ನಿರ್ಮಮಂಥ ಸ್ವಯಂ ದಧಿ ||೧||

ಗಾಯಂತೀ ಮಮ ಕರ್ಮಾಣಿ ಗೀತಾನಿ ಚ ಸುರಾದಿಭಿಃ ।
ಪ್ರಚಲತ್ಕೌಮವಸನಾ ಸಂಸ್ವನದ್ರಸನಾದಿಕಾ ||೨||

ರಜ್ಜ್ವಾಕರ್ಷವಶಸ್ವೇದ ಕಣವ್ಯಾಪ್ತಮುಖಾಂ ಬುಜಾ ।
ಚಲತ್ಕೇಯೂರವಲಯ ಹಾರಾಲಕ ಸುಕುಂಡಲಾ ||೩||

---

ಒಂದು ದಿನ ನನ್ನ ಜನನಿಯಾದ ಯಶೋದೆಯು ಬೆಳಿಗ್ಗೆ ಎದ್ದಮೇಲೆ ಮನೆಯದಾಸಿಯರೆಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿರಲು, ತಾನೇ ಮೊಸರನ್ನು ಕಡೆಯಲು ಕೂತುಕೊಂಡಳು. ಮೊಸರನ್ನು ಕಡೆಯುವಾಗ ಅವಳು ನನ್ನ ಅಸಾಧಾರಣ ಕ್ರಿಯೆಗಳನ್ನು ತಿಳಿಸುವ, ದೇವತೆಗಳೂ ಗಾನಮಾಡುವ, ಗೀತೆಗಳನ್ನೂ ಸಹ ಮಧುರವಾಗಿ ಗಾನಮಾಡುತ್ತಿದ್ದಳು. ಅವಳು ಉಟ್ಟಿರುವ ರೇಶ್ಮೆಯ ಸೀರೆಯು ಅಲುಗಾಡುತ್ತಿದ್ದಿತು. ನಾಲಿಗೆಯಲ್ಲಿ ಧ್ವನಿಯು ಹೊರಡುತ್ತಿತ್ತು. ||೧-೨||

ಕಡಗೋಲಿನಲ್ಲಿರುವ ಹಗ್ಗವನ್ನು ಎಳೆಯೋಣದರಿಂದುಂಟಾದ ಬೆವರುಹನಿಗಳು ಮುಖಕಮಲದಲ್ಲಿ ಇಳಿಯುತ್ತಿದ್ದುವು. ಕಡಗ, ಒಂಕಿ, ಹಾರ, ಕರ್ಣಕುಂಡಲ, ಇವುಗಳೆಲ್ಲವೂ ಅಲುಗಾಡುತ್ತಿದ್ದವು. ಹೆಚ್ಚಾದ ಶ್ವಾಸೋಚ್ಛ್ವಾಸಗಳಿಂದ ಉದರ

**ಶ್ವಾಸೋಚ್ಛ್ವಾಸ ಚಲನ್ನೀವೀತ್ರಿವಲೀ ವ್ಯಾಕುಲೋದರಾ ।**
**ತತ್ರಾಗತ್ಯ ಮಯಾ ಮಂಥೋ ಹಸ್ತೇನ ಕ್ರಾಮಿತೋ ರುಷಾ ॥೪॥**

**ತಥಾಽಪಿ ಸಾತ್ಯಜನ್ಮಾತಾ ದಧಿಮಂಥನಮೇವ ಹಿ ।**
**ಮಮಾತಿಶಯ ಯತ್ನೇನ ಕಥಂಚಿದ್ದಧಿ ಮಂಥನಂ ॥೫॥**

**ತ್ಯಕ್ತ್ವಾಽಂಕೇ ಮಾಂ ಸಮಾಧಾಯ ಪ್ರೀತ್ಯಾ ಸ್ತನಮಪಾಯಯತ್ ।**
**ಮುಹುರ್ಮುಹುರ್ಮಮ ಮುಖ ಮುಪಶ್ಯನ್ಮುದಿತಾನನಾ ॥೬॥**

**ಚುಲ್ಯಾಮಾರೋಪಿತಂ ದುಗ್ಧಂ ವೀಕ್ಷ್ಯ ಯಾ(ಯ)ತ್ಪಾತ್ರತೋ ಬಹಿಃ ।**
**ಪತದಗ್ನೌ ಜಲೈಃ ಸೇಕ್ತುಂ ಮಾಂ ತ್ಯಕ್ತ್ವಾ ದ್ರುತಮುದ್ಯಯೌ ॥೭॥**

**ಅಹೋ ದುರತ್ಯಯಾ ಮಾಯಾ ಲೋಕಸ್ಯಾರ್ಥ ಪ್ರಣಾಶಿನೀ ।**
**ಯಯಾ ವಿಮೋಹಿತಂ ಸರ್ವಂ ಜಗದ್ಭ್ರಮತಿ ನಿತ್ಯಶಃ ॥೮॥**

---

ದಲ್ಲಿರುವ ವಸ್ತ್ರದಗಂಟೂ ತ್ರಿವಳಿಗಳೂ ಸಹ ಅಲುಗಾಡುತ್ತಿದ್ದವು. ಹೀಗೆ ಮೊಸರನ್ನು ಕಡೆಯುತ್ತಿರಲು ನಾನು ಅಲ್ಲಿಗೆ ಹೋಗಿ ಕೋಪದಿಂದ ಕಡಗೋಲನ್ನು ಕೈಯಿಂದ ಹಿಡಿದೆನು. ||೩-೪||

ನಾನು ಕಡಗೋಲನ್ನು ಹಿಡಿದುಕೊಂಡರೂ ಸಹ ಯಶೋದೆಯು ಮೊಸರನ್ನು ಕಡೆಯುತ್ತಲೇ ಇದ್ದಳು. ನಾನು ಇನ್ನೂ ಬಲವಾಗಿ ಕಡಗೋಲನ್ನು ಹಿಡಿಯಲು ಮೊಸರು ಕಡೆಯುವುದನ್ನು ಬಿಟ್ಟು ನನ್ನನ್ನು ಸಮಾಧಾನಗೊಳಿಸಿ ಸ್ತನ್ಯವನ್ನು ಕೊಟ್ಟಳು. ||೫||

ನನ್ನ ಸುಂದರವಾದ ಮುಖವನ್ನು ನೋಡಿ ಬಹಳ ಸಂತೋಷಗೊಂಡಳು. ಇಷ್ಟರಲ್ಲಿ ಒಲೆಯಮೇಲಿಟ್ಟಿದ್ದ ಹಾಲು ಉಕ್ಕಿ ಒಲೆಯಲ್ಲಿ ಬೀಳುವ ಹಾಗಾಗಲು, ಅದಕ್ಕೆ ನೀರನ್ನು ಹಾಕಲು, ನನ್ನನ್ನು ಅಲ್ಲಿಯೇ ಬಿಟ್ಟು ಶೀಘ್ರವಾಗಿ ಒಲೆಯ ಹತ್ತಿರ ಓಡಿದಳು. ||೬-೭||

ಲೋಕದಲ್ಲಿ ಸಮಸ್ತವನ್ನೂ ನಾಶಗೊಳಿಸುವ ನನ್ನ ಮಾಯೆಯು ಮೀರಲ ಸಾಧ್ಯವಾದುದು. ಈ ಮಾಯೆಯು ಸಮಸ್ತ ಜಗತ್ತನ್ನು ನಿತ್ಯವೂ ನಡೆಯಿಸುತ್ತಿರುವುದು. ಇಂತಹ ನನ್ನ ಮಾಯೆಯನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ||೮||

ಹಾನಿಕಾಲೇ ಪರಿತ್ಯಜ್ಯ ಮಾಂ ಜನೋಽನ್ಯತ್ರ ಗಚ್ಛತಿ ।
ತಸ್ಯ ತ್ರೈಕಾಲಿಕೀ ಹಾನಿರ್ಜಾಯತೇ ನಾತ್ರ ಸಂಶಯಃ ॥೯॥

ಮಾಂ ತ್ಯಕ್ತ್ವಾ ಸಾ ಯಯೌ ಯತ್ರ ಪಯ ಉತ್ಸಿಕ್ತತಾಂ ಯಯೌ ।
ತಾವನ್ಮಯಾ ತು ದಧ್ಯನ್ನಂ ಭುಕ್ತ್ವಾ ದಧಿ ವಿನಾಶಿತಂ ॥೧೦॥

ಗೃಹೀತಂ ನವನೀತಂ ಚ ನೀತ್ವಾ ಕ್ಷಿಪ್ತಮಿತಸ್ತತಃ ।
ಏವಂ ಹಾನಿತ್ರಯಂ ತತ್ರ ಯಶೋದಾಯಾಸ್ತಥಾಽಭವತ್ ॥೧೧॥

ಮಾಮೇವಂ ಯಃ ಪರಿತ್ಯಜ್ಯ ವಸ್ತುನೋಽರ್ಥೇಽಭಿಧಾವತಿ ।
ವಿವೇಕರಹಿತೋ ಮೂರ್ಖೋ ದುಃಖಮೇವಾಭಿಪದ್ಯತೇ ॥೧೨॥

ತಸ್ಯ ತ್ರೈಕಾಲಿಕೀ ಹಾನಿರ್ಭವತ್ಯೇವಾನ್ಯಥಾ ನ ಹಿ ।
ಉತ್ತಾರ್ಯ ಸುಶೃತಂ ದುಗ್ಧಂ ಯಾವದಾಯಾತಿ ಸತ್ವರಂ ॥೧೩॥

ದಧಿ ಭಾಂಡಂ ಭಗ್ನಂ ದೃಷ್ಟ್ವಾ ಪರಿತಃ ಸಾ ವ್ಯಲೋಕಯತ್ ।
ಮಾಮದೃಷ್ಟ್ವಾ ಬಹಿರ್ಗೇಹಾಭ್ಯಂತರೇಽಪಶ್ಯದುದ್ಯತಂ ॥೧೪॥

---

ಮನುಷ್ಯನು ತನಗೆ ತೊಂದರೆ ಬರುವ ಕಾಲದಲ್ಲಿ ನನ್ನನ್ನು ಬಿಟ್ಟು ಬೇರೆ ಕಡೆಗೆ ಹೋಗುವನು. ಇಂತಹ ಮನುಷ್ಯನಿಗೆ ಮೂರು ಕಾಲಗಳಲ್ಲಿಯೂ ಹಾನಿಯು ತಪ್ಪುವುದೇ ಇಲ್ಲವು. ಈ ವಿಷಯದಲ್ಲಿ ಸಂದೇಹವಿಲ್ಲ. ಯಶೋದೆಯು ನನ್ನನ್ನು ಬಿಟ್ಟು ಹಾಲು ಉಕ್ಕುವ ಸ್ಥಳಕ್ಕೆ ಹೋಗಲು ನಾನು ದಧ್ಯನ್ನವನ್ನೆಲ್ಲ ವನ್ನೂ ತಿಂದು ಮೊಸರನ್ನು ಹಾಳುಮಾಡಿದೆನು, ॥೯-೧೦॥

ಬೆಣ್ಣೆಯನ್ನು ತೆಗೆದುಕೊಂಡು ಅಲ್ಲಿ ಇಲ್ಲಿ ಎರಚಿದೆನು. ಈ ರೀತಿಯಾಗಿ ಹಾಲು, ಮೊಸರು, ಬೆಣ್ಣೆ ಇವುಗಳ ನಾಶರೂಪವಾದ ಮುಮ್ಮಡಿಯಾದ ಹಾನಿಯು ಯಶೋದೆಗೆ ಏಕಕಾಲದಲ್ಲಿ ಉಂಟಾಯಿತು. ಹೀಗೆ ಯಾವನು ನನ್ನನ್ನು ಬಿಟ್ಟು ಬೇರೆ ವಸ್ತುವಿನ ಆಶೆಯಿಂದ ಹೋಗುವನೋ ಅಂತಹ ವಿವೇಕಹೀನನಾದ ಮಂದ ಮತಿಯು ದುಃಖವನ್ನೇ ಹೊಂದುವನು. ॥೧೧-೧೨॥

ಅಂತಹ ಮೂರ್ಖನಿಗೆ ಮೂರು ಕಾಲಗಳಲ್ಲಿಯೂ ಹಾನಿಯೇ ಉಂಟಾಗುವುದೇ ಹೊರತು ಸುಖವುಂಟಾಗಲಾರದು. ಯಶೋದೆಯು ಕೆನೆ ಬಂದಿರುವ ಹಾಲನ್ನು ಒಲೆಯಿಂದ ಕೆಳಗೆ ಇಳಿಸಿ ಬಂದು ನೋಡಲಾಗಿ ಮೊಸರಿನ ಮಡಕೆಯು

ನವನೀತಸ್ಯ ಹರಣೇ ಸ್ಥಾಪಯಿತ್ವಾ ಉಲೂಖಲಂ ।
ಮರ್ಕಟೇಭ್ಯಃ ಪ್ರಯಚ್ಛಂತಂ ಗವ್ಯಂ ಯತ್ಸಂಚಿತಂ ಬಹು ॥೧೫॥

ಸಂಚಯೋ ನ ಹಿ ಕರ್ತವ್ಯೋ ಮದ್ಭಕ್ತೈಃ ಕೃಪಣೈರ್ಯಥಾ ।
ಸಂಚಯಸ್ಯ ವಿನಾಶೋ ಹಿ ಜಾಯತೇ ನಿಶ್ಚಿತೋ ಬುಧೈಃ ॥೧೬॥

ಯಸ್ಯಾಹಂ ಚ ಸದಾ ದಾತಾ ಸ ಕಥಂ ಕೃಪಣೋ ಭವೇತ್ ।
ಯತ್ರಾಹಂ ತತ್ರ ಕಿಂ ನಾಸ್ತಿ ಭಕ್ತಿಃ ಕಿಂ ಕೃಪಣಾಯತೇ ॥೧೭॥

ಯತ್ಕಿಂಚಿನ್ಮಮ ಭಕ್ತಸ್ಯ ತೇನ ಪ್ರೀಣಾತಿ ಮಾಂ ಸದಾ ।
ದಾನೈರ್ಭೋಗೈರ್ಮನೋಕ್ತೈಶ್ಚ ಸಫಲಂ ಜೀವಿತಂ ನೃಣಾಂ ॥೧೮॥

ಸಾ ಪಶ್ಯಂತೀ ಯಷ್ಟಿಹಸ್ತಾ ಯಶೋದಾ ಬಾಲಕಂ ಹಿ ಮಾಂ ।
ಗೃಹಾಂತರೇ ಸಮಾಗತ್ಯ ಶನೈರ್ನೇ ಪೃಷ್ಠತಃ ಸ್ಥಿತಾ ॥೧೯॥

---

ಒಡೆದಿದ್ದಿತು. ಸುತ್ತಲೂ ನನ್ನನ್ನು ನೋಡಿದಳು. ಎಲ್ಲಿಯೂ ನನ್ನನ್ನು ಕಾಣದೆ ಮನೆಯೊಳಗೆ ಬಂದಳು. ಅಲ್ಲಿ ಒರಳುಕಲ್ಲನ್ನು ಹತ್ತಿ ಅನೇಕ ದಿವಸಗಳಿಂದ ಕೂಡಿ ಹಾಕಿದ್ದ ಬೆಣ್ಣೆಯನ್ನು ಕಪಿಗಳಿಗೆ ತಿನ್ನಿಸುತ್ತಿರುವ ನನ್ನನ್ನು ನೋಡಿದಳು. ||೧೩-೧೪-೧೫||

ಕೃಪಣರು ಧನವನ್ನು ರಕ್ಷಿಸುವಂತೆ, ನನ್ನ ಭಕ್ತರೂ ಯಾವುದನ್ನಾದರೂ ಸಂಗ್ರಹಿಸಿದರೆ ಆ ಪದಾರ್ಥವು ನಾಶವಾಗುವುದೆಂದು ಪಂಡಿತರು ನಿಶ್ಚಯಿಸಿರುವರು. ಯಾವ ಭಕ್ತನಿಗೆ ನಾನು ಯಾವಾಗಲೂ ದಾನಮಾಡುತ್ತಿರುವೆನೋ ಅವನು ಹೇಗೆ ಕೃಪಣನಾದಾನು ? ಯಾವ ಸ್ಥಳದಲ್ಲಿ ನಾನಿರುವೆನೋ ಅಲ್ಲಿ ಯಾವ ಪದಾರ್ಥವು ತಾನೇ ಇರಲಾರದು ? ತಿನ್ನತಕ್ಕ ವಿಷಯದಲ್ಲಿ ಏಕೆ ಕಾರ್ಪಣ್ಯವನ್ನು ತೋರ ಬೇಕು ? ||೧೬-೧೭||

ನನ್ನ ಭಕ್ತನು ತನ್ನಲ್ಲಿರುವ ಸ್ವಲ್ಪವನ್ನೇ ನನಗೆ ಯಾವಾಗಲೂ ಅರ್ಪಿಸಿ ನನಗೆ ಆನಂದವನ್ನೇ ಉಂಟುಮಾಡುವನು. ನಾನು ಶಾಸನೆ ಮಾಡಿದ ದಾನ ಗಳಿಂದಲೂ, ಭೋಗಗಳಿಂದಲೂ ಮನುಷ್ಯರು ಫಲವನ್ನು ಹೊಂದುವರು. ||೧೮||

ಆಗತಾಮುಹಮಾಲೋಕ್ಯ ಸಮುತ್ತೀರ್ಯ ಪಲಾಯಿತಃ ।
ಗೃಹೀತುಕಾಮಾ ಮೇ ಪಶ್ಚಾದಧಾವದತಿವೇಗತಃ ॥೨೦॥

ನ ಲೇಭೇ ಸ್ಪರ್ಶನಂ ಚಾಪಿ ಗ್ರಹಣಂ ತು ಕುತೋ ಭವೇತ್ ।
ಯಂ ಯೋಗಿನೋಽಪಿ ಸ್ವಪುನಃ ಪ್ರಯುಞ್ಜಂತಿ ಸದಾ ಹಿ ಮಾಂ ॥೨೧॥

ಗೃಹೀತುಂ ಬಹುಕಾಲೇನ ನ ಸ್ಪೃಷ್ಟುಮಪಿ ತೇ ಕ್ಷಮಾಃ ।
ಅತಿಶ್ರಮಾಕುಲಾಂ ವ್ಯಗ್ರಾಂ ಧಾವಂತೀಂ ತಾಮಿತಸ್ತತಃ ॥೨೨॥

ದೃಷ್ಟ್ವಾ ಮೇಽಜಾಯತ ಕೃಪಾ ತತೋಽಸ್ಯಾ ಗ್ರಹಣೇಽಭವಂ ।
ಕರೇ ಗೃಹೀತ್ವಾ ಜನನೀ ಸಯಷ್ಟಿರ್ಮಾಮಭೀಷಯತ್ ॥೨೩॥

ಸ್ಫೋಟನಂ ದಧಿ ಭಾಂಡಸ್ಯ ಘೃತದುಗ್ಧಾದಿನಾಶನಂ ।
ತ್ವಯಾ ಕೃತಂ ಕಥಂ ಮಂದ ತತ್ಫಲಂ ತೇ ದದಾಮ್ಯಹಂ ॥೨೪॥

---

ಯಶೋದೆಯು ಬಾಲಕನಾದ ನನ್ನನ್ನು ನೋಡಿ ಹೊಡೆಯಬೇಕೆಂದು ಕೋಲನ್ನು ಹಿಡಿದುಕೊಂಡು ಮನೆಯೊಳಗೆ ಬಂದು ನನ್ನ ಹಿಂಭಾಗದಲ್ಲಿ ನಿಂತಳು. ಬಂದಿರುವ ಯಶೋದೆಯನ್ನು ನಾನು ನೋಡಿ ಅಲ್ಲಿಂದ ಓಡಿಹೋದೆನು. ನನ್ನನ್ನು ಹಿಡಿಯಬೇಕೆಂದು ಅವಳೂ ಸಹ ನನ್ನ ಹಿಂದೆಯೇ ವೇಗವಾಗಿ ಓಡಿಬಂದಳು. ||೧೯-೨೦||

ಯಶೋದೆಗೆ ನನ್ನನ್ನು ಮುಟ್ಟಲೂ ಸಾಧ್ಯವಾಗಲಿಲ್ಲ. ಹಿಡಿಯುವುದನ್ನಂತೂ ಹೇಳಬೇಕಾದುದೇ ಇಲ್ಲ. ಯೋಗಿಗಳೂ ಸಹ ಅನೇಕಕಾಲ ತಪಸ್ಸನ್ನು ಮಾಡಿ ಪರಮಾತ್ಮನನ್ನು ಬಹಳ ಕಷ್ಟದಿಂದ ಹೊಂದುವರು. ಇಂತಹ ನಾನು ಇವಳಿಗೆ ಸಿಕ್ಕುವೆನೇ ? ಬಹಳ ಶ್ರಮಗೊಂಡು ನನ್ನನ್ನು ಹಿಡಿಯಲು ಅಲ್ಲಿ ಇಲ್ಲಿ ಓಡಾಡುತ್ತಿರುವ ಯಶೋದೆಯನ್ನು ನೋಡಿ ಬಹಳ ಕನಿಕರ ಉಂಟಾಗಿ ಅವಳ ಕೈಗೆ ಸಿಕ್ಕಿಬಿದ್ದೆನು. ಜನನಿಯು ನನ್ನ ಎರಡು ಕೈಗಳನ್ನು ಹಿಡಿದುಕೊಂಡು ಕೋಲಿನಿಂದ ಹೆದರಿಸಿದಳು. ||೨೧-೨೨-೨೩||

ಎಲೈ ತುಂಟಕೃಷ್ಣನೇ, ಮೊಸರಿನ ಮಡಿಕೆಯನ್ನು ಯಾಕೆ ಒಡೆದು ಹಾಕಿದೆ? ಹಾಲು, ಮೊಸರು, ಬೆಣ್ಣೆಗಳನ್ನು ಏಕೆ ಹಾಳುಮಾಡಿದೆ? ನಿತ್ಯವೂ

ನಿತ್ಯಂ ಗೋಪ್ಯಃ ಸಮಾಗತ್ಯ ಬ್ರುವಂತಿ ತವ ಚೇಷ್ಟಿತಂ।
ಮಯಾ ಪ್ರತೀತಿರ್ನ ಕೃತಾ ಸಾಧ್ವೀನಾಂ ವಚನೇಷ್ವಪಿ ॥೨೫॥

ಏವಮುಕ್ತ್ವಾ ತತಃ ಕ್ರೋಧಾ ಜ್ಜನನೀ ಸತ್ವರಾ ಸತೀ।
ಉಲೂಖಲೇ ತು ಸಾ ರಜ್ಜುಂ ಜಗ್ರಾಹ ಮಮ ಬಂಧನೇ ॥೨೬॥

ಬಂಧನಂ ತಸ್ಯ ಭವತಿ ಯಸ್ಯ ಪೂರ್ವಾಪರಂ ಭವೇತ್।
ಪೂರ್ವಾಪರಂ ಚ ಮೇ ನಾಸ್ತಿ ಬಂಧನಂ ಜಾಯತೇ ಕಥಂ ॥೨೭॥

ಬೃಹತ್ವಾತ್ ಬ್ರಹ್ಮ ಚಾಹಂ ತು ವಿಶೇಷಾಚ್ಛೃಣು ನಾರದ।
ತತ್ಕಥಂ ವೇಷ್ಟನಂ ಮೇ ಸ್ಯಾದನಾದ್ಯಂತಸ್ಯ ರಜ್ಜುತಃ ॥೨೮॥

---

ಗೋಪಿಯರು ಬಂದು ನಿನ್ನ ತುಂಟ ಚೇಷ್ಟೆಗಳನ್ನು ನನ್ನ ಹತ್ತಿರ ಹೇಳುತ್ತಿದ್ದರು. ಸಾಧುಗಳಾದ ಅವರ ಮಾತನ್ನು ನಾನು ನಂಬುತ್ತಿರಲಿಲ್ಲ. ಈಗ ನಿನ್ನ ಚೇಷ್ಟೆಗಳನ್ನು ನಾನೇ ಪ್ರತ್ಯಕ್ಷವಾಗಿ ನೋಡಿದಂತಾಯಿತು! ||೨೪-೨೫||

ಎಂದು ಹೇಳಿ ಯಶೋದೆಯು ಕೋಪದಿಂದ ಒರಳುಕಲ್ಲಿಗೆ ನನ್ನನ್ನು ಕಟ್ಟಲು ಹಗ್ಗವನ್ನು ತೆಗೆದುಕೊಂಡಳು. ಯಾವವನಿಗೆ ಪೂರ್ವವೂ ಅಪರವೂ ಇವೆಯೋ ಅಂತಹವನಿಗೆ ಈಗ ರಜ್ಜು ಬಂಧನವು ಆಗುವುದು. ಆದರೆ ಆದ್ಯಂತವಿಲ್ಲದ ಪರಮಾತ್ಮನಿಗೆ ಬಂಧನವು ಹೇಗೆ ಉಂಟಾಗುತ್ತದೆ? ಸರ್ವಥಾ ಉಂಟಾಗಲಾರದು. ಪರಮಾತ್ಮನು ಅನಾದ್ಯಂತನಾಗಿ ನಿತ್ಯಮುಕ್ತನಾದುದರಿಂದ ಅವನಿಗೆ ಬಂಧನವು ಅಸಂಭವವೇ ಸರಿ. ಅಜ್ಞಾನಿಗೆ ಬಂಧನವು. ಭಗವಂತನು ಸರ್ವದಾ ಸರ್ವಜ್ಞನಾದುದರಿಂದ ಅಜ್ಞಾನವಿಲ್ಲದುದರಿಂದ ಬಂಧನವೂ ಇರುವುದಿಲ್ಲ.||೨೬-೨೭||

ಓ ನಾರದನೇ, ಅದರಲ್ಲಿಯೂ ವಿಶೇಷವಾಗಿ ವಿಚಾರಿಸಿದರೆ ನಾನು ಬ್ರಹ್ಮಸ್ವರೂಪನಾಗಿರುವೆನು. ಬ್ರಹ್ಮವೆಂಬ ಶಬ್ದವು "ಬೃಹಿ ವೃದ್ಧೌ" ಎಂಬ ಧಾತುವಿನಿಂದ ಉಂಟಾದುದು. ಎಲ್ಲಕ್ಕೂ ದೊಡ್ಡದೆಂದು ಅರ್ಥವು ಆ ಧಾತುವಿಗೆ ಇರೋಣದರಿಂದ ನಾನು ಅಣುರೇಣುತೃಣಕಾಷ್ಠಾದಿ ಸಕಲಜಗತ್ತನ್ನೂ ವ್ಯಾಪಿಸಿಕೊಂಡೂ ಮೀರಿಯೂ ಇರುವೆನು. ನನಗೆ ಆದಿಯೂ ಇಲ್ಲ. ಅಂತವೂ ಇಲ್ಲ. ಇಂತಹ ಮೊದಲು ತುದಿಗಳಿಲ್ಲದ, ವ್ಯಾಪಕನಾದ ನನಗೆ ಪರಿಚ್ಛಿನ್ನವಾದ ರಜ್ಜುವಿನಿಂದ ಬಂಧನವು ಅಸಂಭವವೇ ಸರಿ. ||೨೮||

ಯದಾ ಬಧ್ನಾತಿ ದಾಮ್ನಾ ಸಾ ದ್ವ್ಯಂಗುಲೋನಮಭೂತ್ತದಾ ।
ತೇನಾನ್ಯತ್ಸಂದಧೇ ಮಾತಾ ತದಪಿ ನ್ಯೂನತಾಂ ಗತಂ ॥೨೯॥

ಏವಂ ಸ್ವಗೇಹ ದಾಮಾನಿ ನ್ಯೂನಾನಿ ಹ್ಯಭವಂಸ್ತದಾ ।
ಗೋಪಿಕಾಸ್ತತ್ಸಮಾಕರ್ಣ್ಯ ಮನೋಲೂಖಲಬಂಧನಂ ॥೩೦॥

ಸಮಾಜಗ್ಮುರ್ಗೃಹದ್ವಾರಂ ಸರ್ವಾಸ್ತಾ ಹ್ಯ ಬ್ರುವನ್ನಚಃ ।
ಯಶೋದೇ ಬಹುಶೋಽಸ್ಮಾಭಿರುಕ್ತಂ ಶಿಕ್ಷಯ ಪುತ್ರಕಂ ॥೩೧॥

ಬಂಧನಾತ್ತಾಡನಾದ್ಬಾಲೋ ಭವೇದ್ಧಿ ಪರಮಂ ಸುಧೀಃ ।
ಕಿಂ ತ್ವಸ್ಮಾಕಂ ತವ ಸುತಃ ಪ್ರಿಯಃ ಪ್ರಾಣಾಧಿಕೋ ಹ್ಯಸೌ ॥೩೨॥

ತಥಾಽಪಿ ಖಲು ಶಿಕ್ಷಾರ್ಥಂ ದೇವ್ಯಬ್ರೂಮ ಹ್ಯಭೀಕ್ಷ್ಣಶಃ ।
ಪುತ್ರಸ್ನೇಹವಶಾದೇವ ತ್ವಯಾ ತನ್ನಾವಧಾರಿತಂ ॥೩೩॥

ಆತ್ಮದ್ರವ್ಯವಿನಾಶೇನ ಚಾಧುನಾ ಕರ್ತುಮುದ್ಯತಾ ।
ಯಥಾಽಽತ್ಮವಸ್ತುನಾಶೇನ ಕ್ಷೋಭೋ ಮನಸಿ ವರ್ತತೇ ॥೩೪॥

---

ಯಶೋದೆಯು ಹಗ್ಗದಿಂದ ತಿರುವುವ ಕಲ್ಲಿಗೆ ಕಟ್ಟಲು ಸುತ್ತಲು ಎರಡಂಗುಲ ದಷ್ಟು ಆ ಹಗ್ಗವು ಕಡಿಮೆಯಾಯಿತು. ಮತ್ತೊಂದು ಹಗ್ಗವನ್ನು ಆ ಹಗ್ಗಕ್ಕೆ ಸೇರಿಸಲು ಆಗಲೂ ಎರಡಂಗುಲ ಕಡಿಮೆಯಾಯಿತು. ಹೀಗೆ ಹಗ್ಗಗಳನ್ನು ಸೇರಿಸುತ್ತಾ ಮನೆಯಲ್ಲಿರುವ ಹಗ್ಗಗಳೆಲ್ಲವೂ ಮುಗಿದರೂ ಎರಡಂಗುಲ ಕಡಿಮೆಯಾಗಿಯೇ ಇದ್ದಿತು! ನನ್ನ ಬಂಧನವನ್ನು ಎಲ್ಲಾ ಗೋಪಿಯರೂ ಕೇಳಿ ನಮ್ಮ ಮನೆಗೆ ಬಂದು ಯಶೋದೆಯನ್ನು ಕುರಿತು ಹೀಗೆ ಹೇಳಿದರು. ॥೨೯-೩೦॥

ಓ ಯಶೋದೆಯೇ, ಮಗನನ್ನು ಚನ್ನಾಗಿ ಶಿಕ್ಷಿಸೆಂದು ಈ ಹಿಂದೆ ನಿನ್ನ ಹತ್ತಿರ ಎಷ್ಟೋ ಬಾರಿ ಹೇಳಿದ್ದೆವು. ಕಟ್ಟುವುದರಿಂದಲೂ, ಹೊಡೆಯುವಿಕೆಯಿಂದಲೂ ಸಹ ತುಂಟಹುಡುಗರು ಒಳ್ಳೆಯವರಾಗುವರು. ನಮಗೂ ಈ ಬಾಲಕನು ಪ್ರಾಣಗಳಿಗಿಂತಲೂ ಪ್ರಿಯನೇ ಸರಿ. ಆದರೂ ಸಹ ಚನ್ನಾಗಿ ಶಿಕ್ಷಿಸೆಂದು ನಿನ್ನ ಹತ್ತಿರ ಹೇಳಿದ್ದೆವು. ನೀನಾದರೋ ಪುತ್ರವಾತ್ಸಲ್ಯದಿಂದ ನಮ್ಮ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ನಿನ್ನ ವಸ್ತುವೂ ನಷ್ಟವಾದುದರಿಂದ ಈಗ ಶಿಕ್ಷಿಸಲು ಆರಂಭಿ

ತಥಾ ನ ಚಾನ್ಯಹಾನೌ ಹಿ ತ್ವಯಿ ಪ್ರತ್ಯಕ್ಷತಾಂ ಗತಂ ।
ಸುತಸ್ಯ ಕರ್ಮ ಶ್ರುತ್ವಾಽಪಿ ನ ಹಿ ಚಾಕ್ರೋಶನಂ ಕೃತಂ ॥೩೫॥

ಇದಾನೀಂ ಕ್ವ ಗತಃ ಸ್ನೇಹೋ ಯತ್ತ್ವಂ ಬದ್ಧುಮಿಹೇಚ್ಛಸಿ ।
ಬಾಲೋಽಯಂ ನೋ ನ ಜನಾತಿ ಕಥಂ ನ ಪ್ರೋಚ್ಯತೇಽಧುನಾ॥೩೬॥

ಇತಿ ತಾಸಾಂ ವಚಃ ಶ್ರುತ್ವಾ ಜನನೀ ವ್ಯಾಕುಲಾಽಭವತ್ ।
ಅಶಕ್ತಾ ಬಂಧನೇ ಯತ್ನ ಪರಾ ಪರಮವಿಸ್ಮಿತಾ ॥೩೭॥

ನ ಶಶಾಕ ತದಾ ಬದ್ಧುಂ ಶ್ರಮವಾರಿಪರಿಪ್ಲುತಾ ।
ನ ಜಾನೇ ಕಿಂ ಭವತ್ಯತ್ರ ಜಾಯತೇ ನಾಸ್ಯ ಬಂಧನಂ ॥೩೮॥

ಏವಂ ಬ್ರುವಾಣಾಂ ತಾಂ ದೃಷ್ಟ್ವಾ ವಿಷಣ್ಣಾಂ ಕೃಪಯಾಽನ್ವಿತಃ ।
ಗತೋಽಹಂ ಬದ್ಧತಾಂ ತಸ್ಯಾ ಅಪಿ ಚೈಕಾಂತಭಾವತಃ ॥೩೯॥

---

ಸಿರುವೆ. ತನ್ನ ವಸ್ತುವು ನಷ್ಟವಾದರೆ ಮನಸ್ಸಿಗೆ ದುಃಖವಾಗುವಂತೆ ಪರರ ವಸ್ತುವು ನಾಶವಾದರೆ ಅಂತಹ ದುಃಖವು ನಿನಗೆ ಪ್ರತ್ಯಕ್ಷವಾಗಲಿಲ್ಲ. ||೩೧-೩೨-೩೩-೩೪||

ಹಿಂದೆ ಎಷ್ಟೋ ಬಾರಿ ನಿನ್ನ ಈ ಮಗನ ಕೃತ್ಯಗಳನ್ನು ನಮ್ಮ ಮುಖದಿಂದ ಕೇಳಿದಾಗ್ಯೂ ಸಹ ಪುತ್ರನಲ್ಲಿ ರೇಗಿರಲಿಲ್ಲ! ಈಗ ಇವನನ್ನು ಕಟ್ಟಲು ಉದ್ಯುಕ್ತಳಾಗಿರುವೆ. ನಿನ್ನ ಪುತ್ರಪ್ರೇಮವು ಎಲ್ಲಿ ಹೋಯಿತು? ಈ ಹುಡುಗನು ತಿಳಿಯದವನೆಂದು ಈಗ ಹೇಗೆ ಹೇಳೋಣ? ||೩೫-೩೬||

ಈರೀತಿಯಾಗಿ ಗೋಪಿಯರ ಮಾತನ್ನು ಕೇಳಿ ಜನನಿಯು ಬಹಳ ದುಃಖಗೊಂಡಳು. ಕಟ್ಟಲು ಪ್ರಯತ್ನಮಾಡಿ ಆಗದೆ ಬಹಳ ಆಶ್ಚರ್ಯಗೊಂಡಳು. ನನ್ನನ್ನು ಕಟ್ಟಲು ಉದ್ಯುಕ್ತಳಾಗಿ ಅವಳಿಗೆ ಬಹಳ ಶ್ರಮವುಂಟಾಯಿತು. ಅದರಿಂದ ಅವಳ ಮೈಯೆಲ್ಲವೂ ಬೆವರುಳ್ಳದ್ದಾಯಿತು. ಇಲ್ಲಿ ಏನನ್ನು ಮಾಡಬೇಕೆಂಬುದು ನನಗೆ ತಿಳಿಯುವುದಿಲ್ಲ. ಈ ಹುಡುಗನನ್ನು ಕಟ್ಟಲು ಸಾಧ್ಯವಿಲ್ಲವು! ಎಂದು ಹೇಳುತ್ತಿರುವ ನನ್ನ ಮಾತೆಯನ್ನು ನೋಡಿ ನನಗೆ ಬಹಳ ಕನಿಕರವುಂಟಾಯಿತು. ಅನಂತರದಲ್ಲಿ ಅವಳಿಂದ ಕಟ್ಟಿಸಿಕೊಂಡೆನು! ||೩೭-೩೮-೩೯||

ಉಲೂಖಲೇನ ಬದ್ಧ್ವಾ ಸಾ ಸಕ್ತಾಽಽಸೀದ್ಗೃಹಕರ್ಮಸು ।
ಮದ್ಬಂಧನಂ ವಿಸಸ್ಮಾರ ಮೋಹಿತಾ ಮಾಯಯಾ ಮಮ ॥೪೦॥
ತದೈವಾನ್ಯಾ ಗೋಪಿಕಾಶ್ಚ ಪ್ರಯಯುರ್ಭವನಂ ಸ್ವಕಂ ॥೪೧॥

॥ ನಾರದ ಉವಾಚ ॥

ಭಗವನ್ ದೇವದೇವೇಶ ಲೋಕನಾಥ ಜಗತ್ಪ್ರಭೋ ।
ತ್ವದ್ಭಕ್ತಾನಾಂ ನೋಚಿತಂ ಯತ್ತನ್ಮಯಾ ಚೇಷ್ಟಿತಂ ಹರೇ ॥೪೨॥

ಯತ್ಕುಬೇರಸ್ಯ ತನಯೌ ಮಯಾ ಶಪ್ತಾವನಾಗಸೌ ।
ತ್ವದ್ಭಕ್ತಾನಾಂ ಕ್ರೋಧಹಾನಿಃ ಸದೈವಾನ್ಯೋಪಕಾರಿತಾ ॥೪೩॥

ದ್ವೇಷೋ ದಂಭೋ ಮತ್ಸರೋ ವಾ ಅಸೂಯಾಭ್ರಮ ಏವ ಚ ।
ನ ಭವೇತ್ಕರ್ಹಿಚಿತ್ಕೃಷ್ಣ ತಚ್ಚ ಸರ್ವಂ ಮಮಾಭವತ್ ॥೪೪॥

ತ್ವದ್ಭಕ್ತಾಃ ಸಾಧವಃ ಶಕ್ತಾಃ ಸುಹೃದಃ ಸರ್ವದೇಹಿನಾಂ ।
ಅನನ್ಯಕ್ಷಮಿಣಶ್ಚೈವ ತಥಾ ಸರ್ವೋಪಕಾರಿಣಃ ॥೪೫॥

---

ಗೋಪಿಯು ನನ್ನನ್ನು ರುಬ್ಬುವ ಕಲ್ಲಿಗೆ ಕಟ್ಟಿಹಾಕಿ ಮನೆಯ ಕೆಲಸವನ್ನು ಮಾಡಲು ಹೋದಳು. ನನ್ನ ಮಾಯೆಯಿಂದ ಮೋಹಿತಳಾದ ಯಶೋದೆಯು ನನ್ನ ಬಂಧನವನ್ನು ಮರೆತಳು. ಆಗ ಬೇರೆ ಗೋಪಿಕಾಸ್ತ್ರೀಯರು ತಮ್ಮ ತಮ್ಮ ಮನೆಗಳಿಗೆ ಹೋದರು. ॥೪೦-೪೧॥

ನಾರದನು ಹೇಳಿದನು ಓ ಹರಿಯೇ, ಷಡ್ಗುಣೈಶ್ವರ್ಯಸಂಪನ್ನನೇ, ದೇವತೆಗಳಿಗೂ ದೇವನೇ, ಲೋಕಗಳಿಗೆ ನಾಥನೇ, ಜಗತ್ತನ್ನು ನಿಯಮಿಸುವವನೇ, ನಾನು ನಿನ್ನ ಭಕ್ತರಾದವರಿಗೆ ಅನುಚಿತವಾದ ಕಾರ್ಯವನ್ನು ಮಾಡಿರುವೆನು. ನಿನ್ನ ಭಕ್ತರಲ್ಲಿ ಯಾವಾಗಲೂ ಕೋಪವಿಲ್ಲದಿರುವಿಕೆಯೂ, ಯಾವಾಗಲೂ ಪರೋಪಕಾರವನ್ನು ಮಾಡುವ ಸ್ವಭಾವವೂ ಇರಬೇಕಾದುದು ॥೪೨-೪೩॥

ನಿನ್ನ ಭಕ್ತರಲ್ಲಿ ದ್ವೇಷ, ದಂಭ, ಹೊಟ್ಟೆಕಿಚ್ಚು, ಇನ್ನೊಬ್ಬರ ಉತ್ಕರ್ಷವನ್ನು ನೋಡಿ ಸಹಿಸದಿರುವುದು, ನಿಸ್ಸಾರ ವಸ್ತುವನ್ನೇ ಸಾರವಾದದೆಂದು ತಿಳಿಯುವುದು

ಪಶ್ಚಾತ್ತಾಪಸ್ತದಾರಭ್ಯ ಮಮಾಭೂತ್ಸತತಂ ಹೃದಿ ।
ಕಿಂ ಮಯಾ ಚರಿತಂ ಯಕ್ಷೌ ಕಥಂ ಶಪ್ತೌ ಶಿವಾನುಗೌ ॥೪೬॥

ತನ್ಮಮಾ ಚಕ್ಷ್ವ ಭಗವನ್ನಹಂ ತತ್ಕೃತಹವಾನ್ಕಥಂ ।
ಕುಬೇರಸ್ಯ ಸುತೌ ಪ್ರೀತಂ ಪಿತರಂ ಪೃಚ್ಛತಃ ಸ್ವಕಂ ।
ಕಃ ಶ್ರೇಷ್ಠಃ ಸರ್ವದೇವಾನಾಂ ಭಜನೀಯೋ ಜನೈಶ್ಚ ಕಃ ॥೪೭॥

ನಿರ್ಭಯೋ ಜಾಯತೇ ಮರ್ತ್ಯಃ ಕಸ್ಯ ದೇವಸ್ಯ ಪೂಜನಾತ್ ।
ಕಂ ಭಜನ್ಮುಚ್ಯತೇ ಜಂತುಃ ಸದ್ಯಃ ಸಂಸಾರಬಂಧನಾತ್ ॥೪೮॥

ಇಹ ಭೋಗಾನವಾಪ್ನೋತಿ ಪರತ್ರಾತ್ಯುತ್ತಮಾಂ ಗತಿಂ ॥೪೯॥

---

ಇವೆಲ್ಲವೂ ಯಾವಾಗಲೂ ಇರಬಾರದು. ಆದರೆ ಕೃಷ್ಣನೇ, ಈ ಹಿಂದೆ ಹೇಳಿದ ಸಮಸ್ತ ದೋಷವೂ ನನಗುಂಟಾಗಿರುವುದು. ನಿನ್ನ ಭಕ್ತರು ಶಾಂತಗುಣಸಂಪನ್ನರಾಗಿಯೂ, ಸಮಸ್ತ ಪ್ರಾಣಿಗಳಿಗೂ ಸ್ನೇಹಿತರಂತೆಯೂ ಇರಬೇಕು. ಮತ್ತು ಇನ್ನೊಬ್ಬರ ತಪ್ಪನ್ನು ಮನ್ನಿಸುವ ಸ್ವಭಾವದವರಾಗಿಯೂ, ಎಲ್ಲರಿಗೂ ಉಪಕಾರ ಮಾಡುವವರಾಗಿಯೂ ಇರಬೇಕು. ॥೪೫॥

ಆ ಯಕ್ಷರಿಗೆ ಶಾಪಕೊಟ್ಟ ಮೊದಲ್ಗೊಂಡು ನನ್ನ ಮನಸ್ಸಿಗೆ ಬಹಳ ವ್ಯಥೆಯಾಗಿರುವುದು. ಶಿವನನ್ನು ಅನುಸರಿಸಿರುವ ಆ ಯಕ್ಷರ ವಿಷಯದಲ್ಲಿ ನಾನು ಎಂತಹ ಕಾರ್ಯವನ್ನು ಮಾಡಿದೆನು? ಆ ಕಾರ್ಯವನ್ನು ನಾನು ಏಕೆ ಮಾಡಿದೆನು? ಎಂಬ ವಿಷಯಕಾರಣವನ್ನು ನನಗೆ ತಿಳಿಸು. ॥೪೬॥

ಕುಬೇರನ ಪುತ್ರರಾದ ಆ ಯಕ್ಷರು ತಮ್ಮ ಪ್ರೀತಿಯ ತಂದೆಯನ್ನು ಕುರಿತು ಕೇಳಿದರು — ದೇವತೆಗಳಿಗೆಲ್ಲರಿಗೂ ಉತ್ತಮನು ಯಾರು? ಜನರು ಯಾವನನ್ನು ಸೇವಿಸುವರು? ಯಾವ ದೇವನ ಪೂಜೆಯಿಂದ ಮನುಜನು ನಿರ್ಭಯನಾಗುವನು? ಯಾವನನ್ನು ಭಜಿಸಿದರೆ ಪ್ರಾಣಿಯು ಸಂಸಾರಬಂಧನದಿಂದ ಮುಕ್ತನಾಗುವನು? ಈ ಲೋಕದಲ್ಲಿ ಭೋಗಗಳನ್ನು ಅನುಭವಿಸಿ ಪರದಲ್ಲಿ ಉತ್ತಮ ಗತಿಯನ್ನು ಭಕ್ತರು ಹೇಗೆ ಹೊಂದುವರು? ಎಂದು ಕೇಳಿದರು. ॥೪೭-೪೮-೪೯॥

|| ಕುಬೇರ ಉವಾಚ ||

ವಿಷ್ಣುಃ ಸರ್ವೇಶ್ವರಃ ಸರ್ವೈಃ ಸೇವ್ಯೋಽಸೌ ಭಕ್ತವತ್ಸಲಃ ।
ಪರಮಾತ್ಮಾಽಖಿಲಾಧಾರೋ ಯೋಗಿ ಧ್ಯೇಯಾಂಘ್ರಿಪಲ್ಲವಃ ||೫೦||

ಸ್ವಭಕ್ತೇಭ್ಯಃ ಸದಾ ತುಷ್ಟಃ ಸ್ವಾತ್ಮಾನಮಪಿ ಯಚ್ಛತಿ ।
ನಿಷ್ಕಾಮೈಶ್ಚ ಸಕಾಮೈಶ್ಚ ಸೇವನೀಯಃ ಪ್ರಭುಃ ಸ ಹಿ ||೫೧||

ಸರ್ವೇಽಧಿಕಾರಿಣೋ ವರ್ಣಾ ಆಶ್ರಮಾಃ ಶಿಶವಃ ಸ್ತ್ರಿಯಃ ।
ಅಂತ್ಯಜಾಃ ಪುಲ್ಕಸಾ ಮ್ಲೇಚ್ಛಾ ಯೇಚಾನ್ಯೇ ಪಾಪಯೋನಯಃ ||೫೨||

ಸರ್ವೈಃ ಸೇವ್ಯೋ ದೇವದೇವಃ ಪರೇಶೋ
ಭಕ್ತ್ಯಾ ನಿತ್ಯಂ ಶ್ರದ್ಧಯಾಽನನ್ಯವೃತ್ತ್ಯಾ
ಯಸ್ಮಿಂ ಸ್ತುಷ್ಟೇ ಜಾಯತೇ ಸರ್ವಮೇವ
ರುಷ್ಟ(ಷ್ಟೇ)ನಾಶಂ ಯಾತಿ ಚೈವಂ ಸದೈವ ||೫೩||

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯ್ಯಾಸಿಕೇ
ನಾರದ ಶೌನಕ ಸಂವಾದೇ ಶ್ರೀಕೃಷ್ಣೋಲೂಖಲಬಂಧನಂ
ನಾಮ ಅಷ್ಟಾವಿಂಶೋಽಧ್ಯಾಯಃ

---

ಕುಬೇರನು ಹೇಳಿದನು. ಭಕ್ತರಲ್ಲಿ ವಿಶ್ವಾಸವುಳ್ಳ ಪರಮಾತ್ಮನಾದ ಶ್ರೀವಿಷ್ಣುವು ಸಮಸ್ತ ಲೋಕಗಳಿಗೂ ಆಧಾರನಾಗಿರುವನು. ಯೋಗಿಗಳು ಚಿಗುರಿನಂತೆ ಕೋಮಲವಾದ ವಿಷ್ಣುವಿನ ಪಾದಗಳನ್ನು ಧ್ಯಾನಿಸುವರು. ತನ್ನ ಭಕ್ತರಲ್ಲಿ ಯಾವಾಗಲೂ ಪ್ರೀತನಾಗಿ ಆ ವಿಷ್ಣುವು ತನ್ನನ್ನೂ ಸಹ ಅವರಿಗೆ ಅರ್ಪಿಸುವನು. ಪ್ರಭುವಾದ ವಿಷ್ಣುವನ್ನು ನಿಷ್ಕಾಮರೂ, ಫಲಾಭಿಸಂಧಿಯುಳ್ಳವರೂ ಆಗಿರುವ ಎಲ್ಲ ಬಗೆಯ ಭಕ್ತರೂ ಸಹ ಸೇವಿಸುವರು. ||೫೦-೫೧||

ಇಂದ್ರ ಚಂದ್ರಾದಿ ಅಧಿಕಾರಿಗಳೂ, ಬ್ರಾಹ್ಮಣಾದಿ ವರ್ಣದವರೂ, ಬ್ರಹ್ಮಚರ್ಯಾದ್ಯಾಶ್ರಮಿಗಳೂ, ಶಿಶುಗಳೂ, ಸ್ತ್ರೀಯರೂ, ಅಂತ್ಯಜರೂ, ಪಾಪಿಗಳಾದ ಪುಲ್ಕಸಮ್ಲೇಚ್ಛರೆಂಬ ಇತರ ಎಲ್ಲ ಜಾತಿಯವರೂ ಸಹ ಆ ಪರಮಾತ್ಮನನ್ನು ಯಾವಾಗಲೂ ಸೇವಿಸಲು ಅಧಿಕಾರಿಗಳು. ದೇವತೆಗಳಿಗೂ ದೇವನಾಗಿಯೂ, ಈಶ್ವರ

ನಾಗಿಯೂ, ಉತ್ಕೃಷ್ಟನಾಗಿಯೂ ಇರುವ ಪರಮಾತ್ಮನನ್ನು ಅನನ್ಯಸಾಧಾರಣವಾದ ಭಕ್ತಿಶ್ರದ್ಧೆಗಳಿಂದ ಆರಾಧಿಸಬೇಕು. ಆ ಭಗವಂತನು ಸಂತೋಷಗೊಂಡರೆ ಸಮಸ್ತವಾದ ಅರಿಷ್ಟಗಳೂ ನಾಶವಾಗುವುವು. ಅವನು ಕೋಪಗೊಂಡರೆ ಎಲ್ಲ ಸಂಪತ್ತೂ ನಾಶವಾಗುವುದು. ||೫೨-೫೩||

ಇಲ್ಲಿಗೆ ಸಕಲಪುರಾಣಸಾರಭೂತವಾದ ಆದಿಪುರಾಣದಲ್ಲಿ
ಶ್ರೀಕೃಷ್ಣನನ್ನು ತಿರುವುವ ಕಲ್ಲಿಗೆ ಕಟ್ಟಿದ ಕಥೆಯುನ್ನು ತಿಳಿಸುವ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಗಣೇಶಾಯನಮಃ ||

|| ಓಂ ನಮೋ ಭಗವತೇ ವಾಸುದೇವಾಯ ||

# ಆದಿಪುರಾಣಂ



## || ಏಕೋನತ್ರಿಂಶೋಽಧ್ಯಾಯಃ ||

### ಇಪ್ಪತ್ತೊಂಬತ್ತನೆಯ ಅಧ್ಯಾಯವು

|| ಶ್ರೀ ಭಗವಾನುವಾಚ ||

**ಇತ್ಯಾದಿಷ್ಟೌ ಕುಬೇರೇಣ ತೌ ಚಾಪಿ ಪ್ರೇಮಭಕ್ತಿತಃ ।**
**ನಾನಾಪೂಜಾ ಪ್ರಯೋಗೈಶ್ಚ ಮದಾರಾಧನಮೀಹತುಃ ||೧||**

**ಕದಾಚಿದಲಕಾಂ ಯಾಂತೌ ಪರ್ಯಟಂತಾವಪಶ್ಯತಾಂ ।**
**ಮಹಾದೇವ ಗಣಶ್ರೇಷ್ಠಂ ನಂದಿನಂ ಭಕ್ತವೇಷ್ಟಿತಂ ||೨||**

**ಊಚತುಸ್ತೌ ಕುತೋ ನಂದಿನ್ನಾಗತಸ್ತೇ ಪ್ರಭುಶ್ಚ ಕಃ ।**
**ಹೇ ಸಾಧುವರ ಪಶ್ಯ ತ್ವಂ ಮುದಾಘೂರ್ಣಿತಲೋಚನಃ ||೩||**

---

ಭಗವಂತನು ಹೇಳಿದನು — ಈ ರೀತಿಯಾಗಿ ಕುಬೇರನಿಂದ ಅಪ್ಪಣೆಮಾಡಲ್ಪಟ್ಟ ಆ ಯಕ್ಷರಿಬ್ಬರೂ ನನ್ನಲ್ಲಿ ಭಕ್ತಿಯಿಂದಲೂ, ಪ್ರೀತಿಯಿಂದಲೂ ಸಹ ಅನೇಕ ಬಗೆಯಾದ ಪೂಜಾದ್ರವ್ಯಗಳನ್ನು ಸಂಗ್ರಹಿಸಿ ನನ್ನನ್ನು ಆರಾಧಿಸಿದರು. ||೧||

ಒಂದು ದಿನ ಆ ಯಕ್ಷರಿಬ್ಬರೂ ಅಲಕಾಪಟ್ಟಣಕ್ಕೆ ಹೋಗಿ ಅಲ್ಲಿ ಇಲ್ಲಿ ತಿರುಗುತ್ತಾ ಈಶ್ವರನ ಗಣಗಳಲ್ಲಿ ಶ್ರೇಷ್ಠನಾದ, ಭಕ್ತರಿಂದ ಸುತ್ತುವರಿಯಲ್ಪಟ್ಟ ನಂದಿಕೇಶ್ವರನನ್ನು ನೋಡಿ, ಹೀಗೆ ಕೇಳಿದರು— ಓ ಸಾಧುವಾದ ನಂದಿಯೇ, ನೀನು ಎಲ್ಲಿಂದ ಬಂದಿರುವೆ ? ನಿನಗೆ ಪ್ರಭುವು ಯಾರು ? ಮುದದಿಂದ ತಿರುಗುತ್ತಿರುವ ಕಣ್ಣುಳ್ಳವನಾಗಿರುವೆ ! ||೨-೩||

ಅಸತ್ಯಂ ಭಾಷಣೇ ಜಂತುರ್ಭ್ರಷ್ಟೋ ಭವತಿ ನಿಶ್ಚಿತಂ ।
ಹ್ರೀಃ ಶ್ರೀಃ ಕೀರ್ತಿಸ್ತಥಾ ಕಾಂತಿಃ ಸರ್ವಂ ವ್ಯೆಯಾತಿ ಸಂಕ್ಷಯಂ ॥೪॥

॥ ನಂದ್ಯುವಾಚ ॥

ಶೃಣುತಂ ಕುಬೇರತನಯೌ ಮಮನಾಥೋ ಮಹೇಶ್ವರಃ ।
ಯಃ ಸ್ವಯಂ ವಿಶ್ವಮಖಿಲಂ ಸೃಜತ್ಯವತಿ ಹಂತಿ ಚ ॥೫॥

ವಯಂ ತತ್ಸೇವಕಾ ನೂನಂ ಬಹವೋ ಮತ್ಸಮಾಃ ಪರೇ ।
ಯತ್ಸೇವಕಾಃ ಸದಾನಂದ ಮಯಾಃ ಸತತನಿರ್ಭಯಾಃ ॥೬॥

ಚರಂತಿ ಸ್ವೇಚ್ಛಯಾ ಲೋಕಾನ್ಕರ್ಮಪಾಶೈರ್ನಸಂಯುತಾಃ ।
ಭಕ್ಷ್ಯಾಭಕ್ಷ್ಯೇ ತಥಾ ಯೇಷಾಂ ಪಾಪೇ ತೇಷಾಂ ನ ದೂಷಣಂ ॥೭॥

ಆಶು ತುಷ್ಯತಿ ವಿಶ್ವೇಶಃ ಸುಭಕ್ತೈಃ ಸೇವಿತೋ ಧ್ರುವಂ ।
ಇತಿ ನಂದಿ ವಚಃ ಶ್ರುತ್ವಾ ಭ್ರಾಂತ ಚಿತ್ತೌ ತತಸ್ತು ತೌ ।

---

ಮನುಷ್ಯನು ಸುಳ್ಳಾಡುವುದರಿಂದ ನಿಶ್ಚಯವಾಗಿಯೂ ಧರ್ಮದಿಂದ ಭ್ರಷ್ಟನಾಗುವನು. ಅವನಲ್ಲಿರುವ, ಕೆಟ್ಟಕೆಲಸವನ್ನು ಮಾಡಬಾರದೆಂಬ ಸ್ವಭಾವದಿಂದ ಆದರಲ್ಲಿ ಹ್ರೀಯೂ, ಸಂಪತ್ತೂ, ಕೀರ್ತಿ, ಕಾಂತಿ ಇವೆಲ್ಲವೂ ನಾಶವಾಗುವುವು. ॥೪॥

ನಂದಿಯು ಹೇಳಿದನು----ಎಲೈ ಕುಬೇರಪುತ್ರರೇ, ಕೇಳಿರಿ. ನನ್ನ ಸ್ವಾಮಿಯು ಕೈಲಾಸವಾಸಿಯಾದ ಶಿವನು. ಅವನು ಸಮಸ್ತ ಜಗತ್ತನ್ನೂ ಸೃಷ್ಟಿಸಿ ಪಾಲಿಸಿ ನಾಶಗೊಳಿಸುವನು. ನಾನೂ, ನನಗೆ ಸಮಾನರಾದ ಇವರೆಲ್ಲರೂ ಸಹ ಆ ಈಶ್ವರನ ಸೇವಕರಾಗಿರುವೆವು. ಈಶ್ವರನ ಸೇವಕರು ಯಾವಾಗಲೂ ಆನಂದಭರಿತರಾಗಿಯೂ, ಯಾವಾಗಲೂ ನಿರ್ಭಯರಾಗಿಯೂ ಇರುವರು. ॥೫-೬॥

ಶಿವಭಕ್ತರು ಸ್ವೇಚ್ಛೆಯಾಗಿ ಲೋಕದಲ್ಲೆಲ್ಲಾ ಸಂಚರಿಸುವರು. ಅವರಿಗೆ ಪಾಶಗಳಂತಿರುವ ಕರ್ಮಗಳ ಸಂಬಂಧವು ಇರುವುದಿಲ್ಲ. ಅವರಿಗೆ ಭಕ್ಷ್ಯಾಭಕ್ಷ್ಯಗಳಲ್ಲಿ ಪಾಪವೇ ಇಲ್ಲ. ತ್ರಿಗುಣಾತೀತರಾದ ಅಂತಹ ಭಕ್ತರಿಂದ ಸೇವಿಸಲ್ಪಟ್ಟ ಶಿವನು ಶೀಘ್ರವಾಗಿ ಸಂತೋಷಗೊಳ್ಳುವನು. ॥೭॥

ಈರೀತಿಯಾಗಿ ನಂದಿಯ ಮಾತನ್ನು ಕೇಳಿ ಆ ಕುಬೇರ ಪುತ್ರರು ಭ್ರಾಂತ ಚಿತ್ತರಾದರು. ಆ ಕೂಡಲೇ ಹರಿಯಲ್ಲಿ ಭಕ್ತಿಯನ್ನು ಬಿಟ್ಟು ಶಿವಭಕ್ತರಾದರು.

**ಹರಿಭಕ್ತಿಂ ವಿಹಾಯಾಶು ಸಂಜಾತೌ ಶಿವಸೇವಕೌ ।**
**ನೂನಂ ಪರೋಪದೇಶೇನ ಭ್ರಷ್ಟಾ ಭವತಿ ಧೀರ್ಧೃತಾ ॥೮॥**

**ಭಕ್ತೋಽಪಿ ಭ್ರಂಶತೇ ಶೀಘ್ರಮಿತರೇಷಾಂ ತು ಕಾ ಕಥಾ ।**
**ತತ ಆರಭ್ಯ ತೌ ಮತ್ತೌ ಕುಬೇರತನಯಾವುಭೌ ।**
**ಕುಕರ್ಮಕರಣೋದ್ಯುಕ್ತೌ ಚೇರತುರ್ಬುದ್ಧಿ ವಿಭ್ರಮಾತ್ ॥೯॥**

**ಏಕದಾ ಶೈಲವಿಪಿನೇ ರಮ್ಯೇ ಮಂದಾಕಿನೀ ತಟೇ ।**
**ಸ್ತ್ರೀಗಣೈರನುಗಾಯದ್ಭಿಃ ಶ್ರಿಯಾ ಮತ್ತೌ ವಿಚೇರತುಃ ॥೧೧॥**

**ಸ್ತ್ರೀಣಾಂ ಸಂಗಃ ಪ್ರಹೃಷ್ಟಾನಾಂ ತತ್ತ್ವವಿಸ್ಮೃತಿ ಕಾರಣಂ ।**
**ಕಿಂಪುನರ್ಮದಮತ್ತಾನಾಂ ಚಿತ್ತ ಭ್ರಂಶಮುಪೇಯುಷಾಂ ॥೧೨॥**

**ವಿಹೃತ್ಯ ವನಕುಂಜೇಷು ತತೋ ಮಂದಾಕಿನೀ ಜಲೇ ।**
**ಪ್ರಚಕ್ರತುರ್ಜಲಕ್ರೀಡಾಂ ಸಿಷಿಚುಸ್ತೌ ಸ್ತ್ರಿಯೋಽಭಿತಃ ॥೧೩॥**

---

ಪರೋಪದೇಶದಿಂದ ಸ್ಥಿರವಾದ ಬುದ್ಧಿಯೂ ಸಹ ಭ್ರಷ್ಟವಾಗುವುದು. ಈ ವಿಷಯದಲ್ಲಿ ಸಂದೇಹವಿಲ್ಲವು. ಭಕ್ತನೂ ಕೂಡ ಶೀಘ್ರವಾಗಿಯೇ ಭ್ರಷ್ಟನಾಗುವನು. ಇತರರ ಕಥೆಯನ್ನು ಹೇಳಬೇಕಾದುದೇ ಇಲ್ಲ. ॥೮॥

ಆ ಮೊದಲ್ಗೊಂಡು ಆ ಕುಬೇರಪುತ್ರರಿಬ್ಬರೂ, ಮತ್ತರಾಗಿ ದುಷ್ಕರ್ಮಗಳನ್ನೂ ಆಚರಿಸುತ್ತಾ, ಬುದ್ಧಿಗೆಟ್ಟು ಅಲ್ಲಿ ಇಲ್ಲಿ ತಿರುಗಾಡುತ್ತಾ ಇದ್ದರು. ॥೧೦॥

ಒಂದು ದಿನ ಆ ಯಕ್ಷರಿಬ್ಬರೂ ಸಂಪತ್ತಿನಿಂದ ಮತ್ತರಾಗಿ, ಸಂಗೀತವನ್ನು ಹಾಡುತ್ತಿರುವ ಸ್ತ್ರೀಯರೊಡಗೂಡಿ ಭಾಗೀರಥೀ ನದಿಯ ದಡದಲ್ಲಿರುವ ಮನೋಹರವಾದ ಪರ್ವತದ ಅರಣ್ಯದಲ್ಲಿ ಸಂಚರಿಸುತ್ತಿದ್ದರು. ॥೧೧॥

ಸ್ತ್ರೀಸಂಗವು ಸಂತೋಷಗೊಂಡ ಮನುಷ್ಯರಲ್ಲಿಯೂ ನಿಜಾಂಶದ, ಪರತತ್ತ್ವಸ್ವರೂಪದ ಮರೆಯುವಿಕೆಗೆ ಕಾರಣವಾಗುತ್ತದೆ. ಚಿತ್ತಚಾಂಚಲ್ಯವನ್ನು ಹೊಂದಿದ ಮದಮತ್ತರಲ್ಲಿ ಅದು ತತ್ತ್ವವಿಸ್ಮೃತಿಗೆ ಕಾರಣವಾಗುವುದೆಂಬುದನ್ನು ಹೊಸದಾಗಿ ಹೇಳಬೇಕಾದುದೇ ಇಲ್ಲ. ॥೧೨॥

ಆ ಯಕ್ಷರಿಬ್ಬರು ಲತಾಗೃಹಗಳಲ್ಲಿ ಕ್ರೀಡಿಸಿ, ಭಾಗೀರಥೀ ಜಲದಲ್ಲಿ ಇಳಿದು ಜಲಕ್ರೀಡೆಯನ್ನು ಮಾಡುತ್ತಾ, ಸ್ತ್ರೀಯರ ಮೇಲೆ ನೀರನ್ನು ಎರಚಿದರು. ಓ ನಾರದ

ತತೋ ಭವಾನ್ಸಮಾಯಾತೋ ಯದುಕ್ತಂ ಯತ್ಕೃತಂ ತ್ವಯಾ ।
ತತ್ಸ್ಮರ್ಯತೇ ನ ಚೇದ್ವಚ್ಮಿ ತ್ವಯಾಽಹಂ ಸಕಲಂ ಮುನೇ ॥೧೪॥

ಮಯ್ಯೈತತ್ಸ್ಮರ್ಯತೇ ಕೃಷ್ಣ ಕುಬೇರತನಯಾವುಭೌ ।
ಮತ್ಸಂಗೇನ ಶ್ರಿಯಾ ಯುಕ್ತಾವಪಿ ದುಃಸಂಗದೂಷಿತೌ ॥೧೫॥

ಕುತೋ ಭೂತಮಿದಂ ಚಿತ್ರಂ ಮತ್ತಾ ಚ ಧನಗರ್ವಿತಾ ।
ಅಹೋ ಶ್ರೀಮದಮಾಹಾತ್ಮ್ಯಂ ಬುದ್ಧಿಭ್ರಂಶಕರಂ ಪರಂ ॥೧೬॥

ನ ಪಶ್ಯತಿ ಜನೋ ನೂನಮಾತ್ಮಾನಂ ಹೃದ್ಯಧಿಷ್ಠಿತಂ ।
ಕುಸಂಗದೂಷಿತಾ ಬುದ್ಧಿರ್ನ ಹಿ ಗಚ್ಛತಿ ಶುದ್ಧತಾಂ ॥೧೭॥

ಶ್ರಿಯಾ ವಿಕಾರತಾಂ ಯಾತಃ ಪರಲೋಕಂ ನ ಪಶ್ಯತಿ ।
ವಿಶೇಷೇಣ ಶ್ರಿಯಾ ಮತ್ತಃ ಪತನಾಯ ಭವೇದಲಂ ॥೧೮॥

ಏತೌ ಕುಬೇರತನಯೌ ವಿಷ್ಣುಧರ್ಮ ಪರಾಯಣೌ ।
ನಿಯತಂ ಭ್ರಷ್ಟತಾಂ ಪ್ರಾಪ್ತೌ ಕುಸಂಗಫಲತಃ ಪರಂ ॥೧೯॥

---

ಮುನಿಯೇ, ಆಗ ನಾನು ಅಲ್ಲಿಗೆ ಬಂದೆ. ಹೋಗಿ ಏನನ್ನು ಹೇಳಿದೆ? ಏನನ್ನು ಮಾಡಿದೆ? ಎಂಬ ವಿಚಾರವು ನಿನ್ನ ಸ್ಮೃತಿಗೆ ಬರಬಹುದು. ಹಾಗೆ ನಿನ್ನ ಸ್ಮರಣೆಗೆ ಬಾರದಿದ್ದರೆ ನಾನೇ ಎಲ್ಲವನ್ನೂ ಹೇಳುವೆನು. ||೧೩-೧೪||

ನಾರದ ಮಹರ್ಷಿಯು ಹೇಳಿದನು—ಓ ಕೃಷ್ಣನೇ, ನಾನು ಅದನ್ನೆಲ್ಲವನ್ನೂ ಸ್ಮರಿಸಿಕೊಂಡಿರುವೆನು. ಕುಬೇರನ ಪುತ್ರರಾದ ಆ ಯಕ್ಷರು ನನ್ನ ಸಹವಾಸದಿಂದ ಭಕ್ತಿಸಂಪತ್ತಿನಿಂದ ಕೂಡಿದವರಾದರೂ ಸಹ ದುಷ್ಟಸಹವಾಸದಿಂದ ಆ ಸಂಪತ್ತಿನಿಂದ ದೂಷಿತರಾಗಿರುವರು! ಇದು ಯಾವ ಕಾರಣದಿಂದ ಉಂಟಾಯಿತೆಂಬುದನ್ನು ತಿಳಿಯಲಾರೆನು. ಇದು ಬಹಳ ಆಶ್ಚರ್ಯಕರವಾಗಿದೆ. ಆ ಯಕ್ಷರು ಮದಿಸಿದವರಾಗಿಯೂ, ಧನದಿಂದ ಅಹಂಕಾರ ಉಳ್ಳವರಾಗಿಯೂ ಇರುವರು. ಸಂಪತ್ತಿನ ಮಹಿಮೆಯು ಬಹಳ ಆಶ್ಚರ್ಯಕರವಾಗಿರುವುದು. ಅದು ಬುದ್ಧಿಯನ್ನೇ ಕೆಡಿಸಿಬಿಡುವುದು.||೧೫-೧೬||

ಐಶ್ವರ್ಯ ಮದದಿಂದ ಕೊಬ್ಬಿದ ಮನುಷ್ಯನು ಖಂಡಿತವಾಗಿಯೂ ತನ್ನನ್ನೂ ಸಹ ತಾನು ಸರಿಯಾಗಿ ನೋಡಿಕೊಳ್ಳಲಾರನು. ದುಷ್ಟ ಸಹವಾಸದಿಂದ ಕೆಟ್ಟು

ಶ್ರೀಮದೇಃತಿಪ್ರಸಕ್ತಾನಾಂ ನೂನಂ ನರಕಯಾತನಾ ।
ಯತೋ ಭೂತಾನಿ ಹನ್ಯಂತೇ ನಿರ್ದಯೈರಜಿತಾತ್ಮಭಿಃ ೨೦॥

ಶ್ರಿಯಾ ಮತ್ತಾಶ್ಚ (ಸ)ಜಾನಂತಿ ವಿಷಯಂ ಪರಮಾರ್ಥತಃ ।
ವ್ಯವಾಯಾಹಾರನಿದ್ರಾದಿಷ್ವಾಸಕ್ತಾ ಮೂಢ ಬುದ್ಧಯಃ ॥೨೧॥

ಮನ್ಯಂತೇ ದೇಹಮಾತ್ಮೀಯಂ ಕ್ರಿಮಿವಿಡ್ಭಸ್ಮಸಂಜ್ಞಿತಂ ।
ಭೂತದ್ರೋಹೇಣ ಪುಷ್ಯಂತಿ ನ ವಿರಕ್ತಾ ಭವಂತಿ ಹಿ ॥೨೨॥

ನ ವಿದಂತ್ಯಾತ್ಮದುಃಖಾನಿ ನರಕೇಷು ಮಹಾಂತಿ ವೈ ।
ಅತೋ ಧಿಗ್ಜೀವಿತಂ ತಸ್ಯ ಯಸ್ಯ ಶ್ರೀಮದಸಂಭವಃ ॥೨೩॥

ನೈತಾದೃಶೀ ಮತಿರ್ಭೂಯೋ ಭವೇದಿಹ ಕಥಂಚನ ।
ಏವಮತ್ರ ಮಯಾ ಕಾರ್ಯಮಿತಿ ಮೇ ಚಿಂತಿತಂ ಹರೇ ॥೨೪॥

---

ಹೋದ ಬುದ್ಧಿಯು ಒಳ್ಳೆಯ ಮಾರ್ಗಕ್ಕೆ ತಾನೇ ಬರಲಾರದು. ಸಂಪತ್ತಿನಿಂದ ವಿಕೃತನಾದವನು ಪರಲೋಕವನ್ನೂ ಸಹ ತಿಳಿಯುವುದಿಲ್ಲ. ವಿಶೇಷವಾಗಿ ಐಶ್ವರ್ಯದಿಂದ ಮತ್ತನಾದವನು ಅಧೋಗತಿಯನ್ನು ಹೊಂದುವನು. ವಿಷ್ಣುಸೇವೆಯಲ್ಲಿ ಆಸಕ್ತರಾದ ಆ ಕುಬೇರನ ಪುತ್ರರು ದುಷ್ಟ ಸಹವಾಸದ ದೆಶೆಯಿಂದ ನಿಶ್ಚಯವಾಗಿಯೂ ಭ್ರಷ್ಟರಾಗಿರುವರು. ॥೧೭-೧೮-೧೯॥

ಐಶ್ವರ್ಯಮದದಿಂದ ಕೊಬ್ಬಿದವರಿಗೆ ಖಂಡಿತವಾಗಿಯೂ ನರಕಯಾತನೆಗಳು ಉಂಟಾಗುವುವು. ದಯಾಶೂನ್ಯರಾಗಿಯೂ, ಆತ್ಮಸಂಯಮನವಿಲ್ಲದೆಯೂ, ಇರುವ ಅವರು ಭೂತಗಳನ್ನು ಹಿಂಸಿಸುವರು. ನಿಜವನ್ನು ತಿಳಿಯಲಾರದ ಐಶ್ವರ್ಯಮತ್ತರಾದವರು ಮೈಥುನ, ಆಹಾರ, ನಿದ್ರೆ ಇವುಗಳಲ್ಲಿಯೇ ಯಾವಾಗಲೂ ಕಾಲಕಳೆಯುವರು. ಕ್ರಿಮಿ, ಮಲ, ಭಸ್ಮ ಇವುಗಳಾಗಿ ಪರಿಣಮಿಸುವ ಶರೀರವೇ ತಾವೆಂದೂ, ತಮ್ಮದೆಂದೂ ಭಾವಿಸುವರು. ಯಾವಾಗಲೂ ಪ್ರಾಣಿಹಿಂಸೆಮಾಡುತ್ತಾ ವಿನೋದಪಡುವರು. ಅವರು ಪ್ರಾಣಿಹಿಂಸೆಯಿಂದ ವಿಶ್ರಾಂತಿಯನ್ನು ಹೊಂದುವುದಿಲ್ಲ. ಶಬ್ದಾದಿವಿಷಯಗಳೇ ಪರಮಾರ್ಥಗಳೆಂದು ತಿಳಿದುಕೊಂಡಿರುವರು. ॥೨೦-೨೧-೨೨॥

ಶ್ರೀಮದಮತ್ತರಾದ ಜನರು ತಮಗೆ ಮುಂದೆ ನರಕಗಳಲ್ಲಾಗುವ ಮಹಾದುಃಖಗಳನ್ನೂ ಗಣಿಸುವುದಿಲ್ಲ. ಯಾವನ ಜನ್ಮದಲ್ಲಿ ಶ್ರೀಮದ ಉಂಟಾಗುವುದೋ

**ಏತಯೋಸ್ತರುಜನ್ಮಾಶು ನ ಯತ್ರ ವಿಷಯೋಽಸ್ತಿ ಹಿ ।**
**ಪರಂ ಮಹಾವನೇ ರಮ್ಯೇಽತೀತೇ ದಿವ್ಯಶರಚ್ಛತೇ ॥೨೫॥**

**ಶ್ರೀಕೃಷ್ಣದರ್ಶನಂ ಪ್ರಾಪ್ಯ ಲಬ್ಧಭಕ್ತೀ ಭವಿಷ್ಯತಃ ।**
**ಶ್ರೀಕೃಷ್ಣದರ್ಶನಂ ಯಸ್ಮಾದೇತಯೋರ್ಭವಿತಾ ಧ್ರುವಂ ॥೨೬॥**

**ತರುಯೋನೌ ಗತಾವೇತೌ ನಾನ್ಯತ್ಕರ್ಮ ಕರಿಷ್ಯತಃ ।**
**ಋತುಧರ್ಮ ಸಹೌ ಮೂಢೌ ಭೂತ್ವಾ ದ್ವೌ ಯಮಲಾರ್ಜುನೌ ॥೨೭॥**

**ಪರೋಪಕಾರಿಣೌ ಭೂತ್ವಾ ಸ್ಥಾಸ್ಯತೋ ಬಹುಕಾಲತಃ ।**
**ಇತಿ ಶಪ್ತ್ವಾ ಗತೋಽಹಂ ವೈ ಸತ್ಯಲೋಕಮನಾಮಯಂ ॥೨೮॥**

**ಪೂರ್ವಭಕ್ತಿಪ್ರಭಾವೇಣ ವಿಷ್ಣೋರ್ಮಮ ಮಹಾಮುನೇ ।**
**ಭವತೋ ದರ್ಶನಂ ಜಾತಂ ನ ಯತೋಽಸದ್ಗತಿಸ್ತಯೋಃ ॥೨೯॥**

---

ಅಂತಹ ಮನುಷ್ಯನ ಜನ್ಮಕ್ಕೆ ಧಿಃಕ್ಕಾರವಿರಲಿ. ಓ ಹರಿಯೇ, ಈ ಸಮಯದಲ್ಲಿ ಇಂತಹ ಬುದ್ಧಿಯು ಇನ್ನು ಯಾರಿಗೂ ಯಾವ ರೀತಿಯಾಗಿಯೂ ಉಂಟಾಗದಿರುವಂತೆ ಮಾಡಬೇಕೆಂದು ನಾನು ಹೀಗೆ ಆಲೋಚಿಸಿದೆನು. ಈ ಯಕ್ಷರಿಗೆ ಯಾವ ಸೌಕರ್ಯವೂ ಇಲ್ಲದ ಸ್ಥಳದಲ್ಲಿ, ಮನೋಹರವಾದ ಅರಣ್ಯದಲ್ಲಿ ವೃಕ್ಷಜನ್ಮವು ಪ್ರಾಪ್ತವಾಗಲಿ. ದೇವಮಾನ ರೀತಿಯಿಂದ ನೂರಾರು ವರ್ಷಗಳು ವೃಕ್ಷಜನ್ಮದಿಂದಲೇ ಕಳೆಯಲು, ಶ್ರೀಕೃಷ್ಣನ ದರ್ಶನವು ಇವರಿಗುಂಟಾಗಿ ಅವನ ಭಕ್ತರಾಗುವರು. ||೨೩-೨೪-೨೫||

ಇವರಿಗೆ ನಿಶ್ಚಯವಾಗಿಯೂ ಶ್ರೀಕೃಷ್ಣನ ದರ್ಶನವಾಗುವುದು. ಇವರಿಬ್ಬರೂ ವೃಕ್ಷಜನ್ಮವನ್ನು ಹೊಂದಿದ ಮೇಲೆ ಯಾವ ಕರ್ಮವನ್ನೂ ಮಾಡಲಾರರು. ಇವರು ಮೂಢರಾಗಿ ಯಮಲಾರ್ಜುನರೆಂದು ಹೆಸರನ್ನು ಹೊಂದಿ ವಸಂತವೇ ಮೊದಲಾದ ಋತುಧರ್ಮದಲ್ಲಿ ಆಗತಕ್ಕ ಫಲಪುಷ್ಪಾದಿಗಳನ್ನು ಹೊಂದುವರು. ಹೀಗೆ ಪರೋಪಕಾರವನ್ನು ಮಾಡುತ್ತಾ ಇವರು ಬಹುಕಾಲದ ವರೆಗೆ ಇರಲಿ. ಎಂದು ಶಾಪಕೊಟ್ಟು ನಾನು ಯಾವ ಉಪದ್ರವವೂ ಇಲ್ಲದೆ ಸತ್ಯಲೋಕಕ್ಕೆ ತೆರಳಿದೆನು. ||೨೬-೨೭-೨೮||

ಓ ನಾರದನೇ, ಆ ಯಮಲಾರ್ಜುನರಿಗೆ ವಿಷ್ಣುವಾದ ನನ್ನಲ್ಲಿ ಪೂರ್ವಜನ್ಮದಲ್ಲಿಯೇ ಉಂಟಾಗಿದ್ದ ಭಕ್ತಿಯಿಂದ ನನ್ನ ದರ್ಶನವಾಯಿತು. ಅಂಥವರಿಗೆ

ಭೋಗಾಂತಸಮಯೇಽವಶ್ಯಂ ಮಹತಾಂ ದರ್ಶನಂ ಭವೇತ್ ।
ದ್ರುಮಯೋರಂತರಂ(ರೇ) ನೂನಂ ದತ್ವೋಲೂಖಲಮಾಶು ಚ॥೩೦॥

ವಿನಾ ವರ್ಷಂ ವಿನಾ ವಾತಂ ಮಯಾ ತೌ ಪಾತಿತೌ ದ್ರುಮೌ ॥೩೧॥

ತರುಣೌ ರೂಪಸಂಪನ್ನೌ ಸರ್ವಭೂಷಣ ಭೂಷಿತೌ ।
ದಿವ್ಯಾಂಬರಧರೌ ದಿವ್ಯಪುಷ್ಪಮಾಲ್ಯೈರಲಂಕೃತೌ ॥೩೨॥

ದಂಡವತ್ಪತಿತೌ ತೌ ತು ಕೃತಾಂಜಲಿಪುಟಾವುಭೌ ।
ತಾವೂಚತುಃ ಕೃಷ್ಣಕೃಷ್ಣ ಮಹಾಯೋಗಿನ್ ಜಗದ್ಗುರೋ ॥೩೩॥

ತ್ವಯಾ ಸೃಷ್ಟಮಿದಂ ವಿಶ್ವಂ ಯದೇತತ್ಸಚರಾಚರಂ ।
ತಸ್ಮಿನ್ನೇವಾಂಶ ಭಾಗೇನಾನುಪ್ರವಿಶ್ಯಾವ ಭಾಸಸೇ ॥೩೪॥

ತ್ವಮೇವ ಪಾಲಯಸ್ಯೇತತ್ತ್ವಯ್ಯೇವಾಂತೇ ಲಯಂ ವ್ರಜೇತ್ ।
ಮಾಯಾಗುಣೈರ್ಭವತ್ತ್ಯೇತತ್ತತ್ತುಭ್ಯಮಧಿರೋಚತೇ ॥೩೫॥

---

ಅಸದ್ಗತಿಯುಂಟಾಗಲಾರದು. ಪುಣ್ಯಪಾಪಗಳ ಫಲವಾದ ಸುಖದುಃಖಗಳನ್ನು ಭೋಗಿಸಿದ ಮೇಲೆ ಆ ಕರ್ಮಕ್ಷಯವಾಗಲು ಮಹಾತ್ಮರ ದರ್ಶನವಾಗುವುದು. ಎರಡು ಮರಗಳ ಮಧ್ಯದಲ್ಲಿ ಆ ಒರಳುಕಲ್ಲನ್ನು ಇಟ್ಟು ಎಳೆದೆನು. ಮಳೆ ಗಾಳಿ ಯಾವುದೂ ಇಲ್ಲದೆ ಆ ಎರಡು ಮರಗಳನ್ನೂ ನಾನು ಕೆಡಹಿದೆನು. ||೨೯-೩೦-೩೧||

ಆ ಮರಗಳು ಬೀಳಲು, ಅವು ತರುಣರಾಗಿಯೂ ಸುಂದರರಾಗಿಯೂ ಅನೇಕ ಆಭರಣಗಳನ್ನು ಧರಿಸಿರುವವರಾಗಿಯೂ, ದಿವ್ಯವಾದ ವಸ್ತ್ರವನ್ನೂ ಪುಷ್ಪ ಮಾಲೆಯನ್ನೂ ಧರಿಸಿರುವವರಾಗಿಯೂ ಇರುವ ಆ ಯಕ್ಷಕುಮಾರರಾಗಿ, ಇಬ್ಬರೂ ನನಗೆ ಸಾಷ್ಟಾಂಗ ನಮಸ್ಕಾರಮಾಡಿ ಅಂಜಲಿಬದ್ಧರಾಗಿ ಹೀಗೆ ಹೇಳಿದರು. ಓ ಕೃಷ್ಣನೇ, ಮಹಾಯೋಗಿಯೇ, ನೀನು ಚರಾಚರಾತ್ಮಕವಾದ ಈ ಸಮಸ್ತ ಜಗತ್ತನ್ನೂ ಸೃಷ್ಟಿಮಾಡುತ್ತಿರುವೆ. ಆ ಜಗತ್ತಿನಲ್ಲಿಯೇ ಒಂದು ಅಂಶದಿಂದ ನೀನು ಪ್ರವೇಶಿಸಿ ಈಗ ತೋರುತ್ತಿರುವೆ. ||೩೨-೩೩-೩೪||

ನೀನೀ ಪ್ರಪಂಚವನ್ನು ಕಾಪಾಡುವೆ. ನಿನ್ನಲ್ಲಿಯೇ ಈ ಜಗತ್ತು ಲಯವನ್ನೂ ಹೊಂದುವುದು. ನಿನ್ನ ಮಾಯೆಯ ಸತ್ವರಜಸ್ತಮೋಗುಣಗಳಿಂದ ಉಂಟಾಗುವ

ತ್ವದ್ರೋಮಕೂಪೇ ಬ್ರಹ್ಮಾಂಡಕೋಟಯಃ ಪರಮಾಣುವತ್ ।
ಬ್ರಹ್ಮೇಂದ್ರಾದ್ಯಾಶ್ಚ ಯೇ ದೇವಾಃ ಸ ಪ್ರಜಾಪತಯೋಽಖಿಲಾಃ॥೩೬॥

ಮನವೋ ಭುವಿ ರಾಜಾನೋ ಯೇ ಚಾನ್ಯೇ ತ್ವದ್ವಿಭೂತಯಃ ।
ನಾರದಾನುಗ್ರಹಾದೀಶ ಜಾತಂ ನೌ ದರ್ಶನಂ ತವ ॥೩೭॥

ಅನ್ಯಥಾ ವಿಷಯೇ ಸಕ್ತ ಚಿತ್ತಯೋರ್ಭವಿತಾ ಕುತಃ ।
ಯದೇತದಖಿಲಂ ವಿಶ್ವಂ ಕ್ರೀಡಾಭಾಂಡಂ ತವೇಶ್ವರ ॥೩೮॥

ತ್ವತ್ತೋ ನ ಭಿನ್ನಂ ಕಿಮಪಿ ಸರ್ವಂ ಬ್ರಹ್ಮಾಂಡಗೋಚರಂ ।
ಅತಶ್ಚಾವಾಂ ಭಗವತಃ ಪಾದಾಂಬುಜ ಸಮಾಶ್ರಯೌ ॥೩೯॥

ಪ್ರಾರ್ಥಯಾವೋ ವರಂ ಶಶ್ವದ್ಭವತೋ ದರ್ಶನಂ ಶುಭಂ ।
ಭಕ್ತಿಂ ದೇಹಿ ಸದಾ ದೇವ ನಿಜನಿಷ್ಠಂ ಮನಶ್ಚ ನೌ ॥೪೦॥

---

ಈ ಜಗದ್ವ್ಯವಹಾರವು ನಿನಗೆ ಅಭಿಮತವಾಗಿರುವುದು. ನಿನ್ನ ರೋಮಕೂಪಗಳಲ್ಲಿ ಅನೇಕಕೋಟಿ ಬ್ರಹ್ಮಾಂಡಗಳು ಪರಮಾಣುಗಳಂತಿರುವುವು ! ||೩೫||

ಬ್ರಹ್ಮ, ಇಂದ್ರ, ಅಗ್ನಿ ಮುಂತಾದ ದೇವತೆಗಳೂ, ದಕ್ಷ, ಮರೀಚಿ ಮುಂತಾದ ಪ್ರಜಾಪತಿಗಳೂ, ವೈವಸ್ವತಾದಿ ಚತುರ್ದಶಮನುಗಳೂ, ಭೂಮಿಯಲ್ಲಿರುವ ರಾಜರೂ, ಇನ್ನೂ ಪ್ರಭಾವಶಾಲಿಗಳಾದ ಅನೇಕ ಮಹಾತ್ಮರೂ ಕೂಡ ನಿನ್ನ ಅಂಶಭೂತರಾಗಿರುವರು. ಓ ಈಶನೇ, ನಾರದಮಹರ್ಷಿಯ ಅನುಗ್ರಹದಿಂದ ನಮಗೆ ನಿನ್ನ ದರ್ಶನವಾಯಿತು. ||೩೬-೩೭||

ನಾರದನ ಅನುಗ್ರಹವಿಲ್ಲದಿದ್ದರೆ ವಿಷಯಗಳಲ್ಲಿ ಲೋಲುಪರಾದ ನಮಗೆ ನಿನ್ನ ದರ್ಶನವು ಹೇಗಾಗುತ್ತಿತ್ತು? ಓ ಈಶ್ವರನೇ, ಈ ಸಮಸ್ತ ಜಗತ್ತೂ ಕೂಡ ನಿನ್ನ ಕ್ರೀಡೆಗೆ ಸ್ಥಾನವಾಗಿರುವುದು. ಬ್ರಹ್ಮಾಂಡದಲ್ಲಿ ತೋರುವ ಸಮಸ್ತವೂ ಕೂಡ ನಿನಗಿಂತಲೂ ಬೇರೆಯಲ್ಲ. ಆದುದರಿಂದ ಪರಮಾತ್ಮನಾದ ನಿನ್ನ ಪಾದಕಮಲಗಳನ್ನು ಆಶ್ರಯಿಸಿರುವೆವು. ಈ ವರವನ್ನು ಪ್ರಾರ್ಥಿಸುವೆವು. ನಿನ್ನ ದರ್ಶನವು ಮಂಗಳಕರವಾದುದು. ಅದು ನಮಗೆ ಮತ್ತೆ ಮತ್ತೆ ಆಗಲಿ. ನಮ್ಮ ಮನಸ್ಸು ನಿನ್ನಲ್ಲಿಯೇ ಸದಾ ನಿಲ್ಲುವಂತೆ ಭಕ್ತಿಯನ್ನು ನಮಗೆ ಅನುಗ್ರಹಿಸುವವನಾಗು. ||೩೮-೩೯-೪೦||

ಜಿಹ್ವಾ ತವಾರ್ಪಿತಾನ್ನೇಷು ದೃಷ್ಟಿಃ ಸಾಧುಜನೇಕ್ಷಣೇ ।
ತ್ವತ್ಸ್ಥಾನಗಮನೇ ಪಾದೌ ಗಾತ್ರಂ ತ್ವದ್ಭಕ್ತಸಂಗಮೇ ॥೪೧॥

ಏವಂ ಸಂಪ್ರಾರ್ಥಿತಸ್ತಾಭ್ಯಾಮವೋಚಂ ಚ ಕುಬೇರಜೌ ।
ಯದುಕ್ತಂ ತತ್ತಥೈವಾಸ್ತು ಸ್ವಲೋಕಂ ಯಾತ ಮಾ ಚಿರಂ ॥೪೨॥

ಯುವಯೋಃ ಸಂಗಮಂ ಯೇಽನ್ಯೇ ಕರಿಷ್ಯಂತಿ ಧರಾತಲೇ ।
ತೇಷಾಂ ಚಾಹೈತುಕೀ ಭಕ್ತಿರ್ಭವಿಷ್ಯತಿ ನ ಸಂಶಯಃ ॥೪೩॥

ಸಾಧುಸಂಗಾದ್ಧಿ ವಿಮಲಾ ಭಕ್ತಿರ್ಭವತಿ ನೈಷ್ಠಿಕೀ ।
ಭಕ್ತಿರೇವ ಪರೋ ಲಾಭಸ್ತತೋಽನ್ಯನ್ನಾಸ್ತಿ ಕಿಂಚನ ॥೪೪॥

ಭಕ್ತ್ಯೈವಾಹಂ ಭವೇ ವಶ್ಯೋ ಯುವಯೋಃ ಸಂಭವತ್ವಲಂ ।
ಇತ್ಯುಕ್ತ್ವಾ ತು ಪ್ರಣಮ್ಯಾಶು ತಥಾ ಕೃತ್ವಾ ಪ್ರದಕ್ಷಿಣಂ ॥೪೫॥

---

ನಮ್ಮ ಜಿಹ್ವೆಗಳು ನೀನು ಅನುಗ್ರಹಿಸಿದ ಅನ್ನದಲ್ಲಿ ಆಸಕ್ತವಾಗಲಿ. ದೃಷ್ಟಿಯು ಸಾಧುಸಂತರನ್ನು ನೋಡಲಿ. ಪಾದಗಳು ನಿನ್ನ ಹತ್ತಿರ ಬರುವವಾಗಲಿ. ಶರೀರವು ನಿನ್ನ ಭಕ್ತರ ಸಂಪರ್ಕವುಳ್ಳದ್ದಾಗಲಿ. ||೪೧||

ಈ ರೀತಿಯಾಗಿ ಕುಬೇರನ ಪುತ್ರರು ಪ್ರಾರ್ಥಿಸಲು ನಾನು ಹಾಗೆಯೇ ಆಗಲೆಂದು ವರವನ್ನು ಕೊಟ್ಟು, ನಿಮ್ಮ ಲೋಕಕ್ಕೆ ಶೀಘ್ರವಾಗಿ ಹೋಗಿರಿ. ತಡಮಾಡಬೇಡಿರಿ. ಎಂದೆನು. ||೪೨||

ಈ ಲೋಕದಲ್ಲಿ ಯಾರು ನಿಮ್ಮ ಸಹವಾಸವನ್ನು ಮಾಡುವರೋ ಅವರಿಗೆ ನನ್ನಲ್ಲಿ ನಿಶ್ಚಲವಾದ ಭಕ್ತಿಯುಂಟಾಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ. ಸಾಧುಗಳ ಸಹವಾಸದಿಂದ ಬುದ್ಧಿಯು ಪರಿಶುದ್ಧವಾಗಿ ನಿಶ್ಚಲವಾಗುವುದು. ||೪೩||

ಭಕ್ತಿಯೇ ಉತ್ಕೃಷ್ಟವಾದ ಲಾಭವೇ ಹೊರತು ಇನ್ನು ಯಾವುದೂ ಅಲ್ಲ. ಈ ಸಂಸಾರದಲ್ಲಿ ನಾನು ಭಕ್ತಿಯಿಂದಲೇ ವಶನಾಗುವೆನು. ಈ ಭಕ್ತಿಯು ನಿಮಗೆ ಹೆಚ್ಚಾಗಿ ಉಂಟಾಗಲಿ. ಎಂದು ಹೇಳಲು, ಆ ಕುಬೇರಪುತ್ರರು ನನಗೆ ಪ್ರದಕ್ಷಿಣ ನಮಸ್ಕಾರಮಾಡಿ ನನ್ನ ಅಪ್ಪಣೆಯ ಮೇರೆಗೆ ಕುಬೇರನ ಗೃಹಕ್ಕೆ ತೆರಳಿದರು ||೪೪-೪೫||

ಮಮಾಜ್ಞಯಾ ಸಂಪ್ರಯಾತೌ ಕುಬೇರಭವನಂ ಪುನಃ ।
ಗೋಪಾಸ್ತು ನಿನದಂ ಶ್ರುತ್ವಾ ದ್ರುಮಯೋಃ ಪತಮಾನಯೋಃ॥೪೬॥

ತತ್ರಸುಃ ಶೀಘ್ರಮಾಜಗ್ಮುಃ ಪಶ್ಯಂತೋ ಮಾಂ ಸುವಿಸ್ಮಿತಾಃ ।
ಕಥಮೇತೌ ನಿಪತಿತೌ ತರೂ ಚಿರತರ ಸ್ಥಿತೌ ॥೪೭॥

ತತ್ರ ನಂದಃ ಸಮಾಗತ್ಯ ಮುಕ್ತ್ವಾ ಬಾಲಮುಲೂಖಲಾತ್ ।
ಆನೀಯಾಂಕಮಥೋ ಚುಂಬನ್ವದನಂ ಮುದಿತಃ ಪರಂ ॥೪೮॥

ಅಕ್ಷತಂ ಚ ಸಮಾಲೋಕ್ಯ ನಿಜಭಾಗ್ಯಮತರ್ಕಯತ್ ।
ಗೋಪಾಃ ಪರಸ್ಪರಂ ಪ್ರೋಚುರದ್ಭುತಂ ಕಿಮಭೂದಿಹ ॥೪೯॥

ಧ್ರುಮಯೋಃ ಪತನಂ ಕಸ್ಮಾತ್ಸಹಸಾ ಸಮುಪದ್ಯತ ।
ಬಾಲಕೋಽಸೌ ಮೃತ್ಯುಮುಖೇ ಪತಿತೋ ವಿಧಿನಾಽವಿತಃ ॥೫೦॥

ಇತಿ ಮಿಮಾಂಸಮಾನೇಷು ಗೋಪೇಷು ಪತಿತೌ ದ್ರುಮೌ ।
ತಾನೂಚುರ್ಬಾಲಕಾಸ್ತತ್ರ ನಂದಾದೀನ್ ಶುದ್ಧಬುದ್ಧಯಃ ॥೫೧॥

---

ಗೋಪರೆಲ್ಲರೂ ಮರಬೀಳುವ ಶಬ್ದವನ್ನು ಕೇಳಿ ಭಯದಿಂದ ಅಲ್ಲಿಗೆ ಓಡಿ ಬಂದು ನನ್ನನ್ನು ನೋಡಿ ಆಶ್ಚರ್ಯಗೊಂಡರು. ಅನೇಕ ವರ್ಷಗಳಿಂದಲೂ ಇರುವ ಈ ವೃಕ್ಷಗಳು ಈಗ ಹೇಗೆ ಬಿದ್ದವು? ಎಂದು ಹೇಳಿದರು. ||೪೬-೪೭||

ನಂದನು ಅಲ್ಲಿಗೆ ಬಂದು ಒರಳಿನಿಂದ ನನ್ನನ್ನು ಬಿಡಿಸಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ನನ್ನ ಮುಖವನ್ನು ಚುಂಬಿಸಿದನು. ಯಾವ ಗಾಯವೂ ಆಗದ ನನ್ನನ್ನು ನೋಡಿ ತನ್ನ ಭಾಗ್ಯವನ್ನು ಅಭಿನಂದಿಸಿದನು. ||೪೮||

ಗೋಪರು ಪರಸ್ಪರವಾಗಿ ಏನು ಅದ್ಭುತವು ನಡೆಯಿತು? ಈ ಮರಗಳು ಅಕಸ್ಮಾತ್ತಾಗಿ ಬೀಳಲು ಕಾರಣವೇನು? ಈ ಹುಡುಗನು ಮೃತ್ಯುವಿಗೆ ತುತ್ತಾಗಿ ಬದುಕಿದುದು ಇವನ ಭಾಗ್ಯವೇ ಸರಿ! ಎಂದು ಮಾತನಾಡಿಕೊಂಡರು. ||೪೯-೫೦||

ಈರೀತಿಯಾಗಿ ಗೋಪರು ವಿಚಾರಮಾಡುತ್ತಿರಲು ಅಲ್ಲಿರುವ ಋಜು ಬುದ್ಧಿಗಳಾದ ಬಾಲಕರು ನಂದಗೋಪಾದಿಗಳನ್ನು ಕುರಿತು ಹೀಗೆ ಹೇಳಿದರು. ಒರಳು ಕಲ್ಲನ್ನು ಎಳೆಯುತ್ತಿರಲು ಈ ಮರಗಳು ಬಿದ್ದುವು. ಈ ಮರಗಳಿಂದ ಕೃಷ್ಣನಂತಿರು

ಉಲೂಖಲಂ ಕರ್ಷಯತಾ ಕೃಷ್ಣೇನೇಮೌ ನಿಪಾತಿತೌ ।
ತಾಭ್ಯಾಂ ವಿನಿರ್ಗತೌ ದೇವೌ ಕೃಷ್ಣಾನುಸದೃಶೌ ಶುಭೌ ॥೫೨॥

ಸ್ತುತ್ವಾ ನತ್ವಾ ಉಪಾಮಂತ್ರ್ಯ ಗತಾವಾತ್ಮನಿಕೇತನಂ ।
ಬಾಲಾನಾಂ ವಚನಂ ಕೇಚಿಜ್ಜಗೃಹುರ್ನೇತಿ ಕೇಚನ ॥೫೩॥

ಸ್ಮೃತ್ವಾ ಪೂರ್ವಕೃತಂ ಕರ್ಮ ಕೇಚಿತ್ಸತ್ಯಂ ಚ ಮೇನಿರೇ ।
ಸಂದಿಗ್ಧಚೇತಸಃ ಕೇಚಿತ್ ಬಭೂವುಸ್ತೇ ವ್ರಜೌಕಸಃ ॥೫೪॥

ನಂದಾದ್ಯಾ ವ್ರಜಗೋಪಾಶ್ಚ ಯಶೋದಾದ್ಯಾಶ್ಚ ಗೋಪಿಕಾಃ ।
ಪಶ್ಯಂತೋ ಮಾಂ ಕುಶಲಿನಂ ಮೋದಮಾಪುರಸೀಮಕಂ ॥೫೫॥

ನಂದೋ ಮಹಾಮನಾಸ್ತತ್ರ ದ್ವಿಜಾನಾಹೂಯ ಶ್ರದ್ಧಯಾ ।
ದದೌ ದಾನಾನಿ ಸುಭೃಶಂ ಬ್ರಾಹ್ಮಣೇಭ್ಯಃ ಸಮಂತತಃ ॥೫೬॥

---

ವವರೂ, ಮಂಗಳಕರರೂ ಆದ ಇಬ್ಬರು ದೇವತೆಗಳು ಹೊರಟು ಬಂದು ಶ್ರೀಕೃಷ್ಣನನ್ನು ಸ್ತೋತ್ರಮಾಡಿ ನಮಸ್ಕರಿಸಿದರು. ಕೃಷ್ಣನನ್ನು ಆಮಂತ್ರಿಸಿ ತಮ್ಮ ಸ್ಥಾನಕ್ಕೆ ಹೋದರು. ॥೫೧-೫೨॥

ಗೋಪರು ಈ ಬಾಲಕರ ಮಾತನ್ನು ಕೇಳಿ ಕೆಲವರು ಇರಬಹುದೆಂದು ನಂಬಿದರು. ಇನ್ನು ಕೆಲವರು ಆ ಮಾತನ್ನು ನಂಬಲಿಲ್ಲ. ಇನ್ನು ಕೆಲವರು ಈ ಹಿಂದೆ ನಡೆಯಿಸಿದ ಅದ್ಭುತಕಾರ್ಯಗಳನ್ನು ಯೋಚಿಸಿ ಇದುಸತ್ಯವಾದುದೆಂದು ತಿಳಿದರು. ಇನ್ನು ಕೆಲವರು ಸಂಶಯಪಟ್ಟರು. ॥೫೩-೫೪॥

ನಂದನೇ ಮುಂತಾದ ಗೋಕುಲವಾಸಿಗಳೂ, ಯಶೋದೆಯೇ ಮುಂತಾದ ಗೋಪಿಕಾಸ್ತ್ರೀಯರೂ ಸಹ ಕ್ಷೇಮದಿಂದಿರುವ ನನ್ನನ್ನು ನೋಡಿ ಮಿತಿಮೀರಿದ ಸಂತೋಷವನ್ನು ಹೊಂದಿದರು. ॥೫೫॥

ಉದಾರ ಬುದ್ಧಿಯಾದ ನಂದನು ಬ್ರಾಹ್ಮಣರನ್ನು ಕರೆಯಿಸಿ ನನ್ನ ಕ್ಷೇಮ ಲಾಭಕ್ಕಾಗಿ ಶ್ರದ್ಧೆಯಿಂದ ಅನೇಕ ದಾನಗಳನ್ನು ಮಾಡಿದನು. ॥೫೬॥

ಯಶೋದಾ ಪೂರ್ವವತ್ತ್ರಸ್ತಾ ರಕ್ಷಾವಿಧಿಮಕಾರಯತ್ ॥೫೭॥

ಇದಂ ಮಯಾ ತೇ ಕಥಿತಂ ಮಹಾದ್ಭುತಂ
ಬಾಲ್ಯೇವಯಸ್ಯೈಶ್ಚರಿತಂ ಮಯಾ ಯತ್ ।
ಶೃಣೋತಿ ಯಃ ಶ್ರಾವಯತೇ ಚ ಭಕ್ತಿಮಾನ್
ಅನುಗ್ರಹೋ ಮೇ ಭವತೀಹ ತಸ್ಮಿನ್ ॥೫೮॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯ್ಯಾಸಿಕೇ
ನಾರದ ಶೌನಕ ಸಂವಾದೇ ಯಮಲಾರ್ಜುನಮೋಕ್ಷವರ್ಣನಂ
ನಾಮ ಏಕೋನತ್ರಿಂಶೋಽಧ್ಯಾಯಃ

## ಸಮಾಪ್ತಂ ಚೇದಂ ಆದಿಪುರಾಣಂ

---

ಯಶೋದೆಯು ಹಿಂದಿನಂತೆ ಹೆದರಿ ನನ್ನ ರಕ್ಷೆಗಾಗಿ ತಾಯತಿ ಬೂದಿ ಯಂತ್ರಬಂಧನ ಮುಂತಾದ ವಿಧಿಗಳನ್ನು ಮಾಡಿಸಿದಳು. ॥೫೭॥

ನಾನು ಬಾಲ್ಯದಲ್ಲಿ ನನ್ನ ಸ್ನೇಹಿತರೊಡನೆ ನಡೆಯಿಸಿದ ಅದ್ಭುತವಾದ ಈ ಚರಿತ್ರೆಯನ್ನು ಹೇಳಿರುವೆನು. ಈ ಚರಿತ್ರೆಯನ್ನು ಯಾವನು ಕೇಳುವನೋ ಮತ್ತೂ ಇನ್ನೊಬ್ಬರಿಗೆ ಇದನ್ನು ಹೇಳುವನೋ ಅವನಿಗೆ ನಾನು ಭಕ್ತಿಯನ್ನು ಕೊಟ್ಟು ಅನುಗ್ರಹಿಸುವೆನು. ॥೫೮॥

ಅಷ್ಟಾವಕ್ರಗೀತೆ, ದೇವೀಮಾಹಾತ್ಮ್ಯ, ಪಂಚೋಪನಿಷತ್ತುಗಳು, ದೇವೀ ಭಾಗವತ ಮಹಾಪುರಾಣ, ಲಿಂಗಮಹಾಪುರಾಣ, ಸೂತಸಂಹಿತಾ, ತ್ರಿಪುರಾರಹಸ್ಯ, ಕಲ್ಕಿಪುರಾಣ, ಆದಿಪುರಾಣ, ಶ್ರೀವಿದ್ಯಾಮಂತ್ರಭಾಷ್ಯ, ಇತ್ಯಾದಿ ಗ್ರಂಥಗಳ ಅರ್ಥಾನುವಾದವನ್ನು ಕನ್ನಡದಲ್ಲಿ ಬರೆದಿರುವ ಚಂದ್ರಶೇಖರಶಾಸ್ತ್ರಿಯ ಗ್ರಂಥಗಳಲ್ಲಿ ಆದಿಪುರಾಣದ ಅರ್ಥಾನುವಾದವೆಂಬ ಈ ಗ್ರಂಥವು ಸಮಾಪ್ತವಾಯಿತು.

ಶಿವೇ ತವ ಕೃಪಾ ದದೌ ಗೃಹಕಳತ್ರವಿತ್ತಾದಿಕಂ
ಸುತಾನ್ ದುಹಿತೃತತ್ಸುತಾನ್ ಸುಕೃತಯಶ್ಚ ಕಾಶ್ಚಿತ್ ಕೃತಾಃ ।
ಅಲಂಮತಿ ರಿಹಾಸ್ತು ಮೇ ಮಮ ಕದಾಽಂತ ಮಾಶಾ ವ್ರಜೇತ್
ಪ್ರಬೋಧಸುಖಮರ್ಥಯೇ ಪರವಿರಕ್ತಿಮುಕ್ತೀ ಮುದಾ ॥

ಮಂಗಳಕರಳಾದ ಓ ತಾಯಿಯೇ, ನಿನ್ನ ದಯೆಯು ನನಗೆ ಮನೆ, ಹೆಂಡತಿ, ಐಶ್ವರ್ಯ, ಅಧಿಕಾರ, ಮಕ್ಕಳು, ಮೊಮ್ಮಕ್ಕಳು, ಈ ಮುಂತಾದ ಐಹಿಕವಾದ ಸುಖ ಸಾಧನಗಳನ್ನು ನನ್ನ ಯೋಗ್ಯತೆಗೆ ತಕ್ಕಮಟ್ಟಿಗೆ ಅನುಗ್ರಹಿಸಿದೆ. ಯಶಸ್ಕರವಾದ ಧಾರ್ಮಿಕಗ್ರಂಥ ರಚನೆಗಳಿಂದ ಪ್ರಭುಸೇವೆ, ಜನಸೇವೆ, ಭಾಷಾಸೇವೆ, ಈಶಸೇವೆ ಗಳನ್ನೂ ನನ್ನ ಬುದ್ಧಿ, ಶಕ್ತಿ, ಸನ್ನಿವೇಶಗಳಿಗೆ ತಕ್ಕಂತೆ ಆದಷ್ಟು ಮಟ್ಟಿಗೆ ನೆರವೇ ರಿಸಿರುವುದೂ ಆಗಿದೆ. ಈ ಸುಖಸಾಧನಗಳು ಎಷ್ಟು ಹೆಚ್ಚಿನವಾದರೂ ಅವಿಶುದ್ಧಿ, ಕ್ಷಯ, ಅತಿಶಯಗಳೆಂಬ, ಸಾರ್ವತ್ರಿಕವೂ ಅನಿವಾರ್ಯವೂ ಆಗಿರುವ, ದೋಷಗಳಿಂದ ಕೂಡಿಯೇ ಇರುತ್ತವೆಂಬುದನ್ನು ಮನಗಂಡುದೂ ಆಗಿದೆ. ಆದುದರಿಂದ ಇವುಗಳಲ್ಲಿ ಆಶೆಯು ಇನ್ನೂ ಹೆಚ್ಚಾಗಿ ಮುಂದುವರಿಯದೆ, ಅಲಂಬುದ್ಧಿಯು ಎಂದರೆ, ಇಷ್ಟು ಸಾಕು, ಇನ್ನೂ ಬೇಡ, ಎಂಬ ತೃಪ್ತಿ ಮನೋಭಾವವು ನನ್ನ ಹೃದಯದಲ್ಲಿ ಬಲಗೊಳ್ಳುವಂತಾಗಲಿ. ಏಕೆಂದರೆ ಈ ಆಶೆಗಳಿಗೆ ಪರ್ಯವಸಾನವೇ ಅಗದೆ ಶಾಂತಿಸುಖ ಗಳೂ ಎಂದಿಗೂ ದೊರೆಯದೇ ಹೋಗಿ, ನಿಶ್ರೇಯಸಪ್ರಾಪ್ತಿಗೆ ಅಡ್ಡಿಯೇ ಆಗುತ್ತಿರು ವುವು. ಆದುದರಿಂದ ನಾನು ಯಾವಾಗಲೂ ಪರತತ್ವಜ್ಞಾನದ ಸುಖವನ್ನೂ, ಮೇಲಾದ ವೈರಾಗ್ಯವನ್ನೂ ಮೋಕ್ಷದ ನಿತ್ಯಾನಂದದ ಅಪರೋಕ್ಷಾನುಭವವನ್ನೂ, ಸಂತೋಷದಿಂದ ಪಡೆಯಲು ಇಚ್ಛಿಸುತ್ತಿರುತ್ತೇನೆ.

## ಆದಿಪುರಾಣವು ಮುಗಿದದು.

|| ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು ||



**ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರ ಶಾಸನಾತ್ ।**
**ಆದಿಪುರಾಣಸ್ಯಾರ್ಥಾನುವಾದಂ ಕನ್ನಡಭಾಷಯಾ ॥**
**ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।**
**ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥**
**ವಾಣೀಸೇವಾಂ ರಾಜಸೇವಾಂ ಜನಸೇವಾಂ ಮುದಾ ಕೃತಾಂ ।**
**ಸ್ವೀಕೃತ್ಯ ಪಾತು ಶ್ರೀಕೃಷ್ಣಃ ದೇವೋ ರಾಜಾ ಚ ಭಾರತೀ ॥**

|| ಓಂ ತತ್ಸತ್ ||